ವರ್ಷ - ೬ ೧೯೭೩. ಸಂಚಿಕೆ - ೧.

1) ಆತ್ಮನಿವೇದನೆ - 421-422

2) ಶಿವಾನುಭವ ಜ್ಞಾನವು ಸ್ಪಂದ (ಸಂ) 3-4

3) ಶೈವಾಗಮಗಳ ಕಾಲ ಫ.ಗು. ಹಳಕಟ್ಟಿ 425-13
(ಪ್ರತಿ ಸಂಖ್ಯೆ ದೊರೆತಿಲ್ಲ)

4) ಕೆಳದಿ ಮತ್ತು ಸ್ವಾದಿ ರಾಜ್ಯಗಳ ಬಗ್ಗೆ ಯುರೋ-
ಪಿಯನ್ ವ್ಯಾಪಾರಿಗಳ ಅಭಿಪ್ರಾಯಗಳು 14-21
(ಫ.ಗು. ಹಳಕಟ್ಟಿ)

5) ಐತಿಹಾಸಿಕ ಟಿಪ್ಪಣಿಗಳು
ನಂದಿಮಠ ಶಿ. ಚ } 22-37

ಪುಸ್ತಕ ವಿಮರ್ಶೆ
6) ಕವಿಕರ್ಣರಸಾಯನ
ಸಿಂ. ಪಾ. ದರಣಿ } 38-40

7) ಅಲ್ಲಮ ಪ್ರಭುಗಳ ವಚನಗಳು } 253-276
ಅ.ಪ್ರಭು (ಟೀಕಾ ಸಹಿತ)
ಸಂ 221 - 269

# ಶಿವಾನುಭವ.

ವರ್ಷ ೬] ಎಪ್ರೀಲ ೧೯೩೧ [ಸಂಚಿಕೆ ೧

## ಆತ್ಮನಿವೇದನ.



ಶಿವಾನುಭವದ ಈ ಸಂಚಿಕೆಯಿಂದ ಆದರ ೬ ನೆಯ ವರ್ಷವು ಪ್ರಾರಂಭವಾಗುವದು. ಈ ಅವಧಿಯಲ್ಲಿ ನಮ್ಮ ಕಾರ್ಯವನ್ನು ಅಬಾಧಿತವಾಗಿ ಮಾಡಲು ಶಕ್ತರನ್ನಾಗಿ ಮಾಡಿದ್ದಕ್ಕೆ ಆ ದಯಾಘನ ಪರಮಾತ್ಮನನ್ನು ನಾವು ಅನನ್ಯಭಾವದಿಂದ ಬೇಡಿಕೊಳ್ಳುತ್ತೇವೆ. ಹೋದ ವರುಷ ಸಂಚಿಕೆಗಳನ್ನು ಸಕಾಲದಲ್ಲಿ ಹೊರಪಡಿಸಲು ಸಂಪಾದಕರ ದೇಹಬಾಧೆಯ ಮೂಲಕ ಆಗಲಿಲ್ಲಾದ್ದಕ್ಕೆ ನಾವು ವಾಚಕರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. ಆದರೆ ರಾವಸಾಹೇಬ ಹಳಕಟ್ಟಿಯವರ ಪ್ರಕೃತಿಯು ಈಗ ಕ್ರಮೇಣ ಸುಧಾರಿಸುತ್ತಲಿದ್ದುದರಿಂದ ನಾವು ಹಿಂದೆ ಬಿದ್ದ ಸಂಚಿಕೆಗಳನ್ನೆಲ್ಲ ಸಕಾಲದಲ್ಲಿ ಪ್ರಸಿದ್ಧಿಸಿ ೬ ನೇ ವರ್ಷದ ಈ ಪ್ರಥಮ ಸಂಚಿಕೆಯನ್ನು ಎಪ್ರೈಲ್ ತಿಂಗಳಲ್ಲಿ ಹೊರಪಡಿಸತಕ್ಕದ್ದಿದ್ದು ಆ ಪ್ರಕಾರ ಹೊರಡಿಸಿರುತ್ತೇವೆ. ಮತ್ತು ಮುಂದೆ ಕಾಲಕಾಲಕ್ಕೆ ಸಂಚಿಕೆಗಳು ಪ್ರಸಿದ್ಧಿಸಲ್ಪಡುತ್ತ ಹೋಗುವವು.

ಮುಂದಿನ ವರ್ಷದಿಂದ ಶಿವಾನುಭವದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಲೆಣಿಸಿದ್ದು ಇದು ಪರಿಸ್ಥಿತಿಗೆ ಅನುಸಾರವಾಗಿ ಅನುಕೂಲವುಳ್ಳದೂ ಯೋಗ್ಯವಾದದ್ದೂ ಇದೆ ಎಂದು ತಮಗೆ ಗೊತ್ತಾಗದೆ ಇರದು. ಶಿವಾನುಭವದಲ್ಲಿ ಧಾರ್ಮಿಕ ಮತ್ತು ಐತಿಹಾಸಿಕ ಶೋಧಗಳ ವಿಷಯವಾಗಿ ವಿಸ್ತೃತ ಲೇಖಗಳು ಬರುತ್ತಿರುವದರಿಂದ ಇದರ ಪುಟಗಳು ಹೆಚ್ಚಿಗಿದ್ದಷ್ಟು ಅದರಲ್ಲಿ ಓದುಗರಿಗೆ ತಕ್ಕಂತೆ ನಾನಾವಿಧ ಅನೇಕ ವಿಷಯಗಳನ್ನೂ ಧರ್ಮಗ್ರಂಥಪ್ರಕಟನೆಯನ್ನೂ ಮಾಡಲಿಕ್ಕೆ ಶಕ್ಯವಾಗುತ್ತದೆ. ಆದರೆ ಶಿವಾನುಭವದಲ್ಲಿ ಈಗ ೬೪ ಪುಟಗಳು ಮಾತ್ರ ಇರುವದರಿಂದ ಅದರಲ್ಲಿ ಈ ಬಗೆಯ ಅನುಕೂಲ್ಯಗಳು ಉಂಟಾಗುವ

ದಿಲ್ಲಾದ್ದರಿಂದ ಓದುಗರಿಗೆ ಬೇಕಾಗುವ ಚಿತ್ತಾಕರ್ಷತೆಯು ಅದರಲ್ಲಿ ಎಷ್ಟು ಬೇಕೋ ಅಷ್ಟು ಉಂಟುಮಾಡಲು ಶಕ್ಯವಾಗುವದಿಲ್ಲ. ಆದ್ದರಿಂದ ಶಿವಾನುಭವವನ್ನು ಮುಂದಿನವರ್ಷದಿಂದ ೧೨೮ ಪುಟಗಳುಳ್ಳದ್ವೈಮಾಸಿಕವನ್ನಾಗಿಮಾಡಿ ಅದರ ಸೌಂದರ್ಯ, ವಿವಿಧತ್ವ, ಮತ್ತು ಉಪಯುಕ್ತತೆಯನ್ನು ಹೆಚ್ಚಿಸುವ ಯೋಜನೆಯನ್ನು ಮಾಡಿದ್ದೇವೆ. ಇದರಿಂದ ಇದರ ಪುಟಗಳಲ್ಲಿ ವಿದ್ಯಾನಂತರ ನಾನಾಬಗೆಯ ಲೇಖಗಳನ್ನೂ ಗ್ರಂಥಗಳನ್ನೂ ಸೇರಿಸಲು ಅನುಕೂಲವಾಗುತ್ತದೆ. ಇದಲ್ಲದೆ ಸಂಶೋಧನಾತ್ಮಕ ಪತ್ರಿಕೆಗೆ ಲೇಖಕರು ಲೇಖಗಳನ್ನು ವಿಚಾರಪೂರ್ವಕವಾಗಿ ಬರೆಯಬೇಕಾಗುತ್ತದೆ. ಇದಕ್ಕೆ ಅವರಿಗೆ ಕಾಲಾವಕಾಶವೂ ಅವಶ್ಯವು. ಈ ಎಲ್ಲ ದೃಷ್ಟಿಯಿಂದ ದ್ವೈಮಾಸಿಕವು ಬಹಳ ಅನುಕೂಲವುಳ್ಳದಾಗಿದೆ. ನಾವು ಹೇಳಿದ ಈ ಸಂಗತಿಗಳ ನಿಜತ್ವವು ಹೋದವರ್ಷದ ಶಿವಾನುಭವದ ೯—೧೦ ಮತ್ತು ೧೧—೧೨ ನೇ ಸಂಯುಕ್ತ ಸಂಚಿಕೆಗಳನ್ನು ನೋಡಿದ ಕೂಡಲೆ ತಮ್ಮ ನಿದರ್ಶನಕ್ಕೆ ಬರದೆ ಇರಲಾರದು. ಮತ್ತು ನನ್ನ ವಿದ್ವಾನ್ ಮಿತ್ರಮಂಡಳಿಗೂ ಈ ವಿಚಾರವು ಸರಿಯಾಗಿ ತೋರಿದ್ದರಿಂದ ಅವರ ಸಲಹೆಯಿಂದಲೇ ನಾವು ಈ ಮಾರ್ಪಾಡನ್ನು ಮಾಡಲು ಯೋಚಿಸಿದ್ದೇವೆ. ಈ ಕ್ರಮವನ್ನು ನಾವು ಮುಂದಿನ ಸಂಚಿಕೆ ಎಂದರೆ ಜೂನ ತಿಂಗಳಿನಿಂದ ಆರಂಭಿಸುವೆವು. ಆದ್ದರಿಂದ ಆ ತಿಂಗಳು ಪ್ರಕಟವಾಗುವ ಶಿವಾನುಭವವು ೧೨೮ ಪುಟವುಳ್ಳದು ಆಗುವದು.

ಒಂದು ವೇಳೆ ಶಿವಾನುಭವಕ್ಕೆ ವರ್ಗಣೀದಾರರೂ ಲೇಖಕರೂ ಹೆಚ್ಚಾದ ಪಕ್ಷದಲ್ಲಿ ನಾವು ಇದನ್ನು ಮಾಸಪತ್ರಿಕೆಯಾಗಿಯೇ ಇಟ್ಟುಕೊಂಡು ಹೆಚ್ಚೆಚ್ಚು ಪುಟಗಳನ್ನು ಹಾಕುತ್ತ ಹೋಗಬೇಕೆಂದು ನಮ್ಮ ಆರಂಭದ ಯೋಚನೆಇತ್ತು. ಆದರೆ ವೀರಶೈವ ಸಮಾಜದಲ್ಲಿ ಇನ್ನೂ ಈ ಸ್ಥಿತಿಯು ಇರುವದಿಲ್ಲಾದ್ದರಿಂದ ಆ ನಮ್ಮ ವಿಚಾರವನ್ನು ಸದ್ಯಕ್ಕೆ ತಡೆಯಬೇಕಾಯಿತು. ಆದರೆ ಪತ್ರಿಕೆಗೆ ವರ್ಗಣೀದಾರರು ಮತ್ತು ಬೇರೆ ಸಹಾಯವು ಹೆಚ್ಚಿಗೆ ದೊರೆದಲ್ಲಿ ಇದರ ಉಪಯುಕ್ತತೆ, ಸೌಂದರ್ಯ, ಸಂಶೋಧಕ ಕಾರ್ಯಗಳನ್ನು ಹೆಚ್ಚಿಸುವಲ್ಲಿ ಅದರ ಉಪಯೋಗವು ಮಾಡಲ್ಪಡುವದು. ಈ ಬಗೆಯ ಪ್ರೇರಣೆಯನ್ನು ಪರಮಾತ್ಮನು ವೀರಶೈವ ಸಮಾಜದಲ್ಲಿ ಉಂಟುಮಾಡಲೆಂದು ಅವನನ್ನು ಪ್ರಾರ್ಥಿಸಿ ನಾವು ಈ ವರ್ಷಾರಂಭವನ್ನು ಕೈಕೊಳ್ಳುತ್ತೇವೆ.

---

# ಶಿವಾನುಭವ ಇನಾಮು ಫಂಡು.

## (ಸಂಪಾದಕರು)

ವೀರಶೈವ ಸಮಾಜದ ಐತಿಹಾಸಿಕ ಶೋಧ ಮತ್ತು ಅದರ ತತ್ವಾಭ್ಯಾಸ ಇವುಗಳನ್ನು ಹೆಚ್ಚಿಸುವ ಉದ್ದೇಶದಿಂದ ನಾವು ಕೆಳಗೆ ಕಾಣಿಸಿದಂತೆ ಇನಾಮುಗಳನ್ನು ಇಡಲೆಣಿಸಿದ್ದೇವೆ. ಈ ಇನಾಮುಗಳು ಸದ್ಯಕ್ಕೆ ಮುಖ್ಯವಾಗಿ ವಚನಶಾಸ್ತ್ರ ಗ್ರಂಥಗಳನ್ನು ಓದುವುದಕ್ಕೆ ಶಾಸ್ತ್ರಿಗಳೂ, ವಿದ್ಯಾರ್ಥಿಗಳೂ, ಇತರೇ ಜನರೂ ಪ್ರೋತ್ಸಾಹ ಪಡಬೇಕೆಂಬ ಉದ್ದೇಶದಿಂದ ಇಡಲ್ಪಟ್ಟಿವೆ. ಇನಾಮುಗಳನ್ನು ಕೊಡತಕ್ಕ ಐತಿಹಾಸಿಕ ಮತ್ತು ಧಾರ್ಮಿಕ ವಿಷಯಗಳ ಪಟ್ಟಿಯೊಂದು ಮಾಡಲ್ಪಡುವದು. ಅದರಲ್ಲಿಯ ಬೇಕಾದ ವಿಷಯಗಳನ್ನು ಲೇಖಕರು ತೆಗೆದುಕೊಂಡು ಸಂಶೋಧನಾತ್ಮಕ ದೃಷ್ಟಿಯಿಂದ ಅವುಗಳ ವಿವೇಚನೆ ಮಾಡಿ ಸ್ವತಂತ್ರ ಲೇಖಗಳನ್ನು ಬರೆಯತಕ್ಕದ್ದು. ಇವುಗಳಲ್ಲಿ ಯಾವದು ಅತ್ಯುತ್ತಮವೆಂದು ಕಂಡು ಬರುತ್ತದೋ ಅದಕ್ಕೆ ಯೋಗ್ಯ ಉಚಿತಗಳು ಕೊಡಲ್ಪಡುವವು. ಇದಕ್ಕೋಸ್ಕರ ಒಂದು ಯೋಗ್ಯ ಪರೀಕ್ಷಾ ಕಮೀಟಿಯೂ ಗೊತ್ತುಪಡಿಸಲ್ಪಡುವದು. ಕೊಡತಕ್ಕ ಇನಾಮುಗಳಲ್ಲಿ ಎರಡು ತರಗತಿಗಳು ಮಾಡಲ್ಪಟ್ಟು ಒಂದು ತರಗತಿಯು ವಿದ್ಯಾರ್ಥಿಗಳಿಗೋಸ್ಕರ ಮತ್ತೊಂದು ತರಗತಿಯು ಇತರೇ ಜನರಿಗೋಸ್ಕರ ಅಂದರೆ ಪಂಡಿತರು ಮತ್ತು ತತ್ವಗ್ರಂಥಗಳನ್ನು ವಿಶೇಷ ಅಭ್ಯಾಸ ಮಾಡುವವರು ಇವರಿಗೋಸ್ಕರ ಇಡಲ್ಪಡುವವು. ಈ ಬಗೆಯ ಇನಾಮುಗಳನ್ನು ಏರ್ಪಡಿಸುವದರಿಂದ ಸಮಾಜದಲ್ಲಿ ಧರ್ಮ ಗ್ರಂಥಗಳ ಅಭ್ಯಾಸ, ಮತ್ತು ಶೋಧಕ ವೃತ್ತಿಗೆ ಪ್ರೋತ್ಸಾಹವು ಉಂಟಾಗುವದೆಂದು ನಾವು ಭಾವಿಸಿದ್ದೇವೆ.

ಆದರೆ ಹೀಗೆ ಇನಾಮುಗಳ ಏರ್ಪಾಡು ಮಾಡುವದಕ್ಕೋಸ್ಕರ ಕೆಲವೊಂದು ನಿಧಿಯು ಅವಶ್ಯವಾದದ್ದು. ಇದನ್ನು ಏರ್ಪಾಡು ಮಾಡುವಲ್ಲಿ ನಮ್ಮ ಸಮಾಜ ಹಿತೇಚ್ಛುಗಳು ನಮಗೆ ಸಹಾಯ ಮಾಡುವರೆಂದು ಕೋರುತ್ತೇವೆ. ಅವರು ತಮಗೆ ಇಷ್ಟವಾದ ವಿಷಯಗಳನ್ನೂ ಅವುಗಳಿಗೆ ತಾವು ಕೊಡತಕ್ಕ ಇನಾಮುಗಳನ್ನೂ ನಮಗೆ ತಿಳಿಸಿದರೆ ಅವರ ಹೆಸರಿನಿಂದ ಆ ಇನಾಮುಗಳು ಕೊಡಲ್ಪಡುವವು. ಆದರೆ ಕೆಲವು ಇನಾಮುಗಳಿಗೆ ಹೆಚ್ಚಿನ ಹಣವನ್ನು ಕೊಡಬೇಕಾಗುತ್ತದೆ. ಇಂಥ ಇನಾಮುಗಳನ್ನು

ಒಬ್ಬರೇ ಕೊಡಲು ಬಹುಶಃ ಸಂಭವವಿರುವದಿಲ್ಲಾದ್ದರಿಂದ ಇವುಗಳ ಸಲುವಾಗಿ ಸಣ್ಣ ಸಣ್ಣ ರಕಮುಗಳನ್ನು ಕೂಡಿಸಿ ಒಂದು ನಿಧಿಯನ್ನು ಏರ್ಪಡಿಸಿ ಅದರ ಪರವಾಗಿಯೂ ಕೊಡಲು ಎಣಿಸಿದ್ದೇವೆ. ಆದ್ದರಿಂದ ದೊಡ್ಡ ಇನಾಮುಗಳನ್ನು ಒಬ್ಬರೇ ಕೊಡಲು ಶಕ್ಯವಿಲ್ಲದವರು ತಮ್ಮ ಕೈಲಾದಷ್ಟು ಹಣವನ್ನು ನಮ್ಮ ಕಡೆಗೆ ಕಳಿಸಬೇಕೆಂದು ನಮ್ಮ ವಿನಂತಿ ಅದೆ. ಈ ಕಾಣಿಕೆಗಳಿಗೋಸ್ಕರ ಹಣ ಕೊಟ್ಟವರ ಹೆಸರುಗಳು ಶಿವಾನುಭವದಲ್ಲಿ ಮತ್ತು ನವಕರ್ನಾಟಕ ಪತ್ರಿಕೆಯಲ್ಲಿ ಕಾಲಕಾಲಕ್ಕೆ ಪ್ರಸಿದ್ಧಿಸಲ್ಪಡುವವು.

ನಮ್ಮ ಉದ್ದೇಶವು ಧಾರ್ಮಿಕತತ್ವ ಸಂಶೋಧನ ಮತ್ತು ಧರ್ಮಗ್ರಂಥ ವಾಚನಾಭಿರುಚಿಯನ್ನು ಸಮಾಜದಲ್ಲಿ ಹೆಚ್ಚಿಸುವದು ಇರುತ್ತದೆ. ಇದಕ್ಕೆ ಮೇಲ್ಕಂಡ ಯೋಜನೆಯು ಸಹಾಯಕಾರಿಯಾಗುವದೆಂದು ನಾವು ಭಾವಿಸಿದ್ದೇವೆ. ಇದರಲ್ಲಿ ವೀರಶೈವ ಮಹಾ ಜನರು ನಮಗೆ ಸಹಾಯ ಮಾಡುವರೆಂದು ಕೋರುತ್ತೇವೆ.



# ಶೈವಾಗಮಗಳ ಕಾಲ.

ಲೇಖಕಃ—ರಾ॥ ಸಾ॥ ಫ. ಗು. ಹಳಕಟ್ಟಿ.

**ಲೇಖಾಂಕ. ೨**



ಡಾ॥ ನಂದೀಮಠ ಇವರು ಶೈವಾಗಮಗಳ ಕಾಲವನ್ನು ಕುರಿತು ಮುಂದೆ ವಿವರಿಸಿದ್ದು ಅವರ ವಿಚಾರಗಳನ್ನು ನಾವು ವಾಚಕರ ಮುಂದೆ ಇಡುತ್ತೇವೆ.

ಶೈವಾಗಮಗಳು ಪರಮಾತ್ಮನಿಂದ ಬಂದಿವೆಂಬ ಸಾಮಾನ್ಯ ತಿಳುವಳಿಕೆ ಇರುವದರಿಂದ ಇವುಗಳ ಕಾಲವು ಅನಾದಿ ಎಂದು ಹೇಳಲ್ಪಡುವದುಂಟು. ಆದರೆ ಆಧುನಿಕ ವಿದ್ವಾಂಸರು ಈ ಬಗೆಯ ಪುರಾತನತ್ವವನ್ನು ಒಪ್ಪಲಾರರು. ಆದ್ದರಿಂದ ನಿಸ್ಸಂದೇಹವಾದ ಪ್ರಮಾಣಗಳಿಂದಲೇ ಇವುಗಳ ಕಾಲವನ್ನು ಗೊತ್ತುಪಡಿಸುವದು ಅವಶ್ಯವದೆ ಎಂದು ಡಾ॥ ನಂದೀಮಠ ಇವರ ಅಭಿಪ್ರಾಯ ಇದೆ. ಅವರ ಈ ಅಭಿಪ್ರಾಯವನ್ನು ನಾವು ಪೂರ್ಣವಾಗಿ ಸಮರ್ಥಿಸುತ್ತೇವೆ. ಅನೇಕರು ಪುರಾತನತ್ವವನ್ನು ಸಿದ್ಧಪಡಿಸುವ ಉದ್ದೇಶದಿಂದ ಪುರಾತನ ಗ್ರಂಥಗಳಲ್ಲಿ ದೊರಕುವ ಶಬ್ದಗಳಿಗೆ ಏನಾದರೂ ಅರ್ಥಮಾಡಿಕೊಂಡು ಆ ಅರ್ಥಕ್ಕೆ ವ್ಯಾಕರಣದ ಸೂತ್ರಹಚ್ಚಿ ತಮ್ಮ ತಿಳುವಳಿಕೆಯನ್ನು ಸಿದ್ಧ ಪಡಿಸಲು ಉಪಕ್ರಮಿಸುತ್ತಾರೆ. ಈ ಬಗೆಯಾಗಿ ಇವರು "ವೀರಶೈವ", "ಲಿಂಗ" ಈ ಶಬ್ದಗಳಿಗೂ ಅರ್ಥ ಮಾಡಿ ಅವುಗಳ "ಅನಾದಿತ್ವ" ವನ್ನು ಸಾಧಿಸಲು ಪ್ರಯತ್ನಿಸುವರು. ಆದರೆ ಇವರ ಈ ಬಗೆಯ ಪ್ರಯತ್ನಗಳು ಹಾಸ್ಯಾಸ್ಪದವಾದವುಗಳು. ಮತ್ತು ಈ ಕಾಲಕ್ಕೆ ಇವು ನಂಬುಗೆಗೆ ಎಂದೂ ಪಾತ್ರವಾಗಲಾರವೆಂದು ನಾವು ಇಲ್ಲಿ ಒತ್ತಿ ಹೇಳದೆ ಇರಲಾರೆವು.

ಡಾ॥ ನಂದೀಮಠ ಇವರು ಶಿವಾಗಮಗಳ ಪ್ರಾಚೀನತ್ವದ ವಿಷಯವಾಗಿ ತಮ್ಮ ಲೇಖದಲ್ಲಿ ಅನೇಕ ವಿಶ್ವಸನೀಯ ಆಧಾರಗಳನ್ನು ಕೊಟ್ಟಿರುವರು. ಅವುಗಳನ್ನು ವಾಚಕರು ಚನ್ನಾಗಿ ವಿಚಾರ ಮಾಡಬೇಕು. ಅವುಗಳನ್ನು ನಾವು ಇದ್ದಕ್ಕಿದ್ದ ಹಾಗೆಯೇ ಇಲ್ಲಿ ಕೊಟ್ಟಿದ್ದೇವೆ.

೧ ಸೂತ ಸಂಹಿತೆಯೂ ಪುರಾಣಗಳೂ ಕಾಮಿಕಾದಿ ಆಗಮಗಳನ್ನು ಉಲ್ಲೇಖಿಸುವದರಿಂದ ಇವು ಪುರಾತನೆಂದು ತಿಳಿಯಬಹುದಾಗಿದೆ. ಆದರೆ ಪುರಾಣಗಳಲ್ಲಿ ಐತಿಹಾಸಿಕ ಪ್ರಮಾದಗಳನೇಕವಿರುವದರಿಂದ, ಇವುಗಳ ನಿಶ್ಚಿತ ಕಾಲನ್ನು ನಿರ್ಧರಿಸಲು ಸಹಾಯವಾಗುವದಿಲ್ಲವೆಂದು ಡಾ॥ ನಂದೀಮಠ ಇವರು ಅಭಿಪ್ರಾಯಪಡುತ್ತಾರೆ.

೨ ನಿಜಗುಣ ಶಿವಯೋಗಿಯು ತನ್ನ ವಿವೇಕ ಚಿಂತಾಮಣಿಯಲ್ಲಿ ಎಲ್ಲ ಶೈವಾಗಮ ಉಪಾಗಮಗಳನ್ನು ಉಲ್ಲೇಖಿಸಿದ್ದು ಇವರ ವಿವರಣೆಯು ಕಾಮಿಕ ಮತ್ತು ಕಾರಣಾಗಮಗಳಲ್ಲಿಯ ತಂತ್ರಾವತಾರ ಪಟಲದಲ್ಲಿ ಹೇಳಿದಂತೆಯೇ ಇದೆ. ಆರ್ ನರಸಿಂಹಾಚಾರ್ಯರು ನಿಜಗುಣ ಶಿವಯೋಗಿಯು ಕಾಲವು ೧೫೦೦ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಶಿವಾಗಮಗಳೂ ಉಪಾಗಮಗಳೂ ಕೆಳಗೆ ಕಾಣಿಸಿದ ಗ್ರಂಥಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿವೆ. ಅವು ಯಾವವೆಂದರೆಃ--ತಿರಮೂಲರ್ ಇವರ ಗ್ರಂಥ, (ಕಾಲ ತಿಳಿದಿಲ್ಲ) ರಾಮಕಂಠನ ಮಾತಂಗವೃತ್ತಿ, (ಕ್ರಿ. ಶ. ೯೦೦) ಅಘೋರ ಶಿವ, (೧೧೫೮) ಉಮಾಪತಿ ಶಿವಾಚಾರ್ಯನ ಪೌಷ್ಕರ ಭಾಷ್ಯ, (ಕ್ರಿ. ಶ. ೧೩೧೩) ಈಶಾನ ಶಿವನ ಈಶನ ಶಿವಗುರುದೇವ ಪದ್ಧತಿ, (೧೧ ನೇ ಶತಮಾನ) ಸಿಗಮಜ್ಞಾನ ದೇವನ ಜೀರ್ಣೋದ್ಧಾರ ದಶಕ, (೧೪ ನೇ ಶತಮಾನ) ಗುಬ್ಬಿಯ ಮಲ್ಲಣನ ಗಣಬಾಷ್ಯ ರತ್ನಮಾಲೆ, (೧೫ ನೇ ಶತಮಾನ) ಮಲ್ಲಣಾರ್ಯನ ವೀರಶೈವಾಮೃತ ಮಹಾ ಪುರಾಣ, (ಕ್ರಿ. ಶ. ೧೫೬೫) ಸಂಪಾದನೆಯ ಸಿದ್ಧ ವೀರನ ವೀರಶೈವ ಸದಾಚಾರ ಸಂಗ್ರಹ, (ಕಾಲ ಗೊತ್ತು ಇಲ್ಲ) ನಿಷ್ಠುರ ಸಂಜಯ್ಯನ ವೀರಶೈವ ವೇದಾಂತಸಾರ ಚಿಂತಾಮಣಿ, (ಕಾಲ ಗೊತ್ತು ಇಲ್ಲ) ಸಕಲಾಗಮ ಸಾರಸಂಗ್ರಹ (ಗ್ರಂಥಕಾರನ ಹೆಸರು, ಕಾಲ ತಿಳಿದಿಲ್ಲ) ಮತ್ತು ವಚನಶಾಸ್ತ್ರದಲ್ಲಿಯೂ ಶೈವಾಗಮಗಳ ಅವತರಣಗಳು ಹೇರಳವಾಗಿ ಬರುತ್ತವೆ. ಈ ಅವತರಣಗಳಲ್ಲನೇಕವುಗಳು ಆಗಮಗಳ ಹೆಸರುಗಳನ್ನು ಹೇಳುತ್ತವೆ. ಆದರೆ ಕೆಲವುಗಳು ಹೇಳುವದಿಲ್ಲ. ವಚನ ಗ್ರಂಥಗಳಲ್ಲಿ ಕೆಲವು ೧೧೬೦ ನೇ ಇಸ್ವಿಯಲ್ಲಿ ಹುಟ್ಟಿದವುಗಳಿದ್ದು ಕೆಲವು ಈಚಿಗಿನವೂ ಇವೆ. ಈ ಎಲ್ಲ ಸಂಗತಿಗಳ ಮೇಲಿಂದ ಆಗಮಗಳ ಕಾಲವು ಕ್ರಿ. ಶ. ಒಂಭತ್ತು ಹತ್ತನೇ ಶತಮಾನದ ಹಿಂದೆ ಹೋಗುತ್ತದೆಂದು ಡಾ॥ ನಂದೀಮಠ ಇವರ ಅಭಿಪ್ರಾಯ.

೩ ಈಶಾನ ಶಿವನು ತನ್ನ ಪದ್ಧತಿಯಲ್ಲಿ ೨೮ ಆಗಮಗಳನ್ನು ವಿವರಿಸಿದ್ದು ಉಪಾಗಮಗಳು ಅಸಂಖ್ಯವಾಗಿರುವವೆಂದು ಹೇಳಿರುವನು. ಇವನು ೧೧ ನೇ ಶತಮಾನದಲ್ಲಿ ಆದ ಗ್ರಂಥಕಾರನು.

೪. ಅಘೋರ ಶಿವನು (ಕ್ರಿ. ಶ. ೧೧೫೮) ರಾಮಕಂಠನು (ಕ್ರಿ. ಶ. ೯೦೦-೯೫೫) ಉಪಾಗಮಗಳನ್ನು ಉದಹರಿಸಿದ್ದಾರೆ.

೫ ಭೋಜರಾಜನು ಸಿದ್ಧಾಂತಸಾರಪದ್ಧತಿ ಎಂಬ ಗ್ರಂಥವನ್ನು ರಚಿಸಿದ್ದಾನೆ. ಈ ಭೋಜನು ಮಾಳವಾ ದೇಶದ ಪ್ರಸಿದ್ಧ ಭೋಜರಾಜನಾಗಲಿ ಇಲ್ಲವೇ ನೇಪಾಳದ ಭೋಜರಾಜನಾಗಲಿ ಇರದೆ, ತತ್ವಪ್ರಕಾಶದ ಕರ್ತನಾದ ಭೋಜನು ಇರಬಹುದು. ಈ ಗ್ರಂಥದ ಪ್ರತಿಯು ನೇಪಾಳದ ದರ್ಬಾರ ಲೈಬ್ರರಿಯಲ್ಲಿದ್ದು ಅದು ೧೦೭೭ ರಲ್ಲಿ ಅವತರಿಸಲ್ಪಟ್ಟಿರುತ್ತದೆಂದು ಹರಪ್ರಸಾದ ಶಾಸ್ತ್ರಿಗಳು ಹೇಳುತ್ತಾರೆ. ಈಶಾನ ಶಿವನು ತನ್ನ ಸಿದ್ಧಾಂತಸಾರದಲ್ಲಿ ಭೋಜ, ಸೋಮಶಂಭು ಮತ್ತು ಯೋಗೀಶ್ವರ ಇವರ ಪದ್ಧತಿಗಳಿಂದ ಅವತರಣಗಳನ್ನು ಎತ್ತಿ ತೆಗೆದುಕೊಂಡಿದ್ದಾನೆ. ಅಘೋರ ಶಿವನೂ ಒಂದು ಪದ್ಧತಿಯನ್ನು ರಚಿಸಿರುವನು ಇದರಿಂದ ಭೋಜನ ಕಾಲದಿಂದ ಪದ್ಧತಿ ಎಂಬ ಬಗೆಯ ಗ್ರಂಥಗಳನ್ನು ಬರೆಯುವ ಸಾಂಪ್ರದಾಯವಿತ್ತೆಂದು ತೋರುತ್ತದೆ. ಇವುಗಳಲ್ಲಿಯ ಉಲ್ಲೇಖಗಳನ್ನು ನಾವು ನೋಡಿದರೆ ಆಗಮಗಳ ಸಾರ ತೆಗೆದು ಉಪಾಗಮಗಳನ್ನು ರಚಿಸುವ ಪದ್ಧತಿಯು ಅಷ್ಟರಲ್ಲಿ ನಿಂತು ಹೋಗಿತ್ತು. ಪದ್ಧತಿಗಳ ಕಾಲವು ೧೦ ನೇ ಶತಮಾನವಾದ್ದರಿಂದ, ಇದಕ್ಕೂ ಪೂರ್ವದಲ್ಲಿಯೇ ಆಗಮ ಉಪಾಗಮಗಳ ಕಾಲವೆಂದು ಹೇಳಬಹುದು.

೬. ಕ್ರಿ. ಶ. ೯೨೪ ರಲ್ಲಿ ಎತ್ತಿ ಬರೆಯಲ್ಪಟ್ಟ ಕಿರಣಾಗಮವನ್ನು ಕುರಿತು ಹರಪ್ರಸಾದ ಶಾಸ್ತ್ರಿಗಳು ಉಲ್ಲೇಖಿಸಿರುವದಲ್ಲದೆ ಅದರಲ್ಲಿಯ ಕೆಲಭಾಗಗಳನ್ನು ಅವರು ಅಚ್ಚುಹಾಕಿಸಿದ್ದಾರೆ. ಇವುಗಳೊಂದರಲ್ಲಿ ೨೮ ಶಿವಾಗಮಗಳ ಉಲ್ಲೇಖವದೆ. ಈ ಉಲ್ಲೇಖವು ೧೦ ನೇ ಅಧ್ಯಾಯದಲ್ಲಿ ಬರುತ್ತದೆ. ಅದರಲ್ಲಿ ಈ ಆಗಮಗಳು ಯಾರಿಂದ ಯಾರಿಗೆ ಬಂದವು ಇದೂ ವಿವರಿಸಲ್ಪಟ್ಟಿರುತ್ತದೆ. ೧ ನೇ ಹತ್ತು ಆಗಮಗಳು ಶಿವಭೇದವೆಂತಲೂ ಉಳಿದವುಗಳು ರುದ್ರಭೇದವೆಂತಲೂ ಹೇಳಲ್ಪಟ್ಟಿವೆ. ಶಿವಭೇದದ ಪ್ರತಿಯೊಂದು ಆಗಮವು ಮೂವರಿಗೆ, ರುದ್ರಭೇದದ ಆಗಮಗಳು ಇಬ್ಬರಿಗೆ ಹೇಳಲ್ಪಟ್ಟಿವೆ. ಹ್ಯಾಗೆಂದರೆ,

## ಶಿವಭೇದ

| ವಿದ್ಯೆಗಳು | ಗುರುಕ್ರಮ |
|---|---|
| ೧ ಕಾಮಿಕ | ೧ ಪ್ರಣವ ೨ ತ್ರಿಕಾಲ ೩ ಹರ |
| ೨ ಯೋಗಜ | ೧ ಶುದ್ಧ ೨ ಭಸ್ಮ ೩ ಪ್ರಭು |
| ೩ ಅಚಿಂತ್ಯ | ೧ ದೀಪ್ತರುದ್ರ ೨ ಗೋಪತಿ ೩ ಅಂಬಕಾ |
| ೪ ಕಾರಣ | ೧ ಕಾರಣ ೨ ಭಾವ ೩ ಪ್ರಜಾಪತಿ |
| ೫ ಅರ್ಚಿತ | ೧ ಸುಶಿವ ೨ ಉಮೇಶ ೩ ಅಚ್ಯುತ |
| ೬ ದೀಪ್ತ | ೧ ಈಶ ೨ ತ್ರಿಮೂರ್ತಿ ೩ ಹುತಾಶನ |
| ೭ ಸೂಕ್ಷ್ಮ | ೧ ಸೂಕ್ಷ್ಮ ೨ ಭಾವ ೩ ಪ್ರಭಂಜನ |
| ೮ ಸಹಸ್ರ | ೧ ಕಾಲ ೨ ಸೋಮ ೩ ಧರ್ಮ |
| ೯ ಸುಪ್ರಭ | ೧ ದಶೇಶ ೨ ವಿಗ್ರಹೇಶ ೩ ಶಶಿ |
| ೧೦ ಅಂಶುಮಾನ್ | ೧ ಅಂಬು (ಅಕ್ಷ) ಸಂಜ್ಞ (೨) ಉಗ್ರ ೩ ರವಿ |

## ರುದ್ರಭೇದ

| | |
|---|---|
| ೧೧ ವಿಜಯ | ೧ ರುದ್ರ (ಅನಾದಿಸಂಜ್ಞ) ೨ ಪರಮೇಶ್ವರ |
| ೧೨ ಪರಮೇಶ | ೧ ಶ್ರೀ (ದೇವಿ) ೨ ಉಶನಸ್ |
| ೧೩ ನಿಶ್ವಾಸ | ೧ ದಶಾಕ್ಷರ ೨ ಶೈವಸಂಭವ |
| ೧೪ ಪ್ರೋದ್ಗೀತ | ೧ ರುದ್ರಸಂಜ್ಞ ೨ ಕಕಾಸ್ಯಮುನಿ |
| ೧೫ ಮುಖಬಿಂಬ | ೧ ಪ್ರಶಾಂತ ೨ ದಧೀಚಿ |
| ೧೬ ಬಿಂದುಸಿದ್ಧಿ | ೧ ಚಂಡ ೨ ಅಸುರಗಣ |
| ೧೭ ಸಂತಾನ | ೧ ಶಿವನಿಷ್ಠ ೨ ಸಂಶಯಪರ |
| ೧೮ ನರಸಿಂಹ | ೧ ಸೌಮ್ಯ ೨ ನರಸಿಂಹ |
| ೧೯ ಚಂದ್ರಕಾಶ | ೧ ಅನಂತ ೨ ಪ್ರಾರ್ಚಿತ |
| ೨೦ ಭದ್ರಸರ್ವಾತ್ಮನ್ | ೧ ರುದ್ರ ೨ ವೀರಭದ್ರ |
| ೨೧ ಸ್ವಯಂಭುವ | ೧ ನಿಧಾನ ೨ ಪದ್ಮಸಂಭವ |
| ೨೨ ವಿಲಾಸ (ವಿರಸ) | ೧ ತೇಜ ೨ ಪಜ್ಞಾಪಾಲಖಗೇಶ್ವರ |
| ೨೩ ರೌರವ | ೧ ಬ್ರಾಹ್ಮಣೇಶ ೨ ನಂದಿಕೇಶ |
| ೨೪ ಮರ್ಕುಟ (ಮಕುಟ) | ೧ ಈಶಾನ ೨ ಮಹಾದೇವ |
| ೨೫ ಕಿರಣ | ೧ ದೇವಪಿತೃ ೨ ಸರ್ವರ್ತಕ |

೨೬ ಲಲಿತ ೧ ಆಲಯ ೨ ರುದ್ರ (ಭೈರವರೂಪಧೃಕ್)
೨೭ ಆಗ್ನೇಯ ೧ ಅಸಂಗ ೨ ಹುತಭಕ್ಷಣ
೨೮ ಸೌರಭೇದ ಪರಾಭಯಂ ೧ ಶಿವಾಖ್ಯ ೨ ಮಹಾಕಾಲ

ಈ ವಿವರಣೆಯು ಈಗ ಸಾಮಾನ್ಯವಾಗಿ ಪ್ರಚಾರದಲ್ಲಿದ್ದ ವಿವರಣೆಗೆ ಬಹಳ ಕೂಡುತ್ತದೆ. ಕಡೆಯ ಆಗಮವು ವಾತುಲವಿರಬಹುದೆಂದು ತೋರುತ್ತದೆ. ಯಾಕಂದರೆ ವಾತುಲವನ್ನು ಸ್ವೀಕರಿಸಿದ ಉಭಯಾತರ ಹೆಸರುಗಳೂ ಇಲ್ಲಿ ಕೊಟ್ಟ ಹೆಸರುಗಳೂ ಒಂದೇ ಇರುತ್ತವೆ. ಇಲ್ಲಿ ಹೇಳಿದ ನರಸಿಂಹ ಮತ್ತು ಭದ್ರ ಆಗಮಗಳು ಸರ್ವೋತ್ತರ ಮತ್ತು ವಿಮಲಾಗಮಗಳು ಇರಬಹುದು.

ಈ ಆಗಮಗಳು ಮೇಲ್ಕಂಡ ಕಿರಣಾಗಮದಲ್ಲಿ ತಂತ್ರ ಅಥವಾ ಆಗಮಗಳೆಂದು ಕರೆಯಲ್ಪಡದೆ ವಿದ್ಯೆ, ಜ್ಞಾನ, ಅಥವಾ ಮತಗಳೆಂದು ಕರೆಯಲ್ಪಟ್ಟಿವೆ. ಈ ಕಿರಣಾಗಮವು ಕ್ರಿ. ಶ. ೯೨೪ ರಲ್ಲಿ ಎತ್ತಿ ಬರೆಯಲ್ಪಟ್ಟಿದ್ದರಿಂದ ಆಗಮಗಳ ಕಾಲವು ಇದಕ್ಕೂ ಮೊದಲು ಎಂದು ಸಿದ್ಧವಾಗುತ್ತದೆ.

೭. ಪ್ರೊ॥ ಬೆಂಡಾಲ ಇವರು ಕಿ. ಶ. ೮೫೯ ರಲ್ಲಿ 'ಗುಪ್ತ' ವಂಶದವರ ಕಾಲದ ಅಕ್ಷರದಲ್ಲಿ ಬರೆದ ಪಾರಮೇಶ್ವರ ತಂತ್ರವನ್ನು ಉಲ್ಲೇಖಿಸಿರುತ್ತಾರೆ.

೮. ಹರಪ್ರಸಾದ ಶಾಸ್ತ್ರಿಗಳು ೮ ನೇ ಶತಮಾನದಲ್ಲಿ ಬರೆಯಲ್ಪಟ್ಟ ನಿಶ್ವಾಸತತ್ವ ಸಂಹಿತೆ ಮತ್ತು ಕ್ರಿ. ಶ. ೧೦೬೦ ರಲ್ಲಿ ಬರೆದ ನಿಶ್ವಾಸಾಖ್ಯ ಮಹಾ ತಂತ್ರಗಳನ್ನು ಉಲ್ಲೇಖಿಸಿರುತ್ತಾರೆ. ಇದಲ್ಲದೆ ಅವರು ೧೧೪೭ ರಲ್ಲಿ ಬರೆದ ಪ್ರತಿಷ್ಠಾ ತಂತ್ರವನ್ನೂ ಉಲ್ಲೇಖಿಸಿರುತ್ತಾರೆ. ಇದು ನಿಶ್ವಾಸಾಖ್ಯ ಮಹಾ ತಂತ್ರದ ಭಾಗವು. ನಿಶ್ವಾಸಾಗಮವು ಶೈವರಲ್ಲಿ ಬಹು ಆಧಾರವಾದ ಗ್ರಂಥವು. ಆದ್ದರಿಂದ ಆಗಮಗಳ ಕಾಲವು ೮ ನೇ ಶತಮಾನದಕ್ಕಿಂತಲೂ ಹಿಂದೆ ಹೋಗುತ್ತದೆ.

೯. ಆದರೆ ಈ ಶಿವಾಗಮಗಳು ಕ್ರಿ. ಶ. ೬ ನೇ ಶತಮಾನದಲ್ಲಿ ಪ್ರಚಲಿತವಾಗಿದ್ದವೆಂಬದಕ್ಕೆ ಶಿಲಾಲೇಖಗಳಿಂದ ನಮಗೆ ಸ್ಪಷ್ಟ ಆಧಾರಗಳು ದೊರಕುತ್ತವೆ. ಕಂಚಿಯಲ್ಲಿಯ ಕೈಲಾಸನಾಥನ ದೇವಾಲಯದಲ್ಲಿ

ಪಲ್ಲವರ ಶಿಲಾಲೇಖಗಳಿದ್ದು ಅವರಲ್ಲಿ ಆಗಿಹೋದ ರಾಜ ಸಿಂಹನ ಬಿರು ದಾವಳಿಗಳು ಒಂದರಲ್ಲಿ ಕೊಡಲ್ಪಟ್ಟಿವೆ. ಈ ಬಿರುದಾವಳಿಗಳಲ್ಲಿ "ಆಗಮ ಪ್ರಮಾಣಃ" ಎಂತಲೂ "ಶ್ರೀ ಆಗಮಾನುಸಾರಿ" ಎಂತಲೂ ಎರಡು ಬಿರುದುಗಳು ಬಹು ಮಹತ್ವವಾದವುಗಳು. ಡಾ॥ ಹುಲ್ಟ್ಜ ಇವರು ಇನ್ನೊಂದು ಶಿಲಾಲೇಖವನ್ನು ಉಲ್ಲೇಖಿಸಿದ್ದು, ಅದರಲ್ಲಿ ಈ ರಾಜಸಿಂಹನು ಉಲ್ಲೇಖಿಸಲ್ಪಟ್ಟಿದ್ದು ಏನೆಂದರೆ—ವಿದಿತ ಬಹು ನಯಃ ..ಶೈವ ಸಿದ್ಧಾಂತ ಮಾರ್ಗ ಶ್ರೀಮಾನ್ ಅತ್ಯಂತ ಕಾಮಃ ಕ್ಷತ ಸಕಲಮಲೋದುರ್ಧರಃ ಪಲ್ಲವಾನಾಃ" ಇಲ್ಲಿ "ಶೈವ ಸಿದ್ಧಾಂತ ಮಾರ್ಗ" ಎಂಬ ಶಬ್ದಗಳಿರುವ ದರಿಂದ ಮೊದಲಿನ ಶಿಲಾ ಶಾಸನಗಳಲ್ಲಿ ವಿವರಿಸಿದ ಆಗಮ ಮಾರ್ಗಗ ಳಾವವೆಂಬದನ್ನು ಕೂಡಲೆ ಕಂಡು ಹಿಡಿಯಬಹುದಾಗಿದೆ. ಅವು ಶೈವಾಗ ಮಗಳ ಸಂಬಂಧವನ್ನೇ ತೋರಿಸುತ್ತವೆ ಹೊರ್ತು ಬೇರೆ ಆಗಮಗಳನ್ನು ಅವು ಉಲ್ಲೇಖಿಸುವದಿಲ್ಲೆಂದು ತಿಳಿಯಲು ಪ್ರತ್ಯವಾಯವಿಲ್ಲ.

ಅಮರಾವತಿ ಎಂಬ ಪಟ್ಟಣದಲ್ಲಿಯೂ ಪಲ್ಲವರ ಶಿಲಾಲೇಖಗಳಿದ್ದು ಇದರಲ್ಲಿ ಪಲ್ಲವರ ಮೂಲಪುರುಷನಾದ ದ್ರೋಣಾಚಾರ್ಯನು "ಸಮಸ್ತಾ ಗಮ ಪಾರದೃಶ್ವಾ" ಎಂದರೆ ಎಲ್ಲ ಆಗಮಗಳನ್ನು ಬಲ್ಲವನೆಂದು ಉಲ್ಲೇ ಖಿಸಲ್ಪಟ್ಟಿದ್ದಾನೆ. ಈ ಶಿಲಾಶಾಸನವು ರಾಜ ಸಿಂಹನದೇ ಇರುವದರಿಂದ ಈ ಆಗಮಗಳ ಉಲ್ಲೇಖವು ಶೈವಾಗಮಗಳಿಗೆ ಸಂಬಂಧಿಸಿರಬೇಕು. ಇದ ರಿಂದ ರಾಜಸಿಂಹನ ಕಾಲಕ್ಕೆ ಶೈವಾಗಮಗಳು ಆಧಾರ ಗ್ರಂಥಗಳೆಂದು ಭಾವಿಸಲ್ಪಟ್ಟಿರಬೇಕು.

ಡಾ॥ ಹುಲ್ಟ್ಜರು ಈ ರಾಜಸಿಂಹನು ಚಾಲುಕ್ಯರ ೧ನೇ ಪುಲಕೇ ಶಿಯ ಸಮಕಾಲೀನನೆಂದು ಹೇಳಿದ್ದಾರೆ. ಈ ಪುಲಕೇಶಿಯ ಆಳಿಕೆಯು ಕ್ರಿ. ಶ. ೫೫೬ ರಲ್ಲಿ ಮುಗಿಯಿತು.

ಆದರೆ ಡಾ. ಫ್ಲೀಟರು ಈ ರಾಜಸಿಂಹನು ಕ್ರಿ. ಶ. ೬೫೫ ರಿಂದ ಆಳಿದ ಚಾಲುಕ್ಯ ವಿಕ್ರಮಾದಿತ್ಯನ ಸಮಕಾಲೀನನೆಂದು ಅನ್ನುತ್ತಾರೆ.

ಆದರೆ ಅಮರಾವತಿಯಲ್ಲಿ ಬೌದ್ಧರಸ್ತೂಪವಿದ್ದು ಅಲ್ಲಿಯ ಶಿಲಾಶಾ ಸನವು ಈ ರಾಜಸಿಂಹನಾರೆಂಬದರ ಬಗ್ಗೆ ಕೆಲವು ಪ್ರಕಾಶನ್ನು ಕೆಡವು ತ್ತದೆ.

ಹಿವೆನ್‌ತ್ಸಾಂಗನೆಂಬ ಚೀನ ದೇಶದ ಪ್ರವಾಸಿಯ ವರ್ಣನೆಯಿಂದ ಕ್ರಿ. ಶ. ೬೩೩ ರಲ್ಲಿ ಈ ಅಮರಾವತಿಯಲ್ಲಿಯ ಬುದ್ಧಾಲಯಗಳು ಪರಿತ್ಯಜಿ

ಸಲ್ಪಟ್ಟಿದ್ದವೆಂದು ತೋರುತ್ತದೆ. ಮತ್ತು ಹಾಗೆ ಅವನು ಅವುಗಳನ್ನು ವರ್ಣಿಸಿಯೂ ಇದ್ದಾನೆ. ದಕ್ಷಿಣ ದೇಶದಲ್ಲಿ ಈ ಧರ್ಮವು ಆ ಕಾಲಕ್ಕೆ ಅವನತಸ್ಥಿತಿಯಲ್ಲಿ ಇತ್ತೆಂದು ಅವನ ವರ್ಣನೆಗಳೇ ಹೇಳುತ್ತವೆ. ಆದ್ದರಿಂದ ಫ್ಲೀಟರು ಅನ್ನುವಂತೆ ರಾಜಸಿಂಹನು ೭ ನೇ ಶತಮಾನದಲ್ಲಿ ಇದ್ದಿದ್ದಾದರೆ, ಅಮರಾವತಿಯಲ್ಲಿ ಆಗ ಹಾಳಾಗಿ ಹೋಗಿದ್ದ ಒಂದು ಬೌದ್ಧ ದೇವಾಲಯಕ್ಕೆ ಹೀಗೆ ದಾನಕೊಡುವದು ಶಕ್ಯ ತೋರುವದಿಲ್ಲ. ಅವನು ದಾನಕೊಡಬೇಕಾದರೆ ಅಮರಾವತಿಯು ಊರ್ಜಿತಸ್ಥಿತಿಯಲ್ಲಿ ಇದ್ದಾಗ್ಗೆಯೇ ಕೊಟ್ಟಿರಬೇಕು. ಈ ಸ್ಥಿತಿಯು ಹಿವೆನ್‌ತ್ಸಾಂಗನ ವರ್ಣನೆಯ ಪ್ರಕಾರ ಕ್ರಿ. ಶ. ೬೩೩ ರಕಿಂತ ೧೦೦ ವರ್ಷ ಮೊದಲು ಇರಬೇಕು. ಆದ್ದರಿಂದ ರಾಜಸಿಂಹನು ೬ನೇ ಶತಮಾನದಲ್ಲಿ ಇರಬೇಕು.

ಇದರ ಮೇಲಿಂದ ಶಿವಾಗಮಗಳ ಅಸ್ತಿತ್ವವನ್ನು ಕನಿಷ್ಟ ೬ ನೇ ಶತಮಾನದ ವರೆಗೆ ಕಂಡುಹಿಡಿಯಬಹುದಾಗಿದೆ. ನಿಜವಾದ ಮೂಲ ಶಿವಾಗಮಗಳು ಸಿಗುವ ವರೆಗೆ ಬರೀ ಊಹೆಗಳ ಮೇಲೆ ನಿಶ್ಚಿತ ಅಭಿಪ್ರಾಯ ಕೊಡಲಿಕ್ಕೆ ಶಕ್ಯವಿಲ್ಲ. ಈಗ ದೊರೆಯುವ ಆಗಮಗಳ ಭಾಗಗಳ ಮೇಲಿಂದ ನಮಗೆ ಏನೂ ಸಹಾಯವಾಗುವದಿಲ್ಲ. ಯಾಕಂದರೆ ಇಷ್ಟು ಕಾಲ ದೂರದವರೆಗೆ ಸಹ ಅವುಗಳ ಕಾಲವು ಹೋಗುವದಿಲ್ಲ. ಅವು ಈಚೆಗೆ ರಚಿಸಿದ್ದು ಇವೆ.

ಆದರೆ ಅವು ಈಚಿನವಾಗಿದ್ದರೂ ವೈಷ್ಣವ ಸಂಹಿತೆಗಳಿಗಿಂತಲೂ ಮೊದಲಿನವೆಂದು ಡಾ॥ ನಂದಿಮಠ ಇವರ ಅಭಿಪ್ರಾಯ. ಯಾಕೆಂದರೆ ಈ ಸಂಹಿತೆಗಳಲ್ಲಿ ಶಿವಾಗಮಗಳ ಉಲ್ಲೇಖಗಳೂ ಅವುಗಳ ನಿಂದೆಗಳೂ ಕಂಡುಬರುತ್ತದೆ. ಆದರೆ ಈ ಶಿವಾಗಮಗಳಲ್ಲಿ ಮಾತ್ರ ವೈಷ್ಣವಾಗಮಗಳ ಬಗ್ಗೆ ಉಲ್ಲೇಖವಿಲ್ಲ. ಮಹಾಭಾರತದ ಕಾಲದ ವರೆಗೂ ಅವುಗಳ ಉಗಮವನ್ನು ಗೊತ್ತುಹಚ್ಚಬಹುದಾಗಿದೆ. ಮಹಾಕವಿ ಕಾಳಿದಾಸನು ಆಗಮಿಕ ಶೈವನಿರಬಹುದು.

ಈ ಪ್ರಕಾರ ಡಾ॥ ನಂದೀಮಠ ಇವರು ಆಗಮಗಳ ಕಾಲದ ಬಗ್ಗೆ ತಮ್ಮ ಲೇಖದಲ್ಲಿ ವಿವೇಚನೆಮಾಡಿರುತ್ತಾರೆ.

ಅವರು ತೋರಿಸಿದ ಮುಖ್ಯ ಆಧಾರಗಳು ಪುರಾತನ ಗ್ರಂಥಗಳಲ್ಲಿ ಆಗಮಗಳ ಉಲ್ಲೇಖಗಳ ಮೇಲೆ ಬಹಳ ಅವಲಂಬಿಸಿವೆ. ಮತ್ತು ಪಲ್ಲ

ವರ ರಾಜನಾದ ರಾಜಸಿಂಹನ ೬ ನೇ ಶತಮಾನದ ಒಂದು ಶಿಲಾಶಾಸನದ ಮೇಲಿಂದಲೂ ಈ ಆಗಮಗಳ ಕಾಲವು ಈ ಶತಮಾನದ ವರೆಗೆ ಹಿಂದೆ ಹಾಕಲ್ಪಡಬಹುದೆಂದು ಅವರು ನಿರ್ಣಯಿಸಿರುತ್ತಾರೆ.

ಆಗಮಗಳ ಉಲ್ಲೇಖಗಳು ಕರ್ನಾಟಕದ ಕಾಳಾಮುಖರ ೧೦ ರಿಂದ ೧೩ ನೇ ಶತಮಾನದವರೆಗಿನ ಶಿಲಾಶಾಸನಗಳಲ್ಲಿಯೂ ಹೇರಳವಾಗಿ ದೊರೆಯುತ್ತವೆ. ಇವುಗಳಲ್ಲಿ ಇವರು ಶಿವಾಗಮಶಿರಶರ್ ಎಂದು ಮೊದಲಾಗಿ ಸಂಬೋಧಿಸಲ್ಪಟ್ಟಿದ್ದಾರೆ. ಆದ್ದರಿಂದ ಶಿವಾಗಮ ಗ್ರಂಥಗಳು ಈ ಕಾಲದಲ್ಲಿ ಅಸ್ತಿತ್ವದಲ್ಲಿ ಇದ್ದು ಅವು ಬಹಳವಾಗಿ ಈ ಪ್ರಾಂತದಲ್ಲಿ ಆದರಿಸಲ್ಪಡುತ್ತಿದ್ದವೆಂಬದರಲ್ಲಿ ಸಂದೇಹವಿರಲಾರದು.

ಡಾ॥ ನಂದೀಮಠ ಇವರು ಆಗಮಗಳ ಕಾಲವನ್ನು ನಿರ್ಣಯಿಸುವಲ್ಲಿ ಬರೀ ಊಹೆಗಳ ಮೇಲೆ ಹೋಗಿಲ್ಲ. ಅವರು ನಿಶ್ಚಿತ ಆಧಾರಗಳನ್ನು ತೆಗೆದುಕೊಂಡು ಅವುಗಳ ಮೇಲಿಂದ ಅವು ಎಷ್ಟು ದೂರ ಹಿಂದೆ ಇರಬಹುದೆಂಬದನ್ನು ಸಿದ್ಧಪಡಿಸಲು ಪ್ರಯತ್ನಿಸಿದ್ದಾರೆ. ಆದರೆ ಈ ದೃಷಿಯಿಂದ ಹಿಂದುಸ್ಥಾನದಲ್ಲಿ ಇರುವ ಶಿವಾಲಯಗಳನ್ನು ವಿವೇಚಿಸುವದಾದರೂ ಮಹತ್ವದ್ದೆಂದು ನಮಗೆ ತೋರುತ್ತದೆ. ಈ ಶಿವಾಲಯಗಳಲ್ಲಿ ಅನೇಕವುಗಳು ಆಗಮಧರ್ಮವನ್ನು ಸೂಚಿಸುತ್ತವೆ. ಈ ಶಿವಾಲಯಗಳು ಕ್ರಿ. ಶ. ೬ ನೇ ಶತಮಾನಗಳಕಿಂತಲೂ ಬಹಳ ಹಿಂದೆ ಅಸ್ತಿತ್ವದಲ್ಲಿ ಇದ್ದಿರಬೇಕೆಂಬುದಕ್ಕೆ ಆಧಾರಗಳುಂಟು. ಹೀಗೆ ಆಗಮಗಳ ಕಾಲವು ಆರನೇ ಶತಮಾನದ ಹಿಂದೆ ಹೋದರೂ ಅವು ವೇದ ಮತ್ತು ಉಪನಿಷತ್ಕಾಲಕ್ಕೆ ಮುಟ್ಟುವದಿಲ್ಲೆಂದು ನಮಗೆ ತೋರುತ್ತದೆ. ಯಾಕಂದರೆ ಈ ಗ್ರಂಥಗಳ ಕಾಲಕ್ಕೆ ಹಿಂದೂ ಜನರಲ್ಲಿ ಮೂರ್ತಿಪೂಜೆಯೇ ಇರಲಿಲ್ಲ. ಇದಕ್ಕೆ ಈ ಗ್ರಂಥಗಳೇ ಆಧಾರವಾಗಿವೆ. ಆಗ ಮೂರ್ತಿಪೂಜೆಯ ಬದಲು ಯಜ್ಞಾದಿಕರ್ಮಗಳು ನಡೆಯುತ್ತಿದ್ದವು. ಮೂರ್ತಿಪೂಜೆಯು ಬೌದ್ಧ ಜೈನರ ಕಾಲದಲ್ಲಿ ಹಿಂದುಗಡೆ ಪ್ರಾರಂಭವಾಯಿತೆಂತಲೂ ಮುಂದೆ ಈ ಪೂಜೆಯನ್ನು ಪೌರಾಣಿಕ ಕಾಲದಲ್ಲಿ ಹಿಂದೂ ಜನರು ಅನುಸರಿಸಿದರೆಂತಲೂ ಈಗಿನ ವಿದ್ವಾಂಸರ ಅಭಿಪ್ರಾಯವಿದೆ. ಆದ್ದರಿಂದ ಆಗಮ ಧರ್ಮಾನುಸಾರವಾದ ಮೂರ್ತಿಪೂಜೆಯಾದರೂ ಉಪನಿಷತ್ ಕಾಲದ ತರುವಾಯ ಬೌದ್ಧ ಜೈನರ ಸಮಕಾಲೀನವಾಗಿ ಒಂದು ಕಾಲದಲ್ಲಿ ಪ್ರಚಾರದಲ್ಲಿ ಬಂದಿರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ.

ಈ ದೃಷ್ಟಿಯಿಂದ ಈ ವಿಷಯ ವಿಚಾರಮಾಡುವದು ಮತ್ತು ಇನ್ನೂ ಹೆಚ್ಚಿಗೆ ಶೋಧಮಾಡುವದು ಮಹತ್ವದ್ದೆಂದು ನಾವು ಇಲ್ಲಿ ಉಲ್ಲೇಖಿಸದೆ ಇರಲಾರೆವು.

ಆದರೆ ಆಗಮಗಳು ಹೀಗೆ ಪುರಾತನವೆಂದು ಸಿದ್ಧಪಡಿಸಿದ ಮಾತ್ರಕ್ಕೆ ವೀರಶೈವ ಧರ್ಮವಾದರೂ ಅಷ್ಟೇ ಪುರಾತನವಾದದ್ದೆಂದು ಯಾರಾದರೂ ತಿಳಿದರೆ ಅದು ತಪ್ಪಾಗದೆ ಇರದು. ಯಾಕಂದರೆ ಶೈವಧರ್ಮಗಳ ಸ್ವರೂಪ ಕಾಲಕಾಲಕ್ಕೆ ಬದಲಾಗುತ್ತ ಬಂದಿರುತ್ತದೆ. ಮತ್ತು ಅದರಲ್ಲಿ ಅನೇಕ ಶಾಖೋಪ ಶಾಖೆಗಳು ಉತ್ಪನ್ನವಾಗಿರುತ್ತವೆ. ಆದ್ದರಿಂದ ಮೂಲ ಆಗಮಗಳು ದೊರೆಯದ ವಿನಹಾ ಈ ಬಗ್ಗೆ ಯಾವುದನ್ನೂ ನಿಶ್ಚಿತವಾಗಿ ಹೇಳಲಿಕ್ಕೆ ಬರಲಾರದು.

ಡಾ. ನಂದೀಮಠ ಇವರು ತಮ್ಮ ಮುಂದಿನ ಪ್ರಕರಣದಲ್ಲಿ ಆಗಮಗಳಲ್ಲಿ ವಿವೇಚಿಸಿದ ವಿಷಯಗಳ ಬಗ್ಗೆ ಬರೆದಿದ್ದು ಅವುಗಳನ್ನು ಮುಂದಿನ ಸಂಚಿಕೆಯಲ್ಲಿ ಆಲೋಚಿಸೋಣ.



# ಕೆಳದಿ ಮತ್ತು ಸ್ವಾದಿ ರಾಜ್ಯಗಳ ಬಗ್ಗೆ ಯುರೋಪಿಯನ್ನ ಪ್ರವಾಸಿಗಳ ಅಭಿಪ್ರಾಯಗಳು.

ಲೇಖಕ:— ರಾ॥ ಸಾ॥ ಫ. ಗು. ಹಳಕಟ್ಟಿ ಬಿ ಏ. ಎಲ್. ಎಲ್. ಬಿ. ವಿಜಾಪುರ.

ಕರ್ನಾಟಕ ದೇಶದಲ್ಲಿ ಪೂರ್ವಕಾಲದಿಂದಲೂ ಆಗಿಹೋದ ರಾಜವಂಶಗಳ ಇತಿಹಾಸವನ್ನು ನೋಡಿದರೆ, ಅವೆಲ್ಲವುಗಳೂ ಕನ್ನಡ ಮತ್ತು ಸಂಸ್ಕೃತ ಪಂಡಿತರನ್ನು ತಮ್ಮ ಆಸ್ಥಾನದಲ್ಲಿಟ್ಟುಕೊಂಡು ವಾಙ್ಮಯಾಭಿವೃದ್ಧಿಗೆ ಬಹಳ ಸಹಾಯ ಮಾಡುತ್ತಿದ್ದುದು ಕಂಡುಬರುತ್ತದೆ. ಚಾಲುಕ್ಯ ರಾಷ್ಟ್ರಕೂಟ, ಹೊಯಸಳ ವಿಜಯನಗರದ ರಾಜ್ಯಗಳಲ್ಲಿ ಬಿಲ್ಹಣ, ವಿಜ್ಞಾನೇಶ್ವರ, ಸಾಯನ, ವಿದ್ಯಾರಣ್ಯ, ರಾಮಾನುಜಾಚಾರ್ಯ ಮೊದಲಾದ ಸಂಸ್ಕೃತ ಭಾಷಾಪಂಡಿತರಲ್ಲದೆ ಹೊನ್ನ, ಜನ್ನ, ಪಂಪ ಮೊದಲಾದ ಕನ್ನಡ ಮಹಾ ಪಂಡಿತರೂ ಸಹ ಅತ್ಯಂತ ಮನ್ನಣೆಯನ್ನು ಹೊಂದಿದವರಾಗಿದ್ದರು. ಇಷ್ಟೇ ಅಲ್ಲ, ಈ ವಂಶಗಳಲ್ಲಿಯ ಅನೇಕ ರಾಜರು ತಾವು ಸಹ ಸರಸ್ವತೀಸೇವಕರಾಗಿ ಮಹತ್ವದ ಗ್ರಂಥಗಳನ್ನು ರಚಿಸಿರುವದು ತೋರಿಬರುತ್ತದೆ. ಆದುದರಿಂದಲೇ ಕರ್ನಾಟಕ ಭೂಮಿಯು ಪೂರ್ವಕಾಲದಿಂದಲೂ ವಿದ್ವಾಂಸರ ತವರುಮನೆ ಎಂದೆನಿಸಿಕೊಂಡು ಉತ್ತರಕ್ಕೆ ಕಾಶ್ಮೀರದಿಂದ ದಕ್ಷಿಣಕ್ಕೆ ತಮಿಳುದೇಶದ ವರೆಗೆ ಅನೇಕ ನಾಡಿನ ಪಂಡಿತರು ಇಲ್ಲಿಯ ರಾಜಧಾನಿಗಳನ್ನು ಆಶ್ರಯಿಸಿ ಉದಾರಾಶ್ರಯವನ್ನು ರಾಜರುಗಳಿಂದ ಹೊಂದಿದವರಾಗಿದ್ದರು.

ಮುಖ್ಯ ರಾಜ್ಯಾಧಿಕಾರಿಗಳು ಹೀಗೆ ವಿದ್ಯಾವಿನೋದಿಗಳಾದ್ದರಿಂದ ಅವರ ಅನುಕರಣವನ್ನು ಅವರ ಸಾಮಂತ ರಾಜರೂ ಕೂಡ ಮಾಡಿ, ಅವರೂ ವಿದ್ವಾಂಸರಿಗೆ ಆಶ್ರಯ ದಾತರಾಗಿದ್ದದ್ದು ಕಂಡುಬರುತ್ತದೆ. ಸವದತ್ತಿಯ ರಟ್ಟರೂ ಕೆಳದಿಯ ರಾಜರೂ, ಮೈಸೂರಿನ ಅರಸರೂ ಈಚೀಚೆಗೆ ಸುರಪುರದ ಬೇಡರ ಧೊರೆಗಳೂ, ಇಷ್ಟೆ ಅಲ್ಲ, ಕಿತ್ತೂರಿನಂಥ ಸಣ್ಣ ಸಣ್ಣ ಸಂಸ್ಥಾನಿಕರೂ ಸಹ ಪಂಡಿತರಿಗೆ ಸಹಾಯ ಮಾಡುವಂಥವರಾಗಿದ್ದರು. ಈ ಸ್ಥಿತಿಯು ಕರ್ನಾಟಕ ದೇಶದಲ್ಲಿದ್ದದರಿಂದ ಅಸಂಖ್ಯ ಗ್ರಂಥಕಾರರು ಉತ್ಪನ್ನರಾಗಿ ಕರ್ನಾಟಕದ ಸಂಸ್ಕೃತಿಯ ಪ್ರವಾಹವನ್ನು ಬಹು ಕಾಲದಿಂದಲೂ ಯಾವ ತಡೆಇಲ್ಲದೆ ಸಾಗಿಸುತ್ತ ಬಂದಿರುತ್ತಾರೆ.

ಉದಾಹರಣಾರ್ಥವಾಗಿ ಪಶ್ಚಿಮ ಗಟ್ಟದ ಅತ್ಯಂತ ಅರಣ್ಯಮಯ ಪ್ರದೇಶವನ್ನು ತೆಗೆದುಕೊಳ್ಳುವಾ. ಈ ಪ್ರಾಂತವನ್ನು೧೪೯೯ ರಿಂದ ೧೭೬೩ ವರೆಗೆ ಕೆಳದಿಯ ರಾಜರೂ ೧೫೫೫ರಿಂದ ೧೭೬೩ ರ ವರೆಗೆ ಸ್ವಾದಿಯ ಅಧಿಪತಿಗಳೂ ರಾಜ್ಯವಾಳಿದರು. ಇವರು ರಾಜ್ಯವಾಳಿದ್ದು ವಿಜಯನಗರದ ರಾಜ್ಯದ ಅಂತ್ಯಕಾಲದಲ್ಲಿ. ಈ ಕಾಲದಲ್ಲಿ ವಿಜಾಪುರದ ಬಾದಶಹರ ಉಪಟಳ, ಮೊಗಲರ ದಾಳಿ, ಮತ್ತು ಮರಾಠರ ಹಾವಳಿಗಳು ಬಹು ಭಯಂಕರ ರೀತಿಯಿಂದ ದೇಶವನ್ನೆಲ್ಲ ಕಂಗೆಡಿಸಿ ಬಿಟ್ಟವು. ದೇಶಮಧ್ಯದಲ್ಲಿ ಸ್ವಾಸ್ಥ್ಯ ಸಮಾಧಾನಗಳೇನೂ ಇರಲಿಲ್ಲ. ಆದರೂ ಕೆಳದಿ, ಸ್ವಾದಿಯ ಅರಸರು ತಮ್ಮ ಪ್ರಾಂತವನ್ನು ಸುಖಸಮಾಧಾನದಲ್ಲಿರಿಸಿ, ಅತ್ಯುತ್ತಮ ರೀತಿಯಿಂದ ರಾಜ್ಯವಾಳಿದ್ದಲ್ಲದೆ, ಅವರು ವಿದ್ವತ್ಪ್ರೇಮಿಗಳಾಗಿ ಅನೇಕ ಗ್ರಂಥಕಾರರಿಗೆ ಸಹಾಯ ಮಾಡಿ ವಾಙ್ಮಯವನ್ನು ಬೆಳೆಸುವಂಥವರಾದರು. ಕಾರವಾರ ಜಿಲ್ಹೆ ಎಂದರೆ ಈ ಕಾಲಕ್ಕೆ ಅತ್ಯಂತ ಕಾಡು ಪ್ರದೇಶವಾಗಿದ್ದು ನಿರ್ಜನವಾಗುತ್ತ ನಡೆದಿರುತ್ತದೆ. ಆದರೆ ಪೂರ್ವ ಕರ್ನಾಟಕದಲ್ಲಿ ಈ ಭಾಗವು ಸುಖಸಮಾಧಾನದಿಂದ ತುಂಬಿಕೊಂಡು ದೊಡ್ಡ ದೊಡ್ಡ ನಗರಗಳಿಂದಲೂ ಬಂದರಗಳಿಂದಲೂ ಸುಶೋಭಿತವಾಗಿ ಬರೆ ಹಿಂದುಸ್ತಾನದಲ್ಲಿಯಷ್ಟೇ ಅಲ್ಲ, ಯುರೋಪಖಂಡದಲ್ಲಿ ಸಹ ಹೆಸರುವಾಸಿಯಾಗಿತ್ತು. ಈ ಪ್ರಾಂತದಲ್ಲಿ ಡಚ್ಚ, ಇಂಗ್ಲಿಷ್, ಪೋರ್ತುಗೀಜ ವರ್ತಕರು ನಿಂತುಕೊಂಡು ಈ ರಾಜರ ಸ್ನೇಹವನ್ನು ಬಳಸಿ, ಕರ್ನಾಟಕದ ನಾಡಿನ ಕೂಡ ವ್ಯಾಪಾರಾಭಿವೃದ್ಧಿಯನ್ನು ಕೋರುತ್ತಿದ್ದರು. ಕೆಳದಿ ಮತ್ತು ಸ್ವಾದಿಯ ರಾಜರಾದರೂ ಇದಕ್ಕೆ ಸಹಾಯಕರಾಗಿ ತಮ್ಮ ಪ್ರದೇಶಗಳಲ್ಲಿ ವ್ಯಾಪಾರಾಭಿವೃದ್ಧಿಗೆ ಅನುಕೂಲ್ಯಗಳನ್ನು ಒದಗಿಸಿಕೊಟ್ಟು ಬಹು ಶ್ರೀಮಂತಿಕೆಯನ್ನು ಹೊಂದಿ ಅತ್ಯಂತ ವೈಭವದಿಂದ ರಾಜ್ಯವಾಳುತ್ತಿದ್ದರು. ಈ ಸಂಗತಿಯು ಕೇವಲ ಕಾಲ್ಪನಿಕವಿರದೆ, ಆ ಕಾಲಕ್ಕೆ ಈ ಪ್ರಾಂತಗಳಲ್ಲಿ ಪ್ರವಾಸ ಮಾಡಿದ ಅನೇಕ ಯುರೋಪಿಯನ್ನ ಪ್ರವಾಸಿಗಳು ಇದರ ನಿಜ ಸ್ಥಿತಿಯ ಬಗ್ಗೆ ತಮ್ಮ ಗ್ರಂಥಗಳಲ್ಲಿ ವರ್ಣನೆ ಮಾಡಿದ್ದಾರೆ. ಅವರ ವರ್ಣನೆಗಳು ಬಹಳ ಮಹತ್ವದವಿದ್ದು ಅವುಗಳನ್ನು ನಾವು ಇಲ್ಲಿ ಕೊಡಲೆಣಿಸಿದ್ದೇವೆ. ಇವುಗಳ ಮೇಲಿಂದ ಈ ರಾಜರ ನಿಜ ಸ್ಥಿತಿಯು ವಾಚಕರಿಗೆ ಚನ್ನಾಗಿ ಗೊತ್ತಾಗದೆ ಇರದು.

೧೫೮೬ ರಿಂದ ೧೬೨೯ ರ ವರೆಗೆ ವೆಂಕಟಪ್ಪ ನಾಯಕನು ಕೆಳದಿಯಲ್ಲಿ ರಾಜ್ಯವಾಳುತ್ತಿದ್ದನು. ವಿಜಯನಗರದ ರಾಜ್ಯವು ಹಾಳಾದ ಬಳಿಕ

ಇವನು ಮಂಗಳೂರ, ಕಾರವಾರ ಜಿಲ್ಹೆಗಳನ್ನೂ ಗಟ್ಟದ ಮೇಲೆ ಶಿವಮೊಗ್ಗೆ ಕಡೂರು, ಧಾರವಾಡ ಜಿಲ್ಹೆಯ ದಕ್ಷಿಣಭಾಗಗಳನ್ನೂ ಪಾದಾಕ್ರಾಂತ ಮಾಡಿಕೊಂಡು ಬಹು ಬಲಾಢ್ಯನಾಗಿ ರಾಜ್ಯವಾಳಿದನು. ಇವನ ಸಂಪೂರ್ಣ ಚರಿತ್ರೆಯು ೧೯-೨೦ನೇ ಆಗಷ್ಟಸಂಚಿಕೆಯಲ್ಲಿ ಕೊಡಲ್ಪಟ್ಟಿದೆ. ಇವನ ಕಾಲದಲ್ಲಿ ಡೆಲಾವೆಲ್ ಎಂಬ ಪ್ರವಾಸಿಯು ಪೋರ್ತುಗೀಜರ ರಾಯಭಾರಿಗಳೊಡನೆ ವೆಂಕಟಪ್ಪನಾಯಕನನ್ನು ಕಾಣಲಿಕ್ಕೆ ಹೋಗಿದ್ದನು. ಅವನು ತನ್ನ ವರ್ಣನೆಯಲ್ಲಿ ಉಲ್ಲೇಖಿಸಿರುವದೇನೆಂದರೆ:—ನಾವು ಹೊನ್ನಾವರದಲ್ಲಿ ಇಳಿದೆವು. ಇದು ದೊಡ್ಡ ಬಂದರವು. ಪಟ್ಟಣದಲ್ಲಿ ಒಂದು ದೊಡ್ಡ ಚೌಕು ಇದ್ದು ಸುಂದರವಾದ ಬೀದಿಗಳು ಇರುತ್ತವೆ. ಇಲ್ಲಿಂದ ಒಂದು ಗುಂಡಿನ ಅಳತೆಯಲ್ಲಿ ಇನ್ನೊಂದು ಬ್ರಾಹ್ಮಣರ ದೊಡ್ಡ ಪಟ್ಟಣ ಇದೆ. ಇಲ್ಲಿಂದ ಗೆರಸಪ್ಪೆಗೆ ಹೋದೆವು. ಆದರೆ ವೆಂಕಟಪ್ಪನಾಯಕನು ಇಲ್ಲಿಯ ರಾಣಿಯನ್ನು ಗೆದ್ದು ಆಕೆಯ ರಾಜ್ಯವನ್ನು ವಶಮಾಡಿಕೊಂಡಿದ್ದನು. ಈ ಪಟ್ಟಣವೂ, ಅರಮನೆಯೂ ಹಾಳುಬಿದ್ದಿದ್ದವು. ಈ ಪ್ರಾಂತವಲ್ಲಿ ಮೆಣಸು ಬಹು ಪ್ರಸಿದ್ಧವಾದದ್ದು. ಇದಕ್ಕೋಸ್ಕರ ಗೆರಸಪ್ಪೆಯ ರಾಣಿಗೆ "ಮೆಣಸಿನರಾಣಿ" ಎಂಬ ಹೆಸರು ಬಿದ್ದಿತ್ತು. ಅಲ್ಲಿಂದ ಪೋರ್ತುಗೀಜರು ಅರಸನನ್ನು ಕಾಣಲಿಕ್ಕೆ ಇಕ್ಕೇರಿಗೆ ಹೋದರು. ಆದರೆ ಅವರು ಈ ಪ್ರದೇಶದಲ್ಲಿಯ ಮೆಣಸನ್ನು ಕೊಳ್ಳಲಿಕ್ಕೆ ಹಡಗಗಳನ್ನು ತರದೆ ಇದ್ದದರಿಂದ ಅರಸನು ಸಿಟ್ಟಾಗಿ, ಅವರನ್ನು ಕಾಣಲಿಕ್ಕೆ ಅಲ್ಲಗಳೆದನು. ಆಗ ಪೋರ್ತಗೀಜರ ರಾಯಭಾರಿಗಳು ಹಾಗೆಯೇ ಹಿಂದಿರುಗಬೇಕಾಯಿತು. ಹೀಗೆ ಈ ಪ್ರವಾಸಿಯು ತನ್ನ ವರ್ಣನೆಯಲ್ಲಿ ಉಲ್ಲೇಖಿಸಿರುತ್ತಾನೆ. ಇದು ೧೬೨೩ ರಲ್ಲಿ ಸಂಭವಿಸಿತು.

ಮುಂದೆ ೧೬೬೦ ರಲ್ಲಿ ಬಾಲ್ಡಿಯುಸನೆಂಬ ಪ್ರವಾಸಿಯು ಈ ಭಾಗದಲ್ಲಿ ಸಂಚರಿಸಿದನು. ಆ ಕಾಲಕ್ಕೆ ಇಕ್ಕೇರಿಯ ರಾಜರಲ್ಲಿ ಅತ್ಯಂತ ಪ್ರಸಿದ್ಧನಾದ ಶಿವಪ್ಪನಾಯಕನು (೧೬೪೫—೧೬೬೦) ರಾಜ್ಯವಾಳುತ್ತಿದ್ದನು. ಇವನು ಭೂಮಿಯನ್ನು ಅಳೆಯಿಸಿ ಸರಕಾರಕ್ಕೆ ಬರತಕ್ಕ ಕಂದಾಯವನ್ನು ಗೊತ್ತುಪಡಿಸಿ ಅದನ್ನು ಸುವ್ಯವಸ್ಥೆಗೆ ತಂದನು. ಈ ಪ್ರವಾಸಿಯು ತನ್ನ ವರ್ಣನೆಯಲ್ಲಿ "ಕ್ಯಾನರಾಪ್ರದೇಶವು ಅಕ್ಕಿ ಮೊದಲಾದ ಜೀನಸುಗಳನ್ನು ಬೆಳೆಯುವದರಲ್ಲಿ ಅತಿ ಪ್ರಸಿದ್ಧಿಯನ್ನು ಹೊಂದಿದೆ. ಮತ್ತು ಬೇಕಾದಂಥ ಕೆಲಸಮಾಡಬಲ್ಲಂಥ ಸದೃಢರೂ ಆರೋಗ್ಯಕಾಯರೂ ಆದ

ಜನರು ಇಲ್ಲಿ ಇದ್ದಾರೆ'' ಎಂದು ಬರೆದಿರುವನು. ಈ ವರ್ಣನೆಗೂ ಆ ಪ್ರಾಂತದ ಈಗಿನ ಸ್ಥಿತಿಗೂ ಎಷ್ಟು ಅಂತರವಿದೆ ಎಂಬದನ್ನು ವಾಚಕರು ತಿಳಿಯತಕ್ಕದ್ದು.

ಮುಂದೆ ೧೬೭೩ ರಲ್ಲಿ ಫ್ರಾಯರ ಎಂಬ ಪ್ರವಾಸಿಯು ಈ ಭಾಗದಲ್ಲಿ ಪ್ರವಾಸಮಾಡಿದನು. ಅದು ೧೬೭೧ ರಿಂದ ೧೬೯೮ ರ ವರೆಗೆ ಆಳಿದ ಚನ್ನಮಾಜಿರಾಣಿಯವರ ರಾಜ್ಯಭಾರದ ಕಾಲವು. ಆ ಕಾಲಕ್ಕೆ ರಾಜ್ಯಸ್ಥಿತಿಯು ಹೇಗಿತ್ತೆಂಬದು ಈ ಪ್ರವಾಸಿಯ ವರ್ಣನೆಯಿಂದ ಬಹು ಚನ್ನಾಗಿ ವ್ಯಕ್ತವಾಗುತ್ತದೆ. ಅವನು ಅನ್ನುವದೇನೆಂದರೆ, '' ಜನರಲ್ಲಿ ಉತ್ತಮ ಕಾಯದೆಗಳು ಪ್ರಚಾರದಲ್ಲಿದ್ದವು. ಮತ್ತು ಅವರು ಅವುಗಳನ್ನು ಪಾಲಿಸುವರು. ಈ ಪ್ರಾಂತವಲ್ಲಿ ಸಣ್ಣ ಸಣ್ಣ ಅಡ್ಡದಾರಿಗಳಿರದೆ ಪ್ರವಾಸಮಾಡಲು ಯೋಗ್ಯವಾದ ದೊಡ್ಡ ದೊಡ್ಡ ರಸ್ತೆಗಳು ಇವೆ. ಮತ್ತು ಜನರು ತಮ್ಮ ಪ್ರವಾಸವನ್ನು ಹಾದಿ ತೋರಿಸುವವರಿಲ್ಲದೆ ಮಾಡುತ್ತಾರೆ. ಮಲಬಾರವಲ್ಲಿ ಈ ಸ್ಥಿತಿಯು ಇಲ್ಲ.'' ಎಂದು ಬರೆದಿದ್ದಾನೆ. ಈ ಪ್ರವಾಸಿಯು ಮಿರ್ಜಾನ ಬಂದರಕ್ಕೆ ಹೋದಾಗ್ಗೆ ಅಲ್ಲಿಯ ಅಧಿಪತಿಯ ಭೆಟ್ಟಿಯು ಅವನಿಗೆ ಆಯಿತು. ಅದನ್ನು ಅವನು ಹೀಗೆ ವರ್ಣಿಸಿರುವನು:— ಈತನು ಇತಲೀ ದೇಶದ ಅರಸರಂತೆ ವ್ಯಾಸಾರವಾಡಲು ನಾಚುವದಿಲ್ಲ. ನಾನು ಅವನನ್ನು ಕಂಡಾಗ್ಗೆ ಒಂದು ವಿಸ್ತಾರವಾದ ಗಿಡದ ಕೆಳಗೆ ತನ್ನ ಪರಿವಾರದಿಂದ ಸುತ್ತುಗಟ್ಟಲ್ಪಟ್ಟವನಾಗಿ ಒಂದು ಜಮಖಾನೆಯ ಮೇಲೆ ಕುಳಿತಿದ್ದನು. ಆಗ ಅವನು ರಾಜ್ಯದ ಮಂತ್ರಿಯ ಆಗಮನವನ್ನು ನಿರೀಕ್ಷಿಸುತ್ತ ಕುಳಿತಿದ್ದನು. ಅರಸನು ಚಿಕ್ಕವನಿದ್ದದರಿಂದ ಅವನ ರಕ್ಷಕನಾಗಿ ಇವನೇ ರಾಜ್ಯಭಾರವನ್ನು ಮಾಡುತ್ತಿದ್ದನು. ಈ ಮಂತ್ರಿಯು ಢಾಲು ಕತ್ತಿಗಳನ್ನು ಧರಿಸಿದ ಕಾವಲುಗಾರರು, ಸರದಾರರು, ಮತ್ತು ಇತರ ಕಾಲಾಳುಗಳಿಂದ ಕೂಡಿಕೊಂಡು ಅಲ್ಲಿಗೆ ಬಂದನು. ಅವರು ಹತ್ತಿದ ಕುದುರೆಗಳೂ ಅತ್ಯಂತ ಸುಂದರವಾದ ಆಭರಣಗಳಿಂದ ಅಲಂಕರಿಸಲ್ಪಟ್ಟಿದ್ದವು. ಕುದುರೆಯ ಮೇಲಿನ ಆಭರಣಗಳು ಇಂಗ್ಲಂಡದಲ್ಲಿಯ ಅತ್ಯಂತ ಉತ್ತಮವಾದ ಕುದುರೆಗಳ ಮೇಲಿನವುಗಳನ್ನು ಸರಗಟ್ಟುವಂತೆ ಇದ್ದವು. ಮಂತ್ರಿಯು ಇಂಗ್ಲಿಷರ ಹಡಗಗಳನ್ನು ನೋಡಬೇಕೆಂದು ೩೬ ಜನರಿಂದ ಹುಟ್ಟುಕಡಿಯಲ್ಪಟ್ಟ ಡೋಣಿಯನ್ನೇರಿಬಂದನು. ಆಗ ವಾದ್ಯಗಳು ಬಾರಿಸುತ್ತಿದ್ದವು. ಅವನು ೨—೩ ಹಡಗಗಳನ್ನು ನೋಡಿದನು.

ಆಗ ಇಂಗ್ಲಿಷ ನಾವಿಕನು ಅವನಿಗೆ ತನ್ನ ತೋಫಿನ ಸಲಾಮಿಯನ್ನು ಕೊಟ್ಟು ಜಯಘೋಷದಿಂದ ಒಂದು ಸುಂದರವಾದ ಹಸರುಬಣ್ಣದ ವಸ್ತ್ರವನ್ನು ಕಾಣಿಕೆಯಾಗಿ ಕೊಟ್ಟನು." ಈ ವರ್ಣನೆಯ ಮೇಲಿಂದ ಆಗ ಈ ಕೆಳದೀರಾಜರ ವೈಭವ ಮತ್ತು ವರ್ಚಸ್ಸು ಎಷ್ಟು ಇತ್ತು ಎಂಬುದು ಗೊತ್ತಾಗುತ್ತದೆ.

ಇದೇ ಪ್ರವಾಸಿಯು ೧೬೭೬ ರಲ್ಲಿ ಸ್ವಾದಿಯ ರಾಜ್ಯದಲ್ಲಿಯೂ ಸಂಚರಿಸಿದನು. ಆಗ ೧೬೭೪ ರಿಂದ ೧೬೯೭ ವರೆಗೆ ಆಳಿದ ಸದಾಶಿವರಾಯನು ಅಲ್ಲಿ ಆಳುತ್ತಿದ್ದನು. ಈ ಪ್ರವಾಸಿಯು ಸ್ವಾದಿ ರಾಜ್ಯದ ಬಗ್ಗೆ "ಈ ಪ್ರಾಂತವು ಮೆಣಸಿನ ಬಗ್ಗೆ ಪೃಥ್ವಿಯಲ್ಲೆಲ್ಲ ಹೆಸರಾಗಿದೆ. ಇದರಷ್ಟು ತುಟ್ಟಿ ಮತ್ತು ಅತ್ಯುತ್ತಮವಾದ ಮೆಣಸು ಎಲ್ಲಿಯೂ ಸಿಗುವದಿಲ್ಲ. ಇದರ ಉತ್ಪನ್ನವು ಅರಸನಿಗೆ ೩೦ ಲಕ್ಷ ಪ್ಯಾಗೋಡ ವರೆಗೆ ಆಗುತ್ತದೆಂದು ಊಹಿಸಲ್ಪಟ್ಟಿದೆ. ಅರಸನ ಹತ್ತಿರ ೩ ಸಾವಿರ ಕುದುರೆಗಳು ಮತ್ತು ೧೨ ಸಾವಿರ ಕಾಲಾಳುಗಳುಳ್ಳ ದಂಡು ಇದೆ" ಎಂದು ಬರೆದಿರುವನು.

ಇಟಲಿಯ ಪ್ರವಾಸಿಯಾದ ಗ್ಯಾಮೆಲಿಯು ಇದೇ ಪ್ರದೇಶಕ್ಕೆ ೧೬೯೫ ರಲ್ಲಿ ಬಂದಿದ್ದನು. ಅವನು ಸ್ವಾದಿಯ ರಾಜ್ಯದೊಳಗೆ ಹಾಯ್ದು ಹೋದನು. ಅದರ ಬಗ್ಗೆ ಅವನು "ಈ ಪ್ರಾಂತವು ಪರ್ವತ ಪ್ರದೇಶವಾಗಿದ್ದು ಅದಕ್ಕೆ ಅವನು ದೊರೆಯಾಗಿದ್ದಾನೆ. ಪ್ರದೇಶವು ಪ್ರವಾಸಕ್ಕೆ ಕಠಿಣವಾದದ್ದು. ಈಗ ಕಳ್ಳರ ಕಾಟವು ಹೆಚ್ಚಿದೆ. ಅರಸನು ಹಲ್ಯಾಳದ ದಕ್ಷಿಣಕ್ಕೆ ೭ ಮೈಲು ಮೇಲಿರುವ ಸಾಂಬ್ರಾಣಿಯಲ್ಲಿ ವಾಸಿಸುತ್ತಾನೆ. ಸಾಂಬ್ರಾಣಿಯು ದೊಡ್ಡ ಪೇಟೆಯ ಸ್ಥಳವಾಗಿದ್ದು ಅದರಿಂದ ಅರಸನಿಗೆ ೩ ಲಕ್ಷ ರೂಪಾಯಿ ಉತ್ಪನ್ನವದೆ" ಎಂದು ಬರೆದಿರುವನು.

ಹ್ಯಾಮಿಲ್ಟನ್ನನೆಂಬ ಇನ್ನೊಬ್ಬ ಇಂಗ್ಲಿಷ ಪ್ರವಾಸಿಯು ಈ ಭಾಗವನ್ನು ೧೭೨೦ ರಲ್ಲಿ ಸಂಚರಿಸಿದ್ದು ಕೆಳದಿಯ ರಾಜ್ಯದ ಬಗ್ಗೆ ಹೀಗೆ ಬರೆದಿರುವನು. ಆಗ ೧೭೧೪ ರಿಂದ ೧೭೩೯ ರ ವರೆಗೆ ಆಳಿದ ಸೋಮಶೇಖರನು ಅರಸನಾಗಿದ್ದನು. "ಜನರು ಬಹಳ ಸದಾಚಾರಿಗಳು. ದರೋಡೆ ಅಥವಾ ಕೊಲೆ ಇವುಗಳ ಸುದ್ದಿಯೇ ಇಲ್ಲಿಲ್ಲ. ಒಬ್ಬ ಅಪರಿಚಿತ ಮನುಷ್ಯನು ಕೂಡ ನೀನು ಎಲ್ಲಿಗೆ ಹೋಗುತ್ತಿ, ನಿನ್ನ ಕೆಲಸವಾವುದು ಎಂದು ಸಹ ಪ್ರಶ್ನಮಾಡಲ್ಪಡದೆ ಸುರಕ್ಷಿತವಾಗಿ ಇಲ್ಲಿ ಪ್ರವಾಸಮಾಡಬಹುದು. ಇಲ್ಲಿಯ ಪದ್ಧತಿ ಏನೆಂದರೆ, ರಾಜ್ಯದ ಶ್ರೇಷ್ಠ ಅಧಿಕಾರಿಗಳ ಹೊರ್ತು

ಯಾರೂ ಆನೆ, ಕುದುರೆ ಅಥವಾ ಹೆಸರುಗತ್ತೆಗಳ ಮೇಲೆ ಹತ್ತಬಾರದು. ಅಥವಾ ಎರಡನೆಯವರ ಕಡೆಯಿಂದ ಛತ್ರಿಯನ್ನು ಹಿಡಿಸಿಕೊಳ್ಳಬಾರದು ಆದರೆ ಛತ್ರಿಯನ್ನು ತಾವೇ ಹಿಡಿದುಕೊಳ್ಳಬಹುದು. ಆದರೆ ಬೇರೆ ವಿಷಯಗಳಲ್ಲಿ ಜನರಿಗೆ ಸ್ವತಂತ್ರತೆಯು ಇದ್ದು ಅವರು ಸುಖಿಯಾಗಿದ್ದಾರೆ."

ಇದೇ ಪ್ರವಾಸಿಯು ಸ್ವಾದಿಯ ರಾಜ್ಯದಲ್ಲಿಯೂ ಹೋಗಿದ್ದನು. ಅದರ ಬಗ್ಗೆ ಅವನು "ಕಂದರಗಳಲ್ಲಿ ಸಮೃದ್ಧಿಯಾಗಿ ಧಾನ್ಯವು ಬೆಳೆಯುವದಲ್ಲದೆ, ಹಿಂದುಸ್ತಾನದಲ್ಲಿ ಅತ್ಯಂತ ಉತ್ತಮವಾದ ಮೆಣಸು ಇಲ್ಲಿ ಆಗುತ್ತದೆ. ಈ ಅರಸನ ರಾಜ್ಯದಲ್ಲಿ ಅಂಕೋಲಾ, ಮತ್ತು ಮಿರ್ಜಾನ ಎಂಬ ಬಂದರಗಳು ಇವೆ" ಎಂದು ಬರೆದಿರುವನು.

ಕೆಳದಿಯ ರಾಜ್ಯವು ೧೭೬೩ ರಲ್ಲಿ ನಾಶವಾಯಿತು. ಆಗ ವೀರಮ್ಮಾಜಿಯ ನಿವರ್ಶನದಲ್ಲಿ ಸೋಮಶೇಖರ ರಾಜನು ಆಳುತ್ತಿದ್ದನು. ಆಗ ರಾಜ್ಯದಲ್ಲಿ ಅವ್ಯವಸ್ಥೆಯಾಗಹತ್ತಿತ್ತು. ಈ ಕಾಲಕ್ಕೆ ಅಂಕ್ವಿಟಿಲ್ ಡು ಪೇರಿನ್ನ ಎಂಬ ಫ್ರೆಂಚ ಗ್ರಂಥಕಾರನು ಈ ಭಾಗದಲ್ಲಿ ಪ್ರವಾಸ ಮಾಡಿದ್ದು ಅವನು ಅನ್ನುವದೇನೆಂದರೆ, "ಜನರು ದಂಗೆ ಎಬ್ಬಿಸಿದ್ದಾರೆ, ಮರಾಠರು ೫೦ ಸಾವಿರ ಪೌಂಡು ಖಂಡಣಿ ಎತ್ತುತ್ತಿದ್ದದರಿಂದ, ವ್ಯಾಪಾರಕ್ಕೆ ನಷ್ಟ ಉಂಟಾಗಿದೆ" ಎಂದು ಬರೆದಿರುವನು.

೧೭೬೩ ನೇ ಇಸ್ವಿಯಲ್ಲಿ ಹೈದರನು ಆಗಿನ ರಾಜಧಾನಿಯಾದ ಬಿದನೂರನ್ನು ಕೈವಶ ಮಾಡಿಕೊಳ್ಳಲು ಆಗ ಅವನಿಗೆ ಅಪಾರವಾದ ಧನ ಸಂಪತ್ತು ದೊರಕಿತು. ಅವನಿಗೆ ಆಗ ಒಂದು ಕೋಟಿ ೨೦ ಲಕ್ಷ ಪೌಂಡು ಅಂದರೆ ೧೮ ಕೋಟಿ ರೂಪಾಯಿ ಬೆಲೆಯುಳ್ಳ ಲೂಟಿಯು ಬಿದನೂರು ಪಟ್ಟಣದಲ್ಲಿ ದೊರಕಿತೆಂದು ಯುರೋಪಿಯನ್ನ ಪ್ರವಾಸಿಗರು ಹೇಳುತ್ತಾರೆ. ಈ ಧನದ ಮೂಲಕವಾಗಿಯೇ ತಾನು ಮುಂದುವರಿಯಲಿಕ್ಕೆ ಮತ್ತು ತನ್ನ ರಾಜ್ಯವು ವಿಸ್ತಾರಹೊಂದಲಿಕ್ಕೆ ಕಾರಣವಾಯಿತೆಂದು ಹೈದರನು ಮೇಲಿಂದ ಮೇಲೆ ಅನ್ನುತ್ತಿದ್ದನು.

ಟೀಪುವಿನ ರಾಜ್ಯವು ೧೭೯೯ ರಲ್ಲಿ ಇಂಗ್ಲಿಷರ ಕೈವಶವಾಯಿತು. ಆಗ ಅವರ ರಾಜ್ಯದ ಪದ್ಧತಿಯ ಬಗ್ಗೆ ३೧ ನೇ ಮೇ ೧೮೦೦ ನೇ ಇಸ್ವಿಯ ದಿವಸ ಈಸ್ಟ ಇಂಡಿಯಾ ಕಂಪನಿಯ ಬೋರ್ಡ ಆಫ್ ಡಾಯರೆಕ್ಟರರಿಗೆ

ಆಗಿನ ಇಲ್ಲಿಯ ಅಧಿಕಾರಿಗಳು ವರದಿ ಮಾಡಿರುವದೇನೆಂದರೆ:—"ಹೈದರನು ಕೆನರಾ ಪ್ರದೇಶವನ್ನು ಕೈವಶ ಮಾಡಿಕೊಂಡಾಗ ಅಲ್ಲಿಯ ಜನರು ಉದ್ಯೋಗಿಗಳಾಗಿ ದೇಶವು ಬಹಳ ಸುಧಾರಣೆಯಲ್ಲಿತ್ತು. ರೈತರಿಗೆ ಉತ್ಪನ್ನದ ಬಹು ಭಾಗವು ಸಿಗುತ್ತಿದ್ದಸರಿಂದ ಅವರಷ್ಟು ಸುಖಿಯಾದವರು ಹಿಂದು ಸ್ತಾನದಲ್ಲಿಯ ಬೇರೆ ಯಾವ ಅರಸನ ರಾಜ್ಯದಲ್ಲಿರಲಿಲ್ಲ. ಆದರೆ ಹೈದರನು ಈ ಅರಸರ ನ್ಯಾಯವಾದ ಮತ್ತು ಜಾಣತನದ ಆಡಳಿತೆಯ ಕ್ರಮವನ್ನು ಅನುಸರಿಸದೆ, ಅವನು ಬೇರೆ ಭಾಗಗಳಲ್ಲಿ ಯುದ್ಧ ನಡಿಸಿ ಹೊಸ ಪ್ರಾಂತಗಳನ್ನು ಕೈವಶ ಮಾಡಿಕೊಳ್ಳಲಿಕ್ಕೆ ಹತ್ತುವ ಯುದ್ಧದ ವೆಚ್ಚವನ್ನು ಈ ಪ್ರಾಂತದಿಂದ ವಸೂಲ ಮಾಡಿಕೊಳ್ಳುವ ಧ್ಯೇಯವನ್ನು ಇಟ್ಟುಕೊಂಡನು. ಅವನು ರೈತರ ಕಡೆಯಿಂದ ಎಷ್ಟು ಹಣ ವಸೂಲು ಮಾಡಲಿಕ್ಕೆ ಶಕ್ಯವಾದೀತೆಂಬವನ್ನು ನೋಡಲಿಕ್ಕೆ ನಾನಾ ಬಗೆಯ ಪ್ರಯೋಗಗಳನ್ನು ಮಾಡುವನು. ಹೈದರನ ಈ ಬೇಡಿಕೆಗಳನ್ನು ಇಲ್ಲಿಯ ರೈತರ ಕಯ್ಯಲ್ಲಿ ಬಹು ವರ್ಷಗಳಿಂದಲೂ ಕೂಡಿ ಬಿದ್ದ ಸಂಚಯದಿಂದ ಪೂರೈಸಲಿಕ್ಕೆ ಕೆಲ ಕಾಲ ಶಕ್ಯವಾಯಿತು. ಆದರೆ ಇದು ಬಹಳ ದಿವಸ ನಡೆಯದಾಯಿತು. ಇದರ ಮೂಲಕ ಹೈದರನು ಸಾಯುವ ಮುಂದೆ ಈ ಪ್ರಾಂತದ ಒಕ್ಕಲುತನವು ಬಹಳ ಕಡಿಮೆಯಾಗಲಿಕ್ಕೆ ಹತ್ತಿತ್ತು. ಮತ್ತು ವಸೂಲಿ ಬಾಕಿಯು ಬಹಳ ಉಳಿಯ ಹತ್ತಿತ್ತು" ಎಂದು ಬರೆದಿದ್ದು ಇದರ ಮೇಲಿಂದ ಈ ಕೆಳದೀ ಅರಸರ ರಾಜ್ಯವು ಎಷ್ಟು ಸುಸ್ಥಿತಿಯಲ್ಲಿತ್ತೆಂಬವರ ಕಲ್ಪನೆಯು ವಾಚಕರಿಗೆ ಬರಬಹುದು.

ಈ ಯುರೋಪಿಯನ್ನ ಪ್ರವಾಸಿಗಳೆಲ್ಲರೂ ಮಾಡಿದ ವರ್ಣನೆಗಳು ಸತ್ಯವಾದುವೆಂದು ನಂಬಲಿಕ್ಕೆ ಏನೂ ಪ್ರತ್ಯವಾಯವಿಲ್ಲ. ಇವುಗಳ ಮೇಲಿಂದ ಕೆಳದೀ ಮತ್ತು ಸ್ವಾದೀ ರಾಜರು ಎಷ್ಟು ಜಾಣತನದಿಂದ ಮತ್ತು ಸಮ ಬುದ್ಧಿಯಿಂದ ಪ್ರಜಾನುರಾಗಿಗಳಾಗಿ ರಾಜ್ಯವಾಳಿದರೆಂಬುದು ವ್ಯಕ್ತವಾಗುತ್ತದೆ. ಆಗ ಈಗಿನ ಎರಡೂ ಕನ್ನಡ ಜಿಲ್ಹೆಗಳು ಅತ್ಯಂತ ಸುಸಂಪನ್ನ ಸ್ಥಿತಿಯಲ್ಲಿದ್ದವೆಂಬುದು ಗೊತ್ತಾಗುತ್ತದೆ. ಈ ಭಾಗದಲ್ಲಿ ವಿಸ್ತಾರವಾದ ವೈಭವ ಸಂಪನ್ನವಾದ ಪಟ್ಟಣಗಳು ನೆಲಸಿದ್ದವು. ದೇಶದಲ್ಲಿ ಅತ್ಯುತ್ತಮ ರಸ್ತೆಗಳಿದ್ದು ವ್ಯಾಪಾರಸ್ಥರು ಕಳ್ಳ ಕಾಕರ ಕಾಟವಿಲ್ಲದೆ ನಿರಾತಂಕವಾಗಿ ವ್ಯಾಪಾರ ಮಾಡುವರು. ದೊಡ್ಡ ದೊಡ್ಡ ಬಂದರಗಳ ಮೂಲಕ ಪರದೇಶಕ್ಕೆ ಬೆಲೆಯುಳ್ಳ ಜೀನಸುಗಳನ್ನು ಸಾಗಿಸುತ್ತಿದ್ದರು. ಒಕ್ಕಲತ

ಸವು ಅಕ್ಕಿ, ಯಾಲಕ್ಕಿ, ಮೆಣಸು ಇಂಥ ಮಹತ್ವದ ಜಿನಸುಗಳ ಮೂಲಕ ಅತ್ಯಂತ ಅಭಿವೃದ್ಧಿಯ ಸ್ಥಿತಿಯಲ್ಲಿತ್ತು. ಮೇಲ್ಕಂಡ ಪ್ರವಾಸಿಗಳು ರಾಜ್ಯದಲ್ಲಿ ಯೋಗ್ಯ ಆಡಳಿತೆ ಇದ್ದ ಮೂಲಕ ಪ್ರಜೆಗಳು ಎಷ್ಟು ಸುಖಿಯಾಗಿದ್ದರೆಂಬದನ್ನು ಬಹು ಚನ್ನಾಗಿ ತಮ್ಮ ವರ್ಣನೆಗಳಲ್ಲಿ ವಿವರಿಸಿರುತ್ತಾರೆ. ಆದರೆ ಮುಂಚಿನ ಈ ಸ್ಥಿತಿಗೂ ಈಗಿನ ಸ್ಥಿತಿಗೂ ಎಷ್ಟು ಮಹದಂತರವಾಗಿದೆಂಬದನ್ನು ನೋಡಲು ಯಾರಿಗಾದರೂ ವಿಷಾದವೆನಿಸದೆ ಇರಲಾರದು. ಒಕ್ಕಲತನವು ಈಗ ಸಂಪೂರ್ಣ ಹಾಳು ಬಿದ್ದು, ಘೋರಾರಣ್ಯವು ಮಾತ್ರ ಈ ಭಾಗಗಳಲ್ಲಿ ಬೋರ್ಗರೆಯುತ್ತದೆ. ಜನರೆಲ್ಲರೂ ದರಿದ್ರತೆಯನ್ನು ಹೊಂದಿ ಪರನಾಡುಗಳಿಗೆ ಹೊರಟು ಹೋಗುವದರಲ್ಲಿ ಇದ್ದಾರೆ. ಮತ್ತು ಯಾವ ಬಂದರಗಳಲ್ಲಿ ಮೊದಲು ನೂರಾರು ಹಡಗಗಳು ಬಂದು ಹೋಗುತ್ತಿದ್ದವೋ ಅವೆಲ್ಲವುಗಳು ಈಗ ಹಾಳಾಗಿ ಹೋಗಿವೆ. ಈ ಸ್ಥಿತಿಯು ಈ ಭಾಗಕ್ಕೆ ಬಂದಿದ್ದರ ಮೂಲಕ ಕರ್ನಾಟಕದ ವ್ಯಾಪಾರ ಕೈಗಾರಿಕೆಗಳು ನಾಶವಾಗಿ ಅದರ ಪೂರ್ವ ವೈಭವವು ನಷ್ಟ ಹೊಂದಲಿಕ್ಕೆ ಕಾರಣವಾಯಿತೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.



# ಐತಿಹಾಸಿಕ ಟಿಪ್ಪಣೆಗಳು.

ಲೇಖಕ:— ಡಾ. ಶಿ. ಚ. ನಂದಿಮಠ ಎಮ್. ಏ. ಪಿ. ಎಚ್. ಡಿ.

೪

## ಗೋಲಕೀ ಮಠ.

ಪ್ರಾಚೀನಕಾಲದಲ್ಲಿ ಶೈವಧರ್ಮದ ಪ್ರತಿಭೆಯು ಅಗಣಿತವಾಗಿತ್ತು ಅದು ಸರ್ವತ್ರ ಭರತಖಂಡದಲ್ಲೆಲ್ಲ ವ್ಯಾಪಿಸಿತ್ತು. ಶೈವಧರ್ಮದ ಆಚಾರ್ಯರು ಆಯಾ ಕಾಲಗಳಲ್ಲಿದ್ದ ಪ್ರಸಿದ್ಧ ರಾಜರ ಗುರುಗಳಾಗಿ ಅವರಿಗೆ ದೀಕ್ಷೆಕೊಟ್ಟು ಧಾರ್ಮಿಕ ವಿಷಯಗಳನ್ನು ಬೋಧಿಸುತ್ತಿದ್ದರು. ಅಂಥ ಅನೇಕ ಶೈವಾಚಾರ್ಯರ ವೃತ್ತಗಳು ಶಿಲಾಶಾಸನಗಳಲ್ಲಿ ದೊರೆಯುವವು. ಮತ್ತು ಆ ಆಚಾರ್ಯರು ಬರೆದ ಗ್ರಂಥಗಳಲ್ಲಿರುವ ಗುರ-ಪರಂಪರೆಯಿಂದ ಬಲಪಡುವವು. ಇಂಥ ಮಠಗಳಲ್ಲಿ ಹತ್ತನೇ ಶತಮಾನದ ಅಂತ್ಯದಲ್ಲಿ ಮಧ್ಯಪ್ರಾಂತದಲ್ಲಿ ಬೆಳಕಿಗೆ ಬಂದುದು ಗೋಲಕಿ ಅಥವಾ ಗೋಲಗಿರಿ ಮಠವೆಂಬುದೊಂದು. ಈ ಮಠದ ಮತ್ತು ಅಲ್ಲಿಯ ಆಚಾರ್ಯರ ಸಂಪೂರ್ಣವಾದ ವೃತ್ತವು ಆಂಧ್ರದೇಶದಲ್ಲಿರುವ ಮಲಕಾಪುರವೆಂಬ ಊರಲ್ಲಿದ್ದ ಶಿಲಾಶಾಸನದಿಂದ ತಿಳಿದು ಬರುವುದು. (೧) ಅದರ ಮುಖ್ಯಾಂಶ.

---

೧. ಈ ಶಿಲಾಶಾಸನದ ಉಲ್ಲೇಖವು *Annual Report on Epigraphy for the year ending 31st March 1917 PP. 123-126* ರಲ್ಲಿ ಬಂದಿದೆ. ಇದರ ಮೂಲವು *The Journal of the Andhra Historical Research Society Vol. IV Pts. 3 and 4. Jan-April 1930 PP. 185.162* ರಲ್ಲಿ ಪ್ರಸಿದ್ಧವಾಗಿದೆ. ಮೂಲವು ಸಂಸ್ಕೃತ ಮತ್ತು ತೆಲಗು ಭಾಷೆಯಲ್ಲಿದೆ; ಶಿಲಾಸ್ತಂಭದ ಮೂರು ಭಾಗಗಳನ್ನು ಆಕ್ರಮಿಸಿದೆ. ಮೊದಲನೆಯ ಭಾಗದಲ್ಲಿಯ ೫೦ ಸಾಲುಗಳಲ್ಲಿ ೭೨ ಸಂಸ್ಕೃತದಲ್ಲಿ ಮತ್ತು ಉಳಿದವು ತೆಲಗಿನಲ್ಲಿ ಅವೆ. ಎರಡನೆಯ ಭಾಗದ ೭೯ ಸಾಲುಗಳಲ್ಲಿ ಸೀಮೆಯ ಮೇರೆಗೆ ಸಂಬಂಧಿಸಿದ ಸಾಲು ೨೮

"ಭಾಗೀರಥಿ ನರ್ಮದೆಗಳ ಮಧ್ಯದಲ್ಲಿ ಡಹಳ ಮಂಡಲವೆಂಬುದೊಂದು ದೇಶವುಂಟು. ಅಲ್ಲಿ ದುರ್ವಾಸನ ಸಂತತಿಯ ಶೈವಾಚಾಚಾರ್ಯರ ವಂಶವೊಂದುಂಟು. ಆ ವಂಶದ ಸದ್ಭಾವ ಶಂಭು ಅಥವಾ ಭಾವಶಂಭುವೆಂಬಾಚಾರ್ಯನಿಗೆ ಕಲಚುರಿ ವಂಶದ ಅರಸನಾದ ಯುವರಾಜದೇವನು ತನ್ನ ರಾಜ್ಯದೊಳಗಿನ ಮೂರುಲಕ್ಷ ಊರುಗಳುಳ್ಳ ಪ್ರಾಂತವನ್ನು ಭಿಕ್ಷೆಯೆಂದು ನೀಡಿದನು. ಈ ಆಚಾರ್ಯನು ಅಲ್ಲಿ ಮಠವನ್ನು ಸ್ಥಾಪಿಸಿ ಅದಕ್ಕೆ ಗೋಲಗಿರಿ ಮಠವೆಂದು ಹೆಸರಿಟ್ಟು ಆ ಪ್ರಾಂತದ ಉತ್ಪನ್ನವನ್ನೆಲ್ಲ ಧರ್ಮಕ್ಕೋಸುಗ ಉಪಯೋಗಿಸಹತ್ತಿದನು." (೨)

---

೨೨ ನೇ ಪುಟ ೧ ನೇ ಟೀಪು

ರಿಂದ ೩೯ ರ ವರೆಗೆ ಆಂಧ್ರ ಭಾಷೆಯಲ್ಲಿ; ಉಳಿದವು ಸಂಸ್ಕೃತದಲ್ಲಿ ಅವೆ. ಮೂರನೆಯ ಭಾಗದ ೩೧ ಸಾಲುಗಳೆಲ್ಲವೂ ಸಂಸ್ಕೃತದಲ್ಲಿವೆ. ಈ ಶಿಲಾಶಾಸನವು ಶೈವರಿಗೆ ಅತ್ಯಂತ ಮಹತ್ವವಾದುದು. ಇದರಿಂದ ಆ ಕಾಲದ ನಮ್ಮ ವೀರಶೈವ ಸಮಾಜದ ಮೇಲೂ ಪ್ರಕಾಶ ಬೀಳುವುದು. ಆದುದರಿಂದ ಅದರ ಮಹತ್ವದ ಭಾಗಗಳನ್ನೆಲ್ಲ ಕೆಳಗೆ ಉದ್ಧರಿಸಲಾಗಿದೆ.

೨. ಅಸ್ತಿ ವಿಶ್ವಂಭರಾಸಾರಃ ಕಮಲಾಕುಲಮಂದಿರಂ
ಭಾಗೀರಥೀನರ್ಮದಯೋರ್ಮಧ್ಯಂ ಡಹಳಮಂಡಲಂ
ಉಗ್ರಂ ತತ್ರ ತಪಶ್ಚರನ್ನಿಯಮಯನ್ ಬಾಹ್ಯೇಂದ್ರಿಯಕ್ರೀಡನಂ
ಸಾನನ್ದ್ರಾನನ್ದಮಯೇ ಸಮಾಧಿಸಮಯೇ ಚಿತ್ತೇನ ಲೀನಶ್ಶಿವೇ
ನೀತ್ವಾ ಕಾಲಮನನ್ತ ಮಸ್ತಕಜಯೀ ಸದ್ಭಾವಶಂಭುರ್ಗುರು
ರ್ದುರ್ವಾಸೋನ್ವಯಸಂಭವಸ್ಸುಚರಿತಃ ಪ್ರಬುದ್ಧಪುಣ್ಯೈರ್ನೃಪಾಣಾಂ
ಶೈವಾನಾಂ ಪ್ರಥಮಾಯ ಶಂಕರಪದಧ್ಯಾನಾಮೃತಾಂಭೋನಿಧಿ
ಕ್ರೀಡಾವ್ಯಾಕ್ರೀಡನಕರ್ಮನಿರ್ಮಲತರ ಸ್ವಾನ್ತಾಯ ಶಾನ್ತಾತ್ಮನೇ
ತಸ್ಮೈ ನಿಸ್ಪೃಹಚೇತಸೇ ಗಲಚುರಿ-ಕ್ಷ್ಮಾಪಾಲ ಚೂಡಾಮಣಿ
ಗ್ರಾಮಾಣಾಂ ಯುವರಾಜದೇವನೃಪತಿರ್ಭಿಕ್ಷಾಂ ತ್ರಿಲಕ್ಷೀಂ ದದೌ
ಕೃತ್ವಾ ಸ ಶೈವಮುನಿರದ್ಭುತಶೀಲ ಮೂರ್ತಿ ಶ್ರೀ ಗೋಲಕೀಮಠ ಮುದಾರ ಮುದಾತ್ತಚಿತ್ತಃ
ತಸ್ಯಾಕರಸ್ಯ ನೃಪದೇಶಿಕವೌಕ್ತಿಕಾನಾಂ ವೃತ್ತಿಂ ಚಕಾರ ಸಕಲಾಮಪಿ ತಾಂ ತ್ರಿಲಕ್ಷೀಂ

ಭಾಗ ೧ ಸಾಲುಗಳು ೫೪ ರಿಂದ ೬೪ರ ವರೆಗೆ.

ಇಲ್ಲಿ ಹೇಳಿದ ಯುವರಾಜದೇವನು ಕಲಚುರಿ ಚೇದಿ ವಂಶದ ಧೊರೆಯಾದ ಮೊದಲನೆಯ ಯುವರಾಜದೇವನು. ಹತ್ತನೆಯ ಶತಮಾನದ ಅಂತ್ಯದಲ್ಲಿದ್ದನು. ಆತನ ರಾಜಧಾನಿ ಈಗ ತೇವಾರವೆಂದು ಕರೆಯಲ್ಪಡುವ ತ್ರಿಪುರಿಯು. ಗೋಲಕೀಮಠವಾದರೂ ಈ ಊರ ಸಮೀಪದಲ್ಲಿ ಮರಡಿಯ ಮೇಲಿತ್ತು. ಈ ಊರಿಗೆ ತ್ರಿಪುರಗಿರಿಯೆಂದೂ ಕರೆಯುವದುಂಟು. ಯುವರಾಜದೇವನ ಆಳಿಕೆಗೆ ಒಳಪಟ್ಟವು ಒಂಬತ್ತು ಲಕ್ಷ ಊರುಗಳು. ಅವುಗಳಲ್ಲಿ ಮೂರುಲಕ್ಷ ಊರುಗಳನ್ನು ಅಂದರೆ ತನ್ನ ರಾಜ್ಯದ ಒಂದುಮೂರಾಂಶ ಭಾಗನ್ನು ಗುರುಗಳಿಗೆ ಭಿಕ್ಷೆಯನ್ನಾಗಿಕೊಟ್ಟ ಈತನ ಉದಾರತನವನ್ನೂ ಧಾರ್ಮಿಕ ಭಾವನೆಯನ್ನೂ ಗುರುಗಳಲ್ಲಿಯ ನಿಷ್ಠೆಯನ್ನೂ ಈತನ ಮೇಲಿದ್ದ ಗುರುಗಳ ವರ್ಚಸ್ವವನ್ನೂ ವಾಚಕರೇ ಊಹಿಸಲಿ. ಮಧ್ಯಪ್ರಾಂತದಲ್ಲಿರುವ ಹಿಂದೆಯೊಂದು ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆದ ಚೇದಿ ರಾಜ್ಯಕ್ಕೆ ಡಹಳ ಮಂಡಲವೆಂದು ಅನ್ನುತ್ತಿದ್ದರೆಂದು ಗೊತ್ತಾಗಿದೆ. (೩)

ಗೋಲಕೀ ಮಠವು ಒಳ್ಳೇ ಪ್ರಸಿದ್ಧಿಯನ್ನು ಪಡೆಯಿತು. ಈ ಮಠದ ಆಚಾರ್ಯರು ತೆಲಗು ಮತ್ತು ತಮಿಳು ದೇಶಗಳಲ್ಲಿ ಮಠಗಳನ್ನು ಅನೇಕ ಕಡೆಗೆ ಸ್ಥಾಪಿಸಿದರು. ಈ ಮಠದ ಆಚಾರ್ಯರು ಒಳ್ಳೇ ಪ್ರತಿಭಾಶಾಲಿಗಳಾಗಿದ್ದು ಆಯಾ ಕಾಲಗಳ ಅರಸುಮನೆತನಗಳ ಮೇಲೆ ತಮ್ಮ ವರ್ಚಸ್ವವನ್ನು ಹೇಳಲಾರದಷ್ಟು ಕೆಡವಿದ್ದರು. ಇದೇ ಶಾಸನದಲ್ಲಿ ಈ ವಂಶದ ಆಚಾರ್ಯರ ಪಟ್ಟಿಯೂ ಅವರ ವರ್ಣನೆಯೂ ಇವೆ. ಅದರ ಸಾರಾಂಶ. "ಪ್ರಜೆಗಳ ಪ್ರಾಚೀನ ಪುಣ್ಯಪರಿಪಾಕವಶದಿಂದ ಈ ವಂಶದಲ್ಲಿ ಭಗವಾನ್ ಸೋಮಶಂಭುವು ಉದ್ಭವಿಸಿದನು. ಆತನು ಸಕಲಾಗಮಸಿಂಧುವಿಗೆ ಸೇತುವೆಯಂತಿರುವ ತನ್ನ ಹೆಸರಿನ ಪದ್ಧತಿಯನ್ನು ರಚಿಸಿದನು. ಆತನ ನಂತರ ನೃಪಶೇಖರಮಾಲಾಲಾಲಿತ ಪಾದಗಳುಳ್ಳ ವಿಮಲಶಿವನು ಆಚಾರ್ಯಪದವಿಗೆ ಬಂದನು. ಕಲಚುರಿಯರಸರು ಈತನ ಚರಣಾರಾಧನ ತತ್ಪರರಾಗಿದ್ದರು. ಈತನ ಪ್ರಭಾವದಿಂದ ಮತ್ತಾರಾದ ಅನೇಕ ಅರಸರು ಹಾದಿಗೆ ಬಂದು ಈತನಿಂದ ದೀಕ್ಷೆಯನ್ನು ಹೊಂದಿ

---

3. *Annual Report on Epigraphy for the year ending 31st March 1917 P. 126 Para 37.*

ತಮ್ಮ ಭವಪಾಶವನ್ನು ಹರಿದುಕೊಂಡರು. ಭೂಲೋಕದೊಡೆಯರನ್ನು ತಮ್ಮ ದೃಷ್ಟಿಯಿಂದಲೇ ಉದ್ಧರಿಸುವ ಇಲ್ಲವೆ ಅಧೋಗತಿಗಿಳಿಸುವ ಶಕ್ತಿಯುಳ್ಳ ಸಾವಿರಾರು ಶಿಷ್ಯರು ಈತನಿಗಿದ್ದರು. ಕಾಲಾನಂತರ ಆ ಸತ್ಸಂಪ್ರದಾಯದಲ್ಲಿ ಅರ್ಥಿಸಂತಾನಕಲ್ಪತರುವಾದ ಶಕ್ತಿಶಂಭುವು ಆಚಾರ್ಯನಾದನು. ಆತನ ಶಿಷ್ಯನು ಕೀರ್ತಿಶಂಭುವು ಆನಂತರ ಕಲಚುರಿಯರಸರಿಂದ ಪೂಜೆಯನ್ನು ಕೈಕೊಳ್ಳುವ ಮತ್ತು ಕೇರಳದೇಶದಲ್ಲಿ ಜನ್ಮತಾಳಿದ ಪೂಜ್ಯ ವಿಮಲಶಿವನು ಆಚಾರ್ಯನಾದನು. ಆತನ ಶಿಷ್ಯನು ಕಲಿಕಾಲದಲ್ಲಿ ಧರ್ಮಸ್ವರೂಪನೂ ಕೃಪಾಕಂದಲಿತಾಂತರಾತ್ಮನೂ ಆದ ಧರ್ಮಶಿವ ಮುನೀಂದ್ರನು. ಕೃಪಾನಿಧಿಯೂ ಉದಾರ ವೈಭವನೂ ಎಲ್ಲರ ದುಃಖಭಂಜಕನೂ ಆದ ಧರ್ಮಶಂಭುವನ್ನು ಒಂದೇ ಮುಖವುಳ್ಳ ಸದಾಶಿವನೆಂದು ಜನರು ಕರೆಯುತ್ತಿದ್ದರು" (೪)

---

೪. ಪ್ರಾಚೀನ-ಪುಣ್ಯ-ಪರಿಪಾಕವಶಾತ್ಪ್ರಜಾನಾಮಾವಿರ್ಬಭೂವ ಭಗವಾನಿಹ ಸೋಮಶಂಭುಃ
ನಾಮ್ನಾ ನಿಜೇನ ಸಕಲಾಗಮಸಿಂಧುಸೇತುಂ ಯಃ ಪದ್ಧತಿಂ ಕರುಣಯಾ ಪ್ರತಿನಾಂ ಬಬನ್ಧ
ಅಥ ನೃಪಶೇಖರಮಾಲಾಲಾಲಿತ ಪಾದೋತ್ರ ವಾಮಶಂಭುರಭೂತ್
ಅನ್ಯಾಪಿ ಕಲಚುರೀಶಾ ಯಚ್ಚರಣಾರಾಧಕಾಃ ಪ್ರಶಸ್ಯನ್ತೇ
ಲಬ್ಧದೇಶಿಕಪದಾ ಮನೋಹರಾ ಭೂರಿದಾನಪರಿತೋಷಿತಾರ್ಥಿನಃ
ಯತ್ರ ಮತ್ತಕರಿಣೋಪಿ ಕುರ್ವತೇ ಪಾಶಭೇದಮಿಹ ಭದ್ರಜಾತಯಃ
ತಸ್ಮಿನ್ಮೃತೇ ತಸ್ಯ ಗುರೋರ್ಬಭೂವುಶ್ಶಿಷ್ಯಾಃ ಪ್ರಶಿಷ್ಯಾಶ್ಚ ಪರಸಹಸ್ರಾಃ
ವಿನಿಗ್ರಹೀತುಂ ಸಮನುಗ್ರಹೀತುಂ ಕ್ಷೋಣೀಶ್ವರಾನ್ದಕ್ಷಕಟಾಕ್ಷಪಾತೈಃ
ಇತ್ಥಂ ಕಾಲೇ ಯಾತಿ ಸತ್ಸಂಪ್ರದಾಯೇ ಸನ್ತಾನೇಸ್ಮಿನ್ನರ್ಥಿಸನ್ತಾನಕಲ್ಪೇ
ಶೈವಾಂಭೋಧೇಶ್ಶಕ್ತಿಶಂಭೋರುದಾರಾಚ್ಛಿಷ್ಯ ಶ್ರೀಮಾನ್ಕೀರ್ತಿಶಂಭುರ್ಬಭೂವ
ಪ್ರಣಾಮವ್ಯಾಲೋಲಲತ್ಕಲಚುರಿಮಹೀಪಾಲ ಪರಿಷತ್ಕಿರೀಟ ಪ್ರಕ್ರೀಡತ್ಕಿರಣಕಲಿಕಾಲಾಲಿತಪಾದಾಃ
ಯಶಃ ಪೂರಸ್ಸ್ವೇರಸ್ತಬಕಿತದಿಶಃ ಕೇರಲಭವಾಸ್ತತಃ ಪದ್ಮಾವಾಸಾ ವಿಮಳಶಿವಪದಾಸ್ಸಂಭವನ್

ಮೇಲೆ ಹೇಳಿದ ಸೋಮಶಂಭುವು ಒಳ್ಳೇ ವಿದ್ವಾಂಸನು. ಈತನು ಬರೆದ ಮತ್ತು ಈ ಶಾಸನದಲ್ಲಿ ಹೇಳಿದ ಸೋಮಶಂಭು ಪದ್ಧತಿಯು ಒಳ್ಳೇ ಪ್ರಸಿದ್ಧಗ್ರಂಥ. ಅದು ಶೈವರ ಕರ್ಮಕಾಂಡವನ್ನು ವಿವರಿಸುವುದರಿಂದ ಅದಕ್ಕೆ ಕರ್ಮಕ್ರಿಯಾಕಾಂಡವೆಂಬ ಮತ್ತೊಂದು ಹೆಸರುಂಟು. ಈ ಗ್ರಂಥದ ಕೈಬರಹದ ಪ್ರತಿಗಳು ನೇಪಾಳ ಕಾಶ್ಮೀರ ತಂಜಾವರ ಮತ್ತು ಮದ್ರಾಸ ಪುಸ್ತಕಾಲಯಗಳಲ್ಲಿ ಅವೆ. (೫) ಈ ಗ್ರಂಥವನ್ನು ಆಚಾರ್ಯನು ವಿಕ್ರಮಸಂವತ್ ೧೧೩೦ ಅಂದರೆ ಕ್ರಿ. ಶ. ೧೦೭೩ ರಲ್ಲಿ ಪೂರ್ಣಮಾಡಿರುವನು. (೬) ಶೈವ ಪ್ರಸಿದ್ಧಾಚಾರ್ಯರಾದ ಅಘೋರಶಿವ ಈಶಾನಶಿವ ಉಮಾಪತಿ ಮೊದಲಾದವರೂ ಸರ್ವದರ್ಶನ ಸಂಗ್ರಹಕಾರನಾದ ಮಾಧವಾಚಾರ್ಯನೂ ಈತನ ಗ್ರಂಥದಿಂದ ಬಹಳವಾಗಿ ಆಧಾರಗಳನ್ನು ತೆಗೆದುಕೊಂಡಿರುವರು. ಈ ವಂಶದ ಪ್ರತಿಯೊಬ್ಬ ಆಚಾರ್ಯನನ್ನು ನೃಪಶೇಖರಮಾಲಾಲಾಲಿತಪಾದರೆಂದು ವಿಶೇಷಿಸಿರುವುದರಿಂದ ಶಿಷ್ಯರಾದ ಕಲಚುರಿಯರಸರಲ್ಲದೆ ಬೇರೆ ಪ್ರಭುಗಳು ಕೂಡ ಇವರ ಶಿಷ್ಯಮಂಡಲಿಯಲ್ಲಿ ಸೇರಿರಬೇಕೆಂದು ಊಹಿಸಲವಕಾಶವಿದೆ. ಈ ವಂಶದ ಆಚಾರ್ಯರು ನಮ್ಮ ಕನ್ನಡನಾಡಿಗೂ ಬಂದಿರುವ ಸಂಭವವಿದೆ. ದಹಳಮಂಡಲದಧಿಪತಿಯಾದ ಲಕ್ಷ್ಮಣರಾಜನ ಕುವರಿಯಾದ ಬೊಂಥಾದೇ

---

**೨೫ ನೇ ಪುಟ ೪ ನೇ ಟೀಪು.**

ನಿರ್ವೈರಮುರ್ವ್ಯಾಂ ಕಲಿಕಾಲಮಧ್ಯೇ ಸ್ಥಾತುಂ ಪದಾಭ್ಯಾ (ಮ್) ಕುತುಕೀವ ಧರ್ಮ್ಮಃ
ಶಿಷ್ಯಃ ಕೃಪಾಕನ್ದಲಿತಾನ್ತರಾತ್ಮಾ ತೇಷಾಮಭೂದ್ಧರ್ಮ್ಮಶಿವೋ ಮುನೀನ್ದ್ರಃ
ಯಂ ಕೃಪಾನಿಧಿಮುದಾರವೈಭವಂ ಧರ್ಮ್ಮಶಂಭುಮಖಿಲಾರ್ತ್ತಿಭಞ್ಜನಂ
ಏಕವಕ್ತ್ರಕಮಲಂ ಸದಾಶಿವಂ ಸಂಕಥಾ ಸುಕೃತಿನಃ ಪ್ರಚಕ್ಷತೇ
ಭಾಗ ೧ ಸಾಲು ೬೪ ರಿಂದ ೬೨ರ ವರೆಗೆ
ಭಾಗ ೨ ಸಾಲು ೧ ರಿಂದ ೬ರ ವರೆಗೆ.

5. *Vide catalogues of the respective libraries.*

6. *Vide Buehler:—Detailed Report of a tour in search of Sanskrit Mss. made in Kashmir, Rajaputana dna Central India; and also Annual Report on Epigraphy for the year ending 31st March 1917.*

ವಿಯನ್ನು ನಮ್ಮ ಚಾಲುಕ್ಯರ ನಾಲ್ಕನೆಯ ವಿಕ್ರಮನು ಲಗ್ನವಾಗಿರುವನು. ನಮ್ಮ ಕನ್ನಡ ಶಿಲಾಶಾಸನಗಳಲ್ಲಿ ಅನೇಕ ಕಡೆಗೆ ಈ ಲಗ್ನದ ಉಲ್ಲೇಖವಿದೆ. (೭) ಈ ವಿಕ್ರಮನ ಮಗನೇ ಎರಡನೆಯ ತೈಲಪನು (ಕ್ರಿ. ಶ. ೯೭೩ ರಿಂದ ೯೯೭). ಈತನು ಆ ಕಾಲದಲ್ಲಿ ಸಾರ್ವಭೌಮರಾಗಿದ್ದ ಮಳಖೇಡದ ರಾಷ್ಟ್ರಕೂಟರನ್ನು ಸೋಲಿಸಿ ಹಿರಿಯರ ಸಾಮ್ರಾಜ್ಯವನ್ನು ತಿರುಗಿ ಸಂಪಾದಿಸಿದನು. ಈತನು ಕ್ರಿ. ಶ. ೯೭೩ ರಲ್ಲಿ ಸಿಂಹಾಸನಕ್ಕೆ ಬಂದಿರಬಹುದಾದುದರಿಂದ ಈತನ ತಂದೆಯಾದ ವಿಕ್ರಮನು ಕ್ರಿ. ಶ. ೯೭೩ ಕ್ಕೂ ಹಿಂದಿರಬೇಕು. ಇದೇ ಕಾಲದಲ್ಲಿ ಡಹಳ ಮಂಡಳವನ್ನು ಕಲಚುರಿ ಚೇದಿ ಅರಸರು ಆಳುತ್ತಿದ್ದರೆಂದು ಮೇಲೆ ಹೇಳಿದೆ. ಈ ವಂಶದ ಮೇಲೆ ಉಲ್ಲೇಖಿಸಿದ ಮೊದಲನೆಯ ಯುವರಾಜದೇವನಿಗೆ ಒಳ್ಳೇ ಶಿವಭಕ್ತರಾದ ಚಾಲುಕ್ಯವಂಶದ ಅರಸುಮಗಳಾದ ನೋಹಲಾದೇವಿಯು ರಾಣಿಯಾಗಿದ್ದಳು. ಆಕೆಯೂ ಯುವರಾಜದೇವನ ಪುತ್ರನಾದ ಲಕ್ಷ್ಮಣರಾಜನೂ ಕದಂಬಗುಳಮಠದ ಶೈವಾಚಾರ್ಯರಿಗೆ ದಾನಗಳನ್ನು ಮಾಡಿದಂತೆ ಶಾಶನಗಳಲ್ಲಿ ಉಲ್ಲೇಖವಿದೆ. (೮) ನಮ್ಮ ವಿಕ್ರಮನ ರಾಣಿಯಾದ ಬೊಂಥಾದೇವಿಯು ಈ ಲಕ್ಷ್ಮಣರಾಜನ ಮಗಳೇ ಇರಬೇಕು. ಅವಳ ಅಜ್ಜನು ತನ್ನ ರಾಜ್ಯದ ಮುಕ್ಕಾಲು ಭಾಗವನ್ನು ಶೈವಾಚಾರ್ಯರಿಗೆ ಭಿಕ್ಷೆಯನ್ನು ನೀಡಿರುವನೋ ಅಂಥವಳು ಶೈವನಿಷ್ಠಳಾಗಿರದೆ ಇರಲಾರಳೆಂದು ಊಹಿಸಲವಕಾಶವಿದೆ. ತನ್ನ ತವರಮನೆಯ ಗುರುಗಳಾದ ಗೋಲಕೀಮಠದಾಚಾರ್ಯರನ್ನು ಕನ್ನಡನಾಡಿಗೆ ತರದೆ ಇರಲಾರಳು. ಆದರೆ ಒಂದುಮಾತು ಮಾತ್ರ ಲಕ್ಷದಲ್ಲಿಡತಕ್ಕದ್ದಿದೆ. ಅದೇನಂದರೆ:— ತಮಿಳು ತೆಲಗುನಾಡುಗಳಲ್ಲಿ ಗೋಲಕೀಮಠದ ಶಾಖೆಗಳನೇಕವು ಇನ್ನೂ ಇರುವಂತೆ ನಮ್ಮ ನಾಡಿನಲ್ಲಿ ಈ ಮಠದ ಶಾಖೆಗಳ ಅವಶೇಷವು ಇದ್ದ ಸಂಗತಿಯು ನನ್ನ ದೃಷ್ಟಿಗೆ ಇನ್ನೂ ಬಿದ್ದಿಲ್ಲ.

---

7. *Vide Dr Fleet:— The Dynasties of the Kanarese Districts of the Bombay Presidency, Bombay Gazetteer Vol, I Pt. II P. 427 and Sir, Walter Elliot's collection of inscriptions.*

8. *Annual Report on Epigraphy for the year ending 31st March 1917 P. 126 Para 37.*

## ವಿಶ್ವೇಶ್ವರ ಶಿವ.

ಇದೇ ವಂಶದಲ್ಲಿ ವಿಶ್ವೇಶ್ವರಾಚಾರ್ಯ ವಿಶ್ವೇಶ್ವರಶಿವ ಅಥವಾ ವಿಶ್ವೇಶ್ವರ ಶಂಭುವೆಂಬವನು ಬಲು ಪ್ರಸಿದ್ಧ. ಮಲಕಾಪೂರ ಶಿಲಾಶಾಸನವು ಈತನದೆ. ಈತನು ಕಾಕತೀಯ ಅರಸರ ಧರ್ಮಗುರು. ಈತನ ಬಗ್ಗೆ ಇದೇ ಶಾಸನದಲ್ಲಿ ಹೀಗದೆ.

"ಧರ್ಮಶಂಭುವಿಗೆ ವಿಶ್ವೇಶ್ವರ ಶಂಭುವೆಂಬ ಶಿಷ್ಯನಿದ್ದನು. ಈತನು ಗಣಪತಿದೇವರಾಜನಿಗ ದೀಕ್ಷೆಯನ್ನು ಕೊಟ್ಟನು. ಈತನು ನಿಗಮಾಭ್ಯಾಸದಲ್ಲಿ ನಿಷ್ಣಾತನಿದ್ದನು. ಈತನು ಗೌಡದೇಶದೊಳಗಿನ ರಾಢಾ ಎಂಬ ಭಾಗದೊಳಗಿರುವ ಪೂರ್ವಗ್ರಾಮವೆಂಬ ಊರ ನಿವಾಸಿಯು. ಚೋಳ ಮತ್ತು ಮಾಳವ ದೇಶದ ಅರಸರು ಈತನ ಶಿಷ್ಯರಾಗಿದ್ದರು. ಗಣಪತಿದೇವನು ಈತನ ಮಗನೆಂದು ಅಭಿಮಾನದಿಂದ ಕರೆದುಕೊಳ್ಳುತ್ತಿದ್ದನು. ವಿಶ್ವೇಶ್ವರ ಶಿವನ ಕೃಪೆಯಿಂದ ಗೌಡದೇಶದವರ ಮನೋರಥವೂ ತಪಸ್ವಿಗಳಿಗೆ ಧನವೂ ಕವಿಪುಂಗವರಿಗೆ ಸಂತೋಷವೂ ಅರಸರಿಗೆ ಪಾಶಚ್ಛೇದವೂ ಲಭಿಸಿದವು. ಹೇಮವರ್ಣದ ಎತ್ತರವಾದ ಜಟಾಕಿರೀಟವೂ ಮುಗುಳುನಗೆಯಿಂದ ವ್ಯಾಪ್ತವಾದ ಮುಖಕಮಲವೂ ಜೋಲಾಡುವ ಮುಕ್ತಾಕುಂಡಲದಿಂದ ಪ್ರಕಾಶಿತವಾದ ಕಪೋಲಪ್ರದೇಶವೂ ಉಳ್ಳ ಗಣಪತಿ ಕ್ಷ್ಮಾಪಾಲ ದೀಕ್ಷಾಗುರುವಾದ ವಿಶ್ವೇಶ್ವರ ಶಂಭುವನ್ನು ಕಂಡವರ ಕಣ್ಣುಗಳೇ ಕಣ್ಣುಗಳು. (೯)

---

೯. ಅಧ್ಯೇತಾ ನಿಗಮವ್ಯಸ್ಯ ಧರ್ಮ್ಮತನಯಶ್ರೀಗೌಡರಾಢೋಲ್ಲಸತ್
ಪೂರ್ವ್ವಗ್ರಾಮಶಿಖಾಮಣಿರ್ಗ್ಗಣಪತಿಕ್ಷ್ಮಾಪಾಲದೀಕ್ಷಾಗುರುಃ
ಕ್ಷೀರಾಬ್ಧೇರಿವ ಚಂದ್ರಮಾಃ ಶಶಿಕಲಾವೌಲೇರ್ಯಥಾಷಣ್ಮುಖಃ
ಶ್ರೀ ವಿಶ್ವೇಶ್ವರಶಂಭುರುಗ್ರತಪಸಃ ಶ್ರೀ ಧರ್ಮ್ಮಶಂಭೋರಭೂತ್ ॥
ಚಿರಂ ಪೃಥ್ವೀಪಾಲಾವಲೀಮುಕುಟಘೃಷ್ಟಾಂಘ್ರಿಕಮಲ
ದ್ವಯೋ ವಿದ್ಯಾವಲ್ಲೀವಲಯಕಲನಾಕಲ್ಪಕತರುಃ
ಸದಾದಾನ್ತಸ್ಥಿರತಟೋಲ್ಲಸದ್ಧೂರ್ಜಜಟೀಮಹಾ
ಮಹಾಶಾಸ್ತ್ರಃ ಕಾನ್ತೋ ಜಯತಿಭುವಿ ವಿಶ್ವೇಶ್ವರಶಿವಃ ॥
ಶ್ರೀ ಚೋಲೇಶ್ವರಮಾಲವಕ್ಷಿತಿಪತೀರಾಜನ್ಯಚೂಡಾಮಣೀ
ಯಚ್ಛಿಷ್ಯೌ ಕಿಮತಃಪರಂಃ ಗಣಪತಿಕ್ಷೋಣೀಪತಿರ್ಯ್ಯತ್ಸುತಃ ।

ಇಲ್ಲಿ ಹೇಳಿದ ಗಣಪತಿದೇವನು ಕಾಕತೀಯ ವಂಶದ ಒಳ್ಳೆ ಪ್ರಸಿದ್ಧನಾದ ಧೊರೆಯು. ಈತನ ವರ್ಣನೆಯು ಶಾಸನದಲ್ಲಿ ಹೀಗದೆ.

"ಆತನ (ಮಹದೇವ ರಾಜನ) ಮಗನಾದ ಕ್ಷ್ಮಾಪಾಲಚೂಡಾಮಣಿ ಗಣಪತಿಯು ಭವಾನಿಪತಿಯ ವರದಿಂದ ಪ್ರಾಪ್ತವಾದ ರಾಜ್ಯವನ್ನಾಳುತ್ತಿದ್ದನು. ವಿಸ್ಮಯಕರವಾದ ಕಾರ್ಯದಿಂದ ಆತನು ರಾಜ್ಯವನ್ನಾಳುವಾಗ ದೇಶದಲ್ಲಿ ದುಷ್ಟರ ಸದ್ದಿದ್ದಿಲ್ಲ. ದರ್ಪವನ್ನು ಬಿಲ್ಲಾಳ್ತನದಲ್ಲಿಯೂ ಮತ್ಸರವನ್ನು ಸಂಗ್ರಾಮಜಯದಲ್ಲಿಯೂ ಧಾರ್ಷ್ಟ್ಯವನ್ನು ದ್ವಿಪಾರೋಹಣದಲ್ಲಿಯೂ ಕ್ರೂರತನವನ್ನು ಕುದುರೆಗಳನ್ನು ಮಣಿಸುವದರಲ್ಲಿಯೂ ಚಪಲತನವನ್ನು ಯುದ್ಧದಲ್ಲಿಯೂ ಕ್ರೋಧವನ್ನು ದುಷ್ಟಜನರಲ್ಲಿಯೂ ಭಯವನ್ನು ದ್ವಿಜರಲ್ಲಿಯೂ ಲೋಭವನ್ನು ಧರ್ಮವನ್ನು ಗಳಿಸುವವರಲ್ಲಿಯೂ ಆಗ್ರಹವನ್ನು ಶಂಕರನ ಪೂಜೆಯಲ್ಲಿಯೂ ಗಣಪತಿ ಕ್ಷೋಣೀಪಾಲನು ತೋರಿಸುತ್ತಿದ್ದನು. ಆತನ ಬಾಹುದಂಡದ ಪ್ರಚಂಡತೆಯನ್ನೂ ಆತನ ಕೋದಂಡದ ಬಲವಾದ ವೇಗದಿಂದ ಚದುರುವ ಅನೇಕುದುರೆಗಳ ಸಮೂಹವುಳ್ಳ ಅರಿನೃಪಾಲರ ಸೈನ್ಯದ ಪರಿಯನ್ನೂ ಬಣ್ಣಿಸಲಳವಲ್ಲ. ಆತನ ದರ್ಪದಿಂದ ಮಡಿದ ಕೋಟ್ಯಾನುಕೋಟಿ ಸೈನಿಕರ ಪ್ರೇತಗಳಿಂದ ಸಮರಾಂಗಣಗಳು ಇನ್ನೂ ಭಯಂಕರವಾಗಿ ತೋರುವವು. ಭೂಮಿಯಲ್ಲಿ ನೂರಾರು ಜನರ ಪೋಷಕನು ಗಣಪತಿ ನೃಪತಿಯೋರ್ವನೇ! ಗಣಪತಿ

---

೨೮ ನೇ ಪುಟ ೯ ನೇ ಟೀಪು

ನ ಸ್ಯಾತ್ಕಸ್ಯಮುದೇ ಸದೇಶಿಕವರಶ್ಶೈವಾಂಭೋನಿಧಿಃ ...
ವಿಶ್ವೇಶ್ವರದೇಶಿಕಃ ಕಲಚುರಿಕ್ಷ್ಮಾಪಾಲದೀಕ್ಷಾಗುರುಃ ॥
...ಡಾಃ ಪೂರ್ಣ್ಣಮನೋರಥಾಃ ಕತಿಕತಿ ಪ್ರಾಪ್ತಶ್ರಿಯ...
ಸ್ಸನ್ನು...ಷ್ಟಾಃ ಕವಿಪುಙ್ಗವಾಃ ಕತಿಕತಿ ಪ್ರಧ್ವಸ್ತಪಾಶಾ...
ಯೇ...ತಸ್ಮಿನ್ ಗಣಪತ್ಯಧೀಶಗುರುತಾ ಸಿಂಹಾಸನಾಧ್ಯಾ...
ಶ್ರೀ ವಿಶ್ವೇಶ್ವರದೇಶಿಕೇ ಶಿವಪುರೀ ವಿಶ್ರಾಣನಶ್ಲಾಘಿನಿ ॥
ತ್ರ್ಯಙ್ಗಾತ್ರಿಙ್ಗಜಟಾಕಿರೀಟಮುದಯಸ್ಮೇರಾರವಿಂದಾನನಂ
ಮುಕ್ತಾಕುಣ್ಡಲತಾಡಿತಾಂಸಶಿಖರಂ ಹಾರೈರ್ಮನೋಹಾರಿಣ... ।
ವಿದ್ಯಾಮಂಡಪವರ್ತ್ತಿನಂ ಗಣಪತಿಕ್ಷ್ಮಾಪಾಲದೀಕ್ಷಾಗುರುಂ
ಶ್ರೀ ವಿಶ್ವೇಶ್ವರಶಂಭುಮೀಕ್ಷಿತವತಾಂ ತೇ ಚಕ್ಷುಷೀ ಚಕ್ಷುಷೀ...

ಭಾಗ ೨ ಸಾಲು ೬ ... ...ರೆಗೆ.

ದೇವನ ನಿಸ್ಸಾಣಧ್ವನಿಯನ್ನು ಕೇಳಿದ ಕೂಡಲೇ ಭಯಭೀತರಾಗಿ ಪರ ರಾಜರು ತಮ್ಮ ಹೆಂಡಂದಿರನ್ನಷ್ಟೇ ಅಲ್ಲ ದುರ್ಗಗಳನ್ನು ಕೂಡ ತ್ಯಜಿಸು ವರು. (೧೦)

ಈ ವರ್ಣನೆಯ ಪದ್ಯಗಳಿಂದ ಈತನು ಬಲು ದೊಡ್ಡ ಮತ್ತು ವರ್ಚ ಸ್ವವುಳ್ಳ ರಾಜನಾಗಿದ್ದನೆಂದು ಊಹಿಸಬಹುದು. ಬೇರೆ ಕೆಲವು ಶಾಸನ ಗಳಿಂದ ಈ ಊಹೆಯು ಬಲಪಡುವದು. ಈಗಿನ ಮಧ್ಯಪ್ರಾಂತ ನಿಜಾಮು ರಾಜ್ಯ ಮತ್ತು ಮದ್ರಾಸ ಇಲಾಖೆಯ ಬಹು ಭಾಗವು ಈತನ ರಾಜ್ಯಕ್ಕೊಳ ಪಟ್ಟಿತ್ತು. ಈತನು ಸುಮಾರು ೬೨ ವರುಷ ಚನ್ನಾಗಿ ರಾಜ್ಯವನ್ನಾಳಿ ದನು. ಈತನಿಗೆ ಗಂಡು ಮಕ್ಕಳಿದ್ದಂತೆ ತೋರುವದಿಲ್ಲ. ರುದ್ರದೇವ ನೆಂದು ಬೆಳಿಸಲ್ಪಟ್ಟ ರುದ್ರಮಹಾದೇವಿಯೆಂಬ ಮಗಳೇ ಬಲು ಪ್ರಸಿದ್ಧಳು.

---

೧೦. ತಸ್ಯಾಯಂ ತನಯಸ್ತ್ರಯೀಮಯತೋರ್ದೇವಾದ್ಭವಾನೀ
ಪತೇರ್ಲ

(ಬ್ಧಃ) ಕ್ಷ್ಮಾಂ ಸಮಪಾಲಯತು ಗಣಪತಿಃ ಕ್ಷ್ಮಾಪಾಲಚೂಡಾಮಣಿಃ।
ಯಸ್ಮಿನ್ವಿಸ್ಮಯಕಾರಿವಿಕ್ರಮಕಥಾಧಾರಾಮುಚಿ ಶ್ರೀಧನೇ
ಪೃಥ್ವೀ ದುಷ್ಟದುರೀಶದಾವದಹನಪ್ರಾಪ್ತಾಂ ರುಜಂ ಮುಞ್ಚತಿ।
ದರ್ಪೋ ಧನ್ವನಿ ಮತ್ಸರೋ ರಣಜಯೇ ಧಾರ್ಷ್ಟ್ಯಂ ದ್ವಿಪಾರೋಹಣೇ।
ಕ್ರೌರ್ಯ್ಯಂ ಶೌರ್ಯ್ಯವಿಧೌ ತುರಙ್ಗದಮನೇ ಚಾಪಲ್ಯಮಾಶಾಯುಧಿ।
ಕ್ರೋಧೋ ದುಷ್ಟಜನೇ ಭಯಂ ದ್ವಿಜಧನಾಲೋಭಶ್ಚ ಧರ್ಮಾರ್ಜ್ಜನೇ।
ಪೂಜಾಕರ್ಮ್ಮಣಿ ಶಾಂಕರೇ ಗಣಪತಿಕ್ಷೋಣೀಪತೇರಾಗ್ರಹಃ।
ಕೋದಣ್ಡೋಚ್ಚಣ್ಡವೇಗವ್ಯಥಿತಕರಿಹಯವ್ರಾತಪೃಥ್ವೀಶಸೈನ್ಯಂ।
ಕಿಂ ಬ್ರೂಮಶ್ಚಣ್ಡಿಮಾನಂ ಗಣಪತಿನೃಪತೇರ್ಬಾಹುದಣ್ಡದ್ವಯಸ್ಯ।
ಅದ್ಯಾಪ್ಯುದ್ದಾಮದರ್ಪಾದುಪರತಪೃತನಾಕೋಟಿಕಂಕೂಲಕೂಟ
ಪ್ರಕ್ರೀಡತು ಪ್ರೇತಯೂಥವ್ಯತಿಕರವಿಷಮಭೂಮಯೋ ಭೀಷಯನ್ತೇ॥
ಕತಿಕತಿ ನ ಸನ್ತಿ ಭೂಪಾಃ ಕತಿಕತಿ ಗುಣಗಣಾಭರಣಾಃ।
ಗಣಪತಿನೃಪತಿಸ್ತ್ವೇಕೋ ನರಪತಿಶತಪೋಷಕಃ ಕ್ಷೋಣ್ಯಾಮ್॥
ನಿಸ್ಸಾಣರವಸ್ತನ್ತ್ರಸ್ತಾಃ ಕ್ಷಣಾದ್ಗಣಪತೇರ್ನೃಪಾಃ।
ಅಪಿ ತ್ಯಜನ್ತಿ ದುರ್ಗ್ಗಾಣಿ ನ ದಾರಾನೇವ ಕೇವಲ್ಲಮ್।

ಭಾಗ ೧. ಸಾಲು ೨೯ ರಿಂದ ೪೧ರ ವರೆಗೆ.

ತಂದೆಯು ಜೀವಂತವಿದ್ದಾಗಲೂ ಕೂಡ ತಂದೆಯ ಹೆಸರಿನಿಂದ ರಾಜ್ಯ ಭಾರವನ್ನು ನಡಿಸಿದ್ದಳು. ಈಕೆಯ ಬಗ್ಗೆ ಇದೇ ಶಾಸನದಲ್ಲಿ ಹೀಗಿದೆ.

"ಗಂಭೀರವೂ ಘನವೂ ಆದ ರತ್ನಾಕರದಿಂದ ಲಕ್ಷ್ಮಿಯು ಉದ್ಭವಿಸಿದಂತೆ ಎಲ್ಲ ರಾಜರಿಂದ ಚರಣಸೇವೆಯನ್ನು ಮಾಡಿಸಿಕೊಳ್ಳುವ ಈತ(ಗಣಪತಿ ಮಹಾರಾಜ) ನಿಗೆ ರುದ್ರದೇವಿಯು ಹುಟ್ಟಿದಳು. ಎಲ್ಲ ಉರ್ವೀಶರ ಕಿರೀಟಗಳ ಮೇಲೆ (ತನ್ನ) ಪಾದಕಮಲವನ್ನಿಟ್ಟ ಶ್ರೀ ರುದ್ರದೇವಿಯು ನಾಲ್ಕು ಸಮುದ್ರಗಳೇ ಮೇಖಲೆಯಾಗುಳ್ಳ ಭೂಮಿಯನ್ನು ಆಳುವಳು. ಕಲಿಕಾಲ ಕಲ್ಮಷವನ್ನು ನಾಶಮಾಡಿದ ಕ್ಷ್ಮಾಪಾಲ ಚೂಡಾಮಣಿಯಾದ ಗಣಪತಿಯ ಸಾಮ್ರಾಜ್ಯದಲ್ಲಿ ಈಕೆಯ ಜನ್ಮ ಮಹೋತ್ಸವದಾರಭ್ಯ ಖಲರ ಸದ್ದಿಲ್ಲದಂತಾಯಿತು. ಶ್ರೀ ರುದ್ರದೇವಿಯು ಸ್ವತಃ ಮಾಡಿದ ಚಾತುರ್ವರ್ಣ್ಯದ ನಿಜ ಸ್ಥಿತಿಗೆ ವಿಜಯವಾಗಿದೆ. ಕಲಿಕಾಲವು ಓಡಿತು. ಭಗವಾನ್ ಧರ್ಮನು ಪ್ರಕಾಶಿಸುವನು. ದ್ವಿಜರ ದುರಿತವು ದೂರವಾಯಿತು. ವೈರಿಗಳು ಆಕೆಯ ಹೆಸರನ್ನು ಕೇಳಿ ಗಾಬರಿಯಾಗಿ ಚಡಪಡಿಸುತ್ತ ತಮ್ಮ ಊರುಗಳನ್ನು ಬಿಟ್ಟು ಓಡಿ ಹೋಗುವರು. ರುದ್ರಾಂಬಿಕೆಯ ಕ್ಷೀರ ಸಮುದ್ರದ ಉಕ್ಕುವ ತೆರೆಗಳ ಬುರುಗನ್ನು ಆಕ್ರಮಿಸಿರುವದು, ಶರತ್ಕಾಲದ ಬೆಳದಿಂಗಳ ಪ್ರವಾಹಾವೃತವನ್ನು ಮುಕ್ಕಳಿಸಿರುವುದು, ಇಂದ್ರನ ಐರಾವತದ ಕೋರೆದಾಡೆಗಳ ಸೌಂದರ್ಯವನ್ನು ಹೀರಿಕೊಂಡಿರುವುದು, ಎಲ್ಲ ದಿಕ್ಕುಗಳಲ್ಲಿಯೂ ಮುಕ್ತಾಹಾರದ ಬಳ್ಳಿಯೋಪಾದಿಯಲ್ಲಿ ವ್ಯಾಪಿಸಿರುವದು."(೧೧)

---

೧೧. ರುದ್ರದೇವಿಸ್ಸಮುದಭೂತ್ಸರಣ್ಯಾತ್ಸರ್ವಭೂಭೃತಾಂ।
ಗಂಭೀರಾನ್ಮಹತಸ್ತಸ್ಮಾಲ್ಲಕ್ಷ್ಮೀ ರತ್ನಾಕರಾದಿವ ॥
ಸರ್ವೋರ್ವ್ವೀಶಕಿರೀಟಕುಟ್ಟಿಮತಟೀವಿನ್ಯಸ್ತಪಾದಾಂಬುಜಾ
ಶಾಸ್ತ್ರ್ಯೇಷಾ ಚತುರಂಬುರಾಸಿರಶನಾಂ ಶ್ರೀ ರುದ್ರದೇವೀ ಭುವಂ।
ಯಸ್ಯಾ ಜನ್ಮಮಹೋತ್ಸವೋ ಗಣಪತೇಃ ಕ್ಷ್ಮಾಪಾಲಚೂಡಾಮಣೇ
ರ್ವ್ವಿಸ್ಫೂರ್ಜ್ಜತ್ಕಲಿಕಾಲಕಲ್ಮಷಕಥಾಧ್ವಾನ್ತೌಘತೇಜೋನಿಧೇಃ।
ಸಾಮ್ರಾಜ್ಯೇ ಖಲವರ್ಜ್ಜಿತಂ ವಿರಚಿತೇ ಶ್ರೀ ರುದ್ರದೇವ್ಯಾ ಸ್ವಯಂ
ಚಾತುರ್ವ್ವರ್ಣ್ಯನಿಜಸ್ಥಿತಿರ್ವ್ವಿಜಯತೇ ವಿದ್ರಾತಿ ಕಾಲಃ ಕಲಿಃ
ಧರ್ಮಾಸೌ ಭಗವಾನ್ವಿಭಾತಿ ದುರಿತಂ ದೂರೇ ದ್ವಿಜಾನಾಂ ದ್ವಿಷ
ತನ್ನಾಮಗ್ರಹಭೀಷಿತಾ ನಿಜಪುರಾನ್ನಿರ್ಯ್ಯಾನ್ತಿ ಪರ್ಯ್ಯಾಕುಲಾಃ
ಆಕ್ರಾಮನ್ತಿ ತರತ್ತರಙ್ಗವಿಗಲದುಗ್ಧಾಬ್ಧಿಫೇನಾವಲೀ

ಈಕೆಯ ಶಾಸನಗಳನು ಅನೇಕವಿವೆ. ಅವೆಲ್ಲವುಗಳಲ್ಲಿ ಈಕೆಯ ವರ್ಣನೆಯು ಬಲು ಚನ್ನಾಗಿದೆ. ಅವೆಲ್ಲವು ಈಕೆಯ ಶೌರ್ಯ ಧೈರ್ಯ ಸಾಹಸ ರಾಜ್ಯದಾಡಳಿತೆಯಲ್ಲಿಯ ಚಾತುರ್ಯ ಪರೋಪಕಾರ ಮೊದಲಾದ ಸದ್ಗುಣಗಳನ್ನು ಬಹಳವಾಗಿ ಬಣ್ಣಿಸುವವು. ಈಕೆಗೆ ಹೊಟ್ಟೆಯ ಮಕ್ಕಳಿದ್ದಿಲ್ಲ. ಪ್ರತಾಪ ರುದ್ರದೇವನೆಂಬವನು ಈಕೆಯ ದತ್ತಕ ಮಗನು. ವಿಶ್ವೇಶ್ವರ ಶಿವಾಚಾರ್ಯನು ಗಣಪತಿದೇವ, ರುದ್ರಮಹಾದೇವಿ, ಪ್ರತಾಪರುದ್ರ ಇವರೆಲ್ಲರಿಗೂ ಗುರುವಾಗಿದ್ದನು. ಗಣಪತಿದೇವನಿಂದ ವಿಶ್ವೇಶ್ವರ ಶಿವನಿಗೆ ವಾಗ್ದತ್ತವಾದ ದತ್ತಿಯನ್ನು ರುದ್ರಮಹಾದೇವಿಯು ಕೊಟ್ಟು ಮಲಕಾಪುರದ ಶಿಲಾಶಾಸನವನ್ನೆತ್ತಿಸಿರುವಳು. (೧೨) "ಮೂವರು ಅರಸುಗಳ ರಾಜ್ಯವನ್ನು ಹಾಳುಮಾಡಿದವನೂ ಜನ್ಮೋತ್ಸವ ದಿವಸದಾರಭ್ಯ ವೈರಿಗಳ ಅವನತಿಗೆ ಕಾರಣನೂ ಕಾಕತೀಯ ವಂಶದ ಮೌಕ್ತಿಕ ಮಣಿಯೂ ಆದ ಮಗನಾದ ರುದ್ರದೇವನ ಭುಜ ವಿಕ್ರಮದ ಬಲವು ದೇಶಿಕೇಂದ್ರನಾದ ಶ್ರೀ ವಿಶ್ವೇಶ್ವರ ಶಿವನ ಶಿವಹಸ್ತಗಳಿಂದ ಪ್ರಾಪ್ತವಾದ ಆಶೀರ್ವಾದದಿಂದ ಹೆಚ್ಚಾಗಹತ್ತಿದ ಮೇಲೆ ಶ್ರೀ ರುದ್ರದೇವಿಯ ವೈಭವವನ್ನು ಇದಕ್ಕೂ ಹೆಚ್ಚಿಗ ಬಣ್ಣಿಸುವದೇನಿದೆ?" (೧೩) ಎಂಬ ಶಿಲಾಶಾಸನದ ಪದ್ಯದಿಂದ ರುದ್ರದೇವಿಯು ಆಕೆಯ ಮಗನಾದ ಪ್ರತಾಪರುದ್ರನ ಮತ್ತು ವಿಶ್ವೇಶ್ವರ ಶಿವನ ಪ್ರತಿಭೆಯು ಸಂಪೂರ್ಣವಾಗಿ ವಾಚಕರ ಮನದಲ್ಲಿ ಮೂಡದ ಇರಲಾರದು.

---

೩೧ ನೇ ಪುಟ ೧೧ ನೇ ಟೀಪು

ರಾಜಾಮನ್ತಿ ಶರಚ್ಛಶಾಙ್ಕವಿಸರದ್ಜ್ಯೋತ್ಸ್ನಾಪ್ರವಾಹಾವೃತಂ
ಆಕರ್ಷನ್ತಿ ಸುರೇನ್ದ್ರದನ್ತಿದಶನಪ್ರಾಗ್ಭಾರಲಗ್ನಾಂ ಶ್ರಿಯಂ
ಮುಕ್ತಾಹಾರಲತಾಯಿತಾಃ ಪ್ರತಿದಿಶಂ ರುದ್ರಾಂಬಿಕಾಕೀರ್ತಯಃ
ಭಾಗ ೧ ಸಾಲು ೪೧ ರಿಂದ ೫೧ ರ ವರೆಗೆ

೧೨. ಶ್ರೀ ವಿಶ್ವೇಶ್ವರಶಂಭವೇ ಗಣಪತಿಕ್ಷೋಣೀಶ್ವರೇಣಾದರಾ
ದ್ಗ್ರಾಮಂ ಮನ್ದರನಾಮಧೇಯಮಖಿಲೈರ್ವಾಗ್ದತ್ತ ಮಾಯೈಸ್ಸಮಮ್
ತತ್ಪುತ್ರೀ ತದನುಜ್ಞಯಾ ಪಶುಪತೇಃ ಶ್ರೀ ರುದ್ರದೇವೀ ಪುರಃ
ಪ್ರಾದಾದ್ಗ್ರಾಮವೆಲಙ್ಗಪುಣ್ಡಸಹಿತಂ ಸೀಮಾಷ್ಟಕೇನಾವೃತಮ್
ಭಾಗ ೨ ಸಾಲು ೨೨ ರಿಂದ ೨೫ ರ ವರೆಗೆ

ರುದ್ರಮಹಾದೇವಿಯಿಂದ ದೊರೆತ ಗ್ರಾಮಗಳೊಳಗಿರುವ ಭೂಮಿಯನ್ನು ಮತ್ತು ಅವುಗಳ ಉತ್ಪನ್ನವನ್ನು ಶ್ರೀ ವಿಶ್ವೇಶ್ವರನು ಜನರಿಗೆ ಹೇಗೆ ಹಂಚಿಕೊಟ್ಟನೆಂಬ ಸವಿಸ್ತರ ವೃತ್ತಾಂತವು ಈ ಶಿಲಾಶಾಸನದಲ್ಲಿದೆ. ಅದರಲ್ಲಿಯ ಮಹತ್ವವಾದ ಭಾಗವು ಹೀಗದೆ. ದತ್ತಿಯೊಳಗಿನ ಒಂದು ಭಾಗವನ್ನು ವಿದ್ಯಾರ್ಥಿಗಳಿಗೂ ಮತ್ತು ಶೈವಮಠಕ್ಕೂ ಮತ್ತೊಂದು ಭಾಗವನ್ನು ಪ್ರಸೂತಿ ಶಾಲೆ ಆರೋಗ್ಯಶಾಲೆ ವಿಪ್ರಸತ್ರಗಳಿಗೂ ಕೊಟ್ಟನು. (೧೩) ಇದರಿಂದ ಈತನು ವಿದ್ಯಾಪಕ್ಷಪಾತಿಯಾಗಿದ್ದನೆಂಬುದೂ ಅದಕ್ಕಾಗಿ ವಿದ್ಯಾಲಯಗಳನ್ನು ಸ್ಥಾಪಿಸಿರಬೇಕೆಂದೂ ಊಹಿಸಲು ಅವಕಾಶವಿದೆ. ಏಕೆಂದರೆ ಋಗ್ಯಜುಸ್ಸಾಮವೇದಗಳನ್ನು ಚನ್ನಾಗಿ ಅಭ್ಯಾಸ ಮಾಡಿದ ಮೂವರಿಗೂ ಪದವಾಕ್ಯ ಪ್ರಮಾಣರಿಗೂ ಸಾಹಿತ್ಯ ಮತ್ತು ಆಗಮಗಳಲ್ಲಿ ನಿಷ್ಣಾತರಾದವರಿಗೂ ಪಂಚವ್ಯಾಖ್ಯಾಕೃತರಿಗೂ ವೈದ್ಯರಿಗೂ ದತ್ತಿಯಲ್ಲಿ ಭಾಗವನ್ನು ಕೊಟ್ಟಿರುವನು (೧೪). ವಿಶೇಷವಾಗಿ ಪ್ರಸೂತಿಶಾಲೆ ಮತ್ತು ಆರೋಗ್ಯಶಾಲೆ ಮತ್ತು ಆರೋಗ್ಯಶಾಲೆಗಳ ವ್ಯವಸ್ಥೆ ಮಾಡಿದುದು ಲಕ್ಷದಲ್ಲಿಡತಕ್ಕ ಸಂಗತಿಯು. *Maternity homes* ಮತ್ತು *Hospitals* ಇವುಗಳನ್ನು ನಾವು ಪಾಶ್ಚಾತ್ಯರಿಂದಲೇ ಅನು

---

೧೩. ಶ್ರೀ ವಿಶ್ವೇಶ್ವರ ದೇಶಿಕೇಂದ್ರ ಶಿವಹಸ್ತಾಶೀರ್ದೋರ್ವಿಕ್ರಮ
ಸ್ತ್ರಿಕ್ಷೋಣೀಶಜಗದ್ದಲಃ ಪ್ರತಿಬಳಪ್ರಧ್ವಂಸಿ ಜನ್ಮೋತ್ಸವಃ
ಯಸ್ಯಾಃ ಕಾಕತಿವಂಶಮಣೇಃ ಶ್ರೀರುದ್ರದೇವಸ್ಸುತಸ್ತಸ್ಯಾಃ
ಕಿಂ ಕಥಯಾಮ ವೈಭವಮುತ ಶ್ರೀ ರುದ್ರದೇವಾಃ ಪವಾಲ್
ಭಾಗ ೧ ಸಾಲು ೫೧ ರಿಂದ ೫೪೦ ವರೆಗೆ

೧೪. ತ್ರಿಧಾ ವಿಭಜ ತಚ್ಛಿಷ್ಟಮೇಕಂ ಭಾಗಂ ಪಿನಾಕಿನೇ
ವಿದ್ಯಾರ್ಥಿಭ್ಯೋ ಪರಂ ಭಾಗಂ ಶುದ್ಧಶೈವಮಠಾಯ ಚ
ಪ್ರಸೂತ್ಯಾರೋಗ್ಯಶಾಲಾಭ್ಯಾಂ ವಿಪ್ರಸತ್ರಾಯ ಚೇತರಂ
ಪ್ರಾದಾದ್ವಿಶ್ವೇಶ್ವರ ಶಿವಶ್ಶೈವಸಿದ್ಧಾನ್ತಪಾರಗಃ
ಋಗ್ಯಜುಸ್ಸಾಮದೇವಾನಾಂ ಸಮ್ಯಗಧ್ಯಾಪಕಾಸ್ತ್ರಯಃ
ಪದವಾಕ್ಯಪ್ರಮಾಣಾನಾಂ ಸಾಹಿತ್ಯಸ್ಯಾಗಮಸ್ಯ ಚ
ಪಞ್ಚವ್ಯಾಖ್ಯಾಕೃತೋ ವೈದ್ಯಕಾಯಸ್ಥೌ ದ್ವೌ ವಿಚಕ್ಷಣೌ
ದಶಾನಾನಾಮಪಿ ಚೈತೇಷಾಂ ಪ್ರತ್ಯೇಕಂ ಪುಟ್ಟಿಕಾ ದ್ವಯಂ
ಭಾಗ ೨ ಸಾಲು ೪೬ ರಿಂದ ೫೨ ರ ವರೆಗೆ

ಕರುಣ ಮಾಡಿರುವೆವೆಂಬು ನಮ್ಮವರಲ್ಲಿ ಅನೇಕರಿಗೆ ಭಾವನೆ. ಅಂಥವರು ಸುಮಾರು ೭೦೦ ವರ್ಷಗಳ ಹಿಂದೆ ಹುಟ್ಟಿದ ಈ ಶಾಸನವನ್ನು ನೋಡಬೇಕು. ವಿಶ್ವೇಶ್ವರಾಚಾರ್ಯನು ಮಾಡಿದ ಈ ಎಲ್ಲ ವ್ಯವಸ್ಥೆಯನ್ನು ಕಂಡರೆ ಇದಕ್ಕೆ ನಾವು ಧರ್ಮ (*Religion*) ತತ್ವಜ್ಞಾನ (*Philosophy*) ಪರಮಾತ್ಮವಿದ್ಯಾ (*Theology*) ಸಾಹಿತ್ಯ (*Art*) ವೈದ್ಯಕೀವಿದ್ಯಾ (*Medicine*) ಮೊದಲಾದವುಗಳೇ ಶಾಖೆ (*Faculty*) ಗಳಾದ ಒಂದು ಚಿಕ್ಕ ವಿಶ್ವವಿದ್ಯಾಲಯ (*University*) ವೆಂದೇ ಕರೆಯಬಹುದು. ಶೈವತಪೋಧನರು ಕಾಲಾಮುಖರಾಗಲಿ ಅಥವಾ ಶಿವ ಶಾಸನಾನುಯಾಯಿಗಳಾಗಲಿ ಬಂದರೆ ಅವರಿಗೂ ಪಾಶುಪತವ್ರತದ ವಿದ್ಯಾರ್ಥಿಗಳಿಗೂ ಅನ್ನವಸ್ತ್ರಾದಿಗಳನ್ನು ಕೊಡಬೇಕೆಂದೂ ಬ್ರಾಹ್ಮಣರಿಂದ ಚಂಡಾಲರವರಿಗೂ ಬಂದಂಥವರಿಗೆ ಅನ್ನವನ್ನು ಕೊಡಬೇಕೆಂದೂ ರಾಜಗುರುವಾದ ಶ್ರೀ ವಿಶ್ವೇಶ್ವರ ಶಿವಾಚಾರ್ಯನು ನಿರ್ಬಂಧಿಸಿರುವನು. (೧೫) ಇದರಿಂದ ಇವನ ಧಾರ್ಮಿಕ ಭಾವನೆಯೂ ಅನ್ನದಾನದ ಅಪೇಕ್ಷೆಯೂ ಒಡೆದು ಕಾಣುವವು. ವಿದುರ ನೀತಿಯೊಳಗಿನ "ಶೀಲಗುಣಸಚ್ಚರಿತೆವಿದ್ಯೆಯ । ಕೇಳಬೇಡನ್ನಗಳನಿಕ್ಕುವ । ಡಾಲಯಕೆ ಬಂದತಿಥಿಯೇ ಸತ್ಪಾತ್ರನಹನೆಂದ ॥" ಎಂಬ ಪದ್ಯದ ಗುಟ್ಟನ್ನು ಈತನು ಆಚರಣೆಯಲ್ಲಿ ತಂದಿದ್ದನು. ದೇವಾಲಯಗಳಲ್ಲಿ ಕೆಲಸಮಾಡುವಂಥ ಸೇವಕರಿಗೂ ಈತನು ಉಂಬಳಿಯನ್ನು ಹಾಕಿಕೊಟ್ಟಿರುವನು. ಅಂಥ ಉಂಬಳಿಯನ್ನುಣ್ಣುವ ಆರಾದರೂ ಪುತ್ರರಿಲ್ಲದೆ ತೀರಿಕೊಂಡರೆ ಕುಲಾಚಾರ ಸಮನ್ವಿತರಾದ ಅಂಥವರ ಹೆಂಡಿರು ದೇವಾಲಯದ ಕೆಲಸವನ್ನು ಮಾಡಿಸಿ ಉಂಬಳಿಯನ್ನುಣ್ಣುವ ಅಧಿಕಾರವುಂಟೆಂದು ನಿರ್ಧರಿಸಿರುವನು. (೧೬) ಇದೊಂದು

---

೧೫. ಉಪೇಯುಷಾಂ ಶೈವತಪೋಧನಾನಾಂ ಕಾಲಾನನಾನಾಂ ಶಿವಶಾಸನಾನಾಮ್
ವಿದ್ಯಾರ್ಥಿನಾಂ ಪಾಶುಪತವ್ರತಾನಾಮುಪ್ಯನ್ನವಸ್ತ್ರಾದಿಸಮರ್ಪಣಾಯ
ಆರಭ್ಯ ವಿಪ್ರಾನನಿವಾರಿತಾನಾಂ ಚಣ್ಡಾಲಪರ್ಯನ್ತಮುಪಾಗತಾನಾಮ್
ಅನ್ನಪ್ರದಾನಾಯ ಚ ಸರ್ವಕಾಲಮಕಲ್ಪಯದ್ರಾಜಗುರುರ್ಮಹಾತ್ಮಾ
ಭಾಗ ೨ ಸಾಲು ೭೦ ರಿಂದ ೭೪ರ ವರೆಗೆ

೧೬. ಪುತ್ರಾಭಾವೇ ಸ್ತ್ರಿಯೋಪ್ಯೇಷಾಂ ಕುಲಾಚಾರಸಮನ್ವಿತಾಃ
ಕಾರಯನ್ತ್ಯಸ್ವಕರ್ಮಾಣಿ ಕ್ಷೇತ್ರಾರಾಮಾದಿ ಭುಞ್ಜತಾಮ್
ಭಾಗ ೨ ಸಾಲು ೬೮, ೬೯.

ಲಕ್ಷದಲ್ಲಿಡತಕ್ಕ ಧರ್ಮಶಾಸ್ತ್ರದ ವಿಶಿಷ್ಟತೆ. ಹಿಂದೂಧರ್ಮಶಾಸ್ತ್ರದ ಪ್ರಾಚೀನಪುಸ್ತಕಗಳಲ್ಲಿ ಹೆಂಡಂದಿರು ತಮ್ಮ ಗಂಡಂದಿರ ಆಸ್ತಿಯನ್ನು ಉಪಭೋಗಿಸುವ ಹಕ್ಕಿಲ್ಲ. ಈತನು ಅಂಥ ಹಕ್ಕು ಉಂಟಾಗಬೇಕೆಂದು ನಿರ್ಧರಿಸಿದುದು ಲಕ್ಷದಲ್ಲಿಡತಕ್ಕ ಮಾತು.

ಈ ವಿಶ್ವೇಶ್ವರ ಶಿವನು ಅನೇಕ ಧರ್ಮಕಾರ್ಯಗಳನ್ನು ಮಾಡಿದ್ದಾನೆ. ಅವುಗಳಲ್ಲಿ ಮುಖ್ಯವಾದುವು ಕಾಳೇಶ್ವರವೆಂಬ ಊರಲ್ಲಿ ಕಲ್ಮಠ (ಉಪಲ) ಮಠವನ್ನು ಸ್ಥಾಪಿಸಿ ಪೊನ್ನಗ್ರಾಮವನ್ನು ಅಗ್ರಹಾರವನ್ನಾಗಿ ಬಿಟ್ಟಿರುವನು. ಮಂತ್ರಕೂಟವೆಂಬ ನಗರದಲ್ಲಿ ವಿಶ್ವೇಶ್ವರಲಿಂಗವನ್ನೂ ಮಠವನ್ನೂ ಸ್ಥಾಪಿಸಿರುವನು. ಚಂದ್ರವಲ್ಲೀ ನಗರದಲ್ಲಿ ವಿಶ್ವೇಶ್ವರ ಲಿಂಗವನ್ನು ಸ್ಥಾಪಿಸಿರುವನು. ಕಂಚಂಪಲ್ಲಿಯಲ್ಲಿ ನದಿಗೆ ಸೇತುವೆಯನ್ನು ಕಟ್ಟಿಸಿರುವನು. ನಂದಪದದಲ್ಲಿ ತನ್ನ ಹೆಸರಿನ ನಗರವನ್ನು ನಿರ್ಮಿಸಿ ಆನಂದಮುನಿಕೂಟವನ್ನು ಮಾಡಿ ದೇವರಿಗೆ ಭಕ್ತಿಯಿಂದ ಕೊಟ್ಟನು. ಕೊಮ್ಮುಗ್ರಾಮದಲ್ಲಿ ತನ್ನ ಹೆಸರಿನ ಲಿಂಗವನ್ನು ಸ್ಥಾಪಿಸಿ ಭೂಮಿಯನ್ನು ಬಿಟ್ಟಿರುವನು. ಶೈಲದ ಈಶಾನ್ಯದಲ್ಲಿ ಈಶ್ವರ ಪುರಿಯನ್ನೂ ಮಠವನ್ನೂ ನಿರ್ಮಿಸಿರುವನು. ಉತ್ತರ ಸೋಮಶಿಲೆಯಲ್ಲಿ ವಿಶ್ವೇಶ್ವರ ಲಿಂಗವನ್ನು ನಿರ್ಮಿಸಿರುವನು. ಇತ್ಯಾದಿ (೧೭)

---

೧೭. ಕೃತ್ವಾ ಕಾಳೇಶ್ವರಾಖ್ಯೇ ಪುರೇ ಉಪಲಮಠಂ ಪೊನ್ನಗ್ರಾಮಾಗ್ರಹಾರಂ

ಕೃತ್ವಾ ವಿಶ್ವೇಶ್ವರಶಿವ ಉರುಧೀರ್ದತ್ತವಾನ್ ಸರ್ವಸಾಕ್ಷಿ
ನಿರ್ಮಾಯ ಸ್ವಾಖ್ಯಲಿಙ್ಗಸ್ಮಠಮಪಿ ನಗರೇ ಮನ್ತ್ರಕೂಟಾಭಿಧಾನೇ
ಮಾನೇ ಪಲ್ಯುಟ್ಟುಪಲ್ಲಿದ್ವಯಮದದತ್ತ ಸದ್ದೇವಸತ್ರದ್ವಯಾಯ
ನಾಮ್ನಾ ಸ್ವೇನ ಸ ಚನ್ದ್ರವಲ್ಲಿನಗರೇ ಲಿಙ್ಗಂ ಪ್ರತಿಷ್ಠಾಪ್ಯ ಸನ್
ಕಙ್ಚಂಪಲ್ಲಿ ತಟಾಕಸೇತುಮಧಿಕಂ ಕೃತ್ವಾರ್ಥಮಸ್ಮಾ ಅದಾತ್
ಕೃತ್ವಾನನ್ದಪದೇ ಸ್ವನಾಮನಗರಂ ಪ್ರತಿಷ್ಠಾಪ್ಯ
ಚಾಪ್ಯಾನನ್ದಂ ಮುನಿಕೂಟಮಪ್ಯಥ ಪುರಂ ದೇವಸ್ಯ ಭಕ್ತ್ಯಾ ಅದಾತ್
ಕೊಮ್ಮೂಗ್ರಾಮೇ ಸ್ವಾಖ್ಯಲಿಙ್ಗಂ ಪ್ರತಿಷ್ಠಾಂ ಕೃತ್ವಾ ತ್ರಿಂಶತ್ಖಾರಿಮಾನಾಂ ಮಹೀಂ ಸಃ
ನಿಮ್ನಕ್ಷೇತ್ರಂ ಪಞ್ಚಖಾರಿಮಿತಂ ಚ ಪ್ರಾದಾದ್ದೇವಾಯೋಗರಜಙ್ಗೋಪಭುಕ್ತ್ಯೈ

## ಈ ಶಾಸನದಲ್ಲಿ ವೀರಶೈವರ ಉಲ್ಲೇಖ.

ಈ ಶಾಸನದಲ್ಲಿರುವ ಕಾಕತೀಯ ಅರಸನಾದ ಗಣಪತಿ ಮತ್ತು ಪ್ರತಾಪರುದ್ರದೇವರು ವೀರಶೈವರಿದ್ದರೆಂದು ತೆಲಗು ಪಂಡಿತರಾದ ಮ. ಪಿ. ಚೆಂಚಯ್ಯ, ಎಮ್. ಎಲ್. ಮತ್ತು ರಾಜಾ ಎಮ್. ಭುಜಂಗರಾವ ಬಹದ್ದೂರ ಎಂಬವರು ಅಭಿಪ್ರಾಯಪಡುವರು (೧೮) ಈ ಅಭಿಪ್ರಾಯ ವನ್ನು ವೀರಶೈವರಲ್ಲಿದ್ದ ಐತಿಹ್ಯವು ಬಲಪಡಿಸುವುದು. ಪ್ರಸಿದ್ಧ ವೀರಶೈವ ಕವಿಗಳಾದ ರಾಘವಾಂಕ ಕೆರೆಯ ಪದ್ಮರಸರು ಓರಗಲ್ಲಿನ ಪ್ರತಾಪರು ದ್ರದೇವನ ಆಸ್ಥಾನದಲ್ಲಿ ವಾದಿಸಿದಂತೆ ವೀರಶೈವ ಗ್ರಂಥಗಳಿಂದ ಕಂಡು ಬರುವುದು. (೧೯) ಈ ಐತಿಹ್ಯದ ಸತ್ಯಾಸತ್ಯತೆಯು ಹೇಗೇ ಇರಲಿ; ಇದರಿಂದ ಓರಗಲ್ಲಿನ ಅರಸರಾದ ಕಾಕತೀಯ ವಂಶದ ರಾಜರು ವೀರ ಶೈವ ಪಕ್ಷಪಾತಿಗಳಿದ್ದರೆಂಬ ವೀರಶೈವರ ನಂಬುಗೆಯು ನಂಬಲರ್ಹವಾ ಗಿದೆ. ಕಾಕತೀಯ ರಾಜರು ಶಿವಾಚಾರ್ಯರಿಂದ ದೀಕ್ಷೆಯನ್ನು ಪಡೆದು ಶಿವೋಪಾಸಕರಾಗಿದ್ದರೆಂಬುದು ಈ ಶಾಸನದಿಂದಲೂ ಕೂಡ ಸ್ಪಷ್ಟವಾ ಗುವುದು. ವೀರಶೈವರಲ್ಲಿಯೇ ದೀಕ್ಷೆಯನ್ನು ಪಡೆಯುವ ವೈಶಿಷ್ಟ್ಯವು ವಿಶೇಷವಾಗಿ ಉಂಟು. ಇನ್ನು ಇದೇ ಶಿಲಾಶಾಸನದಿಂದ ವೀರಶೈವ ಅರಸರ ವರ್ಚಸ್ವವು ಕಾಕತೀಯ ಅರಸರ ಮೇಲಿತ್ತೆಂದು ಸ್ಪಷ್ಟವಾಗು ಗುವುದು. ವಿಶ್ವೇಶ್ವರ ಶಿವಾಚಾರ್ಯನು ನೂರಾರು ವೀರಶೈವರಿಂದ ಕೂಡಿಕೊಂಡಿದ್ದನೆಂದು ಇದರಲ್ಲಿ ಸ್ಪಷ್ಟವಾಗಿದೆ. (೨೦) ನನಗೆ ದೊರೆತ

---

೩೫ನೇ ಪುಟ ೧೭ನೇ ಟೀಪು

ಶ್ರೀಶೈಲೇಶಾನ್ಯೇ ಈಸ್ವರಪುರಿಸಮುತಂ ಚ ಷೋಡಶಾವರಕಂ
ಅಕರೋತ್ತಚ್ಛಿಷ್ಯೋದಾದ್ಗ್ರಾಮಂ ಗಣಪತಿರವಾರಿಸತ್ರಾಯ
ಭಾಗ ೩ ಸಾಲು ೧೩ ರಿಂದ ೨೨ರ ವರೆಗೆ

*18. A History of Telugu literature (Heritage of India Series.*

೧೯. *Vide* ಕರ್ನಾಟಕ ಕವಿಚರಿತೆ ಭಾಗ ೧ *under* ರಾಘವಾಂಕ *and* ಕೆರೆಯ ಪದ್ಮರಸ.

೨೦. ವಿಶ್ವೇಶ್ವರಶಿವಾಚಾರ್ಯೋ ಧೀಮಾನ್ರಾಜಗುರುಸ್ಸ್ವಯಂ ।
ಏವಮಾಜ್ಞಾಪಯದ್ವೀರಶೈವಾಚಾರ್ಯ್ಯಶತೈರ್ವೃತಃ ॥
ಭಾಗ ೨. ಸಾಲು ೭೮, ೭೯.

ಶಿಲಾಶಾಸನಗಳಲ್ಲಿ "ವೀರಶೈವ" ಶಬ್ದವನ್ನೊಳಕೊಂಡುದು ಇದೇ ಮೊದಲನೆಯದು. ಈ ಶಾಸನ ಹುಟ್ಟಿದ ಕಾಲ ಶಕೆ ೧೧೮೩ ದುರ್ಮತಿ ಸಂವತ್ಸರ ಚೈತ್ರ ಬಹುಳ ೮ ಶುಕ್ರವಾರ ಅಂದರೆ ಕ್ರಿ. ಶ. ೧೨೬೧ ಮಾರ್ಚ ೨೫ ನೇ ತಾರೀಖು (೨೧). ಈ ಶಾಸನದಲ್ಲಿ "ವೀರಭದ್ರ" "ವೀರಮುಷ್ಟಿ" ಯೆಂಬೆರಡು ವಿಶೇಷವಾದ ಶಬ್ದಗಳುಂಟು. ನಮ್ಮಲ್ಲಿ ಗುಗ್ಗಳಹೊರಟಾಗ ಪುರವಂತರೆಂದು ಕರಿಸಿಕೊಳ್ಳುವ ಒಡಪು ಹೇಳುವ ಜನರೇ ಈ ಶಾಸನದಲ್ಲುಕ್ತರಾದ "ವೀರಭದ್ರ" ರಾಗಿರಬೇಕು. ಇವರು ಭಟರೆಂದೂ ಬೀಜಚ್ಛೇದ ಕುಕ್ಷಿಚ್ಛೇದ ಶಿರಚ್ಛೇದ ಮೊದಲಾದ ಕರ್ಮಗಳಿಂದ ಹತ್ತು ಗ್ರಾಮುಗಳ ರಕ್ಷಕರೆಂದೂ ಇದರಲ್ಲಿ ಉಲ್ಲೇಖವಿದೆ. (೨೨) ಇವರು ಗ್ರಾಮುಗಳನ್ನು ದೃಶ್ಯವೈರಿಗಳಿಂದ ರಕ್ಷಿಸುವದಲ್ಲದೆ ಅದೃಶ್ಯವೈರಿಗಳಾದ ಪಿಡುಗುಗಳಿಂದಲೂ ಕೂಡ ಗ್ರಾಮುಗಳನ್ನು ರಕ್ಷಿಸುವ ಭಾರವನ್ನು ವಹಿಸಿದಂತೆ ತೋರುವುದು. ಊರೊಳಗೆ ಪೀಡೆಗಳುಂಟಾದರೆ ಈ ಪ್ರಕಾರದ ಪ್ರಾಯಶ್ಚಿತ್ತವನ್ನು ತಕ್ಕೊಳ್ಳುತ್ತಿದ್ದರೋ ಏನೊ? ವೀರಮುಷ್ಟಿಯವರೆಂಬುದು ಒಂದು ಪ್ರಕಾರದ ಭಟರ ಗುಂಪಿರಬಹುದು. ಬಸವಪುರಾಣದಲ್ಲಿ ಒಬ್ಬ ಶರಣನ ಹೆಸರು ಮುಷ್ಟಿಯ ಚೌಡಯ್ಯನೆಂದಿದೆ. ಇವುಗಳ ಅವಶೇಷವನ್ನು ಇನ್ನೂ ಲಿಂಗವಂತರಲ್ಲಿ ಕಾಣಬಹುದು.

---

೨೧. ಲೋಹಃ ಕೋಯಂ ಶಕಸ್ಯಾಬ್ದೇ ದುರ್ಮ್ಮತೌ ವತ್ಸರೇ ಶುಭೇ।
ಚೈತ್ರೇ ಸಿತೇತರಾಷ್ಟಮ್ಯಾಂ ವಾರೇ ಶುಕ್ರಾಭಿಧಾನಕೇ ।
ಭಾಗ ೨. ಸಾಲು ೨೦, ೨೧.

೨೨. ಬೀಜಚ್ಛೇದ-ಶಿರಚ್ಛೇದ-ಕುಕ್ಷಿಚ್ಛೇದಾದಿ. ಕರ್ಮ್ಮಭಿಃ ।
ವೀರಭದ್ರಸಮಾಖ್ಯಾತಾ ದಶಗ್ರಾಮಸ್ಯ ರಕ್ಷಕಾಃ ।
ಭಟಾಸ್ತ್ಯರಪರೇ ಭಕ್ತಾ ವಿಂಶತಿರ್ವ್ವೀರಮುಷ್ಟಯಃ ।
ಭಾಗ ೨. ಸಾಲು ೫೭, ೫೮.

# ಪುಸ್ತಕ ವಿಮರ್ಶೆ.

## ೧. ಕವಿಕರ್ಣರಸಾಯನ

ಉಭಯ ಕವಿತಾವಿಶಾರದನಾದ ಷಡಕ್ಷರಿದೇವನ ಹೆಸರನ್ನು ಕೇಳದ ಕನ್ನಡಿಗರು ಬಹು ವಿರಳ. ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅಸಾಧಾರಣ ಕವಿತಾಶಕ್ತಿಯುಳ್ಳ ಕವಿಕುಲಚಕ್ರವರ್ತಿಯಾದ ಈತನಿಗೆ 'ಉಭಯಕವಿತಾವಿಶಾರದ' ನೆಂಬ ಬಿರುದು ಅನ್ವರ್ಥಕವಾಗಿರುತ್ತದೆ. ನವರಸಭರಿತವಾದ ರಾಜಶೇಖರವಿಲಾಸವೆಂಬ ಮಹತ್ವದ ಕಾವ್ಯವನ್ನು ರಚಿಸಿರುವದರಿಂದಲೇ ಈ ಕವಿಯು ಕರ್ನಾಟಕದಲ್ಲಿ ಅತ್ಯಂತ ಗೌರವವನ್ನು ಪಡೆದನು. ಈತನು ಕನ್ನಡದಲ್ಲಿ ರಾಜಶೇಖರವನ್ನಲ್ಲದೆ ಶಬರಶಂಕರವಿಲಾಸ, ವೃಷಭೇಂದ್ರವಿಜಯ ಹಾಗು ಸಂಸ್ಕೃತದಲ್ಲಿ ಕವಿಕರ್ಣರಸಾಯನ, ಶಿವಾಧಿಕ್ಯ, ಭಕ್ತಾಧಿಕ್ಯ, ಎಂಬ ಮಹಾಕಾವ್ಯಗಳನ್ನೂ ಬರೆದಿದ್ದಾನೆ. ಈತನು ಇನ್ನೂ ಕೆಲವು ಕಾವ್ಯಗಳನ್ನು ಬರೆದಿರಬಹುದೆಂದು ತರ್ಕವದೆ. ಅವುಗಳನ್ನು ಕೂಡಿ ಶೋಧಿಸುವದು ಅವಶ್ಯವದೆ.

ಪ್ರಸ್ತುತದಲ್ಲಿ ಶ್ರೀಯುತ ಎಸ್. ಜಿ. ಕಾಡದೇವರ ಮಠ ಬಿ. ಎ. ಬಿ. ಟಿ. ಹೆ. ಮಾ. ಬಾರ್ಶಿ ಹಾಯಸ್ಕೂಲ ಇವರು ಇದೇ ಕವಿಕುಲ ಶಿರೋಮಣಿ ಷಡಕ್ಷರದೇವನ ಕಾವ್ಯ ಶೋಧವನ್ನು ಮಾಡಿ 'ಕವಿಕರ್ಣರಸಾಯನ' ಎಂಬ ಸಂಸ್ಕೃತ ಮಹಾ ಕಾವ್ಯದ ಎರಡು ಸರ್ಗಗಳನ್ನು ಇಂಗ್ಲಿಷ ಪೀಠಿಕೆ ಟಿಪ್ಪಣಿಗಳೊಡನೆ ಮುದ್ರಿಸಿದ್ದಾರೆ. ಈ ಕಾರ್ಯವನ್ನು ಅವರು ಕೈಕೊಂಡಿದ್ದಕ್ಕೆ ಅವರನ್ನು ನಾವು ಅಭಿನಂದಿಸುತ್ತೇವೆ. ಮತ್ತು ಅವರ ಉದಾಹರಣೆಯು ಅನುಕರಣೀಯವಾಗಿದೆ.

ಕವಿಕರ್ಣರಸಾಯನವು ಲಕ್ಷಣಬದ್ಧವಾದ ಸಂಸ್ಕೃತ ಕಾವ್ಯವು. ಇದು ಹೆಸರಿಗನುಗುಣವಾಗಿ ಕವಿಗಳ ಕಿವಿಗಳಲ್ಲಿ ನವರಸಾಮೃತವನ್ನು ಸುರಿಸುತ್ತಿರುವುದಲ್ಲದೆ ಶಬ್ದಾರ್ಥಾಲಂಕಾರಗಳಿಂದಲಂಕೃತವಾಗಿ ಅವರಿಗೆ ಆದರ್ಶವಾಗಿರುವುದು. ಕಾವ್ಯಾಲಂಕಾರಗಳೆಲ್ಲವುಗಳಿಗೂ ಇದರಲ್ಲಿ ಉತ್ತಮವಾದ ಉದಾಹರಣೆಗಳು ಇರುವವು. ಚೋಳಮಂಡಲದ ವರ್ಣನೆಯೇ ಈ ಕಾವ್ಯದ ವಿಷಯವು.

ಶ್ರೀ ಕಾಡದೇವರ ಮಠ ಇವರು ಈ ಗ್ರಂಥವನ್ನು ಶೋಧಿಸಿದ್ದು ೧ ನೇ ಸರ್ಗದಲ್ಲಿ ಸಮುದ್ರ ಮತ್ತು ಮೇರುಗಿರಿಯೂ ವರ್ಣನೆಯೂ ಎರಡನೇದರಲ್ಲಿ ಚೋಳ ದೇಶದ ವರ್ಣನೆಯೂ ಬಹು ಮನೋಹರವಾಗಿ ವರ್ಣಿಸಲ್ಪಟ್ಟಿವೆ. ಪ್ರತಿಯೊಂದು ಶ್ಲೋಕದಲ್ಲಿ ಬೇರೆ ಬೇರೆ ಅಲಂಕಾರಗಳನ್ನು ತೋರಿಸಿರುವರು. ಇದರಿಂದ ಆಂಗ್ಲ ಭಾಷಾ ಕೋವಿದರಿಗೆ ಪ್ರೌಢ ಸಂಸ್ಕೃತ ಕಾವ್ಯರಸಾ ಸ್ವಾದನೆಯನ್ನು ಒದಗಿಸಿ ಶ್ರೀ ಷಡಕ್ಷರಿ ದೇವನ ಪರಿಚಯವಾಗಲು ಅನುಕೂಲ ಮಾಡಿಕೊಟ್ಟಿರುವರು. ಅವರು ಇದರಲ್ಲಿ ಷಡಕ್ಷರಿಯ ಬಗ್ಗೆ ವಿಸ್ತಾರವಾದ ಪೀಠಿಕೆಯನ್ನು ಬರೆದಿರುವರು. ಅದು ಮನನೀಯವಾಗಿದೆ.

ಶ್ರೀಯುತ ಕಾಡದೇವರ ಮಠ ಇವರು ಮಾಡಿದ ಈ ಕಾರ್ಯವು ಸ್ಫೂರ್ತಿಗೊಳ್ಳುವಂತೆ ಷಡಕ್ಷರ ದೇವನ ಈ ಕಾವ್ಯದ ಪೂರ್ಣ ಪ್ರತಿಯು ಯಾರಲ್ಲಾದರೂ ಇದ್ದರೆ ಅದನ್ನು ಅವರ ಕಡೆಗೆ ಕಳಿಸಿ ಅವರಿಗೆ ಸಹಾಯ ಮಾಡಬೇಕೆಂದು ನಮ್ಮ ಸೂಚನೆ ಇದೆ.

## ೩. ಪ್ರತ್ಯಕ್ಷ ಚಮತ್ಕಾರ ಚಂದ್ರಿಕೆ.

ಈ ಗ್ರಂಥವನ್ನು ವೇ॥ ಮ॥ ಟಿ. ಎಚ್. ಎಮ್ ಸಿದ್ಧಾಂತಿ–ವಿರೂಪಾಕ್ಷ ಶಾಸ್ತ್ರಿಗಳು ಭಿಷಗ್ಮಣಿ ಔಷಧಾಲಯ ಹರಪನಹಳ್ಳಿ ಇವರು ರಚಿಸಿರುತ್ತಾರೆ. ಇದರಲ್ಲಿ ಪ್ರತಿಯೊಬ್ಬನಿಗೆ ಈಗಿನ ಪರಿಸ್ಥಿತಿಗೆ ಅವಶ್ಯಕವಾಗಿ ಬೇಕಾಗಿರುವ ವಿಷಯಗಳೆಲ್ಲವೂ ಕ್ರೋಢೀಕೃತವಾಗಿವೆ. ಮನುಷ್ಯನ ಪ್ರಪಂಚದಲ್ಲಿ ಗೊತ್ತಿರಬೇಕಾದ ಹಬ್ಬ ಹುಣ್ಣಿವೆಗಳ ವಿವರಣೆಗಳು, ಜ್ಯೋತಿಶ್ಶಾಸ್ತ್ರ ಸಾಮುದ್ರಿಕ ವಿಷಯಗಳು, ಸ್ವಪ್ನ ವಿಶೇಷಗಳು, ಮಂತ್ರ ಶಾಸ್ತ್ರ ಇವುಗಳಲ್ಲದೆ ವ್ಯವಹಾರಿಕ ಉಪಯುಕ್ತ ವಿಷಯಗಳಾದ ಪಾಕ ಶಾಸ್ತ್ರ ಪಶು ಶಾಸ್ತ್ರ, ವೈದ್ಯಶಾಸ್ತ್ರ ಇಂಥ ವಿಷಯಗಳ ಸವಿಸ್ತಾರ ನಿರೂಪಣೆಯೂ ಇದರಲ್ಲಿ ಉಂಟು. ನಮ್ಮ ಹಿಂದೂ ಪ್ರಾಚೀನ ಶಾಸ್ತ್ರಕಾರರು ಇಂಥ ವ್ಯವಹಾರಿಕ ವಿಷಯಗಳ ಬಗ್ಗೆ ಅನೇಕ ಉಪಯುಕ್ತ ಶೋಧಗಳನ್ನು ಮಾಡಿರುತ್ತಾರೆ. ಇವುಗಳ ರೀತಿಯನ್ನು ಈ ಗ್ರಂಥದ ಮೂಲಕ ನಾವು ಚನ್ನಾಗಿ ಅರಿತುಕೊಳ್ಳಬಹುದಾಗಿದೆ. ಪಾಶ್ಚಿಮಾತ್ಯರು ಆಧುನಿಕ ಶೋಧಗಳನ್ನೊಳಕೊಂಡ ಉಪಯುಕ್ತ ವಿಷಯಗಳುಳ್ಳ ಅನೇಕ ಗ್ರಂಥಗಳನ್ನು ಪ್ರಕಟಿಸುವದುಂಟು. ಆ ಬಗೆಯ ಗ್ರಂಥವೇ ಇದೆಂದು ಹೇಳಲಿಕ್ಕೆ ಪ್ರತ್ಯ

ವಾಯವಿಲ್ಲ. ಇದರಲ್ಲಿ ನಮ್ಮ ಪ್ರಾಚೀನರ ಶೋಧಗಳಲ್ಲದೆ, ಆಧುನಿಕ ವಿಜ್ಞಾನಶಾಸ್ತ್ರದ ವಿವರಗಳೂ ಬಂದಿರುತ್ತವೆ. ಅಲ್ಲದೆ ಉಪಯುಕ್ತ ಔದ್ಯೋಗಿಕ ವಿಷಯಗಳೂ ಕೊಡಲ್ಪಟ್ಟಿವೆ. ಒಟ್ಟಿಗೆ ಮನುಷ್ಯನ ಪ್ರಪಂಚದಲ್ಲಿ ಅವಶ್ಯವಾಗಿ ಗೊತ್ತಿರಬೇಕಾದ ವಿಷಯಗಳನ್ನೆಲ್ಲ ಗ್ರಂಥಕರ್ತರು ಇದರಲ್ಲಿ ಒಟ್ಟುಗೂಡಿಸಿರುತ್ತಾರೆ. ಇದರಲ್ಲಿ ಅವರು ತೆಗೆದುಕೊಂಡು ಶ್ರಮಕ್ಕೆ ನಾವು ಅವರನ್ನು ಬಹಳ ಅಭಿನಂದಿಸುತ್ತೇವೆ. ಎಲ್ಲ ವಿಷಯಗಳು ಪಾಮರರಿಗೆ ಸಹ ತಿಳಿಯುವಂತೆ ಬಹು ಸುಲಭಶೈಲಿಯಲ್ಲಿ ಈ ಗ್ರಂಥವು ಬರೆಯಲ್ಪಟ್ಟಿದೆ. ಈ ಗ್ರಂಥವು ಗ್ರಂಥಕರ್ತರ ಬಹು ಶ್ರುತತ್ವವನ್ನೂ ಪಾಂಡಿತ್ಯವನ್ನು ಚನ್ನಾಗಿ ವ್ಯಕ್ತಗೊಳಿಸುತ್ತದೆ. ವಿವಿಧ ವಿಷಯಸಂಗ್ರಹವಾದ ಈ ಗ್ರಂಥವು ಎಲ್ಲರಿಂದಲೂ ಸಂಗ್ರಾಹ್ಯವಾಗಿರುತ್ತದೆ.



ಆದರಿಂದ ಶಾಸ್ತ್ರಿಗಳವರ ಮೊದಲನೆಯ ಪ್ರಮಾಣದ ಗಡಣವು ವೀರಶೈವರಲ್ಲಿ ಪರಸ್ಪರ ಭಿನ್ನವಾದ ನಾಲ್ಕು ವರ್ಣಗಳನ್ನು ಹೇಳುವುದಿಲ್ಲ. ಅವು ಶಿವಸಂಸ್ಕಾರ ಬಲದಿಂದ ವೀರಶೈವರು ಪೈತಾಮಹ ಧರ್ಮಾನುವರ್ತಿಗಳಿಂದ ಭಿನ್ನರು ವಿಶುದ್ಧರು ಎಂದು ಹೇಳುವಲ್ಲಿ ತಾತ್ಪರ್ಯವನ್ನುಳ್ಳವು.

ಶಾಸ್ತ್ರಿಗಳ ದ್ವಿತೀಯ ಪ್ರಮಾಣ ಕದಂಬವು ಸಿದ್ಧಾಂತ ಶಿಖಾಮಣಿಯ ಒಂಬತ್ತನೆಯ ಪರಿಚ್ಛೇದದ:-- ಪಂಚಧಾ ಕಥ್ಯತೇ ಸದ್ಭಿಸ್ತ ದೇವಭಜನಂ ಪುನಃ । ತಪಃ ಕರ್ಮ ಜಪೋಧ್ಯಾನಂ ಜ್ಞಾನಂ ಚೇತ್ಯನು ಪೂರ್ವಶಃ । ಶಿವಾರ್ಥೇ ದೇಹ ಸಂಶೋಷಸ್ತಪಃ ಕೃಚ್ಛ್ರಾದಿನೋಮತಂ। ಶಿವಾರ್ಚಾಕರ್ಮ ವಿಜ್ಞೇಯಂ ಬಾಹ್ಯಂ ಯಾಗಾದಿ ನೋಚ್ಯತೇ॥ ಜಪಂಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸಏವವಾ । ರುದ್ರಾಧ್ಯಾಯಾದಿಕಾಭ್ಯಾಸೋ ನವೇದಾಧ್ಯಯನಾದಿಕಂ ॥ ಧ್ಯಾನಂಶಿವಸ್ಯ ರೂಪಾದಿ ಚಿಂತಾನಾತ್ಮಾದಿ ಚಿಂತನಂ। ಶಿವಾಗಮಾರ್ಥ ವಿಜ್ಞಾನಂ ಜ್ಞಾನಂ ನಾನ್ಯಾರ್ಥ ವೇದನಂ। ಇತಿ ಪಂಚಪ್ರಕಾರೋಯಂ ಶಿವಯಜ್ಞಃ ಪ್ರಕೀರ್ತಿತಃ ॥೨೧-೨೪॥ ಎಂಬಿವು ಇವುಗಳಲ್ಲಿ ಶಿವಕಾರ್ಯಕ್ಕಾಗಿ ಶರೀರಶ್ರಮವನ್ನು ವಹಿಸುವುದು ತಪವು ಕೃಚ್ಛ್ರಚಾಂದ್ರಾಯಣಾದಿಯು ಅಲ್ಲ. ಶಿವಾರ್ಚನವೆ ಕರ್ಮವು ಅಲ್ಲದೆ ಹೊರಗಣ ಯಾಗಾದಿಯು ಅಲ್ಲ. ಜಪವು ಪಂಚಾಕ್ಷರ ಮಂತ್ರದ, ಅಥವಾ ಪ್ರಣವ ಮಂತ್ರದ ಅಥವಾ ರುದ್ರಾಧ್ಯಾಯದ ಆವರ್ತನವು ಅಲ್ಲದೆ ವೇದಾಧ್ಯಯನವಲ್ಲ. ಶಿವರೂಪಾದಿ ಚಿಂತನವು ಧ್ಯಾನವಲ್ಲದೆ ಆತ್ಮಾದಿ ಚಿಂತನವು ಧ್ಯಾನವಲ್ಲ. ಶಿವಾಗಮಾರ್ಥದ ಜ್ಞಾನವೇ ಜ್ಞಾನವು ಅಲ್ಲದೆ ಮತ್ತೆ ಆವುದರ ಜ್ಞಾನವು ಜ್ಞಾನವಲ್ಲ. ಇಂತಹ ತಪಃ ಕರ್ಮ ಜಪಧ್ಯಾನ ಜ್ಞಾನಗಳೆ ಶಿವನ ಐದು ಪ್ರಕಾರದ ಭಜನವಾಗಿಹವು. ಎಂದು ಶಿವಧರ್ಮವನ್ನು ಹೇಳಿಯದೆ. ಇವುಗಳಿಂದ ಶಾಸ್ತ್ರಿಗಳವರ ವಿನಿಗಮನವನ್ನು ನೋಡಿರಿ.

"ಈ ರೀತಿಯಾಗಿ ಕಾಯಕ ವಾಚಕ ಮಾನಸಿಕ ಲಕ್ಷಣವೆನಿಸುವ ಪೂಜಾ ತಪೋ ಜಪ ಧ್ಯಾನ ಜ್ಞಾನರೂಪವಾದ ಪಂಚಪ್ರಕಾರ ಯಜ್ಞವು ವೀರಶೈವರಿಗುತ್ತಮವಾದುದರಿಂದ ವೀರಶೈವರಲ್ಲಿ ವರ್ಣಾಶ್ರಮಗಳುಂಟೆಂಮ ಕೈಮುತಿಕ ನ್ಯಾಯದಿಂದ ಸಿದ್ಧವಾಗುತ್ತದೆ."

ಇಲ್ಲಿ ಕೈಮುತಿಕ ನ್ಯಾಯವು ಶಾಸ್ತ್ರಿಗಳ ಸಾಹಾಯಕ್ಕೆ ಹೇಗೆ ಬರಬಹುದು? ಆವುದೊಂದು ಕಾರ್ಯವು ದುರ್ಬಲನಿಗೆಯು ಸಾಧ್ಯವೋ ಅದು ಬಲವಂತನಿಂದ ಸುತರಾಂ ಸಾಧ್ಯವು ಎಂಬುದು ಈ ನ್ಯಾಯಕ್ಕರ್ಥವು. (ಯದ್ಭಾರವಹನಂ ದುರ್ಬಲಸ್ಯಾಪಿ ಸಾಧ್ಯಂ ತದ್ಭಾರವಹನಂ ಸುತರಾಂ ಸಬಲಸ್ಯಸಾಧ್ಯಂ-ಶಬ್ದಕಲ್ಪದ್ರುಮಃ) ವೀರಶೈವರಲ್ಲಿ ಚಾತುರ್ವರ್ಣ್ಯವನ್ನು ಸಾಧಿಸಲಿಕ್ಕೆ ಇನ್ನಾವ ದುರ್ಬಲ ಪ್ರಮಾಣಕ್ಕಿಂತಲು ಈ ತಪಃ ಕರ್ಮ ಜಪಧ್ಯಾನಜ್ಞಾನವೆಂಬ ಪಂಚಯಜ್ಞಗಳು ಶಿವಪೂಜಾರೂಪವಾಗಿ ವೀರಶೈವರಿಗಿರುವುದು ಪ್ರಬಲ ಪ್ರಮಾಣವೊ ನಮಗೆ ತಿಳಿಯದು.

ಈ ಪ್ರಮಾಣಗಳಲ್ಲಿ ಲೌಕಿಕದಲ್ಲಿ ತಪಆದಿಗಳೆಂದು ಹೆಸರುಹೊಂದಿದ ಕೃಚ್ಛ್ರಚಾಂದ್ರಾಯಣ ಯಾಗ ವೇದಾಧ್ಯಯನ ಆತ್ಮಚಿಂತನ ಶಿವಾಗಮೇತರ ಜ್ಞಾನಗಳು ನಿಜವಾದ ತಪಃ ಕರ್ಮ ಜಪಧ್ಯಾನಜ್ಞಾನಗಳಲ್ಲೆಂದು ಹೇಳಿ ಶಿವಾರ್ಥವಾಗಿ ದೇಹಶೋಷಣಾದಿಗಳು ನಿಜವಾದ ತಪ ಆದಿಗಳೆಂದು ಹೇಳಿರುವುದರಿಂದ ಇಲ್ಲಿ ತಿರಸ್ಕರಿಸಿದ ಯಾಗಾದಿಗಳನ್ನೆ ಮುಂದುಮಾಡಿ ಬ್ರಾಹ್ಮಣನು ಬೃಹಸ್ಪತಿ ಸವವನ್ನೂ ಕ್ಷತ್ರಿಯನು ರಾಜಸೂಯುವನ್ನೂ, ವೈಶ್ಯನು ಕಾರೀರಿಯನ್ನೂ ಯಾಗಮಾಡಬೇಕೆಂದು ಮುಂತಾಗಿ ಮಾಡಿದ ವರ್ಣಧರ್ಮವು ನಿರರ್ಥಕವೆಂದು ತಾತ್ಪರ್ಯವು.

ಶಿವಭಜನಾತ್ಮಕ ಪಂಚ ಯಜ್ಞದಲ್ಲಿ ಶಿವಾನುಗ್ರಹ ಪಾತ್ರವಾದ ಮಾನವ ಮಾತ್ರನು ಅಧಿಕಾರಿಯು. ಶ್ರೀಮದ್ರೇಣುಕನ ಮುಖದಿಂದ ಸಿದ್ಧಾಂತಶಿಖಾಮಣಿಕಾರನು ಆಡಿಸಿದ ಈ ಶ್ಲೋಕಗಳು ವಾಯವೀಯ ಸಂಹಿತೆಯ ಉತ್ತರಭಾಗದ ಹನ್ನೊಂದನೆಯ ಅಧ್ಯಾಯದಲ್ಲಿಂದ ಇರುವುವು. ವಾಯವೀಯವು ಸರ್ವಾಗಮದ (ಇದು ಸಿದ್ಧಂ ಸಂತಾನ ಸರ್ವೋಕ್ತಂ ಎಂಬ ಆಗಮ ಮಾಲಿಕೆಯಲ್ಲಿ ಗಣಿಸಿದ ಈ ಶಾಸನಮುಖದ ಎಂಟು ಆಗಮಗಳಲ್ಲೊಂದು ಸರ್ವೋಕ್ತವೆಂಬ ಆಗಮವು) ಆಧಾರದಿಂದಾದುದು. ಸಿದ್ಧಾಂತಶಿಖಾಮಣಿಯಲ್ಲುದಾಹರಿಸಿದ ಶ್ಲೋಕಗಳ ಮುಂದೆ "ಮದ್ಭಕ್ತಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಂ। ಸ್ವಯಮಪ್ಯರ್ಚನಂ ಚೈವಮದರ್ಥೇಚಾಂಗಚೇಷ್ಟಿತಂ ॥೬೮॥ ಮತ್ಕಥಾಶ್ರವಣೇ ಭಕ್ತಿಃಸ್ವರನೇತ್ರಾಂಗವಿಕ್ರಿಯಾಃ। ಮಮಾನುಸ್ಮರಣಂ ನಿತ್ಯಂ ಯಚ್ಚಮಾಮುಪಜೀವತಿ ॥೬೯॥ ಏವಮಷ್ಟು ವಿಧಂ ಚಿಹ್ನಂ ಯಸ್ಮಿನ್ ಮ್ಲೇಚ್ಛೇಪಿವ

ರ್ತತೇ। ಸಪಿಪ್ರೇಂದ್ರೋಮುನಿಃ ಶ್ರೀಮಾನ್ ಸಯತಿಃ ಸಚಪಂಡಿತಃ ॥೭೦॥ ನಮೇ ಪ್ರಿಯಶ್ಚತುರ್ವೇದೀ ಮದ್ಭಕ್ತಃಶ್ವಪಚೋಪಿಯಃ ॥ ತಸ್ಮೈದೇಯಂ ತತೋಗ್ರಾಹ್ಯಂ। ಸಚಪೂಜ್ಯೋಯಥಾಹ್ಯಹಂ ॥೭೧॥ ಶಿವಭಕ್ತಜನರಲ್ಲಿ ವಾತ್ಸಲ್ಯವು ಪರರು ಶಿವಪೂಜೆಯನ್ನು ಮಾಡಲಿಕ್ಕೆ ನೆರವುಗೊಡುವುದು ತಾನು ಶಿವಪೂಜೆ ಮಾಳ್ಪದು ಶಿವಕಾರ್ಯಕ್ಕಾಗಿ ದೇಹಶ್ರಮವನ್ನು ತಾಳ್ವುದು ಶಿವಕಥೆಗಳನ್ನು ಕೇಳ್ವುದರಲ್ಲಿ ಒಲುಮೆ. ಶಿವಕಥೆಗಳನ್ನು ಹೇಳುವಲ್ಲಿ ಗದ್ಗತಿಕೆ ಸ್ವರವಿಕಾರ ಶಿವನ ನೋಡುವಲ್ಲಿ ನೇತ್ರವಿಕಾರ (ಆನಂದಾಶ್ರುಗಳಿಂದ) ಗಾತ್ರಕಂಪನ ಇತ್ಯಾದಿಯಾದ ಎಂಟು ಚಿಹ್ನಗಳು ಆವನ (ಸಹಜ) ಭಕ್ತಿಯನ್ನು ತೋರಿಸುವುವೊ ಅಂತಹ ಮ್ಲೇಚ್ಛನಾದರು ಹಿರಿಯ ಬ್ರಾಹ್ಮಣನಿಗಿಂತಲೂ ಹಿರಿಯನು. ಅವನು ಮುನಿಯು ಯತಿಯು ಪಂಡಿತನು. ನನಗೆ ಚತುರ್ವೇದಿಯು ಪ್ರಿಯನಲ್ಲ. ಅವನೊಬ್ಬ ಶ್ವಪಚನಾದಡೆಯು ನನ್ನ ಭಕ್ತನಲ್ಲಿ ನನಗಕ್ಕರಿಕೆಯು ಅವನಿಗೆ ಇಕ್ಕಬೇಕು. ಅವನಿತ್ತುದನ್ನು ತಕೊಳ್ಳಬೇಕು. ನಾನು ಹೇಗೊ ಹಾಗೆ ಅವನು ಪೂಜ್ಯನು.

ಶಿವಭಕ್ತಿಮಾತ್ರದಿಂದಲೆ ಮ್ಲೇಚ್ಛನಿಷ್ಟು ಮೇಲುಮೆಯನ್ನೂ ಶ್ವಪಚನಿಷ್ಟು ಗರುವಿಕೆಯನ್ನೂ ಪಡೆದರೆ ಸಾಕ್ಷಾತ್ ಹರನ ಕೈಗೊಂಡ ಗುರುವಿನಿಂದ ಇಷ್ಟಲಿಂಗಧಾರಣವಾದವನು ಶೂದ್ರನಲ್ಲ ಅತಿವರ್ಣಿಯೆಂಬುದು ಕೈಮುತಿಕ ನ್ಯಾಯಸಿದ್ಧವಾಗಿದೆ.

ಈವರೆಗು ಶಾಸ್ತ್ರಿಗಳುದಾಹರಿಸಿದ ಶ್ಲೋಕಗಳನ್ನಷ್ಟೆ ಚರ್ಚಿಸಿ ಬರೆದುದಾಯ್ತು. ಶಾಸ್ತ್ರಿ ಮಹಾಶಯರು ಸಿದ್ಧಾಂತಶಿಖಾಮಣಿಯ ಮುಂದಿನ ಶ್ಲೋಕವನ್ನು ಬದಿಗಿಟ್ಟು ಚಾತುರ್ವರ್ಣ್ಯದ ಆಟವನ್ನು ಹೂಡಿರುವರು. ಆ ಆಟವನ್ನು ಬಯಲು ಮಾಡಲಿಕ್ಕೆ ಸಿದ್ಧಾಂತಶಿಖಾಮಣಿಯ ೨೫ ನೆಯ ಶ್ಲೋಕವು ಸಾಕು. ನನ್ನ ಯುಕ್ತಿ ಪ್ರಯುಕ್ತಿಯುಬೇಡ. ಅದನ್ನುದಾಹರಿಸಿ ಅವರ ಆ ಆಟವನ್ನು ಮಾಯೆ ಮಾಡುವ ಮೊದಲು ಅದರ ದುರ್ಬಲತ್ವವನ್ನು ತೋರಿಸಲಿಕ್ಕಾಗಿ ನಾನಿಷ್ಟು ಬರೆದೆನು.

"ಅನೇನ ಪಂಚಯಜ್ಞೇನಯಃ ಪೂಜಯತಿಶಂಕರಂ। ಭಕ್ತ್ಯಾಪರಮಯಾಯುಕ್ತಃ ಸವೈಭಕ್ತ ಇತೀರಿತಃ" ಈ ಶಿವಭಜನಾತ್ಮಕ ಪಂಚಯಜ್ಞಗಳಿಂದ ಪರಮಭಕ್ತಿಯಿಂದೊಡಗೂಡಿ ಅವನು ಶಿವನನ್ನು ಪೂಜಿಸುವನೊ ಅವನು ಭಕ್ತನು ಎಂದು ಮೂಲಗ್ರಂಥವು ಸರ್ವ ಭಕ್ತಸ್ಥಲ

ದೆವರಿಗೂ ಈ ಪಂಚಯಜ್ಞವನ್ನು ವಿಧಿಸುತ್ತಿರಲು ಶಾಸ್ತ್ರಿಗಳು ಇಲ್ಲದ ಪದಗಳನ್ನು ಅಧ್ಯಾಹಾರಮಾಡಿ, ಇದ್ದ ಶ್ಲೋಕವನ್ನು ಅಡಗಿಸಿ, ವೀರಶೈವ ಭಕ್ತರಲ್ಲಿ ದ್ವಿಜರು ಮತ್ತು ಶೂದ್ರರು ಎಂಬ ಎರಡು ವರ್ಗಗಳನ್ನು ಹೇಳುತ್ತದೆಂದು ಶಾಸ್ತ್ರವಧವನ್ನು ಮಾಡಿರುವರು.

ಸಿದ್ಧಾಂತಶಿಖಾಮಣಿಯ ಭಕ್ತಮಾರ್ಗಕ್ರಿಯಾನಿರೂಪಣ ಸ್ಥಲದ ಸ್ವಮಾರ್ಗಾಚಾರನಿರತಾಃಸ್ವಜಾತೀಯಾದ್ವಿಜಾಸ್ತುಯೇ । ತೇಷಾಂ ಗೃಹೇ ಷುಭುಂಜೀ ಭುಂಜೀತ ನೇತರೇಷಾಂಕದಾಚನ ॥೨೯॥ ಸ್ವಮಾರ್ಗಾಚಾರ ವರ್ತಿಭ್ಯಃ ಸ್ವಜಾತಿಭ್ಯಃ ಸದಾವ್ರತೀ । ದದ್ಯಾತ್ತೇಭ್ಯಃ ಸಮಾದದ್ಯಾತ್ಕನ್ಯಾಂ ಕುಲಸಮುದ್ಭವಾಂ ॥೪೯॥ ಎಂಬ ಶ್ಲೋಕಗಳೂ ೨೯ ನೆಯ ಶ್ಲೋಕಕ್ಕೆ ಶ್ರೀ ತೋಂಟದಾರ್ಯರು ತಮ್ಮ ವ್ಯಾಖ್ಯಾನದಲ್ಲುದಾಹರಿಸಿದ ಶಿವೋಕ್ತಾಂ ಜಾತಿಮರ್ಯಾದಾಂ ಯೋತೀತ್ಯಭುವಿವರ್ತತೇ । ಸಚಂಡಾಲ ಇತಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ಎಂಬ ಶ್ಲೋಕವೂ ಶಾಸ್ತ್ರಿಗಳ ಮೂರನೆಯ ಪ್ರಮಾಣ ಪುಂಜವು. ಇವುಗಳಿಗೆ ಶಾಸ್ತ್ರಿ ಮಹಾಶಯರ ಕನ್ನಡವಿದು. "ಶಿವಾದೀಕ್ಷಾಗ್ನಿಯಿಂದ ದಗ್ಧಮಲತ್ರಯರೂ, ಮಂತ್ರಶರೀರರೂ ಸ್ವಜಾತಿ ಸಂಭವರೂ ಆದ ವೀರಶೈವ ದ್ವಿಜರೆನಿಸುವ ಭಕ್ತಮಹೇಶ್ವರ ಮನೆಗಳಲ್ಲಿ ಮತ್ತು ಅಂಥವರ ಪಂಕ್ತಿಯಲ್ಲಿ ಅಂಥಹ ವೀರಶೈವನು ಭೋಜನ ಮಾಡಬೇಕಲ್ಲದೆ ತದಿತರರಲ್ಲಿ ಮಾಡಬಾರದು. ಮತ್ತು ಉಪರ್ಯುಕ್ತ ಲಕ್ಷಣಸಂಪನ್ನರಾದ ವೀರಶೈವರಲ್ಲಿಯೇ ಕುಲೀನಳಾದ ಕನ್ಯೆಯ ಕೊಡತೆಗೆದುಕೊಳ್ಳುವದನ್ನು ತದಿತರರಲ್ಲಿ ಮಾಡಬಾರದು. ಮಾಡಿದುದಾದರೆ ಶಿವೋಕ್ತಾಂಜಾತಿಮರ್ಯಾದಾಂ ಯೋತೀತ್ಯಭುವಿವರ್ತತೇ । ಸಚಂಡಾಲಇತಿ ಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ಅವರು ಸರ್ವಕರ್ಮ ಬಹಿಷ್ಕೃತರಾಗುವರೆಂದು ವ್ಯಾಖ್ಯಾನಕಾರರು ಮೇಲುದಾಹರಿಸಿದ ಶ್ಲೋಕ ವ್ಯಾಖ್ಯಾನ ದಲ್ಲಿ ಬರೆದಿರುವರು.

ಮತ್ತೆ ಅಧ್ಯಾಹಾರದ ಬಲಿ. "ಅಂತವರ" ಮತ್ತು "ಅಂತಹ" ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿಯೂ, "ಶಿವದೀಕ್ಷಾಗ್ನಿದಗ್ಧಮಲತ್ರಯರೂ" "ಮಂತ್ರಮಯಶರೀರರೂ" ಎಂಬುದು ದ್ವಿಜಾಃ ಎಂಬದರ ಅರ್ಥವಾಗಿದ್ದರೂ ದ್ವಿಜತ್ವಕ್ಕೆ ವಿಶೇಷಣವಾಗುವಂತೆ ಬಳಸಿಯೂ, ವೀರಶೈವರಲ್ಲಿ "ಮಂತ್ರಶರೀರಲ್ಲದ" 'ದಗ್ಧಮಲತ್ರಯರಲ್ಲದ' ದ್ವಿಜರಲ್ಲದ

ಭಕ್ತರಿರುವಂತೆಯೂ ದಗ್ಧಮಲತ್ರಯರೂ ಮಂತ್ರಶರೀರರೂ ವೀರಶೈವ ದ್ವಿಜರೂ ಆದ ಭಕ್ತರು, ಹಾಗಲ್ಲದ ಭಕ್ತರಲ್ಲಿ ಉಣಬಾರದು. ಕನ್ಯೆಯನ್ನು ಕೊಡಕೊಳ್ಳಬಾರದು ಎಂದು ಶಾಸ್ತ್ರವು ಸಾರುವಂತೆ ಅರ್ಥವನ್ನು ಮಾಡಿರುವರು. ಮೂಲ ಶ್ಲೋಕದಲ್ಲಿ ಇಲ್ಲದ ಪಂಕ್ತಿ ಭೋಜನವನ್ನು ತಂದು ಚಾತುರ್ವರ್ಣ್ಯವನ್ನು ಕುಲಾಂಧರ ದೃಷ್ಟಿಗೆ ಮೋಹಕವನ್ನಾಗಿ ಮಾಡಿರುವರು.

ಭಕ್ತಮಾರ್ಗಕ್ರಿಯಾನಿರೂಪಣ ಸ್ಥಳವು. ಸರ್ವ ವೀರಶೈವ ಭಕ್ತರನ್ನು ಒಂದೆಯೆಂದು ಸಾರುತ್ತದೆ. ಆ ಭಕ್ತರು ಹೇಗೆವರ್ತಿಸಬೇಕು ಅವರ ಧರ್ಮವೇನು ಎಂಬುದನ್ನು ವಿವರಿಸುತ್ತದೆ. ಅಸ್ರಾಕೃತರಾದ ಅವರು ಪ್ರಾಕೃತರೊಡನೆ ಭೋಜನ ವ್ಯವಹಾರವನ್ನೂ ಮಾಡಬಾರದೆಂದು ಹೇಳುತ್ತದೆ. ಭಕ್ತರಲ್ಲಿ ದ್ವಿಜರೆಂದೂ ಶೂದ್ರರೆಂದೂ ಭೇದವನ್ನು ಮಾಡಿಲ್ಲ. ಆ ಸ್ಥಳದ ಆದ್ಯ ಸೂತ್ರವಿದು- ಭೂತಿರುದ್ರಾಕ್ಷ ಸಂಯುಕ್ತೋ ಲಿಂಗಧಾರೀ ಸದಾಶಿವಃ । ಪಂಚಾಕ್ಷರ ಜಪೋದ್ಯೋಗೀ ಶಿವಭಕ್ತ ಇತಿಸ್ಮೃತಃ" ವಿಭೂತಿ ರುದ್ರಾಕ್ಷಗಳನ್ನು ಧರಿಸಿದವನಾಗಿ ಲಿಂಗವನ್ನು ಆವಾಗಲು ತಾಳಿ ಮಂಗಲ ಸ್ವರೂಪನಾಗಿ ಪಂಚಾಕ್ಷರ ಜಪಾಸಕ್ತನು ಶಿವಭಕ್ತನೆನಿಸುವನು. ಎಂದು ಭಕ್ತವ್ಯಾಖ್ಯೆಯನ್ನು ಮಾಡಿರುವುದು. ಹೀಗೆ ಲಕ್ಷಿಸಿದ ಭಕ್ತರಿಗೆ ತಕ್ಕ ಆಚಾರವನ್ನು ವಿಧಿಸುವಲ್ಲಿ ದ್ವಿಜರು ಮತ್ತು ದ್ವಿಜರಲ್ಲದವರು ಎಂಬ ವರ್ಗವನ್ನು ಎಲ್ಲಿಯೂ ಮಾಡಿಲ್ಲ. ಶಾಸ್ತ್ರಂತು ವೀರಶೈವಾನಾಂ ಷಡ್ವಿಧಂ ಸ್ಥಲಭೇದತಃ। ಧರ್ಮಭೇದ ಸಮಾಯೋಗಾದಧಿಕಾರಿವಿಭೇದತಃ॥ ಸಿದ್ಧಾಂತಶಿಖಾಮಣಿ ೫ ನೆಯ ಪರಿಚ್ಛೇದದ ೩೩ ನೆಯ ಶ್ಲೋಕ॥ ವೀರಶೈವರ ಶಾಸ್ತ್ರವಾದರೊ ಆರುವಿಧವಾದುದು. ಸ್ಥಲಭೇದದಿಂದ ಧರ್ಮಭೇದವು ಆಯಾಸ್ಥಲಕ್ಕೆ ಸಂಬಂಧವಾಗುವುದು. ಮತ್ತು ಆಯಾಸ್ಥಲ ಧರ್ಮಾನುಷ್ಠಾನಕ್ಕೆ ಅಧಿಕಾರಿಭೇದವುಂಟಾಗಿಹುದು. ಎಂಬ ಶ್ಲೋಕವು ವೀರಶೈವರಲ್ಲಿ ಆಯಾಸ್ಥಳಭೇದಗಳಿಂದ ಭೇದವಲ್ಲದೆ ಭಿನ್ನ ಭಿನ್ನ ವರ್ಣಗಳಿಂದ ಭೇದವಿಲ್ಲೆಂಬುದನ್ನು ಗ್ರಂಥಾರಂಭದಲ್ಲಿಯೆ ಸೂಚಿಸುತ್ತದೆ. ಈ ಸ್ಥಲಭೇದವು ಬಾಲ್ಯಯೌವನ ವೃದ್ಧಾಪ್ಯಗಳಂತೆ ತಾತ್ಕಾಲಿಕವಲ್ಲದೆ ನಿರಂತರವಾದುದಲ್ಲಿ ಎಂಬುದನ್ನು ಶಿದ್ಧಾಂತಸಿಖಾಮಣಿಯು ಆಯಾಸ್ಥಲದ ಕೊನೆಯ ಪರಿಣಾಮವು ಮುಂದಿನ ಸ್ಥಳದ ವಿಕಾಸವೆಂದು ಹೇಳಿ ತಿಳಿಸುವುದು ಉದಾ:-- ಉಕ್ತಾಖಿಲಾಚಾರ ಪರಾಯಣೋಸೌಸದಾ ವಿತನ್ವನ್

ಸಹಜಂತುದಾನಂ । ಬ್ರಹ್ಮಾದಿಸಂಪತ್ಸುವಿರಕ್ತಚಿತ್ತೋ । ಭಕ್ತೋಹಿಮಾಹೇಶ್ವರತಾಮುಪೈತಿ ॥ ಪರಿಚ್ಛೇದ ॥೯-೧೬॥ ಭಕ್ತಸ್ಥಲದಲ್ಲಿ ವಿವರಿಸಿದ ಈ ಎಲ್ಲ ಆಚಾರಗಳನ್ನು ನಡೆವುತ್ತ ಕೊಡುವನೂ ಕೊಂಬುವನೂ ಶಿವನೆ ಎಂಬ ಭಾವದಿಂದ ಶಿವಭಕ್ತರಿಗೆ ಸಹಜ ದಾನವನ್ನೀಯುತ್ತಲಿರುವ ಭಕ್ತಸ್ಥಲಾತ್ಮನು ಬ್ರಹ್ಮಾದಿ ಪದಗಳಲ್ಲಿಯು ವಿರತಿಯುಳ್ಳವನಾಗಿ ಮಾಹೇಶ್ವರಸ್ಥಲವನ್ನೈದುವನು.

ಇಂತಪ್ಪ ಗ್ರಂಥದಲ್ಲಿ ಬೆಂಣೆಯೊಳು ಬೆಂಕಿಯಂ ಪಡೆವನೆಂಬವಂತೆ ಶಾಸ್ತ್ರಿಗಳು ವೀರಶೈವ ಸಮಾಜ ವಿಘಟನಾತ್ಮಕವಾದ ವರ್ಣಭೇದವನ್ನು ಸಾಧಿಸುವಸಾಹಸವನ್ನು ಮಾಡಿರುವರು.

ಶಾಸ್ತ್ರಿಗಳುದಾಹರಿಸಿದ ಶ್ಲೋಕಗಳ ಸಹಜಾರ್ಥವೇನು? :—ಶಾಸ್ತ್ರಿಗಳು ಈ ೯ ನೇಯ ಪರಿಚ್ಛೇದದ ೨೭ ನೇ ೨೮ ನೇಯ ಶ್ಲೋಕಗಳು ತಮ್ಮ ಅಧ್ಯಾಹಾರದ ಇಂದ್ರ ಜಾಲಕ್ಕೆ ಬೇಕಾದ ಕತ್ತಲೆಯನ್ನು ವಾಚಕರ ಮನದತ್ತಣಿಂದ ಕಳೆವುವೆಂದು ಅವುಗಳನ್ನು ಅಡಗಿಸಿ ಮುಂದಿನ ೨೯ ನೆಯ ಶ್ಲೋಕವನ್ನುದಾಹರಿಸಿರುವರು. ನಾನವನ್ನುದಾಹರಿಸಿ ಸಮಗ್ರ ಸಂದರ್ಭದ ಸರಲವಾದ ಅರ್ಥವನ್ನು ವಿವರಿಸಿರುವೆನು.

ಅವತರಣಿಕೆ— ಅಥ ಶಿವಭಕ್ತಸ್ಯ ವಿಧೇಯಾ ವಿಧೇಯ ಮಾಹ ಶಿವಭಕ್ತೋ ಮಹಾತೇಜಾಃ ಶಿವಭಕ್ತಿ ಪರಾಙ್ಮುಖಾನ್ । ನಸ್ಪೃಶೇನ್ನೈವ ವೀಕ್ಷೇತ । ನತೈಃ ಸಹ ವಸೇತ್ ಕ್ವಚಿತ್ ॥೨೭॥ ಯದಾದೀಕ್ಷಾ ಪ್ರವೇಶಃಸ್ಯಾತ್ ಲಿಂಗಧಾರಣ ಪೂರ್ವಕಃ ॥ ತದಾ ಪ್ರಭೃತಿ ಭಕ್ತೋಸೌ ಪೂಜಯೇತ್ ಸ್ವಾಗಮ ಸ್ಥಿತಾನ್ ॥೨೮॥ ಸ್ವಮಾರ್ಗಾಚಾರ ನಿರತಾಃ ಸಜಾತೀಯಾ ದ್ವಿಜಾಸ್ತುಯೇ । ತೇಷಾಂ ಗ್ರಹೇಷು ಭುಂಜೀತನೇತರೇಷಾಂ ಕದಾಚನ ॥೨೯॥ ಸ್ವಮಾರ್ಗಾಚಾರ ವಿಮುಖೈರ್ಭವಿಭಿಃ ಪ್ರಾಕೃತಾತ್ಮಭಿಃ । ಪ್ರೇಷಿತಂ ಸಕಲಂ ದ್ರವ್ಯಮಾತ್ಮಲೀನಮಪಿತ್ಯಜೇತ್ ॥೩೦॥

ಒಂಬತ್ತನೆಯ ಪರಿಚ್ಛೇದದ ಆದಿಯಿಂದ ೨೪ ನೇಯ ಶ್ಲೋಕದ ತನಕ ಬ್ರಾಹ್ಮಣಾದಿ ಆವ ವರ್ಣದವನಾದರು ವೀರಶೈವಾಗಮಾನುಸಾರವಾಗಿ ಸದ್ಗುರುವಿನಿಂದ ದೀಕ್ಷೆಯನ್ನು ಹೊಂದಿ ಲಿಂಗ ಸಂಗಿಯಾದರೆ ಭಕ್ತ

ಸ್ಥಳೀಯನಾಗುವನೆಂದು ವಿವರಿಸಿ ಇನ್ನು ಮುಂದೆ ಅಂತಪ್ಪ ಭಕ್ತನು ಮಾಡಬೇಕಾದ ಧರ್ಮವನ್ನೂ ಬಿಡಬೇಕಾದ ಅಧರ್ಮವನ್ನೂ ಹೇಳುವೆನು.

ಮಹಾತೇಜಸ್ವಿಯಾದ ಶಿವಭಕ್ತನು ಶಿವಭಕ್ತಿ ಪರಾಙ್ಮುಖರನ್ನು ಮುಟ್ಟಬಾರದು ನೋಡಲೂಬಾರದು ಎಲ್ಲಿಯೂ ಅವರೊಡನೆ ವಾಸ ಮಾಡಬಾರದು. ||೨೭|| ಆವಾಗ ಲಿಂಗಧಾರಣ ಪೂರ್ವಕವಾದ ದೀಕ್ಷೆಯನ್ನು ತಾನು ಪ್ರವೇಶಿಸಿದನೊ ಆಗಳಿಂದ ಆ ಭಕ್ತನು ತನ್ನ ಆಗಮ (ವೀರಶೈವಾಗಮ) ನಿಷ್ಠರನ್ನು ಪೂಜಿಸಬೇಕು. ||೨೮|| ಸ್ವಮಾರ್ಗ (ವೀರಶೈವ) ದ ಆಚಾರದಲ್ಲಿ ನಿರತರಾದ ತನ್ನೊಡನೆ ಸಮಾನ ಜಾತೀಯರಾದ ದ್ವಿಜರು (ಪ್ರಾಕೃತ ಜನ್ಮವನ್ನು ನೀಗಿ ಗುರುವಿನ ಕರುಣೆಯಿಂದ ದೀಕ್ಷೆಯಿಂದ ಅಪ್ರಾಕೃತ ಜನ್ಮವನ್ನು ತಾಳಿದವರು) ಆರುಂಟೋ ಅವರ ಮನೆಗಳಲ್ಲಿ ಉಣಬೇಕು. ಇತರರ (ಲಿಂಗಧಾರಣ ದೀಕ್ಷಾರಹಿತರಾದ ಪ್ರಾಕೃತರ) ಮನೆಗಳಲ್ಲಿ ಎಂದಿಗೂ ಉಣಬಾರದು. ||೨೯|| ಸ್ವಮಾರ್ಗಾಚಾರ (ವೀರಶೈವಾಚಾರ) ಮಾರ್ಗದಿಂದ ವಿಮುಖರಾದ ಪ್ರಾಕೃತರಾದ ಭವಿಗಳಿಂದ ಕಳುಹಿಸಲ್ಪಟ್ಟ ದ್ರವ್ಯವು ಸ್ವಾಧೀನವಾಗಿದ್ದರು ಅದನ್ನು ಬಿಡತಕ್ಕದ್ದು. ||೩೦||

ಇಪ್ಪತ್ತೇಳರಿಂದ ಮೂವತ್ತನೆಯ ಶ್ಲೋಕದ ವರೆಗಿನ ನಾಲ್ಕು ಶ್ಲೋಕಗಳ ಸಂದರ್ಭವನ್ನು ನೋಡಿದಲ್ಲಿ ೨೯ ನೇಯ ಶ್ಲೋಕದಲ್ಲಿಯ ದ್ವಿಜ ಶಬ್ದವು, ಗುರುದೀಕ್ಷೆಯಿಂದ ಲಿಂಗಧಾರಣ ಪೂರ್ವಕವಾದ ಅಪ್ರಾಕೃತವೆಂಬ ಎರಡನೆಯ ಜನ್ಮವನ್ನು ಸೂಚಿಸುವುದಾಗಿ ಸಕಲ ಭಕ್ತರಿಗೂ ಅನ್ವಯಿಸುವುದು, ಅಲ್ಲದೆ ಭಕ್ತರಲ್ಲಿ ಒಂದು ದ್ವಿಜರೆಂಬ ವಿಶೇಷ ವರ್ಗವನ್ನು ಸೂಚಿಸುವದಿಲ್ಲೆಂಬುದು ಕೈಯೊಳಗಿನ ಕಡಲೆಯಂತೆ ಒಡೆದು ಕಾಣುವುದು. ಇಪ್ಪತ್ತೆಂಟನೆಯ ಶ್ಲೋಕದಲ್ಲಿ ದೀಕ್ಷೆಯಾದೊಡನೆಯೇ ವೀರಶಿವಾಗಮ ನಿಷ್ಠರನ್ನು ಪೂಜಿಸಬೇಕೆಂದು ಹೇಳಿರುವುದರಲ್ಲಿ. ಪೂಜಾ ಶಬ್ದವು ಅರ್ಥಗರ್ಭಿತವಾಗಿದೆ. ಭಕ್ತರ ಪೂರ್ವ ಜಾತಿಗಳನ್ನು ನೆನೆದು ಅವರನ್ನು ಹೀಯಾಳಿಸಬಾರದು ಎಂಬುದಿಷ್ಟೆಯಲ್ಲ ಅವರನ್ನು ಗೌರವಿಸಬೇಕು ಇಂತೆಂಬುದರಿಂದ ಅವರನ್ನು ತನಗಿಂತಲು ಆವ ಬಗೆಯಿಂದಲು ಹೀನರೆಂದು ಕಾಣಬಾರದು. ಅಂದರೆ ಅವರೆಲ್ಲರನ್ನು ಒಂದೆ ಜಾತಿಯೆಂದು ಬಗೆಯಬೇಕು ಎಂಬರ್ಥವು. ಆದುದರಿಂದ ೨೯ ನೇಯ ಶ್ಲೋಕದಲ್ಲಿಯ

ಸಜಾತೀಯಾ ದ್ವಿಜಾಃ ಎಂಬುದರರ್ಥವು ವೀರಶೈವ ದೀಕ್ಷೆಯಿಂದ ತನ್ನಂತೆ ಪುನರ್ಜಾತರಾಗಿ ತನ್ನ ಜಾತಿಯವರಾದ ಭಕ್ತರು ಎಂಬುದು. ಅಂತಪ್ಪ ಭಕ್ತರಲ್ಲಿ ಉಣ್ಣಬೇಕೆಂಬುದರ್ಥವು. ೨೯ ನೇಯ ಶ್ಲೋಕದಲ್ಲಿ "ಸ್ವಮಾರ್ಗಾಚಾರನಿರತಾಃ" ತನ್ನ ವೀರಶೈವಾಚಾರ ಮಾರ್ಗದಲ್ಲಿ ನಿರತರಾದ ಎಂಬುದಕ್ಕೆ "ದ್ವಿಜಾಃ" ಮತ್ತೊಮ್ಮೆ ಹುಟ್ಟಿದವರು ಎಂಬ ಪದವನ್ನು ಅದೇ ಪ್ರಥಮಾವಿಭಕ್ತಿಯಲ್ಲಿಟ್ಟಂತೆ ೩೦ನೆಯ ಶ್ಲೋಕದಲ್ಲಿ "ಸ್ವಮಾರ್ಗಾಚಾರನಿರತಾಃ" ಎಂಬುದಕ್ಕೆ ವಿರುದ್ಧವಾದ "ಸ್ವಮಾರ್ಗಾಚಾರವಿಮುಖೈಃ" ಎಂಬುದಕ್ಕೆ ಭವಿಭಿಃ ಪ್ರಾಕೃತಾತ್ಮಭಿ" ಎಂಬುದನ್ನು ಅವೇ ತೃತೀಯಾವಿಭಕ್ತಿಯಲ್ಲಿಟ್ಟಿರುವುದರಿಂದ ಸ್ವಮಾರ್ಗಾಚಾರನಿರತರೆಂಬುದಕ್ಕೆ ಸ್ವಮಾರ್ಗವಿಮುಖರೆಂಬುದು ವಿರೋಧಿಯಾದಂತೆ ದ್ವಿಜರೆಂಬುದಕ್ಕೆ ಭವಿಗಳು ಪ್ರಾಕೃತಾತ್ಮರು ಎಂಬುದು ವಿರೋಧಿಯು. ಆದುದರಿಂದ ದ್ವಿಜಾಃ ಎಂಬ ಶಬ್ದದ ಅರ್ಥವು ವೀರಶೈವದೀಕ್ಷೆಯನ್ನು ಹೊಂದಿ ಅಪ್ರಾಕೃತರಾದ ಎಂಬುದಲ್ಲದೆ ಭಕ್ತರಲ್ಲಿ ದ್ವಿಜರೆಂಬ ಉಚ್ಚವರ್ಗದವರೆಂಬುವಲ್ಲ.

ಸಿದ್ಧಾಂತಶಿಖಾಮಣಿಕಾರನು ವೀರಶೈವರಿಗೆ ದ್ವಿಜಶಬ್ದವನ್ನು ಪ್ರಯೋಗಿಸಿರುವನಲ್ಲದೆ ಬ್ರಾಹ್ಮಣಾದಿ ಶಬ್ದವನ್ನು ಮರೆದೊಮ್ಮೆಯಾದರು ಪ್ರಯೋಗಿಸಿಲ್ಲ.

ಸಂಸಾರಹ್ಯೇಯಸ್ಥಳದ ೫ ನೆಯ ಶ್ಲೋಕದಲ್ಲಿ ಭೂತ್ವಾಕರ್ಮವಶಾಜ್ಜಂತುರ್ಬ್ರಾಹ್ಮಣಾದಿಷು ಜಾತಿಷು । ತಾಪತ್ರಯ ಮಹಾವಹ್ನಿ ಸಂತಾಪಾದ್ದಹ್ಯತೇ ಭೃಶಂ ॥ ಎಂದು ಬ್ರಾಹ್ಮಣಾದಿ ಜಾತಿಗಳು ತಾಪತ್ರಯ ವಹ್ನಿಗೆ ಕಾರಣವೆಂದೂ ಹ್ಯೇಯವೆಂದೂ ಹೇಳಿರುವನು. ಹೀಗೆ ಹ್ಯೇಯವೆಂದು ಹೇಳಿದ ಬ್ರಾಹ್ಮಣಾದಿ ವರ್ಣಗಳಿಗೆ ಅಪ್ರಾಕೃತವೆಂಬ ವಿಶೇಷಣವನ್ನು ಹಚ್ಚಿ ಅವು ವೀರಶೈವರಿಂದ ಆದರಣೀಯವೆಂದು ತೋರಿಸಲು ಯತ್ನಿಸುವುದು ಬರಿಯ ಸಾಹಸವು.

೪೯ ನೆಯ ಶ್ಲೋಕವು ಇದೇ ಪ್ರಕರಣದಲ್ಲಿಯದು. ಇದರ ಕನ್ನಡವು. ತನ್ನ ಆಚಾರ (ವೀರಶೈವಾಚಾರ) ದಲ್ಲಿರುವ ತನ್ನ ಜಾತಿಯವರಿಗೆ ವ್ರತಿಯು (ವೀರಶೈವ ವ್ರತಿಯು) ಯಾವಾಗಲು ಕುಲದಲ್ಲಿ ಹುಟ್ಟಿದ ಕನ್ಯೆಯನ್ನು ಕೊಡಬೇಕು ಅವರಿಂದಲೆ ತಕ್ಕೊಳ್ಳಬೇಕು. ಹಿಂದೆ ಹೇಳಿದ ರೀತಿಯಿಂದ ಇಲ್ಲಿ ಸ್ವಜಾತಿಯೆಂಬುದು ವೀರಶೈವ ಭಕ್ತರೆಂಬುದು ಹೊರತು ಭಕ್ತರಲ್ಲಿ

ಅವಾಂತರ ಭೇದವೆಂಬರ್ಥವಲ್ಲ. ವ್ಯಾಖ್ಯಾನಕಾರನುದಾಹರಿಸಿದ ಶ್ಲೋಕವು ಶಿವನಿಂದುಪದಿಷ್ಟವಾದ ವೀರಶೈವ ಜಾತಿಮಾರ್ಗವನ್ನು ಅತಿಕ್ರಮಿಸಿ ಪೂರ್ವದ ತನ್ನ ಜಾತಿಯವರೊಡನೆ ಬೀಗತನವನ್ನು ಮಾಳ್ಪನು ಪತಿತನಾಗುವನೆಂಬರ್ಥವನುಳಿದುದು.

ಹೀಗೆ ಒಂಬತ್ತನೆಯ ಪರಿಚ್ಛೇದದಲ್ಲಿ ವೀರಶೈವರಲ್ಲಿ ಜಾತಿಭೇದಗಳಿಲ್ಲೆಂದು ಸ್ಥಾಪಿಸಿ ಆ ವೀರಶೈವ ದೃಢತ್ವಕ್ಕಾಗಿ ಪೂರ್ವಾಶ್ರಯನಿರಸನವೆಂಬ ಹತ್ತನೆಯ ಪರಿಚ್ಛೇದವನ್ನು ಹೇಳಿರುವನು. ಅದರಲ್ಲಿಯ ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧ್ಯಾಮಾನುಷಾಃ ಸ್ಮೃತಾನಿ ಶಿವಸಂಸ್ಕಾರಿಣಃಶುದ್ಧಾ ಇತರೇ ಪ್ರಾಕೃತಾ ಮತಾಃ" ಎಂಬುದರಿಂದ ಶಾಸ್ತ್ರಿಗಳ ಸಿದ್ಧಾಂತವು ಹೊರಡಲಾರದೆಂದು ಮತ್ತೊಮ್ಮೆ ಹೇಳುತ್ತೇನೆ.

---

## ಏಕೋರಾಮಾರಾಧ್ಯರ ಪುರಾಣ

(ಲೇಖಕ— ರಾ॥ ಸಾ॥ ಪಿ. ಜಿ. ಹಳಕಟ್ಟಿ ಬಿ. ಎ ಎಲ್. ಎಲ್ ಬಿ ವಿಜಾಪುರ)

---

ವೀರಶೈವರಿಗೆ ಸಂಬಂಧಪಟ್ಟ ವಾಙ್ಮಯಾತ್ಮಕ, ಐತಿಹಾಸಿಕ, ಧಾರ್ಮಿಕ ಮೊದಲಾದ ಎಲ್ಲ ವಿಷಯಗಳೂ ಬಹುತರವಾಗಿ ಇನ್ನೂ ಅಜ್ಞಾತಾವಸ್ಥೆಯಲ್ಲಿ ಉಳಿದಿರುತ್ತವೆ. ವೀರಶೈವರಿಗೂ ಶೈವರಿಗೂ ಸಂಬಂಧವಾವುದು, ವೀರಶೈವ ಧರ್ಮದ ಬೆಳವಣಿಗೆಯು ಯಾವ ಪ್ರಕಾರ ಆಯಿತು, ಅವರ ಸಮಾಜವು ಯಾವ ಕಾಲಕ್ಕೆ ಹ್ಯಾಗೆ ಹ್ಯಾಗೆ ವಿಸ್ತಾರ ಹೊಂದುತ್ತ ನಡೆಯಿತು, ಇದಕ್ಕೆ ಯಾವ ಯಾವ ಮಹಾಪುರುಷರು ಯಾವ ಯಾವ ಕಾಲಕ್ಕೆ ಹ್ಯಾಗೆ ಹ್ಯಾಗೆ ಕಾರಣರಾದರು, ಇವರ ಪ್ರಯತ್ನಗಳು ದೇಶದ ಮೇಲೆ ಯಾವ ಯಾವ ಪರಿಣಾಮಗಳನ್ನುಂಟುಮಾಡಿದವು ಇವೇ ಮೊದಲಾದ ಮಹತ್ವದ ವಿಷಯಗಳು ಇನ್ನೂ ಸಂಶೋಧನಾವಸ್ಥೆಯಲ್ಲಿಯೇ ಇರುತ್ತವೆ. ಈ ಶೋಧಗಳು ಬರೇ ವೀರಶೈವರಿಗಷ್ಟೇ ಅಲ್ಲ ಕರ್ನಾಟಕಸ್ತರಿಗೂ ಕೂಡ ಬಹು ಬೋಧಪ್ರದವಾಗಿರುವ

ದಲ್ಲದೆ ಇದರಿಂದ ಕರ್ನಾಟಕದ ಸಂಸ್ಕೃತಿಯ ಬೆಳವಣಿಗೆಯ ಇತಿಹಾಸದ ಮೇಲೆ ಬಹು ಮಹತ್ವದ ಪ್ರಕಾಶವು ಬೀಳುವಂತೆ ಇವೆ.

ಇತ್ತೀಚೆಗೆ ವೀರಶೈವರಲ್ಲಿ ಕೆಲವರು ಬಸವೇಶ್ವರಾದಿ ಶಿವಶರಣರೇ ವೀರಶೈವ ಸಮಾಜದ ವಿಕಾಸಕ್ಕೆ ಕಾರಣರಾದರು, ಬೇರೆ ಕೆಲವರು ಇದು ಹೀಗಿರದೆ ಪಂಚಾಚಾರ್ಯ ಪೀಠಾಧಿಪತಿಗಳೇ ಇದಕ್ಕೆ ಕಾರಣರಾದರು ಎಂದು ವೊದಲಾಗಿ ಮತಭೇದಪಡುವದನ್ನು ನೋಡುತ್ತೇವೆ. ಆದರೆ ಸಮಾಜದ ವಿಕಾಸವು ಇಂಥ ಒಬ್ಬ ವ್ಯಕ್ತಿಯಿಂದಲೇ ಆಯಿತೆಂದು ಬಗೆದದು ಸಮಾಜಶಾಸ್ತ್ರಕ್ಕೆ ಸಮ್ಮತವಾದುದಲ್ಲ. ಸಮಾಜದ ಸ್ಥಿತಿಯು ಯಾಗಲೂ ಬೆಳವಣಿಗೆಯ ರೂಪದಲ್ಲಿ ಪರಿಸ್ಥಿತಿಗೆ ಅನುಸರಿಸಿ ಉಂಟಾಗಿ ಹೋಗುತ್ತದೆ. ಅಂದರೆ ಅದರ ಒಂದು ಕಾಲದ ವ್ಯಕ್ತಸ್ವರೂಪ ಅಥವಾ ಪರಿಸ್ಫುಟವು ಒಬ್ಬಾನೊಬ್ಬ ವ್ಯಕ್ತಿಯ ಮೇಲೆ ಮಾತ್ರ ಅ... ಸಿರದೆ ಆ ವ್ಯಕ್ತಿಯು ತಾನಿದ್ದ ಕಾಲದ ಬಹುಜನ ಸಮಾಜದ ... ಆಶಯ ಮತ್ತು ಆಕಾಂಕ್ಷೆಗಳಿಗನುಸರಿಸಿ ಸಮಾಜವನ್ನು ... ಲು ನೈತಿಕ ಮತ್ತು ಬೌದ್ಧಿಕ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಇ... ಮಹಾತ್ಮನೆನಿಸಿಕೊಳ್ಳುತ್ತಾನೆ. ಇಂಥವರು ಕಾಲಕಾಲಕ್ಕೆ ದೇಶದಲ್ಲಿ ... ನ್ನರಾಗುವದು ಸಮಾಜದ ಜೀವಂತತನದ ಲಕ್ಷಣ... ಈ ಬಗೆ... ವೀರಶೈವ ಸಮಾಜದಲ್ಲಿ ಬರೇ ಬಸವೇಶ್ವರ ಅಥವಾ ಪಂಚಾಚಾರ್ಯ... ಇಷ್ಟೇ ಅಲ್ಲ, ಅನೇಕರು ಉತ್ಪನ್ನರಾಗಿದ್ದು ಕಂಡುಬರುತ್ತದೆ. ಇದರ... ಅವರಲ್ಲಿ ನೂತನ ಶರಣರೂ, ಪುರಾತನ ಶರಣರೂ, ಹೀಗೆ ಭೇ... ಳನ್ನು ಮಾಡಿದ್ದು ವೀರಶೈವ ಗ್ರಂಥಗಳಲ್ಲಿಯೂ ಕಂಡುಬರುತ್ತದೆ.

ಆದರೆ ಈ ಮಹಾನುಭಾವರ ಹೆಸರುಗಳೂ, ಚರಿತ್ರೆಗಳೂ ಗ್ರಂಥಗಳಲ್ಲಿ ಅನೇಕ ಕಡೆಗೆ ಬಂದಿದ್ದರೂ ಅವರಿದ್ದ ನಿಶ್ಚಿತ ಕಾಲವು ... ದ್ದರಿಂದ ವೀರಶೈವ ಸಮಾಜದ ಬೇರೆ ಬೇರೆ ಕಾಲದ ವಿಕಾಸ... ಹಾಸವನ್ನು ಕಂಡು ಹಿಡಿಯುವದು ದುಸ್ತರವಾಗಿರುತ್ತದೆ. ಆದರೂ ಈ ವಿಷಯವಾಗಿ ದೊರೆಯಬಹುದಾದ ಸಾಧನಗಳನ್ನು ಶಕ್ಯವಿದ್ದಷ್ಟರ ಮಟ್ಟಿಗೆ ಕೂಡಿಸಿ ಅವುಗಳ ಮೇಲಿಂದ ಒಂದು ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸವನ್ನು ರಚಿಸುವದು ಈ ಕಾಲಕ್ಕೆ ಅತ್ಯಂತ ಮಹತ್ವದ್ದಿರುತ್ತದೆ.

ಹೀಗೆ ಇವರ ಕಾಲವನ್ನು ಗೊತ್ತುಪಡಿಸುವದಲ್ಲದೆ ಅವರ ಚರಿತ್ರೆಗಳ ನಿಜಾಂಶಗಳನ್ನೂ ಕಂಡುಹಿಡಿಯುವದು ಅವಶ್ಯವಿರುತ್ತದೆ. ಆದರೆ ಈ ಚರಿತ್ರೆಗಳಲ್ಲಿ ಇವರ ಅನುಯಾಯಿಗಳ ಅಂಧ ಶ್ರದ್ಧೆಯ ಮೂಲಕ ನಾನಾ ಬಗೆಯ ಅಮಾನುಷ ಮಹತ್ಕೃತ್ಯಗಳ ವರ್ಣನೆಗಳು ತುಂಬಿಹೋಗಿರುವದರಿಂದ, ಅವುಗಳಲ್ಲಿಯ ಸತ್ಯಾಂಶಗಳನ್ನು ಕಂಡು ಹಿಡಿಯುವದು ಕಷ್ಟವಾಗುತ್ತದೆ. ಬಸವೇಶ್ವರನ ಚರಿತ್ರೆಗಳಲ್ಲಿ ಈ ಬಗೆಯ ಸಂಗತಿಗಳು ಬೆರೆತು ಹೋಗಿರುವದರಿಂದ ಅವನ ಮಹತ್ವವು ಜನರಿಗೆ ತಿಳಿಯದಂತೆ ಆಗಿರುತ್ತದೆ. ಆದರೆ ಇತ್ತೀಚೆಗೆ ವಚನ ಗ್ರಂಥಗಳ ಮತ್ತು ಶಿಲಾಲಿಪಿಗಳ ಶೋಧ, ಪೂರ್ವದ ವಾಙ್ಮಯದ ಪ್ರಸಿದ್ಧಿ ಇವುಗಳ ಮೂಲಕ ಅವನ ಚರಿತ್ರೆಯ ಮೇಲೆ ಪ್ರಕಾಶವು ಬೀಳತೊಡಗಿದೆ. ಇದೇ ಪ್ರಕಾರ ಪಂಚಾಚಾರ್ಯರ ವಿಷಯವೂ ಇದೆ. ಅವರಲ್ಲಿ ರೇವಣಸಿದ್ಧೇಶ್ವರ ಬಗ್ಗೆ ಶಿವಾನುಭವದಲ್ಲಿ ಬಂದ ಅನೇಕ ಐತಿಹಾಸಿಕ ವಿಷಯುಗಳು ನಾವು ಹೇಳುವ ಭಾವವನ್ನು ವ್ಯಕ್ತಪಡಿಸುತ್ತವೆ. ಆದರೂ ಈ ಎಲ್ಲ ಮಹಾನುಭಾವರ ಚರಿತ್ರೆಗಳಲ್ಲಿ ಇರುವ ನಿಜಾಂಶಗಳನ್ನು ಮತ್ತು ಅವರ ಬಗ್ಗೆ ಅಲ್ಲಲ್ಲಿ ಕಂಡುಬರುವ ಉಲ್ಲೇಖಗಳನ್ನು ಇದ್ದಕ್ಕಿದ್ದ ಹಾಗೆಯೇ ನಾವು ಪ್ರಸಿದ್ಧಿಸುತ್ತ ಹೋದರೆ ಮುಂದೆ ಅವರ ನಿಜೇತಿಹಾಸಗಳು ಹೊರಬೀಳಲು ಕಾರಣವಾಗುತ್ತದೆ. ಈಗಿನ ಸ್ಥಿತಿಯಲ್ಲಿ ಈ ಮಾರ್ಗವನ್ನೇ ಅನುಸರಿಸುವದೇ ಯುಕ್ತವಾಗಿದೆಂದು ನಮಗೆ ತೋರುತ್ತದೆ.

ಈ ಕಾಲಕ್ಕೆ ಅನೇಕರು ಪಂಚಾಚಾರ್ಯ ಬಸವೇಶ್ವರ ಮೊದಲಾದವರು ಅನಾದಿಯಿಂದಲೂ ನಾನಾ ಯುಗಗಳಲ್ಲಿ ಇಂಥಿಂಥ ಸ್ವರೂಪನ್ನು ತಾಳಿ ಇಂಥಿಂಥ ಅದ್ಭುತ ಕೃತ್ಯಗಳನ್ನು ಮಾಡಿ ಮತಸ್ಥಾಪನೆ ಮಾಡಿದರೆಂದು ಹೀಗೆ ನಾನಾಬಗೆಯ ಸಂಗತಿಗಳನ್ನು ಅಕ್ಷರಶಃ ನಂಬಿ ಅವುಗಳನ್ನೇ ಸಮರ್ಥಿಸುವದನ್ನು ನೋಡುತ್ತೇವೆ. ಆದರೆ ಅವರ ಚರಿತ್ರೆಗಳಲ್ಲಿಯ ಇಂಥ ಅಂಶಗಳನ್ನು ಸ್ವತಂತ್ರ ಪುರಾವೆಯಿಂದ ದೃಢಪಡಿಸುವ ವರೆಗೆ ಅವೆಲ್ಲವುಗಳು ಐತಿಹಾಸಿಕ ದೃಷ್ಟ್ಯಾ ವಿಶ್ವಾಸಾರ್ಹವೆಂದು ತಿಳಿಯಲಿಕ್ಕೆ ಬರಲಾರದು. ಇಂಥವುಗಳು ಸಮಾಜದಲ್ಲಿಯ ಭಾವಿಕ ಜನರಿಗೆ ಮಾತ್ರ ಸಮ್ಮತವಾಗಬಹುದೇ ಹೊರತು ಇತಿಹಾಸ ಸಂಶೋಧಕರಿಗೆ ಸಮ್ಮತವಾಗಲಾರವು. ಇದನ್ನು ತಿಳಿದುಕೊಂಡು ಬಸವಾದಿ ಶಿವಶರಣರ ಮತ್ತು ಪಂಚಾಚಾರ್ಯರ ಮತ್ತು ಅವರ ವಂಶಜರ ಚರಿತ್ರೆಗಳನ್ನು ಈ ಕಾಲಕ್ಕೆ

ಐತಿಹಾಸಿಕದೃಷ್ಟ್ಯಾ ಶೋಧಿಸುವದು ಬಹಳ ಅವಶ್ಯವಿದೆ. ಹೀಗಾದಾಗಳೇ ವೀರಶೈವರ ಮಹತ್ವದ ಇತಿಹಾಸವು ಹೊರಬಿದ್ದೀತೇ ಹೊರ್ತು ಕೇವಲ ಪೌರಾಣಿಕ ಕಥೆಗಳ ನಿರೂಪಣೆಯಿಂದ ಎಂದೂ ಹೊರಬೀಳಲಾರದು.

ಮೇಲ್ಕಂಡ ಮಹಾನುಭಾವರ ಚರಿತ್ರಶೋಧನೆಯ ಕಾರ್ಯದಲ್ಲಿ ನಮ್ಮ ವೀರಶೈವ ಗ್ರಂಥಕಾರರೇ ಅವರ ಬಗ್ಗೆ ಯಾವ ಬಗೆಯಾಗಿ ತಮ್ಮ ಗ್ರಂಥಗಳಲ್ಲಿ ವರ್ಣಿಸಿರುವರೆಂಬದನ್ನು ಮೊದಲು ಗೊತ್ತುಪಡಿಸುವದು ಅವಶ್ಯವು. ಯಾಕಂದರೆ ಈ ವರ್ಣನೆಗಳು ಒಂದೇ ಆಗಿರದೆ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ವಿಧವಾಗಿ ಇರುವದನ್ನು ನೋಡುತ್ತೇವೆ. ಇವೆಲ್ಲವುಗಳನ್ನೂ ನಾವು ಗೊತ್ತುಪಡಿಸಿಕೊಳ್ಳಬೇಕು. ಇದಕ್ಕೋಸ್ಕರ ನಾವು ಅವರ ಕೈಬರಹದ ಗ್ರಂಥಗಳನ್ನೆಲ್ಲ ಶೋಧಿಸಬೇಕು. ಮತ್ತು ಅವುಗಳಲ್ಲಿಯ ಸಾರವನ್ನು ಇದ್ದಕ್ಕಿದ್ದ ಹಾಗೆ ಪ್ರಸಿದ್ಧಿಸಬೇಕು. ಮತ್ತು ಅವುಗಲ್ಲಿರುವ ವ್ಯತ್ಯಾಸಗಳನ್ನು ಕಂಡು ಹಿಡಿದು, ಅವುಗಳಲ್ಲಿ ಹೆಚ್ಚಿಗೆ ಯಾವ ಸಂಗತಿಗಳು ವಿಶ್ವಸನೀಯವೆಂಬುದನ್ನು ಗೊತ್ತುಪಡಿಸಲು ಯತ್ನಿಸಬೇಕು. ಹಾಗೆಯೇ ಶಿಲಾಶಾಸನಗಳನ್ನೂ ಗೊತ್ತುಹಚ್ಚಬೇಕು. ಅವರ ಸ್ಥಾನಗಳನ್ನೂ ಸಂದರ್ಶಿಸಿ ಅಲ್ಲಿಯ ವಿಶೇಷತೆಗಳನ್ನು ಕಂಡುಹಿಡಿಯಬೇಕು. ಈ ಪ್ರಕಾರ ಮಾಡಿದ್ದಾದರೆ ಆ ಮಹನೀಯರ ಚರಿತ್ರೆಗಳ ಮೇಲೆ ಐತಿಹಾಸಿಕ ಪ್ರಕಾಶವು ಬೀಳತೊಡಗುವದು. ನಾವು ಈ ರೀತಿಯನ್ನು ಶಿವಾನುಭವದಲ್ಲಿ ಬಸವೇಶ್ವರ ರೇವಣಸಿದ್ಧ ಮೊದಲಾದ ಮಹಾತ್ಮರ ಚರಿತ್ರೆಗಳ ಬಗ್ಗೆ ಮೊದಲಿನಿಂದಲೂ ಅನುಸರಿಸುತ್ತ ಬಂದಿದ್ದು ವಾಚಕರಿಗೆ ಗೊತ್ತೇ ಇದೆ. ಇದಕ್ಕೋಸ್ಕರ ನಾವು ಕೆಲವರ ರೋಷಕ್ಕೆ ಮತ್ತು ತಪ್ಪು ತಿಳುವಳಿಕೆಗೆ ಪಾತ್ರರಾಗಿದ್ದೇವೆ. ಆದರೆ ವಿಚಕ್ಷಣರಾದ ಮತ್ತು ನ್ಯಾಯ ಬುದ್ಧಿ ಪ್ರೇರಿತರಾದ ಓದುಗರು ನಮ್ಮ ನಿಜವಾದ ಭಾವವನ್ನು ಮತ್ತು ಅಪೇಕ್ಷೆಯನ್ನು ತಿಳಿಯದೆ ಇರಲಾರರೆಂದು ಭಾವಿಸಿದ್ದೇವೆ.

ನಾವು ಪ್ರಸ್ತುತ ಲೇಖದಲ್ಲಿ ಪಂಚಾಚಾರ್ಯರಲ್ಲೊಬ್ಬರಾದ ಏಕೋರಾಮಾರಾಧ್ಯರ ಹೆಸರಿನಿಂದ ಉಪಲಬ್ಧವಿರುವ "ಏಕೋರಾಮಾರಾಧ್ಯ ಪುರಾಣ" ಎಂಬ ಗ್ರಂಥದಲ್ಲಿಯ ಅಂಶಗಳನ್ನು ನಾವು ಎತ್ತಿ ಬರೆಯಲೆಣಿಸಿದ್ದೇವೆ. ಇದರಲ್ಲಿ ನಾವು ತೋರಿಸಿಕೊಡುವ ಅನೇಕ ವಿಷಯಗಳು ಅನೇಕರ ಮನಸ್ಸಿಗೆ ಬರಲಿಕ್ಕಿಲ್ಲ. ಆದರೆ ಕಂಡು ಬಂದ ಸಂಗತಿಗಳನ್ನು ನಾವು ಇದ್ದಕ್ಕಿದ್ದ ಹಾಗೆ ವಾಚಕರ ಎದುರಿಗೆ ಇಡುವದು

ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ನಾವು ಮೇಲ್ಕಂಡ ಉಪೋದ್ಘಾತವನ್ನು ಸ್ವಲ್ಪ ವಿವರಿಸಿ ಬರೆದೆವು. ಇದಕ್ಕೋಸ್ಕರ ವಾಚಕರು ನಮ್ಮನ್ನು ಕ್ಷಮಿಸುವರೆಂದು ನಂಬಿದ್ದೇವೆ.

ಏಕೋರಾಮಾರಾಧ್ಯರ ಪುರಾಣದ ತಾಡವಾಲೆಯ ಗ್ರಂಥವು ನಮ್ಮ ಹತ್ತಿರವಿದೆ. ಅದರಲ್ಲಿ ಉಲ್ಲೇಖವಾದ ಸಂಗತಿಗಳನ್ನೇ ನಾವು ಇಲ್ಲಿ ವಿವರಿಸುತ್ತೇವೆ.

ಈ ಗ್ರಂಥವು ಷಟ್ಪದೀ ರೂಪವಾಗಿದ್ದು ಇದರಲ್ಲಿ ೧೬ ಸಂಧಿಗಳು ಇವೆ. ಕವಿಯ ಕವಿತಾಶಕ್ತಿಯು ಮಿಗಿಲಾದದ್ದು. ಅವನ ವರ್ಣನೆಗಳು ಸಂಪೂರ್ಣ ಭಾವನಾಮಯವಾಗಿವೆ. ಭಾಷಾಶೈಲಿಯು ಲಲಿತವೂ, ಮನೋಹರವೂ, ಆಗಿದೆ. ಅನೇಕ ಕಡೆಗೆ ವೀರಶೈವ ಧರ್ಮ ನಿರೂಪಣೆಗಳು ಬಹು ವಿಸ್ತಾರವಾಗಿ ಬಂದಿರುತ್ತವೆ. ಇವುಗಳು ಗ್ರಂಥಕರ್ತನ ಧರ್ಮತತ್ವಗಳ ವಿಶೇಷ ಜ್ಞಾನವನ್ನು ಪ್ರಕಟಿಸುತ್ತವೆ. ಆದರೆ ನಾವು ಈ ಲೇಖದಲ್ಲಿ ವಿಸ್ತಾರಭಯಕ್ಕೋಸ್ಕರ ಈ ಧರ್ಮ ವಿಚಾರಗಳನ್ನು ಬರೆಯುವದಿಲ್ಲ. ಅಥವಾ ಏಕೋರಾಮಾರಾಧ್ಯನು ಮಾಡಿದ ಅದ್ಭುತ ಕೃತ್ಯಗಳನ್ನೂ ಬರೆಯುವದಿಲ್ಲ. ಆದರೆ ಅವನ ಈ ಪುರಾಣದಲ್ಲಿಯ ಮುಖ್ಯ ಚರಿತ್ರಾಂಶಗಳನ್ನು ಮಾತ್ರ ಇಲ್ಲಿ ವಾಚಕರೆದುರಿಗೆ ಇಡುತ್ತೇವೆ.

ಗ್ರಂಥಕಾರನ ಹೆಸರು ಹರದನಹಳ್ಳಿಯ ನಂಜಣಾಚಾರ್ಯನು. ಈತನು ಈ ಗ್ರಂಥದಲ್ಲಿ ತನ್ನ ಪೂರ್ವಜರ ಹೆಸರುಗಳನ್ನು ಬರೆದುಕೊಂಡಿದ್ದಾನೆ. ಅವು ಯಾವವೆಂದರೆ:— ಮೊದಲಿಗೆ ರಾಮಾಚಾರ್ಯ, ಅವನ ಮಗ ದೇವಲ, ತರುವಾಯ ಶ್ರೀ ರುದ್ರ, ಆ ಮೇಲೆ ಕ್ರಮವಾಗಿ ಮಂತ್ರರಾಜ, ಶ್ರೀಕಂಠ, ವಾಮದೇವಾರ್ಯ, ವಿಶ್ವನಾಥಾರ್ಯ, ಹರಿಹರಾಚಾರ್ಯ, ಚೌಂಡದೇವ, ವೀರಣಾಚಾರ್ಯ ಎಂದು ಇದ್ದು ಈ ವೀರಣಾಚಾರ್ಯನ ಮಗನೇ ಗ್ರಂಥಕರ್ತನು.

ಈ ಗ್ರಂಥದ ಮೊದಲನೇ ಸಂಧಿಯಲ್ಲಿ ಅನೇಕ ಶೈವದೈವಗಳ ಮತ್ತು ಕವಿಗಳ ಸ್ತುತಿಗಳಿವೆ. ಹೀಗೆ ಸ್ತುತಿಸಲ್ಪಟ್ಟವರು ಏಕೋರಾಮಮುದ್ಗುರು ಸ್ವಾಮಿ ಮುದ್ರಾಪುರೇಶನಾದ ಸಿದ್ಧರಾಮೇಶ ಗುರು, ಭೃಂಗಿ, ಸರ್ವಮಂಗಳೆ, ವೃಷಭೇಂದ್ರ, ವೀರಭದ್ರ, ವಿಘ್ನರಾಜ, ಷಣ್ಮುಖ, ಗುಪ್ತೇಶಯ್ಯ, ಮಯೂರ, ಮುಲುಹಣ, ಕಾಳಿದಾಸ, ರಾಘವಾಂಕ, ಪುಷ್ಪ

ದತ್ತ, ಮಲಯರಾಜ, ಕೇಶಿರಾಜ ಮೊದಲಾದವರ ಸ್ತುತಿಗಳಿವೆ. ಅಲ್ಲದೆ ನೂತನ ಮತ್ತು ಪುರಾತನ ಶಿವೈಕ್ಯರನ್ನೂ ಶಿವಗಣಂಗಳನ್ನೂ ಹೊಗಳಿದ್ದಾನೆ.

ಎರಡನೇ ಸಂಧಿಯಲ್ಲಿ ಕೈಲಾಸ ವರ್ಣನೆ ಇದ್ದು ಅಲ್ಲಿ ಶಿವನು ತನ್ನ ಆಸ್ಥಾನದಲ್ಲಿ ಇದ್ದಾಗ ನಾರದನು ಬಂದು ಕರ್ನಾಟಕದಲ್ಲಿ ಶಿವಭಕ್ತಿಯು ಮಸುಳಿ ಹೋಗಿದೆ, ಅದರ ಸ್ಥಲದಲ್ಲಿ ಜೈನ, ಬೌದ್ಧ ಧರ್ಮಗಳು ಪ್ರಬಲವಾಗಿವೆ, ಆದ್ದರಿಂದ ಶಿವ ಮತವನ್ನುದ್ಧರಿಸಬೇಕೆಂದು ಸೂಚಿಸಿದನು. ಆಗ ಶಿವನು ಘಂಟಾಕರ್ಣ ಗಣೇಶ್ವರನನ್ನು ನೋಡಿ ನೀನು ಏಕೋರಾಮನೆಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸಿ ಶಿವಧರ್ಮವನ್ನುದ್ಧರಿಸೆಂದು ಆಜ್ಞಾಪಿಸಿದನು.

ಮೂರನೇ ಸಂಧಿಯಲ್ಲಿ ಮುದ್ರಾಪುರದ ರಾಮೇಶಲಿಂಗನ ಸ್ತುತಿಪರ ಪದ್ಯಗಳು ಇವೆ. ಆ ಮೇಲೆ ಸಮುದ್ರದ ವರ್ಣನೆ ಮೇರು ಪರ್ವತದ ವರ್ಣನೆ ಭರತ ವರ್ಷದ ವರ್ಣನೆಗಳಿದ್ದು ಆ ಮೇಲೆ ಕರ್ನಾಟಕದ ವರ್ಣನೆಯೂ ಇದೆ. ಈ ಕರ್ನಾಟಕ ದೇಶದ ಮಧ್ಯದಲ್ಲಿ ಮುದ್ರಾಪುರವೆಂಬ ಪಟ್ಟಣವಿದ್ದು ಅದು ರಾಮೇಶನ ಸ್ಥಾನವಾಗಿತ್ತು. ಮುಂದೆ ರಾಮೇಶನ ವರ್ಣನೆಯ ಪದ್ಯಗಳು ಇವೆ.

೪ ನೇ ಮತ್ತು ೫ ನೇ ಸಂಧಿಯಲ್ಲಿ ಮುದ್ರಾಪುರದ ಕೋಟೆಯ ವರ್ಣನೆಯೂ ರಾಮನಾಥ ದೇವಾಲಯದ ವರ್ಣನೆಯೂ ಅಲ್ಲಿಯ ಸ್ತ್ರೀ ಪುರುಷರ ಉಪವನಗಳ ಮೊದಲಾದವುಗಳ ವರ್ಣನೆಗಳೂ ಬಂದಿವೆ.

೬ ನೇ ಸಂಧಿಯಲ್ಲಿ ಏಕೋರಾಮಾರಾಧ್ಯರ ಪೂರ್ವಜರ ಹೆಸರುಗಳು ಹೇಳಲ್ಪಟ್ಟಿವೆ. ಮೊದಲು ದೂರ್ವಾಸದೇವ, ಅವನ ಪುತ್ರ ಶಿವಾನಂದ, ಆವನ ಪುತ್ರ ಶ್ರೀಕಂಠ, ಈ ಶ್ರೀಕಂಠನ ಮಗನು ರಾಮರುದ್ರ ಶಿವಾಚಾರ್ಯನು. ಈ ರಾಮರುದ್ರನಿಗೆ ಮಕ್ಕಳಿದ್ದಿಲ್ಲ. ಆದ್ದರಿಂದ ಆತನು ರಾಮನಾಥನನ್ನು ಬೇಡಿಕೊಳ್ಳಲು ಅವನ ಕರುಣಾಬಲದಿಂದ ರಾಮರುದ್ರನ ಹೆಂಡತಿಯು ಗರ್ಭಿಣಿಯಾಗಿ ಒಂದು ಮಗುವನ್ನು ಹೆತ್ತಳು. ಆ ಮಗುವಿಗೆ ೧೧ ನೇ ದಿವಸ ಏಕೋರಾಮನೆಂಬ ನಾಮಕರಣವನ್ನು ಮಾಡಿದರು.

೭ ನೇ ಸಂಧಿಯಲ್ಲಿ ಏಕೋರಾಮನಿಗೆ ರಾಮನಾಥನು ದೀಕ್ಷಾ ವಿಧಿಯನ್ನು ನಿರ್ವಹಿಸಿದ ವೃತ್ತಾಂತವು ಇದೆ. ಆಮೇಲೆ ಏಕೋರಾ ಮನು ರಾಮನಾಥನಲ್ಲಿಯೇ ಸಂಪೂರ್ಣ ಭಕ್ತಿಯುಳ್ಳವನಾಗಿ ಆತನನ್ನೇ ಸದಾ ಪೂಜಿಸುತ್ತಿದ್ದನು. ಆದರೆ ಅವನು ಶುದ್ಧ ಶೈವನಂತೆ ತನ್ನ ಕ್ರಿಯಾ ಧರ್ಮಗಳನ್ನು ಆಚರಿಸುತ್ತಿದ್ದನು. ಅವನು ತಿರುಜ್ಞಾನಿ, ಮಾಣಿಕ್ಯವಾಚ ಗರ, ತಿರುಮುಲ ಮೊದಲಾದವರಲ್ಲಿ ಭಕ್ತಿಯುಳ್ಳವನಾಗಿದ್ದನು. ಆಗ ಶಂಕು ಕರ್ಣ ಗಣಾಧೀಶ್ವರನು ಕೈಲಾಸದಿಂದ ಬಂದು ಏಕೋರಾಮಾರಾಧ್ಯನಿಗೆ ವೀರಶೈವ ಮಾರ್ಗದ ಮಹತ್ವವನ್ನು ಅರುಹಿದನು. ಆಗ ಏಕೋರಾ ಮನು ರಾಮನಾಥಲಿಂಗನಿಂದ ವೀರಶೈವ ದೀಕ್ಷೆಯನ್ನು ಹೊಂದಬೇ ಕೆಂದು ನಿಶ್ಚಯಿಸಿದನು.

೮ ನೇ ಸಂಧಿಯಲ್ಲಿ ಏಕೋರಾಮನು ರಾಮನಾಥ ದೇವಾಲಯಕ್ಕೆ ಹೋಗಿ ಅವನಿಂದ ದೀಕ್ಷೆಯನ್ನು ಹೊಂದಿದ್ದರ ಸವಿಸ್ತಾರ ವರ್ಣನೆ ಇದೆ.

೯ ನೇ ಸಂಧಿಯಲ್ಲಿ ಏಕೋರಾಮನು ಮುಂದೆ ವೀರಶೈವ ಮಾರ್ಗಕ್ಕ ನುಸರಿಸಿ ವರ್ತಿಸಹತ್ತಿದನೆಂದು ಹೇಳಿದೆ. ಆಗ ಬ್ರಾಹ್ಮಣರು ಅವನ ಮೇಲೆ ಕೋಪಾವಿಷ್ಟರಾಗಿ ಮುದ್ರಾಸ.ರದ ಅರಸನಾದ ವೀರಭಾಸ್ಕರ ರಾಯನಿಗೆ ದೂರುಹೇಳಿದರು. ಆಗ ವೈಷ್ಣವರಿಗೂ ರಾಮಾಚಾರ್ಯ ನಿಗೂ ಅನೇಕ ವಾಗ್ವಾದಗಳಾದವು. ಅವುಗಳಲ್ಲಿ ರಾಮಾಚಾರ್ಯನು ಶಿವಮತವೇ ಶ್ರೇಷ್ಠವು, ಶಿವಭಕ್ತರೇ ಕುಲಜರೆಂದು ಹೇಳಿ ಹೊಲೆಯ ನಾದರೂ ಅವನೇ ಒಳ್ಳೆಯವನೆಂದು ಪ್ರಸ್ಥಾಪಿಸಿದನು.

ಏಕೋರಾಮನು ಈಪ್ರಕಾರ ಬ್ರಾಹ್ಮಣರನ್ನು ಸೋಲಿಸಿದ ಬಳಿಕ ಜೈನರೊಡನೆ ವಾದಮಾಡಿ ಅವರನ್ನೂ ಸೋಲಿಸಿದನು. ಆಗ ಇವರೆ ಲ್ಲರು ವೀರಶೈವ ದೀಕ್ಷೆಯನ್ನು ಹೊಂದಲಿಕ್ಕೆ ಅಪೇಕ್ಷಿಸಿದರು. ಆಗ ರಾಮ ಲಿಂಗನು ಏಕೋರಾಮನಿಗೆ ಗುರುಪಟ್ಟವನ್ನು ಕಟ್ಟಿದನು. ಮತ್ತು ಏಕೋ ರಾಮನು ಬ್ರಾಹ್ಮಣ ಜೈನರಿಗೆಲ್ಲ ವೀರಶೈವ ದೀಕ್ಷೆಯನ್ನು ಕೊಟ್ಟನು. ಇಷ್ಟಾದ ಮೇಲೆ ಶಂಕು ಕರ್ಣನು ಸಂತೋಷಭರಿತನಾಗಿ ಕೈಲಾಸಕ್ಕೆ ತೆರಳಿದನು.

೧೦ ನೇ ಸಂಧಿಯಲ್ಲಿ ವೀರಶೈವ ಧರ್ಮದ ತತ್ವಗಳು ಸವಿಸ್ತಾರ ವಾಗಿ ವಿವರಿಸಲ್ಪಟ್ಟಿವೆ. ಏಕೋರಾಮಾರಾಧ್ಯನ ಕೀರ್ತಿಯು ದೇಶದ

ಲ್ಲೆಲ್ಲ ಪಸರಿಸಿತು. ಆಗ ವ್ಯಾಸ ದೀಕ್ಷಿತನೆಂಬ ವೈಷ್ಣವನು ಅಯೋಧ್ಯಾ ನಗರಿಯಲ್ಲಿದ್ದು ಅವನು ತೀರ್ಥಾಟನವಮಾಡುತ್ತ ತಿರುಮಲೆಗೆ ಬಂದಿದ್ದನು. ಅವನು ಮುದ್ರಾಪುರದಲ್ಲಿ ವೈಷ್ಣವರು ಶಿವಧರ್ಮವನ್ನು ಸ್ವೀಕರಿಸಿದ್ದನ್ನು ಕೇಳಿ ಮುದ್ರಾಪುರಕ್ಕೆ ಬಂದನು. ಇಲ್ಲಿ ತಿರುಮಲೆ ಪರ್ವತದ ವರ್ಣನಾಪರ ಪದ್ಯಗಳು ಸುಂದರವಾಗಿವೆ.

೧೧, ೧೨, ೧೩ನೇ ಸಂಧಿಗಳಲ್ಲಿ ಏಕೋರಾಮನಿಗೂ, ವ್ಯಾಸ ದೀಕ್ಷಿತನಿಗೂ ಆದ ವಿವಾದಗಳು ಹೇಳಲ್ಪಟ್ಟಿವೆ. ವೀರಶೈವ ಧರ್ಮತತ್ವಗಳು ಚನ್ನಾಗಿ ನಿರೂಪಿಸಲ್ಪಟ್ಟಿವೆ. ಕಡೆಗೆ ವ್ಯಾಸ ದೀಕ್ಷಿತನು ಅಪಜಯವನ್ನು ಹೊಂದಿ ಏಕೋರಾಮನಿಗೆ ಶರಣು ಹೋದನು.

೧೪, ೧೫ನೇ ಸಂಧಿಗಳಲ್ಲಿ ಏಕೋರಾಮನು ವ್ಯಾಸನಿಗೆ ಶೈವ, ವೀರಶೈವ ಮಾರ್ಗಗಳ ಭೇದವನ್ನು ಅರುಹಿ ದೀಕ್ಷಾಸ್ವರೂಪವನ್ನು ತಿಳಿಸಿದನು. ಆಗ ವ್ಯಾಸದೀಕ್ಷಿತನು ಏಕೋರಾಮನಿಂದ ದೀಕ್ಷೆಯನ್ನು ಹೊಂದಿದನು.

೧೬ನೇ ಸಂಧಿಯಲ್ಲಿ ಏಕೋರಾಮನು ಅನೇಕ ಮಹತ್ವಗಳನ್ನು ಮಾಡಿದ ವಿವರಣೆಯು ಇದೆ. ವಿಸ್ತಾರಭಯಕ್ಕಾಗಿ ಇವುಗಳನ್ನು ನಾವು ಇಲ್ಲಿ ಕೊಟ್ಟಿರುವದಿಲ್ಲ. ಕಡೆಗೆ ಏಕೋರಾಮಾರಾಧ್ಯನು ಶಂಕುಕರ್ಣನೆಂಬ ತನ್ನ ಶಿಷ್ಯನಿಗೆ ಗುರುಪಟ್ಟವನ್ನು ಕಟ್ಟುತ್ತಾನೆ. ಆ ಮೇಲೆ ರಾಮಾಚಾರ್ಯನು ರಾಮನಾಥನ ದೇವಾಲಯಕ್ಕೆ ಹೋಗಲು ಅಲ್ಲಿ ಪರಮಾತ್ಮನು ಅವನಿಗೆ ಪ್ರತ್ಯಕ್ಷನಾಗಿ ದರ್ಶನ ಕೊಟ್ಟು ಅವನನ್ನು ಕೈಲಾಸಕ್ಕೆ ಒಯ್ದನು.

ಈ ಮೇರೆಗೆ ಈ ಗ್ರಂಥದಲ್ಲಿ ಏಕೋರಾಮಾರಾಧ್ಯನ ವೃತ್ತಾಂತವಿದೆ. ಮೂಲ ಪಂಚಾಚಾರ್ಯರಲ್ಲೊಬ್ಬರಾದ ಏಕೋರಾಮಾರಾಧ್ಯರ ವೃತ್ತಾಂತವು ಈ ವರೆಗೂ ಪ್ರಸಿದ್ಧವಾಗಿಲ್ಲ. ಮತ್ತು ಆ ವಿಷಯವಾಗಿ ಅವರ ಯಾವ ಐತಿಹ್ಯವೂ ಅಸ್ತಿತ್ವದಲ್ಲಿದ್ದದ್ದು ನಮಗೆ ತಿಳಿದುಬಂದಿಲ್ಲ. ಆದ್ದರಿಂದ ಒಬ್ಬ ವೀರಶೈವ ಮಹತ್ವದ ಕವಿಯು "ಏಕೋರಾಮಾರಾಧ್ಯನ ಚರಿತ್ರೆ" ಎಂದು ಮೇಲ್ಕಂಡ ಬಗೆಯಾಗಿ ವಿವರಿಸಿದ್ದು ಮೂಲ ಪಂಚಾಚಾರ್ಯ ಏಕೋರಾಮಾರಾಧ್ಯರ ವಿಷಯವಾಗಿ ಎಷ್ಟರ ಮಟ್ಟಿಗೆ ಅನ್ವಯಿಸುತ್ತದೆಂಬುದು ವಿಚಾರಾರ್ಹವಾಗಿರುತ್ತದೆ.

ರಾ|| ಬ|| ಆರ್. ನರಸಿಂಹಾಚಾರ್ಯರ ಕವಿಚರಿತೆ ೧ನೇ ಭಾಗ ಪುಟ ೨೧೫ರಲ್ಲಿ ಏಕೋರಾಮಿ ತಂದೆ ಎಂಬ ಶಿರೋಲೇಖದ ಕೆಳಗೆ ಮಾಡಿದ ವಿವರಣೆಯು ಮೇಲ್ಕಂಡ ಏಕೋರಾಮಾರಾಧ್ಯರ ಚರಿತ್ರೆಗೆ ಬಹು ಅಂಶದಿಂದ ಕೂಡುತ್ತದೆ. ಅವರು ಅದರಲ್ಲಿ ಅನ್ನುವದೇನೆಂದರೆ--- ''ಇವನು ಜೆನ್ನಮುದ್ರಾಪುರದ ಭಕ್ತರುದರದಲ್ಲಿ ಜನಿಸಿದನು. ಘಂಟಾ ಕರ್ಣ ಗಣನಾಥಾಚಾರ್ಯನಿಂದ ಉಪದೇಶವನ್ನು ಪಡೆದು ಶಿವಮಹ ತ್ತ್ವಾಧಿಕ್ಯಮಂ ಶಾಸ್ತ್ರಪೂರ್ವಕವಾಗಿ ಶಿವಭಕ್ತರಿಗೆ ಬೋಧಿಸಿದನು. ಅನೇಕ ವಾದಿಗಳನ್ನು ಜಯಿಸಿದನು. ಮುದ್ರಾಪುರದ ವೀರಭಾಸ್ಕರ ನೃಪತಿ ವೈಷ್ಣವ ಮತೋದ್ಧಾರಕನೂ, ಷಟ್ಛಾಸ್ತ್ರಸಾರಗನೂ ಆದ ವ್ಯಾಸನೆಂಬ ವಿದ್ವಾಂಸನಿಗೆ ಮರ್ಯಾದೆ ಮಾಡಿದುದನ್ನು ತಿಳಿದು ಅವನನ್ನು ವಾದದಲ್ಲಿ ಸೋಲಿಸಿ ಅವನಿಗೆ ರಾಮನಾಥಾಚಾರ್ಯನೆಂಬ ಹೆಸರನ್ನಿಟ್ಟನು. ಭೋಗ ಮಲ್ಲಿಕಾರ್ಜುನ ಲಿಂಗದಾಲಯಕೆ ಬಂದು ಆ ಲಿಂಗದಲ್ಲಿ ಅಡಗಿದನು.'' ಎಂದು ಹೇಳಲ್ಪಟ್ಟಿದೆ. ಇದರಲ್ಲಿಯು ಸ್ವಲ್ಪ ಭಿನ್ನತೆಗಳನ್ನು ಬಿಟ್ಟರೆ ನಾವು ಈ ಲೇಖದಲ್ಲಿ ವಿವರಿಸಿದ ವೃತ್ತಾಂತಕ್ಕೂ ಇದಕ್ಕೂ ಬಹಳ ಕೂಡುತ್ತದೆ.

ಈ ಪುರಾಣಕ್ಕೆ ಸಂಬಂಧಪಟ್ಟ ಕೆಲವು ವಿಷಯಗಳನ್ನು ನಾವು ಇಲ್ಲಿ ವಿವರಿಸುವದು ಅವಶ್ಯ ತೋರುತ್ತದೆ.

ಹರದನಹಳ್ಳಿಯ ನಂಜಣಾಚಾರ್ಯ ಕವಿಯು:— ಈ ಪುರಾಣ ಕರ್ತನಾದ ನಂಜಣಾಚಾರ್ಯನೂ ಕವಿಚರಿತೆ ಭಾಗ ೨ ಪುಟ ೪೩೮ ರಲ್ಲಿ ಉಲ್ಲೇಖಿಸಲ್ಪಟ್ಟ ನಂಜಣಾರ್ಯನೂ ಒಂದೇ ಎಂದು ನನಗೆ ತೋರುತ್ತದೆ. ಈ ನಂಜಣಾರ್ಯಕವಿಯ ಬಗ್ಗೆ ಕವಿಚರಿತೆಯಲ್ಲಿ ಹೇಳಿ ರುವದೇನಂದರೆ:— ''ಈತನು ನೀತಿ ರತ್ನಾಭರಣವನ್ನು ಬರೆದಿದ್ದಾನೆ ಇವನು ವೀರಶೈವ ಕವಿ. ಹರವೀ ಹಳ್ಳಿಯ ಗುರುಚೌಡೇಶ್ವರನ ಮೊಮ್ಮ ಗನು. ''ಪರಮ ಗುರು ಸಿದ್ಧಶಾಂತೇಶ್ವರನು ರಚಿಸನೆ ಪೇಳ್ದೆಂ'' ಎಂದು ಹೇಳುತ್ತಾನೆ. ಇವನ ಕಾಲವು ಸುಮಾರು ೧೬೫೦ ಆಗಿರಬಹುದು. ಇವನ ಗ್ರಂಥ, ನೀತಿ ರತ್ನಾಭರಣ. ಇದು ಕಂದದಲ್ಲಿ ಬರೆದಿದೆ. ಪದ್ಯ ೧೬೯.'' ರಾ| ಬ| ಆರ್ ನರಸಿಂಹಾಚಾರ್ಯರು ಈತನು ಚೌಡೇಶ್ವರನ ಮೊಮ್ಮಗನೆಂದು ಬರೆದಿದ್ದು ಏಕೋರಾಮಾರಾಧ್ಯ ಪುರಾಣದಲ್ಲಿ ಇದೇ ವಿಷಯವಾಗಿ ಹೇಳಿದ ''ಚೌಂಡದೇವ'' ಎಂಬ ಹೆಸರೂ ಒಂದೇ ಆಗಿರು

ವೆದರಿಂದ ಉಭಯ ಗ್ರಂಥಗಳ ಕರ್ತೃಗಳು ಅವರೇ ಇರುವರೆಂದು ತಿಳಿಯಲು ಏನೂ ಪ್ರತ್ಯವಾಯವಿಲ್ಲ.

ಮುದ್ರಾಪುರ:— ಏಕೋರಾಮಾರಾಧ್ಯರ ಗ್ರಾಮವಾದ ಮುದ್ರಾಪುರವು ಕಲಬುರ್ಗಿ ಜಿಲ್ಹೆಯಲ್ಲಿರುವ ಮುದನೂರು ಇರುತ್ತದೆಂದು ನಮಗೆ ತೋರುತ್ತದೆ. ಈ ಸ್ಥಳವು ಈಗಲೂ ಕ್ಷೇತ್ರ ಸ್ಥಾನವೆನಿಸಿಕೊಂಡು ಈ ನಾಡಿನಲ್ಲಿ ಇದು ಪ್ರಸಿದ್ಧವಾಗಿರುತ್ತದೆ. ಇದು ವಿಜಾಪುರ ಜಿಲ್ಹೆಯ ಸಿಂದಿಗಿ ಗ್ರಾಮದಿಂದ ಆಗ್ನೇಯ ದಿಕ್ಕಿಗೆ ೩೦ ಮೈಲುಗಳ ಮೇಲೆ ಇರುತ್ತದೆ. ಇದು ಅನೇಕ ತೀರ್ಥಗಳಿಂದಲೂ ಅಸಂಖ್ಯ ದೇವಾಲಯಗಳಿಂದಲೂ ತುಂಬಿಕೊಂಡು ಈಗಲೂ ಬಹು ರಮಣೀಯವಾದ ಸ್ಥಾನವಾಗಿರುತ್ತದೆ. ಈ ಸ್ಥಳದಲ್ಲಿ ರಾಮನಾಥನ ದೇವಾಲಯವೂ ಇರುತ್ತದೆ. ಇದೇ ರಾಮನಾಥನೇ ಏಕೋರಾಮನಿಗೆ ದೀಕ್ಷಾವಿಧಿಯನ್ನು ನಿರ್ವಹಿಸಿರಬಹುದು. ಮತ್ತು ಗುರುಪಟ್ಟವನ್ನು ಕಟ್ಟಿರಬಹುದು. ಮುದನೂರು ಗ್ರಾಮದ ಸವಿಸ್ತಾರವಾದ ವರ್ಣನೆಯು ೧೯೩೮ ನೇ ವರ್ಷದ ಶಿವಾನುಭವ ೧೨ ನೆಯ ಸಂಚಿಕೆಯಲ್ಲಿ ಬಂದಿರುತ್ತದೆ. ಅದನ್ನು ವಾಚಕರು ಅವಶ್ಯವಾಗಿ ನೋಡತಕ್ಕದ್ದು. ಇತಿಹಾಸ ಸಂಶೋಧನ ಪ್ರೀತಿಯುಳ್ಳ ರಾ। ರಾ। ಗೊಲ್ಲಾಳ ಪೂಜಾರಿ ಎಂಬವರು ಈ ಗ್ರಾಮವನ್ನು ಸ್ವತಃ ನಿದರ್ಶಿಸಿ ಬರೆದ ವೃತ್ತಾಂತವು ಆದಾಗಿರುತ್ತದೆ. ಅವರು ತಮ್ಮ ವೃತ್ತಾಂತದಲ್ಲಿ ಈ ಗ್ರಾಮದಲ್ಲಿ ಅಸಂಖ್ಯ ಶಿಲಾ ಶಾಸನಗಳು ಇದ್ದ ಹಾಗೆ ಉಲ್ಲೇಖಿಸಿದ್ದಾರೆ. ಅವುಗಳನ್ನು ಇತಿಹಾಸ ಸಂಶೋಧಕರು ಶೋಧಿಸಿದಲ್ಲಿ ಪುರಾತನ ಕಾಲದಲ್ಲಿಯ ಅನೇಕ ಶಿವಶರಣರ ವೃತ್ತಾಂತದ ಮೇಲೆ ಬಹಳ ಪ್ರಕಾಶವು ಬೀಳಬಹುದಾಗಿದೆ. ಯಾಕಂದರೆ ಈ ಗ್ರಾಮದಿಂದ ಒಂದು ಮೈಲಿನ ಮೇಲೆ ಅಗಣಿಯ ಹೊನ್ನಯ್ಯನ ಸ್ಥಳವೂ, ೬ ಮೈಲಿನ ಮೇಲೆ ಕೆಂಭಾವಿ ಭೋಗಣ್ಣನ ಸ್ಥಳವೂ, ಹಾಗೆಯೇ ಹಿಪ್ಪರಿಗೆಯ ಮಡಿವಾಳ ಮಾಚಿದೇವ, ಬಾಗೇವಾಡಿಯ ಬಸವೇಶ್ವರ, ನವಿಲಿಯ ಶಂಕರದಾಸಿಮಯ್ಯ, ಮುದನೂರಿನ ದೇವರ ದಾಸಿಮಯ್ಯ, ಸೊನ್ನಲಾಪುರದ ಸಿದ್ಧರಾಮೇಶ್ವರ, ಆಲಮೇಲದ ಜಗದೇವ ಬೊಮ್ಮಯ್ಯಗಳು ಮೊದಲಾದವರ ಸ್ಥಳಗಳೆಲ್ಲವೂ ಈ ಗ್ರಾಮದಿಂದ ೩೦—೪೦ ಮೈಲು ಅಂತರದ ಮೇಲೆ ಅಕ್ಕಪಕ್ಕಗಳಲ್ಲಿ ಇವೆ. ಬಿಜ್ಜಳನ ರಾಜಧಾನಿಯಾದ ಕಲ್ಯಾಣನಗರವಾದರೂ ೫೦—೬೦ ಮೈಲುಗಳಲ್ಲಿಯೇ ಇವೆ. ಈ ಪ್ರಾಂತದಲ್ಲೆಲ್ಲ ಪ್ರತಿಯೊಂದು ಗ್ರಾಮದಲ್ಲಿ ಶಿಲಾ

ಶಾಸನಗಳು ತುಂಬಿಹೋಗಿರುತ್ತವೆ. ಇವುಗಳನ್ನು ಸಂಶೋಧಕರು ಸಂಶೋಧಿಸಿದ್ದಾದರೆ ಬರೇ ವೀರಶೈವ ಸಮಾಜದ ಮೇಲೆ ಇಷ್ಟೇ ಅಲ್ಲ. ಕರ್ನಾಟಕದ ಇತಿಹಾಸದ ಮೇಲೆಯೂ ಮಹತ್ವದ ಪ್ರಕಾಶವು ಬೀಳುವಂತೆ ಇದೆ.*

ರಾ॥ ಬಾ॥ ನರಸಿಂಹಾಚಾರ್ಯರು ತಮ್ಮ ವೃತ್ತಾಂತದಲ್ಲಿ ಭೋಗಮಲ್ಲಿಕಾರ್ಜುನಲಿಂಗವನ್ನು ಉಲ್ಲೇಖಿಸಿದ್ದು ಈ ಮುದನೂರಲ್ಲಿ ಈ ಮಲ್ಲಿಕಾರ್ಜುನ ದೇವಾಲಯವಾದರೂ ಇರುತ್ತದೆ.

ಶಿವಶರಣ ದೇವರ ದಾಸಿಮಯ್ಯನಾದರೂ ಮುದನೂರು ಗ್ರಾಮದವನು. ಅವನ ಇಷ್ಟದೇವತೆಯಾದರೂ ರಾಮನಾಥವೆಂದಿರುತ್ತದೆ. ಈ ಸ್ಥಳದಲ್ಲಿ ದೇವರದಾಸಿಮಯ್ಯನ ಐತಿಹ್ಯಗಳು ಬಹಳ ಇವೆ. ಏಕೋರಾಮಾರಾಧ್ಯ ಮತ್ತು ದೇವರದಾಸಿಮಯ್ಯ ಇವರೀರ್ವರ ಇಷ್ಟದೇವತೆಯು ಒಂದೇ ಆಗಿರಬಹುದು.

ಪಂಚಾಚಾರ್ಯ ಪಂಚವರ್ಣೋತ್ಪತ್ತಿ ಎಂದು ಈಗ ಪ್ರಸಿದ್ಧವಿರುವ ಸಂಸ್ಕೃತ ಗ್ರಂಥದಿಂದ ದ್ವಾಪರಯುಗದಲ್ಲಿಯ ಶಂಕುಕರ್ಣನೇ ಕಲಿಯುಗದಲ್ಲಿ ಏಕೋರಾಮಾರಾಧ್ಯನೆಂಬ ಹೆಸರಿನಿಂದ ಅವತಾರ ತಾಳಿದನೆಂದು ತಿಳಿಯುತ್ತದೆ. ಆದರೆ ಪ್ರಸ್ತುತ ಗ್ರಂಥದಲ್ಲಿ ಶಂಕುಕರ್ಣನು ಏಕೋರಾಮಾರಾಧ್ಯನೆಡೆಗೆ ಬಂದು ವೀರಶೈವ ಧರ್ಮದ ಮಹತ್ವವನ್ನು ಬೋಧಿಸಿ ಲಿಂಗಧಾರಿಯಾಗಲು ಪ್ರೋತ್ಸಾಹಿಸಿದನೆಂದು ಹೇಳಿರುತ್ತದೆ. ಮತ್ತು ಏಕೋರಾಮಾಧ್ಯನು ಶಂಕುಕರ್ಣನ ಅವತಾರವಾಗಿರದೆ ಘಂಟಾಕರ್ಣಗಣೇಶ್ವರನ ಅವತಾರವೆಂದು ಹೇಳಲ್ಪಟ್ಟಿರುತ್ತದೆ. ಪಂಚಾಚಾರ್ಯರ ಪೂರ್ವ ವೃತ್ತಾಂತಗಳು ಬಸವೇಶ್ವರನ ವೃತ್ತಾಂತಗಳಂತೆ ಕಾಲಕಾಲಕ್ಕೆ ಬದಲಾಗುತ್ತಬಂದಿರುವದು ಗೊತ್ತಾಗುತ್ತದೆ. ಇದಲ್ಲದೆ ಈ ಗ್ರಂಥದಲ್ಲಿ ವರ್ಣಿಸಲ್ಪಟ್ಟ ಏಕೋರಾಮಾರಾಧ್ಯನಿಗೆ ಧಾರ್ಮಿಕ ಅತ್ಯುಚ್ಚ ಪದವಿಯು ಕೊಡಲ್ಪಟ್ಟಿರುವದು ವಿಚಾರಾರ್ಹವಾಗಿದೆ.

---

* ರಾ. ರಾ. ಗೊಲ್ಲಾಳ ಪೂಜಾರ ಇವರು ಈ ಭಾಗದಲ್ಲಿಯ ಶಿಲಾಶಾಸನಗಳ ಪ್ರಿಂಟು ತೆಗೆದುಕೊಳ್ಳಲಿಕ್ಕೆ ಹೋದಾಗ ಅವರು ಅಲ್ಲಿಯ ಅಧಿಕಾರಿಗಳ ಮತ್ತು ಊರ ಜನರ ಉಪಟಳವನ್ನು ಬಹಳ ಸಹಿಸಬೇಕಾದ್ದರಿಂದ ಅವರು ಈ ಕಾರ್ಯವನ್ನು ಬಿಟ್ಟುಬಿಡಬೇಕಾಯಿತು.

ಸಂಪಾದಕ.

ಏಕೋರಾಮನು ರಾಮನಾಥಲಿಂಗದಲ್ಲಿ ಐಕ್ಯವನ್ನು ಹೊಂದುವಾಗ ಶಂಕುಕರ್ಣನೆಂಬ ತನ್ನ ಶಿಷ್ಯನಿಗೆ ಗುರುಪಟ್ಟವನ್ನು ಕಟ್ಟಿದ್ದರ ಉಲ್ಲೇಖವಿವೆ. ಇದರಿಂದ ಏಕೋರಾಮಾರಾಧ್ಯನು ಈ ಮುದಿನೂರು ಗ್ರಾಮವನ್ನು ತನ್ನ ಮುಖ್ಯ ಪೀಠವನ್ನಾಗಿ ಮಾಡಿದಂತೆ ತಿಳಿದುಬರುತ್ತದೆ.

ಮೇಲ್ಕಂಡ ಸಂಗತಿಗಳೆಲ್ಲವನ್ನು ಪ್ರತಿಯೊಬ್ಬ ವೀರಶೈವನು ಚನ್ನಾಗಿ ಆಲೋಚಿಸತಕ್ಕವುಗಳಾಗಿರುತ್ತವೆ. ವೀರಶೈವ ಸಮಾಜದ ರಚನೆ ಮತ್ತು ಬೆಳವಣಿಗೆಯ ಅಗಾಧವಾದ ಚರಿತ್ರೆಯಲ್ಲಿ ಅಲ್ಲಲ್ಲಿ ಇತಿಹಾಸದ ಕಣಗಳು ಮಾತ್ರ ದೃಗ್ಗೋಚರವಾಗುತ್ತವೆ. ಅವುಗಳನ್ನು ನಾವು ಕಂಡು ಹಿಡಿದು ಅವುಗಳ ಸಮರ್ಪಕ ಸಂಬಂಧವನ್ನು ಶೋಧಿಸಿ ಸಮಾಜದ ನಿಜ ರೂಪವನ್ನು ಸಂದರ್ಶಿಸಬೇಕಾಗಿದೆ. ಇದಕ್ಕೆ ಕಾಲಾವಧಿಯು ಬೇಕು. ಆದರೆ ಆ ಕಣಗಳಾವವೆಂಬದನ್ನು ನಾವು ನಿದರ್ಶಿಸುತ್ತ ಹೋಗುವದೇ ನಮ್ಮ ಈಗಿನ ಕಾರ್ಯವಾಗಿರುವದು.

---

# ಸಾರಂಗದೇವ.

(ಲೇಖಕ:— ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)



ವೀರಶೈವ ಸಮಾಜದ ಮಠಗಳಂಥ ವ್ಯವಸ್ಥೆಯು ಹಿಂದುಸ್ತಾನದಲ್ಲಿಯ ಬೇರೆ ಯಾವ ಸಮಾಜದಲ್ಲಿಯೂ ಇರುವದಿಲ್ಲೆಂದು ಹೇಳಬಹುದು. ಈ ಮಠಗಳ ಅಂತರ್ವ್ಯವಸ್ಥೆ ಮತ್ತುಪರಸ್ಪರ ಸಂಬಂಧ ಮತ್ತು ಜೋಡಣೆ ಇವುಗಳೆಲ್ಲವೂ ಒಂದು ಕ್ರಮಬದ್ಧವಾದ ರಾಜ್ಯಪದ್ಧತಿಯನ್ನು ಹೋಲುತ್ತವೆ. ಇದರಿಂದ ಸಮಾಜದ ಸುವ್ಯವಸ್ಥೆ ಮತ್ತು ಕಟ್ಟುಗಳು ಉಳಿದು, ಅದು ಮುಂದುವರಿಯಲಿಕ್ಕೆ ಸಾಧ್ಯವಾಗುತ್ತದೆ. ಈ ತರದ ಸ್ಥಿತಿಯು ವೀರಶೈವ ಸಮಾಜದಲ್ಲಿ ಬಹುಕಾಲದಿಂದಲೂ ಇದ್ದಹಾಗೆ

ತೋರುತ್ತದೆ. ಆದರೆ ಇಂಗ್ಲಿಷರ ರಾಜ್ಯವ್ಯವಸ್ಥೆಯು ನೆಲೆಗೊಂಡ ಬಳಿಕ ಈ ವ್ಯವಸ್ಥೆಯು ಅನೇಕ ಬಹಿರಂಗ ಮತ್ತು ಅಂತರಂಗಿಕ ಕಾರಣಗಳ ಮೂಲಕ ತಪ್ಪಿಹೋಗಿ ಅವುಗಳ ಸ್ಥಿತಿಯೇ ಬದಲಾಗುತ್ತ ಬಂದಿತೆಂದು ಹೇಳಬಹುದು.

ವೀರಶೈವ ಮಠಗಳು ಗ್ರಾಮಸುಧಾರಣೆ ಮಾಡಲು, ಮತ್ತು ದೇಶದ ಸಾಮಾಜಿಕ ಮತ್ತು ಧಾರ್ಮಿಕ ಸುಸ್ಥಿತಿಯನ್ನು ಕಾಯಲು ಅತ್ಯಂತ ಸಹಾಯಕಾರಿಗಳಾಗಿವೆ. ವೀರಶೈವ ಆದ್ಯಪ್ರವರ್ತಕರು ಈ ಮಠಗಳ ಮೂಲಕವಾಗಿಯೇ ವೀರಶೈವ ಧರ್ಮವನ್ನು ಕರ್ನಾಟಕ ದೇಶದಲ್ಲೆಲ್ಲ ಪ್ರಸಾರಪಡಿಸಿದರು. ಮತ್ತು ಧಾರ್ಮಿಕ ಜ್ಯೋತಿಯು ಸದಾ ಜನರಲ್ಲಿ ಪ್ರಸ್ಫುರಿಸುವಂತೆ ಅಸಂಖ್ಯ ಮಠಗಳು ಗ್ರಾಮಾಂತರಗಳಲ್ಲಿ ಅನೇಕ ಸೌಕರ್ಯ ಮತ್ತು ಸಲಕರಣೆಗಳೊಂದಿಗೆ ಸ್ಥಾಪಿಸಿದರು. ಇದರಿಂದಲೇ ಕರ್ನಾಟಕದಲ್ಲಿ ಬಹು ಬಿಕ್ಕಟ್ಟಿನ ಕಾಲದಲ್ಲಿಯೂ ಕೂಡ ವೀರಶೈವತ್ವವು ಬಹು ಬಲವಾಗಿ ಬಾಳಿತೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ. ಈ ಮಠಗಳಲ್ಲಿ ಅನೇಕ ಪ್ರಬಲರಾದ ವಿದ್ವಾಂಸರೂ, ಧರ್ಮಜಾಗ್ರತಿಕಾರರೂ ಉದ್ಭವಿಸಿ ಸಮಾಜವು ಮ್ಲಾನ ಸ್ಥಿತಿಯನ್ನು ಹೊಂದಿದ ಕಾಲಕ್ಕೆ ಆಗಿಂದಾಗ್ಗೆ ಅದನ್ನು ಎಚ್ಚರಗೊಳಿಸಿದ್ದು ತೋರಿಬರುತ್ತದೆ. ಆದರಿಂದಲೇ ಅನೇಕ ಶಿವಶರಣರೂ, ವಿದ್ವಾಂಸರೂ, ಗ್ರಂಥಕಾರರೂ ಸಮಾಜದಲ್ಲಿ ಉತ್ಪನ್ನರಾಗಿ ಅದರ ಸಂಸ್ಕೃತಿಯು ಹೆಚ್ಚುಗೆಗೆ ಕಾರಣರಾದರು. ಹೀಗೆ ವೀರಶೈವ ಸಮಾಜದಲ್ಲಿ ಮಠಗಳು ಅತ್ಯಂತ ಮಹತ್ವದ ಕಾರ್ಯಗಳನ್ನು ಮಾಡುತ್ತ ಬಂದಿರುತ್ತವೆ.

೧೨ ನೇ ಶತಮಾನದಲ್ಲಿ ಬಿಜ್ಜಳನ ರಾಜ್ಯವು ಹಾಳಾದ ಬಳಿಕ ಕರ್ನಾಟಕವು ಸ್ವಲ್ಪಕಾಲದಲ್ಲಿಯೇ ಮುಸಲ್ಮಾನರ ದಾಳಿಗಳನ್ನು ಅನುಭವಿಸುವ ಪ್ರಸಂಗವು ಬಂದೊದಗಿತು. ಮಲಿಕಕಾಫರನ ಉಗ್ರವಾದ ದೌಡುಗಳು ದಕ್ಷಿಣದೇಶದ ಅನೇಕ ಹಿಂದೂ ರಾಜ್ಯಗಳನ್ನು ಮುರಿದಿಕ್ಕಿದವು. ಅಲ್ಲಾವುದ್ದೀನ ಮತ್ತು ಮಹಮ್ಮದ ತಘಲಖರ ಅಭಿಯೋಗಗಳು ಮುಸಲ್ಮಾನರು ಚಿರಸ್ಥಾಯಿಯಾಗಿ ದಕ್ಷಿಣದೇಶದಲ್ಲಿ ಉಳಿಯುವಂತೆ ಮಾಡಿದವು. ಮತ್ತು ಸ್ವಲ್ಪ ಕಾಲದಲ್ಲಿಯೇ ಬಾಮನಿ ರಾಜ್ಯವು ಕಲಬುರ್ಗಿಯಲ್ಲಿ ಸ್ಥಾಪಿಸಲ್ಪಟ್ಟು ಕರ್ನಾಟಕ ಭೂಮಿಯಲ್ಲಿ ಮುಸಲ್ಮಾ

ನರು ನೆಲೆಯಾಗಿ ನಿಂತರು. ಮುಂದೆ ಇವರು ಮಹಾರಾಷ್ಟ್ರ ಮತ್ತು ಉತ್ತರಕರ್ನಾಟಕವನ್ನು ಪಾದಾಕ್ರಾಂತಮಾಡಿ ವಿಜಯನಗರದವರಕೂಡ ಎಂಥ ಕ್ರೂರ ಯುದ್ಧಗಳನ್ನು ಹೂಡುತ್ತ ಬಂದರೆಂಬದು ಇತಿಹಾಸ ಪ್ರಸಿದ್ಧವೇ ಇರುತ್ತದೆ. ಇವರಲ್ಲಿ ಕೆಲವು ಬಾದಶಹರು ಧರ್ಮಾಂಧ ರಾಗಿ ಅಸಂಖ್ಯಾತ ಹಿಂದೂಗಳನ್ನು ಕೊಲೆಬಡಿಸಿ "ವಲ್ಲೀ" ಎಂಬ ಬಿರುದನ್ನು ತಾಳಲು ಹೆಮ್ಮೆಪಟ್ಟರು. ಇಂಥವರ ಉಪಟಳದಲ್ಲಿ ಉತ್ತರಹಿಂದುಸ್ತಾನವಲ್ಲಿಯಂತೆ ಉತ್ತರಕರ್ನಾಟಕ ಭೂಮಿಯಲ್ಲಿಯೂ ಮುಸಲ್ಮಾನರ ವಸತಿಯು ಅತಿ ನಿಬಿಡವಾಗಿ ಹಬ್ಬಬೇಕಾಗಿತ್ತು. ಆದರೆ ಈ ಸ್ಥಿತಿಯು ಇಲ್ಲಿ ಇರದೆ ಹಿಂದೂಗಳ ಸಂಖ್ಯೆಯು ನೂರರಲ್ಲಿ ೯೦ಕ್ಕಿಂತಲೂ ಕಡಿಮೆ ಇಲ್ಲೆಂಬದನ್ನು ನಾವು ಲಕ್ಷಿಸತಕ್ಕದ್ದಾಗಿದೆ. ಈ ಪ್ರಾಂತದಲ್ಲೆಲ್ಲ ವೀರಶೈವರ ಜನವಸತಿಯು ಗ್ರಾಮಾಂತರಗಳಲ್ಲಿ ಗಾಢವಾಗಿ ಹಬ್ಬಿರುವದು ಕಂಡುಬರುತ್ತದೆ. ಇದು ಯಾತರ ಪರಿಣಾಮವು? ಇದು ಗ್ರಾಮಾಂತರಗಳಲ್ಲಿ ಸ್ಥಾಪಿತವಾದ ವೀರಶೈವ ಮಠಗಳು ಜನರಲ್ಲಿ ಧರ್ಮದ ಮತ್ತು ಸಮಾಜದ ಕಳೆಯನ್ನು ಕಾಲಕಾಲಕ್ಕೆ ಸ್ಥಾಪಿಸುತ್ತ ಬಂದಿದ್ದರ ಪರಿಣಾಮವೇ ಹೊರ್ತು ಮತ್ತೇನಿರಬಹುದು? ಆದ್ದರಿಂದ ನಾವು ವೀರಶೈವ ಮಠಗಳ ಮಹತ್ವವನ್ನು ಚನ್ನಾಗಿ ತಿಳಿದುಕೊಂಡು ಅವುಗಳಲ್ಲಿ ಉತ್ಪನ್ನರಾದ ಮಹಾ ಪುರುಷರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಕಂಡುಹಿಡಿದು, ಅವರ ಹೆಸರುಗಳನ್ನು ಎತ್ತಿಹಿಡಿಯುವದು ವೀರಶೈವ ಸಮಾಜದ ಆದ್ಯ ಕರ್ತವ್ಯಗಳಲ್ಲಿ ಮುಖ್ಯವಾದುದೆಂದು ನಾವು ಬಗೆಯುತ್ತೇವೆ.

ವೀರಶೈವ ಮಹಾಪುರುಷರಲ್ಲಿ ಸಾರಂಗದೇವನು ಅತ್ಯಂತ ಮಹತ್ವದ ಸ್ಥಾನವನ್ನು ಹೊಂದಿರುವನು. ಇವನು ತನ್ನ ಜೀವಿತದ ಕಾಲದಲ್ಲಿ ಅನೇಕ ರಾಜರಿಂದಲೂ, ರಾಜಕೀಯ ಮಹಾಪುರುಷರಿಂದಲೂ ಅತ್ಯಂತ ಮನ್ನಣೆಯನ್ನು ಹೊಂದಿದವನಾಗಿದ್ದನು. ಅವನು ವೀರಶೈವ ಮತ ಪ್ರತಿಷ್ಠಾಪನೆಗೋಸ್ಕರ ದೇಶದಲ್ಲಿ ಅನೇಕ ಕಡೆಗೆ ಮಠಗಳನ್ನು ಸ್ಥಾಪಿಸಿದನು. ಮತ್ತು ಅಸಂಖ್ಯರನ್ನು ವೀರಶೈವ ಮತಾನುಯಾಯಿಗಳನ್ನು ಮಾಡಿದನು. ಇವನು ಬಹುಶಃ ಕಪ್ಪಡಿಯ ಸಂಗಮೇಶ್ವರ ಸ್ಥಾನವನ್ನೇ ತನ್ನ ಆವಾಸ ಸ್ಥಾನವಾಗಿ ನಿರ್ಮಿಸಿಕೊಂಡು ಕಡೆಗೆ ಅಲ್ಲಿಯೇ ಐಕ್ಯವನ್ನು ಹೊಂದಿದನು. ಅವನ ಗದ್ದಿಗೆಯು ಈ ದೇವಾಲಯದ ಆವಾರದಲ್ಲಿ ಈಗ್ಗೆಯೂ ಇದ್ದು

ಅದಕ್ಕೆ ಒಂದು ಮಠವೂ ಇರುತ್ತದೆ. ಅದರ ಅಸಂಖ್ಯ ಯಾತ್ರಿಕರು ಸಂಗಮನಾಥನ ದರ್ಶನಕ್ಕೆ ಹೋದರೂ, ಅವರಿಗೆ ಸಾರಂಗದೇವನ ಮಹತ್ವದ ಚರಿತ್ರೆಯು ಗೊತ್ತಿರುವದಿಲ್ಲಾದ ಕಾರಣ ಅವರಲ್ಲರೂ ಈತನ ಗದ್ದುಗೆಯ ದರ್ಶನವನ್ನು ಹೊಂದಿ ಅವನ ಚರಿತ್ರೆಯ ನೆನಸು ಮಾಡಿಕೊಳ್ಳಲಾರದೆ ಹೋಗುತ್ತಾರೆ!

ಸಾರಂಗದೇವನ ಚರಿತ್ರೆಯ ಅಂಶಗಳಿದ್ದ ಒಂದು ಹೊತ್ತಿಗೆಯನ್ನು ಈ ಕಪ್ಪಡಿಯ ಮಠದ ಈಗಿನ ಅಧಿಕಾರಿಗಳು ನನ್ನ ಕಡೆಗೆ ತಂದುಕೊಟ್ಟರು. ಕೋರೀ ಕಾಗದದ ಮೇಲೆ ಬರೆದ ೫೪ ಪುಟಗಳುಳ್ಳ ಗ್ರಂಥವು ಇದಾಗಿದೆ. ಇದರಲ್ಲಿ ವಾರ್ಧಿಕ ಷಟ್ಪದಿಯಲ್ಲಿ ಬರೆದ ೪ ಅಧ್ಯಾಯಗಳು ಇವೆ. ಇದರ ಅಂತ್ಯದಲ್ಲಿ ಬರೆದಿರುವದೇನಂದರೆ, “ಶಕೆ ೧೭೫೮ ನಳನಾಮ ಸಂವತ್ಸರವು ಗಣನೆ ಎಷ್ಟು ಎಂದರೆ ೪೩ ವಾರ್ಧಿಕ, ೫೧ ಗ್ರಂಥ, ೪ ಕಂದ, ೪ ಗದ್ಯ ಸಂಪೂರ್ಣ” ಇದರ ಮೇಲಿಂದ ಗ್ರಂಥದ ವಿಸ್ತಾರವನ್ನು ತಿಳಿಯಬಹುದಾಗಿದೆ. ಈ ಗ್ರಂಥವನ್ನು ಸಾರಂಗ ಮಠದ ಒಬ್ಬ ಹಿಂದಿನ ಅಧಿಕಾರಿಗಳೇ ಬರೆದಿದ್ದಾರೆಂಬುದು, ಗ್ರಂಥದಲ್ಲಿಯ ಕೆಳಗಿನ ಬರಹದಿಂದ ತಿಳಿಯುತ್ತಿದೆ. ಅದು ಏನೆಂದರೆ:— “ಶ್ರೀಮತ್ಪರಮ ಪಾವನ ಚಾರು ಚರಿತ್ರ ಚರಚಕ್ರವರ್ತಿ ಘನಲಿಂಗ ಚರಮೂರ್ತಿ ಕಾಶೀ ಸಾರಂಗ ಸಿಂಹಾಸನ ಪತಿ ಧರ್ಮ ಕಪ್ಪಡಿ ಕಾರಣ ಕರ್ತರಾದಂಥ ವೃಷಭಾದ್ರಿ ಚಲವಾಸಂ ಸನುತ ಪರುತ ಪೇಟಿ ಹಿರೇಮಠದ ಅಧಿಕಾರಿಗಳಾದಂಥ ದೇಸಾಯಿ ಗುರು ಸಾರಂಗದೇವರ ಶಿವಸಂಗಪ್ಪನವರು ಮಾಡಿದ ಚತುರ್ಥಾಧ್ಯಾಯವು” ಇದರ ಮೇಲಿಂದ ಈ ಗ್ರಂಥವು ಶಿವಸಂಗಪ್ಪನವರೆಂಬ ಅಧಿಕಾರಿಗಳಿಂದ ರಚಿತವಾದದ್ದೆಂದು ಕಂಡುಬರುತ್ತದೆ.

ಈ ಗ್ರಂಥವಲ್ಲದೆ ಗುಳೇದಗುಡ್ಡದಲ್ಲಿಯೂ ಸಾರಂಗ ಮಠವಿದ್ದು ಆ ಮಠದ ಅಧಿಕಾರಿಗಳಲ್ಲಿ ಸಾರಂಗದೇವರ ಚರಿತ್ರೆ ಇದೆ. ಇದನ್ನು ನನಗೆ ನೋಡಲು ಸಂಗಮ ಮಠದ ಅಧಿಕಾರಿಗಳು ಅವಕಾಶ ಕೊಟ್ಟಿದ್ದು ಇದರಲ್ಲಿಯ ವೃತ್ತಾಂತವು ಸಂಗಮ ಮಠದಲ್ಲಿಯ ಗ್ರಂಥದ ವೃತ್ತಾಂತಕ್ಕೆ ಕೂಡುವದಲ್ಲದೆ, ಇದರಲ್ಲಿ ಗುಳೇದಗುಡ್ಡದ ಮಠಕ್ಕೆ ಸಂಬಂಧಪಟ್ಟ ಈಚಿನ ಅನೇಕ ವಿಷಯಗಳು ಸೇರ್ಪಡೆಯಾಗಿರುತ್ತವೆ.

ಮೇಲ್ಕಂಡ ಎರಡು ಗ್ರಂಥಗಳ ಆಧಾರದಿಂದ ಕೆಳಗಿನ ವೃತ್ತಾಂತವು ಬರೆಯಲ್ಪಟ್ಟಿದೆ. ಶ್ಲೋಕಗಳು ಇಂಥ ಗ್ರಂಥಗಳಲ್ಲಿ ಸ್ವಾಭಾವಿಕವಾಗಿ

ಬರಹಗಾರರ ಅನೇಕ ದೋಷಗಳುಳ್ಳವಾಗಿವೆ. ಆದ್ದರಿಂದ ಇಲ್ಲಿ ಕೊಟ್ಟ ಅವತರಣಗಳ ವಾಕ್ಯದೋಷಗಳನ್ನು ವಾಚಕರು ನೋಡದೆ ವಿಷಯಗಳನ್ನು ಮಾತ್ರ ಲಕ್ಷಿಸಬೇಕೆಂದು ನಾನು ಅವರಿಗೆ ವಿಜ್ಞಾಪ್ತಿ ಮಾಡಿಕೊಳ್ಳುತ್ತೇನೆ.

ಸಾರಂಗದೇವನ ಜನ್ಮಸ್ಥಳವು ಆವುದು, ಮತ್ತು ಅವನ ತಾಯಿ ತಂದೆಗಳಾರು ಎಂಬುದು ಈ ಎರಡೂ ಗ್ರಂಥಗಳಿಂದ ತಿಳಿಯುವದಿಲ್ಲ. ಆದರೆ ಒಬ್ಬ ದೈವೀ ಪುರುಷನಿಗಿರುವಂಥ ವೃತ್ತಾಂತಗಳು ಇವುಗಳಲ್ಲಿ ಉಲ್ಲೇಖಿಸಲ್ಪಟ್ಟಿರುತ್ತವೆ. ಶಿವನ ಒಡ್ಡೋಲಗಕ್ಕೆ ನಾರದನು ಒಂದಾನೊಂದು ದಿವಸ ಆಗಮಿಸಿ ಪೃಥ್ವಿಯಲ್ಲಿಯ ದುಷ್ಕೃತಿಗಳನ್ನು ವರ್ಣಿಸಿ ಅದನ್ನು ಪುನೀತಮಾಡುವ ಕುರಿತು ಅವನಿಗೆ ಬಿನ್ನವಿಸಿಕೊಳ್ಳಲು ಆಗ ಶಿವನು ತನ್ನ ದಕ್ಷಿಣಭಾಗವನ್ನು ಅವಲೋಕಿಸಲು ಆ ವಾಮಮುಖದಿಂದ ಸಾರಂಗಮುನಿವರನು ಉತ್ಪನ್ನವಾದನು. ಆಗ ಶಿವನು ಅವನಿಗೆ ಭೂಲೋಕಕ್ಕೆ ತೆರಳಲು ಅಜ್ಞಾಪಿಸಲು ಅವನು ಕಾಶೀ ಪಟ್ಟಣಕ್ಕೆ ಬಂದು ಅಲ್ಲಿ ಮಳೆಯಮಲ್ಲೇಶನೆಂಬ ಹೆಸರಿನಿಂದ ಪ್ರಖ್ಯಾತನಾದನು. ಅಲ್ಲಿ ಅವನು "ಕಲೀಂದ್ರ" ರುಗಳಿಗೆ ಅಂದರೆ ಬಾದಶಹರಿಗೆ ಗುರುವಾಗಿ, ಒಂದು ಮಠವನ್ನು ಸ್ಥಾಪಿಸಿ, ಅಲ್ಲಿ ಬಸವಲಿಂಗ ದೇಶಿಕನೆಂಬ ಶಿಷ್ಯನನ್ನು ಇಟ್ಟು ದಕ್ಷಿಣದೇಶಕ್ಕೆ ತೆರಳಿದನು. ಈ ಮೇರೆಗೆ ಸಾರಂಗದೇವನ ಉತ್ಪತ್ತಿ ಮತ್ತು ಆರಂಭದ ಚರಿತ್ರೆಯು ಈ ಗ್ರಂಥಗಳಲ್ಲಿ ಕೊಡಲ್ಪಟ್ಟಿದೆ. ಇದರಿಂದ ಸಾರಂಗದೇವನು ಉತ್ತರಹಿಂದುಸ್ತಾನದಲ್ಲಿ ಕಾಶೀನಗರದಲ್ಲಿ ಉತ್ಪತ್ತಿಹೊಂದಿದನೆಂದು ಗೊತ್ತಾಗುತ್ತದೆ. ಇದರಿಂದ ಸಾರಂಗದೇವನ ಬಿರುದಾವಳಿಯಲ್ಲಿ "ಘನಲಿಂಗ ಚರಮೂರ್ತಿ ಕಾಶೀಸಾರಂಗ ಸಿಂಹಾಸನಪತಿ" ಎಂದು ಇದ್ದಿರಬಹುದು. ಆದರೆ ಈ ಸಾರಂಗಮಠವು ಕಾಶಿಯಲ್ಲಿ ಈಗ ಇದ್ದದ್ದು ಮಾತ್ರ ನಮಗೆ ತಿಳಿದುಬಂದಿಲ್ಲ.

ಆ ಮೇಲೆ ಸಾರಂಗದೇವನು ದಕ್ಷಿಣಾಭಿಮುಖವಾಗಿ ನಡೆದು ಆಂಧ್ರದೇಶಕ್ಕೆ ಮೊದಲು ಬಂದಂತೆ ತಿಳಿದುಬರುತ್ತದೆ. ಅಲ್ಲಿ ಅವನು ಕಪಿಲಸಿದ್ಧೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾದನು. ಆ ಪ್ರಾಂತವನ್ನು ಸಾರಂಗಧರನೆಂಬ ಅರಸನು ಆಳುತ್ತಿದ್ದನು. ಅವನಿಗೆ ಕೈಕಾಲುಗಳು ಇಲ್ಲದೆ ಉಪಯೋಗಕ್ಕೆ ಬಾರದೆ ಕಷ್ಟದಿಂದ ಬಳಲುತ್ತ ಶ್ರೀ ಪರ್ವತದಲ್ಲಿ ತಪಸ್ಸುಮಾಡುತ್ತಲಿದ್ದನು. ಆಗ ಈ ಕಪಿಲಸಿದ್ಧೇಶ್ವರನು ಆವನನ್ನು ಕಂಡು

ಅವನಿಗೆ ಕೈಕಾಲುಗಳನ್ನು ಸರಿಮಾಡಲು, ಅರಸನು ಅವನಿಗೋಸ್ಕರ ಬಹಳ ಭಕ್ತಿಯನ್ನು ತಾಳಿ, ವೀರಶೈವ ದೀಕ್ಷೆಯನ್ನು ಹೊಂದಿ, ಅವನಿಗೆ ಸಿದ್ಧಾಪುರ ಎಂಬ ಗ್ರಾಮವನ್ನು ಕಾಣಿಕೆಯಾಗಿ ಅರ್ಪಿಸಿದನು. ಮತ್ತು ತನ್ನಹೆಸರನ್ನೇ ಇಟ್ಟುಕೊಳ್ಳಬೇಕೆಂದು ಅರಸನು ವಿಜ್ಞಾಪಿಸಿಕೊಳ್ಳಲು, ತನ್ನ ರೂಢ ಹೆಸರಾದ ಕಪಿಲಸಿದ್ಧೇಶ್ವರನೆಂಬ ಹೆಸರನ್ನು ಬಿಟ್ಟುಕೊಟ್ಟು ಸಾರಂಗದೇವನೆಂಬ ಹೆಸರನ್ನು ತಾಳಿದನು. ಮತ್ತು ಶ್ರೀ ಪರ್ವತದಲ್ಲಿ ಸಾರಂಗ ಮಠವೆಂಬ ಹೆಸರಿನಿಂದ ಮಠವನ್ನು ಸ್ಥಾಪಿಸಿದನು. ಈ ಸ್ಥಳದಲ್ಲಿ ಸಾರಂಗ ಮಠವೆಂಬ ಮಠವೂ ಈಗಲೂ ಅಸ್ತಿತ್ವದಲ್ಲಿ ಇರುತ್ತದೆ.

ಆ ಮೇಲೆ ಸಾರಂಗದೇವನು ತಮಿಳು ದೇಶಕ್ಕೆ ಬಂದಂತೆ ತೋರುತ್ತದೆ. ಈ ವಿಷಯವಾಗಿ ಈ ಗ್ರಂಥಗಳಲ್ಲಿಹೇಳಲ್ಪಟ್ಟಿರುವದೇನಂದರೆ— ಅವನು "ಕುಂಭಕೋಣೆಗೆ ಬಂದು ಪುಲಚೆರೆಯದ ರಾಜಗೆ ಶಿವದೀಕ್ಷೆ ಕೊಟ್ಟು ಕುಂಭಕೋಣೆಯಲ್ಲಿ ಮಠ ಉಂಬಳಿಗಳು ಸಂಪಾದಿಸಿ ಮೂರು ಸಾವಿರ ಲಿಂಗಧೀರರಿಗೆ ಶೈವದೀಕ್ಷೆ ಕೊಟ್ಟು ಶಿಷ್ಯರನ್ನು ಮಾಡಿಕೊಂಡು ಕುಂಬಕೋಣೆ ಮಠದಲ್ಲಿ ಸಿದ್ಧವೀರದೇವರೆಂಬುವ ಶಿಷ್ಯನನ್ನು ಇಟ್ಟು" ಎಂದು ಗದ್ಯಭಾಗದಲ್ಲಿ ಹೇಳಲ್ಪಟ್ಟಿದೆ. ಮತ್ತು ಕಾವ್ಯಭಾಗದಲ್ಲಿ "ಕ್ಷೇತ್ರ ಯಾತ್ರೆಗಳ ನೋಡುತಲ್ಲಿ ತಿರುಗುತ ಬಂದು। ಧಾತ್ರಿಯಲ್ಲಿ ಕುಂಭಕೋಣೆಯಲ್ಲಿ ಸಾರಂಗಮಠನು ರಚಿಸಿ। ಚಿತ್ರವನು ತೋರುತಲಿ ಭೋಜ ವಿಕ್ರಮಾಂಕನ ಬಳಿಗೆ ಬಂದು ಅಶೀರ್ವಾದವಂ ಮಾಡಿದಂ ಮುದದಿಂ॥ ಪಾತ್ರ ಉಜ್ಜನಿಸಿಂಹಾಸನಕ್ಕೆ ಅಧಿಪತಿಗಳಾಗಿ। ಶತ್ರುಗಳ ಭಕ್ತರಮಾಡಿ ಮರುಳಾರ್ಯನೆನಿಸಿಕೊಂಡು। ಯತ್ರ (?) ಭಾವದಿ ಕಪ್ಪಡಿಯ ಸ್ಥಳಕ್ಕೆ ತಾವು ಬಂದು ಇತ್ಯಾದಿ.

ಈ ವರ್ಣನೆಗಳ ಮೇಲಿಂದ ಸಾರಂಗದೇವನು ದಕ್ಷಿಣಹಿಂದುಸ್ತಾನದಲ್ಲಿ ಅತ್ಯಂತ ಪ್ರಸಿದ್ಧ ಸ್ಥಾನವಾಗಿರುವ ಕುಂಭಕೋಣೆಗೆ ಆಗಮಿಸಿ ಅಲ್ಲಿ ಒಂದು ಮಹತ್ತರವಾದ ಮಠವನ್ನು ಸ್ಥಾಪಿಸಿದನು. ಮತ್ತು ಪುದುಚೆರೆಯ ಅರಸಗೆ ಶಿವದೀಕ್ಷೆಕೊಟ್ಟದ್ದಲ್ಲದೆ ಇನ್ನೂ ಅನೇಕ ಸಹಸ್ರಾರು ಜನರಿಗೂ ಶಿವದೀಕ್ಷೆಯನ್ನು ಕೊಟ್ಟುದಾಗಿ ತಿಳಿದುಬರುತ್ತದೆ. ಈ ಪ್ರಕಾರ ಈ ಪಟ್ಟಣದಲ್ಲಿ ಈ ಸಾರಂಗಮಠವು ಈಗಲೂ ಅತ್ಯಂತ ಪ್ರಸಿದ್ಧವಾಗಿರುತ್ತದೆ. ಈ ಮಠದ ಅಧಿಪತಿಗಳು ಈಗಲೂ ತಮಿಳು ಮತ್ತು ಮಲ

ಬಾರ ಪ್ರಾಂತದ ವೀರಶೈವರಿಂದ ಗುರುಗಳಾಗಿ ಭಾವಿಸಲ್ಪಟ್ಟಿರುತ್ತಾ ರೆಂದು ತಿಳಿಯುತ್ತದೆ. (ತಮಿಳು ಮತ್ತು ಮಲಬಾರ ಪ್ರಾಂತಗಳಲ್ಲಿಯ ವೀರಶೈವರ ಸ್ಥಿತಿಯು" ಎಂಬ ಶಿವಾನುಭವದಲ್ಲಿಯ ಲೇಖವನ್ನು ನೋಡಿರಿ. ೩—೧೦—೩೫) ಈ ಮಠಕ್ಕೆ ಲಕ್ಷಾಂತರ ರೂಪಾಯಿ ಬೆಲೆಯುಳ್ಳ ಸ್ವಾಸ್ತ್ಯಗಳೂ ಉಂಬಳಿಗಳೂ ಈ ವರೆಗೆಯೂ ನಡೆದುಬಂದಿರುತ್ತವೆ. ಈ ಪ್ರಕಾರ ಸಾರಂಗದೇವನು ಕುಂಬಕೋಣದಲ್ಲಿ ಧರ್ಮಪ್ರಸಾರದ ಮತ್ತು ಜಾಗ್ರತಿಯ ಕಾರ್ಯವನ್ನು ಮಾಡಿ ಅಲ್ಲಿ ಸಿದ್ಧವೀರದೇವರೆಂಬ ಶಿಷ್ಯ ನನ್ನು ಇಟ್ಟು ಉತ್ತರಾಭಿಮುಖವಾಗಿ ತೆರಳಿದನು.

ಆ ಮೇಲೆ ಅವನು ಮೈಸೂರು ಇಲಾಖಾ ತುಮಕೂರ ಜಿಲ್ಹೆ ಯಲ್ಲಿರುವ ಶಿವಗಂಗೆಯ ಕ್ಷೇತ್ರಕ್ಕೆ ಬಂದನು. ಈ ಭಾಗದಲ್ಲಿ ಅನೇಕ ಕಾಲ ಮಳೆ ಇಲ್ಲದೆ ದುರ್ಭಿಕ್ಷ ಬಿದ್ದಿರಲು, ಅಲ್ಲಿ ಮಳೆಯನ್ನು ಕರೆಯು ವಂತೆ ಮಾಡಲು ಅವನಿಗೆ "ಮಳೆಯ ಮರುಳಸಿದ್ಧೇಶ್ವರ" ನೆಂಬ ಹೆಸರು ಬಂದಿತು. ಈ ಶಿವಗಂಗೆಯ ಸ್ಥಳದಲ್ಲಿಯೂ ಗುಮ್ಮಳಾಪುರನೆಂಬ ಗ್ರಾಮ ದಲ್ಲಿಯೂ ಮಠಗಳನ್ನು ಸ್ಥಾಪಿಸಿ, ಅವುಗಳಿಗೆ ಸಿದ್ಧಲಿಂಗದೇಶಿಕನೆಂಬ ಶಿಷ್ಯನನ್ನು ನಿಯಮಿಸಿದನು.

ಆ ಮೇಲೆ ಬಳ್ಳಾರಿ ಜಿಲ್ಹಾ ಉಜ್ಜನಿಗೂ, ಆ ಮೇಲೆ ಕಪ್ಪಡಿಯ ಸಂಗಮನಾಥನ ಸ್ಥಳಕ್ಕೂ ಬಂದನು. ಈ ಬಗ್ಗೆ ಗ್ರಂಥದಲ್ಲಿಯ ವಿವ ರಣೆಗಳು ಏನೆಂದರೆ—

ಶತ್ರುಗಳ ಭಕ್ತರ ಮಾಡಿ ಮರುಳಾರ್ಯನೆನಿಸಿಕೊಂಡು ಯತ್ರ (?) ಭಾವದಿ ಕಪ್ಪಡಿಯ ಸ್ಥಳಕೆ ತಾವು ಬಂದು ನದಿಯ ನಿಂದು ಕೊಂಡು ಬಳಿಕ ಸ್ನಾನವ ಮಾಡಿ ಸಂಗಮೇಶ್ವರ ಲಿಂಗ। ವಿದಿತ ದರು ಶನಗೊಂಡು ಲಿಂಗಪೂಜೆಯ ಮಾಡಿ। ಸದಮಲಾತ್ಮನ ಭಕ್ತಿಯನು ಕೈಕೊಂಡು। ಮುದದಿ ಮಠವನು ರಚಿಸಿದಂ। ಚಂದದಲಿ ಬರಿಸಿದ ತ್ತನು ಪರರಾಯರ ಭಕ್ತಿಲಿ। ಒಂದೊಂದು ಸ್ವಾಸ್ತಿವಿತ್ತಗಳ ಪಡಕೊಂಡು ಪತ್ರಗಳ ಸಹಿತ। ಕಂಡು ಗೊರಳನವತಾರ ಮೂರ್ತಿ ಸಾರಂಗದೇವರ ನಾಮದಿಂ ಮೆರೆದನು. ।೮॥

ಇದರ ಮೇಲಿಂದ ಸಾರಂಗದೇವನು ಕಪ್ಪಡಿಯ ಸಂಗಮೇಶ್ವರನ ಲ್ಲಿಗೆ ಬಂದು ಅಲ್ಲಿ ಒಂದು ಮಠವನ್ನು ಕಟ್ಟಿಸಿ, ಅನೇಕ ರಾಜರಿಂದ

ಸ್ವಾಪ್ತಿಯನ್ನು ಪಡೆದದ್ದು ತಿಳಿದುಬರುತ್ತದೆ. ಈ ಸಾರಂಗ ಮಠವು ಸಂಗಮೇಶ್ವರ ದೇವಾಲಯದ ಬಲಪಕ್ಕದಲ್ಲಿಯೇ ಈಗಲೂ ಇರುತ್ತದೆ. ಮತ್ತು ಸ್ವಾಸ್ತಿವಿತ್ತಗಳನ್ನು ಪಡಿದಿದ್ದರ ವೃತ್ತಾಂತವು ಈ ಪ್ರಕಾರ ವಿವರಿಸಲ್ಪಟ್ಟಿರುತ್ತದೆ. ಏನೆಂದರೆ:—

ಪರಗಣೆ ಕರ್ತುರ್ ವಿಜಾಪುರ ಪ್ರಾಂತದೊಳು। ಮೆರೆವದೊಂದು ಯಳಮಲಿ ಎಂಬ ಪುರದರಸು। ವರ ಚಂದ್ರಶೇಖರನು ಸುಖದಿಂದ ರಾಜ್ಯ ವಾಳುತ್ತಿರಲು ಸಂತೋಷದಿಂದೆ॥ ಚರತಿಂಥಿಣಿ ಇದಿಗೊಂಡು ಕರ ತಂದು ತನ್ನ। ಅರಮನೆಯಲ್ಲಿ ತೃಪ್ತಿವಡಿಸಿ ಹರುಷವ ಪಡೆದು ತಾ ವರ ಮಠವನು ರಚಿಸಿಕೊಟ್ಟ ಹರಕೆಯನು ಪಡೆಕೊಂಡು ಸುಖದಿಂ ರಾಜ್ಯ ವಾಳುತಾ ॥೧೦॥

ಅಂದರೆ ಮುಂದೆ ಸಾರಂಗದೇವನು ವಿಜಾಪುರ ಜಿಲ್ಹೆಯಲ್ಲಿರುವ ಈಗಿನ ಆಲಮೇಲಕ್ಕೆ ಬಂದು ಅಲ್ಲಿ ಆಳುತ್ತಿದ್ದ ಚಂದ್ರಶೇಖರನೆಂಬ ಅಧಿಪತಿಯಿಂದ ಮನ್ನಣೆಯನ್ನು ಹೊಂದಿದನೆಂತಲೂ ಅಲ್ಲಿ ಒಂದು ಮಠವನ್ನು ಸ್ಥಾಪಿಸಿದನೆಂತಲೂ ಅಲ್ಲಿ "ತಮ್ಮ ಪಾದದಲ್ಲಿ ಉದ್ಭವಿಸಿದ ಮರಿಯನ್ನು ಇಟ್ಟಂತೆ" ಯೂ ತಿಳಿದುಬರುತ್ತದೆ. ಈ ಗ್ರಾಮದಲ್ಲಿ ಸಾರಂಗ ಮಠವೆಂಬ ಮಠವು ಈಗಲೂ ಇರುತ್ತದೆ. ಮುಂದೆ ಅಲ್ಲಿಯ ಒಂದು ತೋಟದಲ್ಲಿ ಬ್ರಹ್ಮರಾಕ್ಷಸನು ವಾಸಮಾಡಿಕೊಂಡು ಜನರನ್ನು ಬಹಳ ಪೀಡಿಸುತ್ತಿದ್ದದರಿಂದ, ಸ್ವಾಮಿಗಳು ಅಲ್ಲಿ ಜಪತಪಗಳನ್ನು ನಿರ್ವಹಿಸಿ ಆ ರಾಕ್ಷಸನನ್ನು ಓಡಿಸಿದರೆಂತಲೂ ಹೇಳಲ್ಪಟ್ಟಿದೆ.

ಮುಂದೆ ಆಲಮೇಲಕ್ಕೆ ಸಮೀಪವಾಗಿರುವ ಅಬ್ದುಲ್‌ಪುರಕ್ಕೆ ಹೋಗಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಸಿಂದಗಿ ಗ್ರಾಮಕ್ಕೆ ಬಂದನು. ಅಲ್ಲಿ ಒಂದು ಜೈನ ದೇವಾಲಯದಲ್ಲಿ ಏಳು ಜಡಿಯು ರಾಕ್ಷಸನಿರಲು, ಅದನ್ನು ಸಾರಂಗದೇವನು ಓಡಿಸಿ ಆ ದೇವಾಲಯವನ್ನು ಮಠವನ್ನಾಗಿ ಮಾಡಿ ಮೂವರು ಶಿಷ್ಯರನ್ನು ಆ ಸ್ಥಳದಲ್ಲಿ ಇಟ್ಟನು. ಇದರಿಂದ ಅಲ್ಲಿ ಅಧಿಕಾರಿ ಮಠ, ರಾಕ್ಷಸೀ ಮಠ ಮತ್ತು ಚೌಕೀಮಠ ಎಂದು ಮೂರು ಮಠಗಳಾದವು.

ಮುಂದೆ ಸಾರಂಗದೇವನು ಬಾಗೇವಾಡಿ ಗ್ರಾಮಕ್ಕೆ ಬರಲು, ಅಲ್ಲಿಯ ನಂದಿನಾಥನ ಗುಡಿಯ ಪೂಜೆಯನ್ನು ಬ್ರಾಹ್ಮಣರು ನಿರ್ವಹಿಸುತ್ತಿದ್ದನ್ನು ನೋಡಿ ಅಲ್ಲಿಯ ಅಧಿಪತಿಯಿಂದ ಅದನ್ನು ತಪ್ಪಿಸಿ ವೀರಶೈವರನ್ನು ಅಲ್ಲಿ

ನಿಯಮಿಸುವಂತೆ ಮಾಡಿ ಅಲ್ಲಿಯೂ ಒಂದು ಮಠವನ್ನು ಸ್ಥಾಪಿಸಿದನು. ಈ ಗ್ರಾಮದಲ್ಲಿ ಸಾರಂಗ ಮಠವೆಂಬ ಮಠವೂ ಈಗ್ಗೆಯೂ ಇದೆ.

ಆ ಮೇಲೆ ಸಾರಂಗದೇವನು ಬೆಳ್ಳುಬ್ಬಿ ಗ್ರಾಮಕ್ಕೆ ಬರಲು, ಈ ಭಾಗದ ಅಧಿಪತಿಯಾದ ಕೊಲ್ಹಾರದ ದೇಸಾಯಿಗೆ ಪಿಶಾಚ ಬಾಧೆಯಾ ದದ್ದರಿಂದ, ಅದನ್ನು ತಪ್ಪಿಸಿದ ಮೂಲಕ, ಆ ಸ್ಥಳದಲ್ಲಿ ಒಂದು ಮಠವು ಕಟ್ಟಿಸಿಕೊಡಲ್ಪಟ್ಟಿತು. ಮತ್ತು ದೇಸಾಯಿಯು ವೀರಶೈವ ದೀಕ್ಷೆಯನ್ನು ಸಾರಂಗದೇವನಿಂದ ಹೊಂದಿದ್ದಲ್ಲದೆ, ಅಲ್ಲಿಯ ಅನೇಕ ಜನರು ವೀರ ಶೈವ ಮತವನ್ನು ಅವಲಂಬಿಸಿದರು. ಈ ಬೆಳ್ಳುಬ್ಬಿಯು ಈಗ ವಿಜಾ ಪುರ ತಾಲೂಕಿನಲ್ಲಿದೆ. ಮತ್ತು ಕೊಲ್ಹಾರ ಗ್ರಾಮವು ಬಾಗೇವಾಡಿ ತಾಲೂಕಿನಲ್ಲಿ ದೇಸಾಯರ ಗ್ರಾಮವಾಗಿದೆ.

ಮುಂದೆ ಸಾರಂಗದೇವನು ಯರ್ಜರಿ ಎಂಬ ಗ್ರಾಮಕ್ಕೆ ಬಂದು ಅಲ್ಲಿಯೂ ಒಂದು ಮಠವನ್ನು ಸ್ಥಾಪಿಸಿದನು. ಈ ಸ್ಥಳದಲ್ಲಿ ಸಾರಂಗ ಮಠವು ಈಗಲೂ ಅಸ್ತಿತ್ವದಲ್ಲಿ ಇದೆ.

ಆ ಮೇಲೆ ಸಾರಂಗದೇವನು ಸಂಗಮಕ್ಕೆ ಬಂದು ವಾಸಿಸಹತ್ತಿ ದನು.

ಈ ಪ್ರಕಾರ ಅಲ್ಲಿ ವಾಸಿಸುತ್ತಿರಲು "ಗೀಜಗನಪಳ್ಳಿ" ಯಲ್ಲಿ (ಇದು ವಿಜಾಪುರ ಪಟ್ಟಣದ ಪೂರ್ವದ ಹೆಸರು) ಒಬ್ಬ ಮುಸಲ್ಮಾನ ಅರಸನು ಆಳುತ್ತಿದ್ದು, ಅಲ್ಲಿ ಬೇತಾಳನೊಬ್ಬನು ಅವನಿಗೆ ಬಹಳ ತೊಂದರೆಪಡಿಸು ತ್ತಿದ್ದದರಿಂದ ಬಾದಶಹನು ಸಾರಂಗದೇವನನ್ನು ತನ್ನಲ್ಲಿಗೆ ಬರಮಾಡಿ ಕೊಂಡನು. ಆಗ ಸಾರಂಗದೇವನು ಬಾದಶಹನ ಬಾಧೆಯನ್ನು ಪರಿ ಹರಿಸಲು ಅವನಿಗೆ ಅನೇಕ ಸ್ವಾಸ್ತ್ಯಗಳು ಕೊಡಲ್ಪಟ್ಟವು.

ಇದರಿಂದ ಸಾರಂಗದೇವನ ಕೀರ್ತಿಯು ದೇಶದಲ್ಲಿ ಹೆಚ್ಚಾಗಿ ಹಬ್ಬಿ ತು. ಆಗ ಹನಗುಂದ ಸೀಮೆ ದೇಸಾಯಿ ಮಲ್ಲರಡ್ಡಿಯು ಅವನನ್ನು ತನ್ನ ಲ್ಲಿಗೆ ಬರಮಾಡಿಕೊಂಡು ಸಂಗಾಪುರ ಎಂಬ ಗ್ರಾಮವನ್ನು ಉಂಬಳಿಯಾಗಿ ಹಾಕಿಕೊಟ್ಟನು. ಈ ಮಲ್ಲರಡ್ಡಿಯು ಈಗಿನ ಸರದಾರ ರಕ್ಕಸಗಿ ಸರದೇಸಾಯಿ ಯರ ಪೂರ್ವಜರಿರಬಹುದೆಂದು ತೋರುತ್ತದೆ.

"ಪರಗಣೆ ಕರ್ತು ಹನಗುಂದ ಸೀಮೆ ದೇಸಾಯಿಗಳಾ। ವರ ಮಲ್ಲ ರಡ್ಡೇರ। ರಕ್ಷಿಗಿಯ ಧೊರಗಳ ಭಕ್ತಿಯ ಕೈಕೊಂಡು ಸುಖದಿಂ

ದಿರುತಲಿ ॥೧೩॥ ಪುತ್ರ ಕಾಮೇಷ್ಟಿಕ ವರವನಿತ್ತು ಲಿಂಗಪ್ಪನಾಮದಿಂ, ನೇತ್ರ ಭಾವದಿ ಸಂಗಾಪುರ ಗ್ರಾಮವನು। ದತ್ತ ಉಂಬಳಿ ಪಡೆದು ಪತ್ರನು ಲಿಖಿಸಿಕೊಂಡು ಸಾರಂಗದೇವ ಮುದದಿಂ॥ ಕರ್ತು ದೇಸಾಯಿಗಳ ನಾಮದಿ ಶಕೆ ಸಹಿತ। ಮಿತಿ ಸಾವಿರದ ಎಣಕಿಲಿ ಇನ್ನೂರರುವತ್ತು। ಚಿತ್ರಭಾನು ಸಂವತ್ಸರ ಶ್ರಾವಣ ಶುದ್ಧ ದಶಮಿ ಗುರುವಾರದಿಂ ॥೧೪॥"

ಆ ಮೇಲೆ ಅದೇ ಹುನಗುಂದ ತಾಲೂಕಿನಲ್ಲಿರುವ ಕೆಲೂರು ನಾಡ ಗೌಡರಿಂದ ಕರೆಯಲ್ಪಟ್ಟವನಾಗಿ ಆ ಸ್ಥಳದಲ್ಲಿಯೂ ಸಾರಂಗದೇವನು ಆಸ್ತಿಯನ್ನು ಪಡೆದನು.

"ಪರಕೆಯನು ಕೊಟ್ಟು ತೆರಳುವ ಸಮಯದೊಳು ಬಂದು। ಧರೆಯಲ್ಲಿ ವೈಯಿಕ್ತಿ ಸಾಷ್ಟಾಂಗ ಪ್ರಣಮಿತನಾಗಿ। ಕೆಲವರ ನಾಡಗೌಡರ ಮಲ್ಲಪ್ಪ ಕರವಿಡಿದು ತಮ್ಮ ಸ್ಥಳಕ್ಕೆ ಕರಕೊಂಡು ಹೋದ ಬಳಿಕ॥ ನಿರುತದಿಂ ಮಠವ ರಚಿಸಿಕೊಟ್ಟು ಮುದದಿಂದೆ। ವರ ತೃಪ್ತಿಗೊಳಿಸಿ ಆಶೀರ್ವಾದವನು ಪಡಕೊಂಡು ತನ್ನ ಅರಮನೆಯಲ್ಲಿ ಸುಖದ ಅನುಭಾವ ಗೊಷ್ಠಿಯೊಳು ಇರುತಿರಲು ಒಂದು ದಿವಸ ॥೧೫॥ ಸ್ವಾಸ್ತಿ ವಿತ್ತಗಳ ಪಸಗಿ ವಳ್ಯಾಯ ಮುಂತಾದ। ಮಸ್ತಕವ ಮಾಡಿಸಿ ಜಯಪತ್ರವ ಮಾಡಿಕೊಟ್ಟು। ಸ್ವಸ್ತದಿಂದಿರುತೊಂದು ಗದ್ದಿಗೆಯ ಬಂಧಿಸಿಕೊಟ್ಟು.........

ಆ ಮೇಲೆ ಈ ದೇಸಾಯರು ಸಾರಂಗದೇವನನ್ನು ತಮ್ಮ ದೀಕ್ಷಾ ಗುರುಗಳನ್ನಾಗಿ ಮಾಡಿಕೊಂಡರು. ಕೆಲೂರಲ್ಲಿ ಸಾರಂಗಮಠದೆಂದು ಈಗಲೂ ಇದೆ.

ಆ ಮೇಲೆ ಈಗಿನ ಕುಷ್ಟಿಗಿ ಸೀಮೆಯಲ್ಲಿರುವ ಚಳ್ಳಗೆರೆಯ ದೇಸಾಯಿ ಕಸ್ತುರಿಯ ಕೋನೇರಿ ಎಂಕಪ್ಪನಾಯಕನು ಸಾರಂಗದೇವನನ್ನು ತನ್ನಲ್ಲಿ ಬರಮಾಡಿಕೊಂಡು ಅನೇಕ ಸ್ವಾಸ್ತಿವೃತ್ತಿಗಳನ್ನು ಕಲ್ಪಿಸಿಕೊಟ್ಟನು, ಮತ್ತು ತಾನು ವೀರಶೈವ ಧರ್ಮವನ್ನು ಸ್ವೀಕರಿಸಿದನು. ಅಲ್ಲಿ ಒಂದು ಮಠವೂ ಸ್ಥಾಪಿಸಲ್ಪಟ್ಟು, ಅಲ್ಲಿ ಕಾಲಾರಿ ಅಥವಾ ಸಿದ್ಧ ದೇಶಿಕ ಎಂಬ ಶಿಷ್ಯನು ಇಡಲ್ಪಟ್ಟನು. ಮುಂದೆ "ಪೂವಲ್ಲಿ ಪುರದ ಮಠಾಧಿಕಾರಿ ಪಂಚವಣ್ಣಿಗಿ ಸಿದ್ಧಯ್ಯಗಳ ಮಗಳ ತೆಗೆದು ಆ ಸಿದ್ಧ ದೇಶಿಕಗೆ ಲಗ್ನ ಕರ್ಮವ ಮಾಡಿ" ಎಂದು ಹೇಳಲ್ಪಟ್ಟಿದೆ. ಅಂದರೆ ಈ ಶಿಷ್ಯ

ನಿಗೂ ಈಗಿನ ಹೂಲಿಯ ಪಂಚವಣ್ಣಿಗೆಯ ಮಠದ ವರಿಗೂ ಶರೀರ ಸಂಬಂಧವನ್ನುಂಟು ಮಾಡಿದಂತೆ ತೋರುತ್ತದೆ.

"ಮೋದದಿಂ ಕಸ್ತುರಿಯ ಕೋನೇರಿ ಎಂಕಪ್ಪನಾಯುಕನಿಂದು। ಸದ್ಭಕ್ತಿಯಿಂದೆ ಸಾಷ್ಟಾಂಗ ಪ್ರಣಮಿತನಾಗಿ। ಕೂಡಿ ಸಾಧುಗಳ ಸಹಿತ ಕುಷ್ಟಿಸೀಮೆಯಲ್ಲಿ ಚಳ್ಳಗೆರೆಗೆ ಕರೆಕೊಂಡು ಬಂದರು ॥೧೭॥

ಭೇದವಿಲ್ಲದೆ ಸ್ವಾಸ್ತಿವೃತ್ತಿಗಳ ಗ್ರಾಮುವನು ಲಿಖಿಸಿಕೊಟ್ಟು ಮೋದ ದಿಂದಿರುತಲಿ॥ ಕಾಮುಹರನಂದನ ನಾಮು ಸಂವತ್ಸರ ನೃಪಶಾಲಿವಾಹನ ಶಕೆ। ಸಂದು ನಾಮುವು ಸಾವಿರದ ನೂರೊಂದನೆಯ: ಕ್ಷೇಮುದಿಂದೆ ಆಶೀ ರ್ವಾದವ ಕೊಟ್ಟು ಬಂದರು ಕಪ್ಪಡಿಯ ಸ್ಥಳಕೆ ಮುದದಿಂ ॥೧೮॥

ಆ ಮೇಲೆ ಸಾರಂಗದೇವನು ವಿಜಯನಗರದ ಅರಸು ದೇವರಾಜನ ಆಸ್ಥಾನಕ್ಕೂ ಬಂದು ಅಲ್ಲಿಯೂ ಮನ್ನಣೆ ಹೊಂದಿದ್ದು ತಿಳಿಯುತ್ತದೆ.

"ಎಲ್ಲ ಚಾಗಿಗಳರಸ ದೇವರಾಜ। ಬಲ್ಲಿದ ಚರಮೂರ್ತಿಗಳಿಗೆ ಮಠವನು ರಚಿಸಿ ಸಾರಂಗದೇವರು। ಅಲ್ಲಿಂದ ಆನೆಗುಂದಿಗೆ ಬಂದು ನಿರ್ಮಿತ ಮಠವನು ಪಡೆದು। ಖುಲ್ಲವಾದಿಗಳ ಗೆದ್ದು ಅಲ್ಲಿ ಮಹತ್ವವ ಮಾಡಿ। ಅಲ್ಲಿಗಲ್ಲಿ ತೋರುತ ಸಂಗಮ ಸ್ಥಲಕ್ಕೆ ಬಂದರು" ॥೧೨॥

ಇದರಿಂದ ಸಾರಂಗದೇವನು ಹಂಪೆಗೂ ಆ ಮೇಲೆ ಆನೆಗೊಂದಿಗೂ ಬಂದಂತೆ ತಿಳಿಯುತ್ತದೆ. ಈ ಆನೆಗೊಂದಿಯಲ್ಲಿ "ತನ್ನ ಸೂತ್ರದವ ರನ್ನು ಅಲ್ಲಿ ಇಟ್ಟು" ಎಂದು ಹೇಳಿರುವದರಿಂದ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಒಬ್ಬ ಶಿಷ್ಯನನ್ನು ಇಟ್ಟಂತೆ ತಿಳಿಯುತ್ತದೆ.

ಈ ಪ್ರಕಾರ ಸಾರಂಗದೇವನು ಶ್ರೀಶೈಲದಿಂದ ತಮಿಳು ದೇಶದ ವರೆಗೆ ಪ್ರವಾಸ ಮಾಡಿ ಅನೇಕ ಧಾರ್ಮಿಕ ಕೃತ್ಯಗಳನ್ನು ಎಸಗಿದನು ಮತ್ತು ಅನೇಕ ಮಠಗಳನ್ನು ಸ್ಥಾಪಿಸಿದನು. ಈ ಪ್ರಕಾರ ಸ್ಥಾಪಿಸಿ ಕಡೆಗೆ ಬಸವೇಶ್ವರನ ಐಕ್ಯಸ್ಥಾನವಾದ ಸಂಗಮ ಕ್ಷೇತ್ರವನ್ನು ತನ್ನ ವಾಸಸ್ಥಳ ವನ್ನಾಗಿ ಮಾಡಿಕೊಂಡು ವಿಜಾಪುರ ಬಾದಶಹರಿಂದ ಮನ್ನಣೆಯನ್ನು ಹೊಂದಿ, ಈ ಪ್ರಾಂತದಲ್ಲಿರುವ ಎಲ್ಲ ಮಹತ್ವದ ಅಧಿಪತಿಗಳನ್ನು ವೀರ ಶೈವ ಧರ್ಮಕ್ಕೆ ಒಲಿಸಿ, ಈ ನಾಡಿನಲ್ಲೆಲ್ಲ ಧರ್ಮಜಾಗ್ರತಿಯನ್ನು ಮಾಡಿ ದನು. ಮತ್ತು ಕಡೆಗೆ ಈ ಸಂಗಮನಾಥನ ಸಮೀಪದಲ್ಲಿಯೇ ಐಕ್ಯ ವನ್ನು ಹೊಂದಿದನು. ಇದನ್ನು ಗ್ರಂಥಕರ್ತನು ಕೆಳಗೆ ಬರೆದ ಮೇರೆಗೆ ವಿವರಿಸಿರುವನು.

"ಅಲ್ಲಿ ಅಲ್ಲಿಗೆ ತಮ್ಮ ವಂಶೀಭೂತರನಿಟ್ಟು। ಉಲ್ಲಸದಿಂದೆ ಇರುವ ಸಮಯದೊಳು ಮಹಾದೇವ। ಕೈಲಾಸದಿಂದೆ ಈರ್ವರು ಚರಮೂರ್ತಿಗಳು ಪತ್ರಸಹಿತ ಕಳುಹಿದಂ ಬಂದರು॥ ಎಲ್ಲ ಕ್ಷೇತ್ರಕ್ಕೆ ಅಧಿಕ ಸಂಗಮೇಶ್ವರ ಲಿಂಗ। ಸ್ಥಳದಲ್ಲಿ ಭಕ್ತಿಯನು ಮಾಡಿ ಸಂತೋಷ ಪಡೆದು। ಎಲ್ಲರ ಕರೆದು ಹೇಳಿ ಕೇಳಿ ಉಲ್ಹಾಸದಿಂದ ಲಿಂಗೈಕ್ಯ ಪಡೆದರು ಸಾರಂಗ ಸಿದ್ಧೇಶ್ವರ ನಾಮದಿಂ ॥೧೯॥ ನೆರೆದಿರ್ದ ಭಕ್ತ ಮಾಹೇಶ್ವರರು ಕೂಡಿ ತಾವು। ಹರುಷದಿಂದೆ ದಾನಧರ್ಮವ ನೆಸಗಿ ಕರಕಮಲ ಮುಗಿದು ವರ ಗದ್ದುಗೆಯ ನೆಸಗಿ ಸಾರಂಗ ಸಿದ್ಧೇಶ್ವರನ ಗುಡಿ ಎಂದು ಕರೆದರು ಸರ್ವ ಜನರು॥ ವರಕೀರ್ತಿ ಪಡೆದ ಮರುಳ ಸಿದ್ಧೇಶ್ವರನ ಅವತಾರ ಮೂರ್ತಿ ಧರೆಯಲ್ಲಿ ಸಾರಂಗ ದೇವರು ಮಹತ್ವ ಪುರುಷರು ಎಂದು ಕರ ಎತ್ತಿ ಕೊಂಡಾಡಿದರು ಕಂಡ್ಯಾ ಸಾರಂಗ ದೇವರ ಚಾರಿತ್ರ್ಯವಮಂ ॥೨೦॥

ಸಂಗಮಮಠದಲ್ಲಿಯ ಪ್ರತಿಯಲ್ಲಿಯ ಇಷ್ಟು ಮಾತ್ರ ಉಲ್ಲೇಖ ವಿದ್ದು, ಗುಳೇದಗುಡ್ಡದ ಮಠದಲ್ಲಿಯ ಪ್ರತಿಯಲ್ಲಿ ಸಾರಂಗದೇವನು ಮೃತಪಟ್ಟತರುವಾಯ ವರ್ತಿಸಿದ ಸಂಗತಿಗಳು ವರ್ಣಿಸಲ್ಪಟ್ಟಿವೆ. ಇವಾ ದರೂ ಮಹತ್ವದವಿರುವದರಿಂದ, ಅವುಗಳನ್ನು ನಾವು ಇಲ್ಲಿ ಕೊಡುತ್ತೇವೆ.

## ಶಿವಸಂಗಪ್ಪಯ್ಯನ ವೃತ್ತಾಂತ.

ಸಾರಂಗದೇವನಿಗೆ ಒಬ್ಬ ತಮ್ಮನಿದ್ದು, ಈತನಿಗೆ ಶಿವಸಂಗಪ್ಪಯ್ಯ, ಕಾಶೀದೇವರು, ಮತ್ತು ಸುರಪ್ಪಯ್ಯ ಎಂದು ಮೂವರು ಮಕ್ಕಳಿದ್ದರು. ಈ ಮಕ್ಕಳುಗಳಲ್ಲಿ ಶಿವಸಂಗಪ್ಪಯ್ಯನು ಸಂಗಮದಲ್ಲಿ, ಕಾಶೀದೇವರು, ಚಳಗೆರೆಯಲ್ಲಿ ಮತ್ತು ಸುರಪ್ಪಯ್ಯನು ಆನೇಗೊಂದಿಯಲ್ಲಿ ಅಧಿಕಾರಿಗ ಳಾಗಿ ಆಯಾ ಮಠಗಳ ಕಾರ್ಯಗಳನ್ನು ನಿರ್ವಹಿಸಹತ್ತಿದರು.

ಇವರಲ್ಲಿ ಶಿವಸಂಗಪ್ಪಯ್ಯನು ಮುಂದೆ ಬಳ್ಳಾರಿ ಜಿಲ್ಹಾ ಕೊಟ್ಟೂರು ಗ್ರಾಮಕ್ಕೆ ಕರಿಸಲ್ಪಟ್ಟವನಾಗಿ ಬಾಳೇಹಳ್ಳಿಯ ಸಿಂಹಾಸನಾಧಿಪತಿಗಳಾದ ಚನ್ನವೀರಸ್ವಾಮಿಗಳು ಮತ್ತು ಪರ್ವತ ಸಿಂಹಾಸನಾಧಿಪತಿಗಳಾದ ವೀರ ಭಿಕ್ಷಾವರ್ತಿಗಳು ಈ ಗ್ರಾಮದಲ್ಲಿ ಇರಲಾಗಿ ಈ ಮೂವರೂ ಹರಪನ ಹಳ್ಳಿಯ ಸಂಸ್ಥಾನದ ಧೊರೆಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದು

ತಿಳಿಯುತ್ತದೆ. ಅಂದಿನಿಂದ ಈ ಧೊರೆಗಳು ವೀರಶೈವ ಸಾಂಪ್ರದಾಯಕ್ಕೆ ಅನುಸರಿಸಿ ಕಡೆವರೆಗೆ ಇದ್ದರು.

ಆ ಮೇಲೆ ಶಿವಸಂಗಪ್ಪನು ಕೊಟ್ಟೂರು ಉಜ್ಜಿನಿಗೆ ಬರಲು ಅವನಿಗೆ ಅಲ್ಲಿ ಮಠಮಾನ್ಯಗಳು ಅರಸನಿಂದ ಕೊಡಲ್ಪಟ್ಟವು. ಈ ಮಠಕ್ಕೆ ಶಿವಸಂಗಪ್ಪನ ಮಗ ಸಣ್ಣಸಾರಂಗೇಶ್ವರನೆಂಬವನು ಚರಂತಿಯಾಗಿ ನೇಮಿಸಲ್ಪಟ್ಟನು.

## ಸಣ್ಣಸಾರಂಗೇಶ್ವರನ ವೃತ್ತಾಂತ.

ಈ ಸಣ್ಣಸಾರಂಗೇಶ್ವರನು ವಿದ್ಯಾವಂತನಾಗಿ ದೇಶದಲ್ಲಿ ಬಹು ಪ್ರಖ್ಯಾತನಾದನು. ಅವನು ಮೂಲ ಸಾರಂಗದೇವರಷ್ಟೇ ಮಹತ್ಮಿಕ ಪುರುಷನಾಗಿ ದೇಸದಲ್ಲಿ ಸಂಚರಿಸಿ, ಅನೇಕ ಮಹತ್ಕಾರ್ಯಗಳನ್ನು ಮಾಡಿದ್ದು ತೋರಿಬರುತ್ತದೆ. ಅವುಗಳನ್ನು ವಾಚಕರ ಮುಂದೆ ಇಡುತ್ತೇವೆ.

ಸಣ್ಣ ಸಾರಂಗೇಶ್ವರನು ಮೂಲಸಾರಂಗೇಶ್ವರನು ಸ್ಥಾಪಿಸಿದ ಮಠಗಳ ಆಡಳಿತೆಯನ್ನು ಸಮಪಡಿಸಿ ಅವುಗಳನ್ನು ನಿರ್ವಹಿಸುವ ಕಾರ್ಯವನ್ನು ಚನ್ನಾಗಿ ಜರಿಗಿಸಹತ್ತಿದನು.

ಉಜ್ಜಿನಿಯಲ್ಲಿ ಹರಪನಹಳ್ಳಿಯ ಧೊರೆಯು ಒಂದು ದಿವಸ ಇರಲಾಗಿ, ಅನೇಕ ಜನ ಪಂಡಿತರು ಅವನ ಆಸ್ಥಾನದಲ್ಲಿ ನೆರೆದಿದ್ದರು. ಆಗ್ಗೆ ಧರ್ಮ ಚರ್ಚೆಗಳು ನಡೆಯಲು, ಸಣ್ಣ ಸಾರಂಗೇಶ್ವರನು ಎಲ್ಲರನ್ನು ವಿವಾದದಲ್ಲಿ ಸೋಲಿಸಿ, ವೀರಶೈವ ಮತದ ಹೆಚ್ಚಳವನ್ನು ಅರಸನಿಗೆ ಮನವರಿಕೆ ಮಾಡಿಕೊಟ್ಟನು. ಆಗ ಅರಸನು ಅಲ್ಲಿದ್ದ ಶಿಖಾ, ಶೈಲ, ಕಠಾರಿಗಳನ್ನು ಅವನಿಗೆ ಕೊಟ್ಟನು. ಆ ಮೇಲೆ ಸಣ್ಣ ಸಾರಂಗೇಶ್ವರನು ಉಜ್ಜಿನಿಯಲ್ಲಿ ತನ್ನ ಶಿಷ್ಯರನ್ನಿಟ್ಟು ಕಾಶಿಗೆ ಹೋದನು.

ಕಾಶಿಯಲ್ಲಿ ಕೆಲ ದಿನವಿದ್ದು ಮರಳಿ ಸ್ವದೇಶಕ್ಕೆ ಬಂದು ಸಂಗಮ ಕ್ಷೇತ್ರದಲ್ಲಿಯ ಮಠವನ್ನು ಜೀರ್ಣೋದ್ಧಾರ ಮಾಡಿ ಅಲ್ಲಿ ಗಚ್ಚಿನಮಠವನ್ನು ಕಟ್ಟಿಸಿದನು.

ಆ ಮೇಲೆ ವಿಜಾಪುರ ತಾಲೂಕಿನಲ್ಲಿರುವ ಉಪ್ಪಲದಿನ್ನಿ ಗ್ರಾಮ, ಆ ಮೇಲೆ ಇದೇ ಜಿಲ್ಹೆಯಲ್ಲಿರುವ ಬೀಳಗಿಯ ಪ್ರಸಿದ್ಧ ದೇವಾಲಯವಾದ

ಸಿದ್ಧೇಶ್ವರ ಈ ಸ್ಥಳಗಳನ್ನು ಸಂದರ್ಶಿಸಿ ಆಮೇಲೆ ತಿರುಗಿ ಸಂಗಮ ಕ್ಷೇತ್ರಕ್ಕೆ ಬಂದು ಅಲ್ಲಿ ತಮ್ಮ "ಪಾದಸೂತ್ರದ ಮರಿಯನ್ನು ಇಟ್ಟರು."

ಆಮೇಲೆ ಬಾಗಲಕೋಟಿ ಪ್ರಾಂತದ "ದೇಸಾಯಿ ಸರನಾಡಗೌಡ" ರಾದ ಕೆಂಚವೀರ ಎಂಬ ಅಧಿಪತಿಯು ಅವರನ್ನು ಕರಿಸಿ, ಅವರಿಂದ ದೀಕ್ಷೆಯನ್ನು ಹೊಂದಿದನು. ಮತ್ತು ಚೌಡಾಪುರ ಮತ್ತು ಹೊನ್ನಿಹಾಳ್ಳ ಎಂಬ ತಮ್ಮ ಗ್ರಾಮಗಳಲ್ಲಿ ಈ ಸಣ್ಣ ಸಾರಂಗೇಶ್ವರನಿಗೆ ಮಠಗಳನು ಕಲ್ಪಿಸಿಕೊಟ್ಟನು.

ಆ ಮೇಲೆ ಸ್ವಾಮಿಗಳು ಅದೇ ಬಾಗಲಕೋಟಿ ತಾಲೂಕಿನಲ್ಲಿರುವ ಶಿರೂರ ಗ್ರಾಮಕ್ಕೆ ಬಂದು ಅಲ್ಲಿಯವರಿಂದಲೂ ವಿಶೇಷವಾಗಿ ಮನ್ನಣೆ ಹೊಂದಿದನು.

ಆ ಕಾಲಕ್ಕೆ ಕಮತಿಗಿ ಗ್ರಾಮದಲ್ಲಿ "ಕಲ್ಲನಾಗತಿಯ ಸಂತತಿಯವರು" ವಿಶೇಷವಾಗಿ ಇರುತ್ತಿದ್ದು ನೊಸಲಭೈರಿ ಶೀನಪ್ಪನಾಯಕನೆಂಬವನು ಅವರಿಗೆ ಮುಖ್ಯಸ್ತನಾಗಿ ಸುತ್ತಲಿನ ಸೀಮೆಯನ್ನು ಆಳುತ್ತಿದ್ದನು. ಈತನು ಸಣ್ಣ ಸಾರಂಗದೇವನನ್ನು ಬರಮಾಡಿಕೊಂಡು ಅವನಿಂದ ದೀಕ್ಷೆಯನ್ನು ಹೊಂದಿದನು. ಆಗ ಅವನ ಅನುಯಾಯಿಗಳೆಲ್ಲರೂ ಲಿಂಗಧಾರಿಗಳಾದರು.

ಐಹೊಳೆ ಗ್ರಾಮದಲ್ಲಿ ಹಿರೇ ಸೋಮನಾಯಕನೆಂಬ ಬೇಡರ ಧೊರೆಯು ಸುತ್ತಲಿನ ಸೀಮೆಯನ್ನು ಆಳುತ್ತಿದ್ದನು. ಆತನು ಸಣ್ಣ ಸಾರಂಗದೇವನನ್ನು ಬರಮಾಡಿಕೊಂಡು ವೀರಶೈವ ಮತಾನುವರ್ತಿಯಾದನು. ಮತ್ತು ಆತನು ಅಲ್ಲಿ ಮಠಮಾನ್ಯಗಳನ್ನು ಸಾರಂಗದೇವನಿಗೆ ಹಾಕಿಕೊಟ್ಟನು.

ಮುಂದೆ ಪಟ್ಟದಕಲ್ಲಿನಲ್ಲಿ ಈರಪ್ಪನಾಯಕನೆಂಬವನು ಆಳುತ್ತಿದ್ದು ಆತನೂ ಸಣ್ಣ ಸಾರಂಗದೇವನಿಂದ ಶಿವದೀಕ್ಷೆಯನ್ನು ಹೊಂದಿದನು. ಮತ್ತು ಚಿರಮಿಲಿಗಿ, ಪಟ್ಟದಕಲ್ಲು, ಅಕರಗಲ್ಲು, ಸಿದ್ದನಕೊಳ್ಳ, ಉಪನಹಾಳ ಈ ಸ್ಥಳಗಳಲ್ಲಿ ಮಠಮಾನ್ಯಗಳನ್ನು ಮಾಡಿ ಕೊಟ್ಟನು. ಮತ್ತು ಸ್ವಾಮಿಗಳಾದರೂ ಅಲ್ಲಿ ಪಂಚ ಲಿಂಗಗಳನ್ನು ಸ್ಥಾಪನೆ ಮಾಡಿದರು.

ಈ ಮೇರಿಗೆ ಸಣ್ಣ ಸಾರಂಗದೇವನು ಅನೇಕ ಮಹತ್ವದ ಕಾರ್ಯಗಳನ್ನು ಮಾಡಿ ತಿರುಗಿ ಸಂಗಮಕ್ಕೆ ಬಂದನು. ಮತ್ತು ದೇಶದಲ್ಲಿರುವ ಸಾರಂಗ ದೇವರ ಮಠಗಳನ್ನೆಲ್ಲ ತಮ್ಮ ಸಹೋದರರ ಸಂತತಿಯವರಲ್ಲಿ ಹಂಚಿಕೊಟ್ಟು, ತಾನು ತೀರ್ಥಾಟನಕ್ಕೆ ತೆರಳಿದನು.

ಈ ಪ್ರಕಾರ ತೀರ್ಥಾಟನವನ್ನು ಕೆಲ ದಿವಸ ಮಾಡಿ ಸ್ವಾಮಿಗಳು ಕಡೆಗೆ ಹನಗುಂದಕ್ಕೆ ಬಂದರು. ಅಲ್ಲಿಂದ ಕೆಲೂರಕ್ಕೆ ಬಂದು ಅಲ್ಲಿಯೇ ಸಮಾಧಿಸ್ತರಾದರು.

ಈ ಮೇರಿಗೆ ಸಣ್ಣ ಸಾರಂಗ ದೇವರ ವೃತ್ತಾಂತವಿದೆ. ಇದರ ಮೇಲಿಂದ ಇವರೂ ಪಂಡಿತರಾಗಿ ದೇಶದಲ್ಲಿ ಅನೇಕ ಧರ್ಮೋದ್ಧಾರದ ಕಾರ್ಯಗಳನ್ನು ನಿರ್ವಹಿಸಿದ್ದು ತೋರಿಬರುತ್ತದೆ.

ಮುಂದೆ ಕೆಲವು ವರ್ಷಗಳ ಮೇಲೆ ಗುಳೇದಗುಡ್ಡ ಗ್ರಾಮದ ವಸಾಹತ್ತು ಮಾಡಲ್ಪಟ್ಟಿತು. ಇದು ವಿಜಾಪುರ ಜಿಲ್ಹೆಯಲ್ಲಿ ಬಹು ದೊಡ್ಡ ಗ್ರಾಮವು. ಈ ಗ್ರಾಮಸ್ಥಾಪನೆಯ ಕಾಲಕ್ಕೆ ಈ ಸಾರಂಗದೇವರ ಮಠದ ವಂಶಿಕರಾದ ಶಿವಸಂಗಪ್ಪಯ್ಯನೆಂಬವರು ಚರಂತಿಯಾಗಿ ನೇಮಿಸಲ್ಪಟ್ಟಿದ್ದು ಅವರ ಹಸ್ತದಿಂದಲೇ ಈ ಗ್ರಾಮದ ಸ್ಥಾಪನೆಯ ಕಾರ್ಯವು ನೆರವೇರಿಸಲ್ಪಟ್ಟಿತು. ಈ ಬಗ್ಗೆ ಈ ಗ್ರಂಥದಲ್ಲಿ ಉಲ್ಲೇಖವಿರುವದೇನೆಂದರೆ:— "ಗುಳೇದಗುಡ್ಡದ ಪೇಟೆಪರ್ವತಿ ನಿರ್ಮಾಣಮಾಡುವದರ ಸಲುವಾಗಿ ಶಿಷ್ಯಮಕ್ಕಳು ದೇಸಾಯಿ ಹಿರೆ ಎಲಗುರ್ದಪ್ಪನಾಯಕ ಚೊಳಚಗುಡ್ಡದ ಮುದಿಯಪ್ಪಶೆಟ್ಟರು ಕೂಡಿ ಸಮಸ್ತರು ಮಾತಾಡಿ ಬಿನ್ನಹಪತ್ರ ಬರೆದು ಕರೆಯಿಸಿಕೊಂಡರು. ಇವರ ಧೂಳಪಾದೋದಕ ಚಲ್ಲಿ ಪೂಜಿಸಿ ಪುನಸ್ಕಾರವ ಮಾಡಿ ಕೌಲು ಜಾಂಡೆಯ ನಡಿಸಿ ಶೆಟ್ಟರ ಹೆಸರಿಲಿ ಗುರುಗಳಿಗೆ ಲಿಂಗಮುದ್ರೆ ಪಂಚಸ್ಥಾಪನೆ ಮಾಡಿಸಿ ಮಠ ನೋಡಬೇಕೆಂದು ವತನ ಸ್ವಾಸ್ತಿವೃತ್ತಿ ಮರ್ಯಾದೆ ನೋಡಲೆಂದು ಗೊತ್ತುಮಾಡಿದರು." ಆದ್ದರಿಂದ ಗುಳೇದಗುಡ್ಡದಲ್ಲಿ ಈ ಸಾರಂಗಮಠಾಧಿಪತಿಗಳೇ ಮುಖ್ಯವಾಗಿಟ್ಟುಕೊಂಡು ಈ ಪಟ್ಟಣವು ಸ್ಥಾಪಿಸಲ್ಪಟ್ಟಿದ್ದು ಕಂಡುಬರುತ್ತದೆ.

ಗುಳೇದಗುಡ್ಡದ ಗ್ರಂಥದಲ್ಲಿ ಮುಂದಿನ ವಂಶಜರ ಇನ್ನೂ ಕೆಲವು ವೃತ್ತಾಂತಗಳಿದ್ದು ಅವುಗಳಲ್ಲಿ ಮಹತ್ವದ ಐತಿಹಾಸಿಕ ಸಂಗತಿಗಳು

ತೋರಿಬರದ್ದರಿಂದ ನಾವು ಅವುಗಳನ್ನು ಈ ಲೇಖದಲ್ಲಿ ಕೊಟ್ಟಿಲ್ಲ. ಆದರೆ ಮುಂದಿನ ಸಂತತಿಯವರು ದೇಶದಲ್ಲಿರುವ ಸಾರಂಗಮಠಗಳನ್ನು ಕಾಲ ಕಾಲಕ್ಕೆ ಹಂಚಿಕೊಂಡ ಹಾಗೆ ಉಲ್ಲೇಖಗಳಿವೆ.

ಮೇಲ್ಕಂಡ ವೃತ್ತಾಂತಗಳು ಎಷ್ಟು ಮಹತ್ವದವೆಂಬುದನ್ನು ನಾವು ವಾಚಕರಿಗೆ ವಿಶದಪಡಿಸುವ ಅವಶ್ಯವಿಲ್ಲ. ಇವುಗಳ ಮೇಲಿಂದ ಪೂರ್ವ ಕಾಲದಲ್ಲಿ ಸಿಂಹಾಸನಾಧಿಪತಿಗಳೂ ಮಠಾಧೀಶರೂ ಕರ್ನಾಟಕದಲ್ಲಿ ಯಾವ ಪ್ರಕಾರ ಧರ್ಮಜಾಗ್ರತಿಯ ಕಾರ್ಯಗಳಲ್ಲಿ ತೊಡಗುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಇವರು ಧರ್ಮಬೋಧೆ ಮಾಡುತ್ತ ದೇಶದಲ್ಲಿ ಸದಾ ಸಂಚಾರಮಾಡುವರು. ತಮ್ಮ ಬೋಧೆಗೆ ಮನಗೊಂಡವರನ್ನು ವೀರಶೈವ ಮತಸ್ಥರನ್ನಾಗಿ ಮಾಡಲು ಎಂದೂ ಹಿಂದೆಗೆಯಲಿಲ್ಲ. ಮತ್ತು ತಮ್ಮ ಕಾರ್ಯವು ಆಯಾ ಸ್ಥಳಗಳಲ್ಲಿ ನಿರಂತರವಾಗಿ ಸಾಗುವ ಕುರಿತು ಅಲ್ಲಲ್ಲಿ ಮಠಗಳ ಸ್ಥಾಪನೆಯನ್ನು ಮಾಡುವರು ಈ ಮೇರೆಗೆ ಅವರ ಕಾರ್ಯಕ್ರಮವಿದ್ದದ್ದು ಮೇಲ್ಕಂಡ ವಿವರಣೆಗಳಿಂದ ಕಂಡುಬರುತ್ತದೆ. ಇದರಿಂದ ದೇಶದಲ್ಲಿ ಪರಧರ್ಮಿಗಳಿಂದ ಭಯಂಕರ ಆಘಾತಗಳು ಕಾಲ ಕಾಲಕ್ಕೆ ಉಂಟಾಗುತ್ತ ಬಂದಿದ್ದರೂ, ಧರ್ಮಜಾಗ್ರತೆಯು ಕರ್ನಾಟಕದಲ್ಲಿ ಸ್ಥಿರವಾಗಿ ಉಳಿದು ಹಿಂದುತ್ವವು ರಕ್ಷಿಸಲ್ಪಟ್ಟಿತೆಂದು ನಿರ್ವಿವಾದವಾಗಿ ಹೇಳಬಹುದು.

ಬಾಮನಿ ಮತ್ತು ವಿಜಯನಗರದ ಕಾಲದಿಂದಲೂ ಕರ್ನಾಟಕದಲ್ಲಿ ನಾನಾ ಜನಾಂಗದವರು ದಾಳಿ ಇಡುತ್ತ ಮತ್ತು ಅಲ್ಲಲ್ಲಿ ಸಂಸ್ಥಾನಗಳನ್ನೂ ದೇಸಗತಿಗಳನ್ನೂ ಸ್ಥಾಪಿಸುತ್ತ ಬಂದಂತೆ ತೋರುತ್ತದೆ. ಇದಕ್ಕೆ ಮೈಸೂರು, ಕಿತ್ತೂರು, ನವಲಗುಂದ, ಸುರಪುರ, ಚಿತ್ರಕಲ್ಲದುರ್ಗ, ಹರಪನಹಳ್ಳಿ, ಸ್ವಾದಿ, ಬೀಳಗಿ, ಹಾಗಲವಾಡಿ ಈ ಮೊದಲಾದ ಗ್ರಾಮಗಳ ಅಧಿಪತಿಗಳೇ ಉದಾಹರಣೆಯಾಗಿದ್ದಾರೆ. ಇವರಲ್ಲಿ ಬಹುಜನರ ಪೂರ್ವಜರು ವೀರಶೈವರಿರದೆ, ಹಿಂದುಗಡೆ ಅವರು ವೀರಶೈವರಾದ ಹಾಗೆ ಇತಿಹಾಸದಿಂದ ತಿಳಿದುಬರುತ್ತದೆ. ಈ ಪ್ರಕಾರ ಆ ಕಾಲಕ್ಕಿನ ಅರ್ಧಮರ್ಧ ಸುಧಾರಿಸಿದ, ಬಿರುಸು, ಮತ್ತು ಕಠೋರ ಸಮಾಜಗಳೂ ಅವುಗಳ ಅಧಿಪತಿಗಳೂ ಅಹಿಂಸಾತ್ಮಕವಾದ ಮತ್ತು ಸುಸಂಸ್ಕೃತವಾದ ವೀರಶೈವ ಧರ್ಮವನ್ನು ಸ್ವೀಕರಿಸಿದ್ದರ ಮೇಲಿಂದ ಆಗಿನ ವೀರಶೈವ ಧರ್ಮೀಯರ ಧಾರ್ಮಿಕ ಸಾಮಾಜಿಕ ಮತ್ತು ರಾಜಕೀಯ ತೇಜಸ್ಸು ಎಷ್ಟು

ಮಹತ್ತರವಾಗಿದ್ದಿತೆಂಬದನ್ನು ಬಹು ಚನ್ನಾಗಿ ವ್ಯಕ್ತವಾಗುತ್ತದೆ. ಮರಾಟರ ವೈಭವದ ಕಾಲದಲ್ಲಿ ಅನೇಕರು ಮರಾಟರಾದದ್ದು ತೋರಿಬರುತ್ತದೆ. ಆದರೆ ಕರ್ನಾಟಕದ ವೈಭವದ ಕಾಲದಲ್ಲಿ ಅಲ್ಲಿಯ ದೊಡ್ಡ ಜನಾಂಗಗಳೂ ವೀರಪುರುಷರೂ ಮಹತ್ವದ ಮನೆತನದವರೂ ವೀರಶೈವರಾದದ್ದು ಕಂಡು ಬರುತ್ತದೆ. ಹೀಗಾಗಬೇಕಾದರೆ ಆ ಕಾಲಕ್ಕಿನ ವೀರಶೈವರ ಸುಸಂಸ್ಕೃತಿ, ಉದಾರಭಾವ, ಮತ್ತು ಧಾರ್ಮಿಕ ವರ್ಗದವರ ಉಚ್ಚ ವರ್ತನೆ ಇವುಗಳೇ ಮುಖ್ಯ ಕಾರಣವೆಂದು ನಾವು ಹೇಳಲು ಏನೂ ಪ್ರತ್ಯವಾಯವಿಲ್ಲ.

ಸಾರಂಗದೇವನು ಈ ಪ್ರಕಾರ ಅತ್ಯಂತ ಉದಾರತೆಯಿಂದ ವರ್ತಿಸಿದ ಮಹಾ ಪುರುಷರಲ್ಲಿ ಅಗ್ರಗಣ್ಯನಾಗಿರುವನೆಂಬದು ನಾವು ಈ ಲೇಖದಲ್ಲಿ ಕೊಟ್ಟ ವೃತ್ತಾಂತದಿಂದ ಸ್ಪಷ್ಟವಾಗುತ್ತದೆ. ಈ ಸಾರಂಗದೇವನನ್ನು ತಮಿಳು ದೇಶದ ಅನೇಕ ರಾಜರೂ, ಸಮಾಜಗಳೂ ಮನ್ನಿಸುತ್ತಿದ್ದರಲ್ಲದೆ ಉತ್ತರ ದೇಶದಲ್ಲಿ ಮುಖ್ಯವಾಗಿ ವಿಜಾಪುರ ಮತ್ತು ಮೊಗಲಾಯಿ ಪ್ರಾಂತದಲ್ಲಿಯ ಅನೇಕ ಮಹತ್ವದ ರಾಜಕೀಯ ಮನೆತನಗಳು ಅವನಿಗೆ ಒಳಗಾಗಿ ನಡೆದು ವೀರಶೈವ ಧರ್ಮವನ್ನು ಪಾಲಿಸಹತ್ತಿದರು. ಈ ವರ್ಣನೆಯು ಕೇವಲ ಕಾಲ್ಪನಿಕವಿರದೆ ನಿಜವಿರಬಹುದೆಂಬುದನ್ನು ಆ ಸ್ಥಳಗಳಲ್ಲಿ ಈಗ್ಗೆಯೂ ಕಂಡು ಬರುವ ಸಾರಂಗ ಮಠಗಳೇ ಸಾಕ್ಷಿಯಾಗಿವೆ. ಮತ್ತು ಈ ಎಲ್ಲ ಮನೆತನದವರು ಈಗಲೂ ವೀರಶೈವ ಧರ್ಮದಂತೆ ನಡೆಯುತ್ತಿರುವದು ಕಂಡು ಬರುತ್ತದೆ. ಮತ್ತು ಈ ಸಾರಂಗ ಮಠಗಳೆಲ್ಲವೂ ಆ ಸ್ಥಳಗಳಲ್ಲಿ ಅತ್ಯಂತ ಭಕ್ತಿಯಿಂದ ಕಾಣಲ್ಪಡುತ್ತವೆ. ಈ ಎಲ್ಲ ಸಂಗತಿಗಳು ಸಾರಂಗದೇವನ ಮೇಲ್ಕಂಡ ವೃತ್ತಾಂತಗಳ ನಿಜತ್ವವನ್ನು ತೋರಿಸುತ್ತವೆ.

ಸಾರಂಗದೇವನು ಕಾಶಿಯಲ್ಲಿ ಮಳೆಯ ಮಲ್ಲೇಶನೆಂದೂ, ಪರ್ವತ ಪ್ರಾಂತಕ್ಕೆ ಬಂದ ಬಳಿಕ ಸಾರಂಗದೇವನೆಂದೂ, ಮೈಸೂರು ಸೀಮೆಯಲ್ಲಿ ಮಳೆಯ ಮರುಳ ಸಿದ್ಧೇಶ್ವರನೆಂದೂ, ಪ್ರಸಿದ್ಧವಾಗಿದ್ದು ತಿಳಿಯುತ್ತದೆ. ಈ ಅಂಶಗಳು ನಿಜವೆಂಬುದಕ್ಕೆ ಈ ಚರಿತ್ರೆಯನ್ನು ಬರೆದ ಗ್ರಂಥಕಾರನು ಕೆಲವು ಆಧಾರಗಳನ್ನು ಕೊಟ್ಟಿರುವನು. ಅವು ಯಾವವೆಂದರೆ, “ಕರ್ನಾಟಕ ಮಧ್ಯದೇಶದಲ್ಲಿ ಪ್ರಸಿದ್ಧವಾದ ಮಳಿ ಬಗಿ ಮರುಳಾರ್ಯ ಸೂತ್ರಿಕರು ಗುರುಸ್ಥಲದಲ್ಲಿ ಮಠಸ್ಥಲದಲ್ಲಿ ಶಿವಾಧಿಕ್ಯ ಪುರಾಣದಲ್ಲಿ ಸಾರಂ

ಗದೇವರ ಮಹತ್ವ ಹೇಳುತ್ತದೆ. ಶಿವರಹಸ್ಯಾಗಮದಲ್ಲಿ ಮರುಳಾರ್ಯರ ಸಾಂಪ್ರದಾಯವು ಹೇಳುವದು ನಿಶ್ಚಯವು. ಗುರುಚಾರಿತ್ರದೊಳಗೆ ಹೇಳುತ್ತಿದೆ ನೋಡಿರಿ. ಅನುಮಾನ ಬಿದ್ದರೆ ಸಂಶಯ ಪರಿಹಾರ ಆಗುವದು" ಎಂದು ಅಂದಿರುತ್ತಾನೆ. ಈ ಗ್ರಂಥಗಳಲ್ಲಿ ಶಿವಾಧಿಕ್ಯ ಪುರಾಣವನ್ನು ನಾವು ನೋಡಿದ್ದು, ಅದು ಬಸವಲಿಂಗ ಎಂಬ ಕವಿಯಿಂದ ರಚಿತವಾದುದು. ಅದರಲ್ಲಿ ಆರಂಭದ ಶ್ಲೋಕಗಳಲ್ಲಿ ಬಸವ, ಚನ್ನಬಸವ, ಅಲ್ಲಮ, ಮಡಿವಾಳ, ವೀರಸೊಡ್ಡಳ ಇವರನ್ನೂ ಉಳಿದ ಶಿವಶರಣರನ್ನೂ ಸ್ತುತಿಸಿ ಶ್ರೀ ಮಲ್ಲೇಶನನ್ನು ಉಲ್ಲೇಖಿಸಿದ್ದಾನೆ. ಈ ಮಲ್ಲೇಶನು ಮಂಗಳವಾಡ ರಾಷ್ಟ್ರಕ್ಕೆ ಮಳೆಯನ್ನು ತಂದನೆಂತಲೂ ಸಾರಂಗ ಸಿಂಹಾಸನಕ್ಕೆ ಬಂದನೆಂತಲೂ ಇದರಲ್ಲಿ ಉಲ್ಲೇಖಿಸಲ್ಪಟ್ಟಿದೆ. (೧) ಈ ಬಸವಲಿಂಗ ಕವಿಯ ಉಲ್ಲೇಖವನ್ನು ಕರ್ನಾಟಕ ಕವಿಚರಿತೆ ಭಾಗ ೨ ಪುಟ ೩೫೩ರಲ್ಲಿ ರಾ॥ ಬ॥ ಆರ್. ನರಸಿಂಹಾಚಾರ್ಯರೂ ಮಾಡಿರುವರು. ಅದರಲ್ಲಿ ಅವರು ಕೊಟ್ಟ ಅವತರಣದಿಂದ ಈ ಬಸವಲಿಂಗ ಕವಿಯು ಸಾರಂಗದೇವನ ಶಿಷ್ಯನೆಂದು ತಿಳಿಯುತ್ತಿದೆ. ಈ ಅವತರಣವು ಏನೆಂದರೆ ಇವನ ಗುರು "ಸಾರಂಗಸಿಂಹಾಸನಕ್ಕೆ ಒಂದು ಘನಲಿಂಗ ಪದವನಂಗವಿಸಿ ನಿಂದು ಮಂಗಳವಾತ ರಾಷ್ಟ್ರದೊಳು ಮೂರು ಸಿಂಹಾಸನದ ಡಾಮರವನೆಬ್ಬಟ್ಟಿ ಭೂರಿವೃಷ್ಟಿಯ ಕರೆದು ಬಗೆವೆತ್ತ" ಚೆನ್ನಮಲ್ಲೇಶ" ಎಂದು ಇದೆ. ಹೀಗೆ ಬಸವಲಿಂಗ ಕವಿಯು ಸಾರಂಗದೇವನಿಗೆ ಸಂಬಂಧಿಸಿ ಹೀಗೆ ಬರೆದಿದ್ದು ವಿಚಾರಾರ್ಹವಾಗಿದೆ.

ಸಾರಂಗದೇವನ ಕಾಲವು ಯಾವದೆಂಬದನ್ನು ನಮಗೆ ದೊರೆದ ಗ್ರಂಥಗಳಿಂದ ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ನಾವು ನೋಡಿದ ಗ್ರಂಥಗಳಲ್ಲಿ ಅವನು ಬಸವೇಶ್ವರನ ಕಾಲಕ್ಕೆ ಇದ್ದಂತೆ ತೋರಿಸಲ್ಪಟ್ಟಿದೆ. ಈ ಗ್ರಂಥಗಳ ಒಂದು ಕಡೆಯಲ್ಲಿ ಸಾರಂಗದೇವನು ಕಲ್ಯಾಣಕ್ಕೆ ಹೋಗಿ ತ್ರಿಪುರಾಂತಕ ದೇವಾಲಯದಲ್ಲಿದ್ದುಕೊಂಡು ಬಸವೇಶ್ವರನನ್ನು ಸಂದರ್ಶಿಸಿ ಅಲ್ಲಿ ೧೨ ವರ್ಷ ಕಾಲ ಕಳೆದನೆಂತಲೂ ಬಸವೇಶ್ವರನ ತಂದೆಯಾದ ಮಾದ

---

೧. ಈ ಗ್ರಂಥವನ್ನು ೪೦ ವರ್ಷಗಳ ಹಿಂದೆ ನಾನು ಧಾರವಾಡದಲ್ಲಿದ್ದ ಕೈ. ವಾ. ಮಂಚಾಲೀ ಸಿದ್ಧಲಿಂಗಪ್ಪನವರ ಸಂಗ್ರಹದಲ್ಲಿ ನೋಡಿದ್ದು ನನ್ನಲ್ಲಿದ್ದದರ ಇಂಗ್ಲೀಷ ಟಿಪ್ಪಣಿಯ ಆಧಾರದಿಂದ ಈ ಸಂಗತಿಗಳನ್ನು ಬರೆದಿದ್ದೇನೆ.

ಸಂಪಾದಕ

ರಸನ ಕೈಯಿಂದ ಬಾಗೇವಾಡಿಯಲ್ಲಿ ಮಠವನ್ನು ಪಡೆದುಕೊಂಡನೆಂತಲೂ, ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಗೆ ಕ್ರಿಯಾಚಾರ ಚರಮೂರ್ತಿಯಾಗಿದ್ದನೆಂತಲೂ ವರ್ಣಿಸಲ್ಪಟ್ಟಿದೆ. ಆದರೆ ಸಾರಂಗದೇವನ ಮುಂದಿನ ಚರಿತ್ರ ಭಾಗಗಳನ್ನು ನೋಡಿದರೆ, ಅವನು ಬಸವೇಶ್ವರನ ಕಾಲಕ್ಕೆ ಇರುವದು ತೀರ ಅಸಂಭವವದೆ. ಅವನು ಇದ್ದಕಾಲವು ಮುಸಲ್ಮಾನರು ಕರ್ನಾಟಕದಲ್ಲಿ ಸ್ಥಿರವಾಗಿ ನಿಂತುಕೊಂಡ ಬಳಿಕ ಅಂದರೆ ೧೪ ನೇ ಶತಮಾನದ ತರುವಾಯ ಎಂಬುದು ನಿರ್ವಿವಾದವು. ಹಾಗೆಯೇ ಅವನ ಉಲ್ಲೇಖವಿದ್ದ ಶಿವಾಧಿಕ್ಯ ಪುರಾಣ ಕರ್ತೃವಾದ ಬಸವಲಿಂಗನು ೧೬೧೧ ನೇ ಇಸ್ವಿಯಲ್ಲಿ ಈ ಗ್ರಂಥವನ್ನು ಬರೆದಿರುವನಾದ್ದರಿಂದ ಮತ್ತು ಸಾರಂಗದೇವನು ತನ್ನ ಗುರುವೆಂದು ಹೇಳಿರುವದರಿಂದ, (೧) ಸಾರಂಗದೇವನು ೧೬ನೇ ಶತಮಾನದ ಅಂತ್ಯಭಾಗದಲ್ಲಿರಬೇಕು. ಮತ್ತು ಸಾರಂಗದೇವನ ಮಠವು ಆನೇಗುಂದಿಯಲ್ಲಿ ಸ್ಥಾಪಿತವಾಗಿರುತ್ತದೆಂದು ಈ ಪುರಾಣದಲ್ಲಿ ಹೇಳಿದ್ದರಿಂದ ವಿಜಯನಗರದ ಅರಸರ ಕಾಲದಲ್ಲಿ ಅಂದರೆ ತಾಳೀಕೋಟೆಯ ಯುದ್ಧದ ಪೂರ್ವದಲ್ಲಿ ಇದ್ದಿರಬಹುದು.

---

(೧) ರಾ॥ ಬ॥ ನಂಸಿಂಹಾಚಾರ್ಯರ ಈ ವಿವರಣೆಯನ್ನು ಮೂಲಗ್ರಂಥವನ್ನು ನೋಡಿ ನಿಶ್ಚಯಪಡಿಸುವದು ಅವಶ್ಯವೆಂದು ನಮಗೆ ತೋರುತ್ತದೆ.

ಸಂಪಾದಕ.

ಅಡಿಗಿರುವನು. ಸತ್ಯದಿಂದ ಮತ್ತು ತಪಸ್ಸಿನಿಂದ ಆತನು ಕಾಣುವನು." (ಶ್ವೆ. ಉ. ೧-೧೪.)

"ಒಬ್ಬನೇ ರುದ್ರನು ಬೇರೊಬ್ಬನನ್ನು ಅವರು ಒಪ್ಪುವದಿಲ್ಲ. ಆವನು ತನ್ನ ಶಕ್ತಿಗಳಿಂದ ಈ ಲೋಕಗಳನ್ನು ಆಳುವನು. ಅವನು ಸರ್ವ ಜೀವಿಗಳ ಅಂತರಾತ್ಮನಾಗಿರುವನು. ಅಂತ್ಯದಲ್ಲಿ ಸರ್ವವನ್ನು (ತನ್ನೊಳಗೆ) ಮುದುಡಿಮಾಡಿಕೊಳ್ಳುವನು. ವಿಶ್ವವನ್ನು ಹುಟ್ಟಿಸಿದವನೂ ರಕ್ಷಿಸುವವನೂ ಅವನೇ" (ಶ್ವೆ. ಉ. ೩-೨-)

"ಎಲ್ಲ ದೇವತೆಗಳನ್ನು ಹುಟ್ಟಿಸಿದವನೂ, ಬೆಳಿಸಿದವನೂ, ವಿಶ್ವಾಧಿಪನೂ, ಮಹರ್ಷಿಯೂ, ಮೊದಲು ಹಿರಣ್ಯಗರ್ಭನನ್ನು ಹುಟ್ಟಿಸಿದವನೂ, ಆದ ರುದ್ರನು ನಮಗೆ ಶುಭವಾದ ಬುದ್ಧಿಯನ್ನು ಕೊಡಲಿ" (ಶ್ವೆ. ಉ. ೩-೪)

ಇವು ಮತ್ತು ಇಂಥ ಅನೇಕ ಶ್ಲೋಕಗಳಲ್ಲಿ ರುದ್ರ ಶಿವನ ವರ್ಣನೆಯು ವಿಪುಲವಾಗಿದೆ. ಶ್ವೇತಾಶ್ವತರೋಪನಿಷತ್ತಿನ ಆರು ಅಧ್ಯಾಯಗಳಲ್ಲಿ ಆವದನ್ನು ತೆಗೆದು ನೋಡಿದರೂ ರುದ್ರನ ಬಗ್ಗೆ ಇಂಥ ವರ್ಣನೆಗಳೇ ದೃಷ್ಟಿಗೆ ಬೀಳುವವು. ಎಲ್ಲ ಉಪನಿಷತ್ತುಗಳಲ್ಲಿ ಗಣಿತನಾದ ಪರಬ್ರಹ್ಮನೇ ರುದ್ರನೆಂದು ಈ ಉಪನಿಷತ್ತು ಸಾರುವದು. ಈ ಉಪನಿಷತ್ತಿನೊಳಗಿನ ಕೆಲವು ಶ್ಲೋಕಗಳನ್ನು ಭಗವದ್ಗೀತೆಯು ತೆಗೆದುಕೊಂಡಿದೆ. (1)

ಮೇಲಿನ ಉದಾಹರಣೆಗಳಿಂದ ಅತಿ ಪ್ರಾಚೀನಕಾಲದಲ್ಲಿ ಅಂದರೆ ವೇದ, ಬ್ರಾಹ್ಮಣ, ಉಪನಿಷತ್ತುಗಳ ಕಾಲದಲ್ಲಿ ರುದ್ರಶಿವನು ಆರ್ಯರ ಪ್ರತಿಷ್ಠಿತ ದೇವನಾಗಿದ್ದನೆಂಬುದು ಸ್ಪಷ್ಟವಾಗುವದು. ಈ ರುದ್ರಶಿವನೇ ಪೌರಾಣಿಕಯುಗದಲ್ಲಿ ಶಿವನು, ಮಹಾದೇವನು, ಶಂಕರನೆಂದು ಪ್ರಸಿದ್ಧನಾಗಿ ತ್ರಿಮೂರ್ತಿಗಳಲ್ಲೊಬ್ಬನಾದನು. ಪೌರಾಣಿಕಯುಗದಲ್ಲಿ ತ್ರಿಮೂರ್ತಿಗಳಲ್ಲೊಬ್ಬನೂ ಈಗಲೂ ಕೂಡ ಶೈವರ ಮುಖ್ಯ ದೈವತವೂ ಆದ

1 "This last (a verse in chapter XIII) contains the attributes given in the Upanishads and a verse and a half are verbally quoted from Shwetashwataropanishad" Dr. Bhandakar V. S. & M. C. P. 31 Poona 1928. Also vide ibid P. 153 Please help into Col. Jacob's concordance of principal Upanishads and the Bhagawadgita.

ಶಿವನು ವೇದೋಪನಿಷತ್ಕಾಲಗಳಲ್ಲಿ ರುದ್ರನೆಂದು ಪ್ರತೀತನಾಗಿದ್ದನೆಂದು ಡಾ. ರಾಮಕೃಷ್ಣಗೋಪಾಲ ಭಾಂಡಾರಕರರವರ ಅಭಿಪ್ರಾಯವು (*V. S. & M. C. Part II Sections1 to 4 Poona 1928*)

ಶಿವನು ಅತಿ ಪ್ರಾಚೀನನು. ಪೂರ್ವಕಾಲದಲ್ಲಿ ಭರತಖಂಡದ ಸರ್ವ ಭಾಗಗಳಲ್ಲಿ ಶೈವಧರ್ಮವು ವ್ಯಾಪಿಸಿತ್ತೆಂಬ ಬಗ್ಗೆ ವಿಶ್ವಸನೀಯವಾದ ಆಧಾರಗಳು ವಿಪುಲವಾಗಿ ದೊರೆಯುವವು. ಮಹಾಭಾರತದ ವನಪರ್ವ ಅಧ್ಯಾಯ ೩೮—೪೦ ರಲ್ಲಿ ಅರ್ಜುನನು ಪಾಶುಪತಾಸ್ತ್ರ ಸಿದ್ಧಿಗಾಗಿ ಶಿವನನ್ನು ಕುರಿತು ಹಿಮಾಲಯದೊಳಗಿರುವ ಇಂದ್ರಕೀಲವೆಂಬ ಬೆಟ್ಟದಲ್ಲಿ ತಪಸ್ಸುಮಾಡಿ ಕಿರಾತ ರೂಪಿಯಾದ ಶಿವನ ಸಂಗಡ ಮಲ್ಲಯುದ್ಧಮಾಡಿ ಆತನನ್ನು ಮೆಚ್ಚಿಸಿ, ಅಸ್ತ್ರವನ್ನು ಪಡೆದಂತೆಯೂ ಸೌಪ್ತಿಕಪರ್ವ ಅಧ್ಯಾಯ ೭ ರಲ್ಲಿ ಅಶ್ವತ್ಥಾಮನು ಶಂಕರನನ್ನು ಭಜಿಸಿ ಒಂದು ಭೀಕರವಾದ ಖಡ್ಗವನ್ನು ಪಡೆದಂತೆಯೂ, ಅನುಶಾಸನ ಪರ್ವ ಅಧ್ಯಾಯ ೧೪ ರಲ್ಲಿ ಕೃಷ್ಣನು ತನ್ನ ಹೆಂಡತಿಯಾದ ಜಾಂಬುವತಿಯ ಪುತ್ರಾಪೇಕ್ಷೆಯನ್ನು ಈಡೇರಿಸುವದಕ್ಕೋಸ್ಕರ ಹಿಮಾಲಯಕ್ಕೆ ಹೊರಟು ಮಾರ್ಗದಲ್ಲಿ ಉಪಮನ್ಯು ಮಹರ್ಷಿಯನ್ನು ಕಂಡುಕೊಂಡು ಆತನಿಂದ ಶಿವನ ಮಹತ್ವವನ್ನು ಕೇಳಿ, ಮನಗಂಡು, ಶಿವನನ್ನು ಕುರಿತು ಕಠೋರ ತಪಸ್ಸುಮಾಡಿ, ತಪಸ್ಸಿನ ಅಂತ್ಯದಲ್ಲಿ ಉಮೆಯಿಂದೊಡಗೂಡಿ ಪ್ರತ್ಯಕ್ಷನಾದ ಮಹಾದೇವನನ್ನು ಕಂಡು ಎಂಟು ವರಗಳನ್ನು ಪಡೆದಂತೆಯೂ ವರ್ಣನೆಯಿದೆ. ಮಹಾಭಾಷ್ಯಕರನಾದ ಪತಂಜಲಿಯು ತ್ರಿಶೂಲಧಾರಿಗಳಾದ ಶಿವಭಾಗವತರನ್ನು ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. (ಪಾಣಿನಿ ೫-೨-೭೬) ಕ್ರಿಸ್ತಿಶಕಕ್ಕೂ ಒಂದೆರಡು ಶತಮಾನ ಪೂರ್ವದಲ್ಲಿ ಬರೆಯಲ್ಪಟ್ಟ ಜೈನ ಶಿಲಾಶಾಸನಗಳಲ್ಲಿ ಉಕ್ತರಾದ ವ್ಯಕ್ತಿಗಳ ಹೆಸರುಗಳಲ್ಲಿ "ಶಿವ" ಎಂಬ ಅಕ್ಷರಗಳು ಕಂಡುಬರುವವು. (*Jain inscriptions*) ಪ್ರಾಚೀನ ಶಿಲಾಶಾಸನಗಳಲ್ಲಿ ಅನೇಕ ರಾಜರು "ಪರಮಮಹೇಶ್ವರರೆಂದು ಕರೆದುಕೊಂಡಿರುವರು. (*Dr Fleet Gupta inscriptions*) ಕಾಲಿದಾಸ, ಬಾಣ, ಭವಭೂತಿ, ಮೊದಲಾದ ಕವಿಗಳು ಶಿವನನ್ನು ಬಣ್ಣಿಸಿರುವರು. ನ್ಯಾಯ, ವೈಶೇಷಿಕ, ದರ್ಶನಕಾರರಾದ ಗೌತಮ ಮತ್ತು ಕಣಾದ ಋಷಿಗಳು ಶೈವರಿದ್ದರೆಂದು ಪ್ರತೀತಿ. (ಹರಿಭದ್ರಸೂರಿಯ ಷಡ್ದರ್ಶನ ಸಮುಚ್ಚಯ) ಏಳನೇಯ ಶತಮಾನದ ಪೂರ್ವಭಾಗದಲ್ಲಿ ನಮ್ಮ ಭಾಗ

ದಲ್ಲೆಲ್ಲ ಸಂಚಾರಮಾಡಿದ ಚೀನದೇಶದ ಪ್ರವಾಸಿಯಾದ ಹ್ಯಯನ್ ಚಿಯಾಂಗನು ಮಹೇಶ್ವರನ ಗುಡಿಗಳನ್ನೂ ಶಿವಪಂಥಿಗಳಾದ ಪಾಶುಪತರನ್ನೂ ತಾನು ಕಂಡಂತೆ ಹೇಳಿರುವನು. (*V. S. & M C. P. 164 Poona 1928*)

ಪೌರಾಣಿಕ ಯುಗದಲ್ಲಿ ಭರತಖಂಡದ ಪ್ರಸಿದ್ಧ ಧಾರ್ಮಿಕ ಪಂಥಗಳಲ್ಲಿ "ಶೈವ" ಮತ್ತು "ವೈಷ್ಣವ" ಎಂಬವು ಎರಡು. ಇವೆರಡೂ ಅತಿ ಪ್ರಾಚೀನ ಪಂಥಗಳು. ಈ ಪಂಥಗಳು ಸ್ಪಷ್ಟವಾಗಿ ಮೂರ್ತಸ್ವರೂಪವನ್ನು ಹೊಂದುವವದಕ್ಕಿಂತ ಮೊದಲು ಒಂದು ಸಾಮಾನ್ಯವಾದ ಪಂಥವಿರಬೇಕೆಂದೂ, ಅದರಲ್ಲಿ ರುದ್ರನ ವರ್ಚಸ್ಸವೇ ಹೆಚ್ಚಾಗಿದ್ದಿರಬೇಕೆಂದೂ ಊಹಿಸಲು ಆಧಾರಗಳಿವೆ. ಡಾ. ರಾಮಕೃಷ್ಣ ಗೋಪಾಲ ಭಾಂಡಾರಕರರವರೂ ಹೀಗೆ ಅಭಿಪ್ರಾಯ ಪಡುವರು. ಅವರು ಅನ್ನುವದೇನೆಂದರೆ:—

From all that we have brought forward from the post Samhita literature, it will appear that Rudra-Siva was a deity whose worship was common to all **Aryas**, and who was not at first a sectarian God. As above remarked he was in charge of the field before the Vaisnavic or Vasudevic deities came in to contest his supremacy (**V. S & M. C. P. 164** Poona 1928)

ಈ ರುದ್ರಶಿವನ ಅನುಯಾಯಿಗಳೇ ಶೈವರೆಂದು ಬೇರೆ ಹೇಳುವ ಕಾರಣವಿಲ್ಲ. ಪ್ರಾಚೀನ ಕಾಲದ ಆರ್ಯರ ಧರ್ಮವು ಕಾಲಕಾಲಕ್ಕೆ ಮಾರ್ಪಾಡಾಗುತ್ತ ಬಂದು ಈಗಿನ ಹಿಂದೂಧರ್ಮವಾಗಿರುವದು. ವೇದೋಪನಿಷತ್ಕಾಲದಲ್ಲಿಯೂ ಕೂಡ ಆರ್ಯರ ಧರ್ಮದ ಅಂಗವೆಂದು ಗಣಿಸಲ್ಪಟ್ಟ ರುದ್ರಶಿವ ಪಂಥದ ವಿಸ್ತೃತ ಸ್ವರೂಪವಾದ ಶೈವಧರ್ಮವು ಹಿಂದೂ ಧರ್ಮವೇ, ಎಂಬ ಪ್ರಶ್ನೆಯನ್ನು ಮನದಲ್ಲಿ ಕೂಡ ತರಲು ಶಕ್ಯವಿಲ್ಲ.

ಜಗತ್ತಿನೊಳಗಿನ ಪ್ರತಿಯೊಂದು ಪ್ರಮುಖ ಧರ್ಮದಲ್ಲಿ ಅವಾಂತರ ಭೇದಗಳಿವೆ. ಉದಾಹರಣಾರ್ಥ:—ಕ್ರೈಸ್ತ ಧರ್ಮದಲ್ಲಿ ರೋಮನ್ ಕ್ಯಾಥೊಲಿಕ್, ಪ್ರೊಟೆಸ್ಟೆಂಟ ಮೊದಲಾದ ಮುಖ್ಯ ಭೇದಗಳೂ, ಮತ್ತು ಇವುಗಳಲ್ಲಿ ಪುನಃ ಅನೇಕ ಅವಾಂತರ ಭೇದಗಳೂ ಉಂಟು. ಮಹಮ್ಮದೀಯ

ಧರ್ಮದಲ್ಲಿ ಶೀಯಾ, ಸುನ್ನಿ ಮೊದಲಾದ ಪಂಥಗಳಿವೆ. ಅದರಂತೆಯೇ ಹಿಂದೂಧರ್ಮದಲ್ಲಿ ಕೂಡ ಒಳಭೇದಗಳಿವೆಯೆಂದು ಮೇಲೆಯೇ ಹೇಳಿದೆ. ಅಂಥವುಗಳಲ್ಲಿ ಶೈವಧರ್ಮವೊಂದೆಂಬುದು ಕಂಡು ಬರದೇ ಇರಲಾರದು. ಈ ಶೈವ ಧರ್ಮದಲ್ಲಿಯೂ ಕೂಡ ಬಹಳ ಪಂಥಗಳು ಅವೆ. ಅವುಗಳಲ್ಲಿ ಮಾಹೇಶ್ವರ, ಪಾಶುಪತ, ಲಕುಲೀಶ, ಕಾಲಾಮುಖ ಮೊದಲಾದ ಸೌಮ್ಯ ಮತ್ತು ಕಾಪಾಲಿಕ ಮೊದಲಾದ ಉಗ್ರ ಪಂಥಗಳು ಅತಿ ಪ್ರಾಚೀನವೆಂಬ ಬಗ್ಗೆ ಸಂಶಯವಿಲ್ಲ. ನಮ್ಮ ದುರ್ದೈವದಿಂದ ಈ ಎಲ್ಲ ಪಂಥಗಳ ಬಗ್ಗೆ ವಿಶ್ವಸನೀಯವಾದ ಸಂಪೂರ್ಣ ಸಂಗತಿಯು ದೊರೆಯುವದಿಲ್ಲ. ಅಲ್ಲಲ್ಲಿ ಈ ಪಂಥಗಳ ವಿರೋಧಿಗಳು ಇವರ ಬಗ್ಗೆ ಮಾಡಿದ ಟೀಕೆಯು ಮಾತ್ರ ಉಪಲಬ್ಧವಿದೆ. ಮುಸಲ್ಮಾನರು ಹಿಂದುಸ್ಥಾನಕ್ಕೆ ಬರುವದಕ್ಕೂ ಮೊದಲು ಅಂದರೆ ಕ್ರಿ. ಶ ೧೦೦೦ ಕ್ಕೂ ಪೂರ್ವದಲ್ಲಿಯ ವಿಶ್ವಸನೀಯವೂ, ವಿವಾದ ರಹಿತವೂ ಆದ ನಮ್ಮ ದೇಶದ ಇತಿಹಾಸವನ್ನು ಬರೆಯಲೂ ಅಥವಾ ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಲೂ ಹಿಂದೀಯರು ವಿಶೇಷವಾಗಿ ಯತ್ನಿಸಿದಂತೆ ಕಂಡು ಬರುವದಿಲ್ಲ. ಪಾಶ್ಚಾತ್ಯ ಪಂಡಿತರಾದ ವ್ಹಿನ್ಸೆಂಟ ಸ್ಮಿಥ, ಹ್ಯಾವೆಲ್ಲ ಮೊದಲಾದವರು ಮೊದಲು ಹೆಣಗಾಡಿದರು. ವೃಷಭ ತೀರ್ಥ *(Oxford)* ಕಾಮುಸೇತುವೆ (*Cambridge*) ಮೊದಲಾದ ಆಂಗ್ಲ ವಿಶ್ವವಿದ್ಯಾಲಯಗಳ ಅಧಿಕಾರಿಗಳು ಈ ಕೆಲಸವನ್ನು ಕೈಕೊಳ್ಳಲು ಬೇಕಾಗುವ ಸಾಧನಗಳನ್ನು ನೂರಾರು ವರ್ಷಗಳಿಂದ ಕೂಡಿಸುತ್ತಲಿರುವರು. ಕಾಮುಸೇತುವೆಯ ವಿಶ್ವವಿದ್ಯಾಲಯದವರು ಹಿಂದುಸ್ಥಾನದ ಇತಿಹಾಸದ ಒಂದು ಮಾಲೆಯನ್ನೇ ಹೊರಡಿಸಿರುವರು. ಅದರಲ್ಲಿ ಈಗಾಗಲೇ ಎರಡು ಮೂರು ಪುಸ್ತಕಗಳು ಪ್ರಸಿದ್ಧವಾಗಿವೆ. ನಮ್ಮಲ್ಲಿ ಪುಣೆಯ ಇತಿಹಾಸ ಸಂಶೋಧಕ ಮಂಡಲದವರು ಈ ಸ್ತುತ್ಯವಾದ ಕೆಲಸವನ್ನು ಕೈಕೊಂಡುದುದು ಸಂತೋಷಪಡತಕ್ಕದ್ದು. ಆದರೆ ಅವರು ಮರಾಟರ ಕಾಲದ ಇತಿಹಾಸಕ್ಕೇ ಹೆಚ್ಚು ಮಹತ್ವಕೊಡಹತ್ತಿರುವರು. ಅದಿರಲಿ. ಇನ್ನು ಇತಿಹಾಸದ ಬಗ್ಗೆ ನಮ್ಮ ಪೂರ್ವಜರಲ್ಲಿ ಇಷ್ಟು ಅವಹೇಳನೆಯಿದ್ದ ಮೇಲೆ, ಧರ್ಮ ಅಥವಾ ಪಂಥಗಳ ಇತಿಹಾಸವನ್ನು ಬರೆದಿಡುವವರಾರು? ಪಂಥ ಪಂಥಗಳಲ್ಲಿ ವಿದ್ವೇಷವುವಿಶೇಷ ತರವಾಗಿದ್ದ ಮೂಲಕ ಅವುಗಳ ಸಂಗತಿಗಳನ್ನು ಬರೆಯುವದೊತ್ತಟ್ಟಿಗಿರಲಿ, ಅವುಗಳ ಸ್ವರೂಪವನ್ನು ತಿಳಿಸುವ ಗ್ರಂಥಗಳೇ ಉಳಿದಿದ್ದರೆ ನಮ್ಮ ಸುದೈವ. ಅಂತೇ ಅನೇಕ ಪಂಥಗಳ ಬಗ್ಗೆ ನಮಗೆ

ಇನ್ನೂ ಸರಿಯಾಗಿ ಗೊತ್ತಾಗಿಲ್ಲ. ಹಲಕೆಲವುಗಳ ಬಗ್ಗೆ ಪ್ರಾಚೀನ ಗ್ರಂಥಗಳಲ್ಲಿದ್ದ ಉಲ್ಲೇಖಗಳನ್ನು ಬಲು ಎಚ್ಚರಿಕೆಯಿಂದ ಗ್ರಹಿಸಬೇಕಾಗಿರುವದು. ಏಕಂದರೆ ಅವುಗಳಲ್ಲನೇಕವು ಮತ್ಸರ ಬುದ್ಧಿಯಿಂದ ಬರೆದವಿರಬಹುದು.

ನಮಗೆ ದೊರೆತ ಶಿಲಾಶಾಸನ, ಪ್ರಾಚೀನ ಗ್ರಂಥ ಮೊದಲಾದವುಗಳ ಮೇಲಿಂದ ಕ್ರಿ. ಶ. ೮ ರಿಂದ ೧೨ ಶತಮಾನಗಳಲ್ಲಿ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದಲ್ಲಿದ್ದ ಶೈವಧರ್ಮದ ಪಂಥಗಳ ವಿಶ್ವಸನೀಯವಾದ ಸ್ವರೂಪವನ್ನು ಕಂಡು ಹಿಡಿಯಲು ಕೆಲಮಟ್ಟಿಗೆ ಸಾಧ್ಯವಿದೆ. ಅಂಥವರಲ್ಲಿ ಮಾಹೇಶ್ವರರು ಅಥವಾ ಕಾಶ್ಮೀರಶೈವರು, ಶೈವ ಸಿದ್ಧಾಂತಿಗಳು, ವೀರಶೈವರು ಅಥವಾ ಲಿಂಗವಂತರು, ಕಾಳಾಮುಖರು ಮೊದಲಾದವರು ಮುಖ್ಯರು. ನಮಗೆ ಈಗ್ಗೆ ವೀರಶೈವ ಪಂಥವನ್ನಷ್ಟೇ ಅವಲೋಕಿಸಬೇಕಾಗಿದೆ. ಆದುದರಿಂದ ಉಳಿದ ಪಂಥಗಳ ಸಂಗತಿಯನ್ನು ಇಲ್ಲಿ ವಿವರಿಸದೆ ಇರುವದು ಸರಿಯಾದುದು.

ವೀರಶೈವರು ಹಿಂದುಗಳೇ? ಇನ್ನು ವೀರಶೈವ ಪಂಥವನ್ನು ನಿರೀಕ್ಷಿಸುವದಕ್ಕಿಂತ ಮೊದಲು ಒಂದು ಸಂಶಯವನ್ನು ವಿಚಾರಿಸುವದು ನೆಟ್ಟಗೆ. ಅದೇನೆಂದರೆ ವೀರಶೈವರು ಹಿಂದುಗಳೇ ಹೇಗೆಂಬುದು. ಇನ್ನೂ ಈ ಪ್ರಶ್ನೆಯು ಜೀವಂತವಿದೆಯೆಂದು ಹೇಳಬಹುದು. ವೇದಕಾಲದಲ್ಲಿ ಆರ್ಯರ ದೇವತೆಯಾದ ರುದ್ರ ಶಿವನೆಂದೂ, ಪೌರಾಣಿಕ ಯುಗದಲ್ಲಿ ಶಿವನೆಂದೂ ಪ್ರತೀತನಾದ ಮಹಾದೇವನೇ ದೈವತವೆಂದು ದೃಢಭಾವದಿಂದ ಭಜಿಸುವವರೂ ಶೈವರಲ್ಲಿಯ ಒಂದು ಪಕ್ಷದವರೂ ಆದ ವೀರಶೈವರು ಕೂಡ ಹಿಂದುಗಳಿಂದ ಭಿನ್ನರೆಂದು ಕಲ್ಪಿಸುವದು ಅಶಕ್ಯವು; ಆದುದರಿಂದ ವೀರಶೈವರು ಹಿಂದೂಧರ್ಮದಿಂದ ಹೊರಗಿದ್ದವರಲ್ಲ. ಅವರು ಹಿಂದುಗಳೇ ಎಂದು ನಿಶ್ಚಯವಾಗಿ ಹೇಳಬಹುದು.

**ಉಗಮ:—** ಕ್ರೈಸ್ತಧರ್ಮದ ಉಗಮವನ್ನು ಜೀಸಸ್ಸ ಕ್ರಾಯಿಸ್ಟ (*Jesus christ*) ನಿಗೂ, ಮುಹಮ್ಮದಿಯ ಧರ್ಮದ ಉಗಮವನ್ನು ಮುಹಮ್ಮದ ಪೈಗಂಬರನಿಗೂ, ಬೌದ್ಧ, ಜೈನ ಧರ್ಮಗಳ ಉಗಮವನ್ನು ಬುದ್ಧ ಜನರಿಗೂ ಅನ್ವಯಿಸುವಂತೆ ಹಿಂದೂಧರ್ಮದ ಉಗಮವನ್ನು ಯಾವ ವ್ಯಕ್ತಿಗಳಿಗೂ ಸಂಬಂಧಿಸಲಾಗುವದಿಲ್ಲ. ಇದಕ್ಕೆ ಕಾರಣಗಳು ಹಿಂದೂಧರ್ಮದ ಪ್ರಾಚೀನತೆಯೂ, ಆಯಾ ಕಾಲಗಳಿಗನುಸರಿಸಿ

ಧರ್ಮದಲ್ಲಿ ಶೀಯಾ, ಸುನ್ನಿ ಮೊದಲಾದ ಪಂಥಗಳಿವೆ. ಅದರಂತೆಯೇ ಹಿಂದೂಧರ್ಮದಲ್ಲಿ ಕೂಡ ಒಳಭೇದಗಳಿವೆಯೆಂದು ಮೇಲೆಯೇ ಹೇಳಿದೆ. ಅಂಥವುಗಳಲ್ಲಿ ಶೈವಧರ್ಮವೊಂದೆಂಬುದು ಕಂಡು ಬರದೇ ಇರಲಾರದು. ಈ ಶೈವ ಧರ್ಮದಲ್ಲಿಯೂ ಕೂಡ ಬಹಳ ಪಂಥಗಳು ಅವೆ. ಅವುಗಳಲ್ಲಿ ಮಾಹೇಶ್ವರ, ಪಾಶುಪತ, ಲಕುಲೀಶ, ಕಾಲಾಮುಖ ಮೊದಲಾದ ಸೌಮ್ಯ ಮತ್ತು ಕಾಪಾಲಿಕ ಮೊದಲಾದ ಉಗ್ರ ಪಂಥಗಳು ಅತಿ ಪ್ರಾಚೀನವೆಂಬ ಬಗ್ಗೆ ಸಂಶಯವಿಲ್ಲ. ನಮ್ಮ ದುರ್ದೈವದಿಂದ ಈ ಎಲ್ಲ ಪಂಥಗಳ ಬಗ್ಗೆ ವಿಶ್ವಸನೀಯವಾದ ಸಂಪೂರ್ಣ ಸಂಗತಿಯು ದೊರೆಯುವದಿಲ್ಲ. ಅಲ್ಲಲ್ಲಿ ಈ ಪಂಥಗಳ ವಿರೋಧಿಗಳು ಇವರ ಬಗ್ಗೆ ಮಾಡಿದ ಟೀಕೆಯು ಮಾತ್ರ ಉಪಲಬ್ಧವಿದೆ. ಮುಸಲ್ಮಾನರು ಹಿಂದುಸ್ಥಾನಕ್ಕೆ ಬರುವದಕ್ಕೂ ಮೊದಲು ಅಂದರೆ ಕ್ರಿ. ಶ ೧೦೦೦ ಕ್ಕೂ ಪೂರ್ವದಲ್ಲಿಯ ವಿಶ್ವಸನೀಯವೂ, ವಿವಾದ ರಹಿತವೂ ಆದ ನಮ್ಮ ದೇಶದ ಇತಿಹಾಸವನ್ನು ಬರೆಯಲೂ ಅಥವಾ ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಲೂ ಹಿಂದೀಯರು ವಿಶೇಷವಾಗಿ ಯತ್ನಿಸಿದಂತೆ ಕಂಡು ಬರುವದಿಲ್ಲ. ಪಾಶ್ಚಾತ್ಯ ಪಂಡಿತರಾದ ವ್ಹಿನ್ಸೆಂಟ ಸ್ಮಿಥ, ಹ್ಯಾವೆಲ್ಲ ಮೊದಲಾದವರು ಮೊದಲು ಹೆಣಗಾಡಿದರು. ವೃಷಭ ತೀರ್ಥ *(Oxford)* ಕಾಮುಸೇತುವೆ *(Cambridge)* ಮೊದಲಾದ ಆಂಗ್ಲ ವಿಶ್ವವಿದ್ಯಾಲಯಗಳ ಅಧಿಕಾರಿಗಳು ಈ ಕೆಲಸವನ್ನು ಕೈಕೊಳ್ಳಲು ಬೇಕಾಗುವ ಸಾಧನಗಳನ್ನು ನೂರಾರು ವರ್ಷಗಳಿಂದ ಕೂಡಿಸುತ್ತಲಿರುವರು. ಕಾಮುಸೇತುವೆಯ ವಿಶ್ವವಿದ್ಯಾಲಯದವರು ಹಿಂದುಸ್ಥಾನದ ಇತಿಹಾಸದ ಒಂದು ಮಾಲೆಯನ್ನೇ ಹೊರಡಿಸಿರುವರು. ಅದರಲ್ಲಿ ಈಗಾಗಲೇ ಎರಡು ಮೂರು ಪುಸ್ತಕಗಳು ಪ್ರಸಿದ್ಧವಾಗಿವೆ. ನಮ್ಮಲ್ಲಿ ಪುಣೆಯ ಇತಿಹಾಸ ಸಂಶೋಧಕ ಮಂಡಲದವರು ಈ ಸ್ತುತ್ಯವಾದ ಕೆಲಸವನ್ನು ಕೈಕೊಂಡುದುದು ಸಂತೋಷಪಡತಕ್ಕದ್ದು. ಆದರೆ ಅವರು ಮರಾಟರ ಕಾಲದ ಇತಿಹಾಸಕ್ಕೇ ಹೆಚ್ಚು ಮಹತ್ವಕೊಡಹತ್ತಿರುವರು. ಅದಿರಲಿ. ಇನ್ನು ಇತಿಹಾಸದ ಬಗ್ಗೆ ನಮ್ಮ ಪೂರ್ವಜರಲ್ಲಿ ಇಷ್ಟು ಅವಹೇಳನೆಯಿದ್ದ ಮೇಲೆ, ಧರ್ಮ ಅಥವಾ ಪಂಥಗಳ ಇತಿಹಾಸವನ್ನು ಬರೆದಿಡುವವರಾರು? ಪಂಥ ಪಂಥಗಳಲ್ಲಿ ವಿದ್ವೇಷವುವಿಶೇಷ ತರವಾಗಿದ್ದ ಮೂಲಕ ಅವುಗಳ ಸಂಗತಿಗಳನ್ನು ಬರೆಯುವದೊತ್ತಟ್ಟಿಗಿರಲಿ, ಅವುಗಳ ಸ್ವರೂಪವನ್ನು ತಿಳಿಸುವ ಗ್ರಂಥಗಳೇ ಉಳಿದಿದ್ದರೆ ನಮ್ಮ ಸುದೈವ. ಅಂತೇ ಅನೇಕ ಪಂಥಗಳ ಬಗ್ಗೆ ನಮಗೆ

ಇನ್ನೂ ಸರಿಯಾಗಿ ಗೊತ್ತಾಗಿಲ್ಲ. ಹಲಕೆಲವುಗಳ ಬಗ್ಗೆ ಪ್ರಾಚೀನ ಗ್ರಂಥ ಗಳಲ್ಲಿದ್ದ ಉಲ್ಲೇಖಗಳನ್ನು ಬಲು ಎಚ್ಚರಿಕೆಯಿಂದ ಗ್ರಹಿಸಬೇಕಾಗಿರು ವದು. ಏಕಂದರೆ ಅವುಗಳಲ್ಲನೇಕವು ಮಾತ್ಸರ ಬುದ್ಧಿಯಿಂದ ಬರೆದವಿರ ಬಹುದು.

ನಮಗೆ ದೊರೆತ ಶಿಲಾಶಾಸನ, ಪ್ರಾಚೀನ ಗ್ರಂಥ ಮೊದಲಾದವುಗಳ ಮೇಲಿಂದ ಕ್ರಿ. ಶ. ೮ ರಿಂದ ೧೨ ಶತಮಾನಗಳಲ್ಲಿ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದಲ್ಲಿದ್ದ ಶೈವಧರ್ಮದ ಪಂಥಗಳ ವಿಶ್ವ ಸನೀಯವಾದ ಸ್ವರೂಪವನ್ನು ಕಂಡು ಹಿಡಿಯಲು ಕೆಲಮಟ್ಟಿಗೆ ಸಾಧ್ಯ ವಿದೆ. ಅಂಥವರಲ್ಲಿ ಮಾಹೇಶ್ವರರು ಅಥವಾ ಕಾಶ್ಮೀರಶೈವರು, ಶೈವ ಸಿದ್ಧಾಂತಿಗಳು, ವೀರಶೈವರು ಅಥವಾ ಲಿಂಗವಂತರು, ಕಾಳಾಮುಖರು ಮೊದಲಾದವರು ಮುಖ್ಯರು. ನಮಗೆ ಈಗ್ಗೆ ವೀರಶೈವ ಪಂಥವನ್ನುಷ್ಟೇ ಅವ ಲೋಕಿಸಬೇಕಾಗಿದೆ. ಆದುದರಿಂದ ಉಳಿದ ಪಂಥಗಳ ಸಂಗತಿಯನ್ನು ಇಲ್ಲಿ ವಿವರಿಸದೆ ಇರುವದು ಸರಿಯಾದುದು.

ವೀರಶೈವರು ಹಿಂದುಗಳೇ? ಇನ್ನು ವೀರಶೈವ ಪಂಥವನ್ನು ನಿರೀ ಕ್ಷಿಸುವದಕ್ಕಿಂತ ಮೊದಲು ಒಂದು ಸಂಶಯವನ್ನು ವಿಚಾರಿಸುವದು ನೆಟ್ಟಗೆ. ಅದೇನೆಂದರೆ ವೀರಶೈವರು ಹಿಂದುಗಳೇ ಹೇಗೆಂಬುದು. ಇನ್ನೂ ಈ ಪ್ರಶ್ನೆಯು ಜೀವಂತವಿದೆಯೆಂದು ಹೇಳಬಹುದು. ವೇದಕಾಲದಲ್ಲಿ ಆರ್ಯರ ದೇವತೆಯಾದ ರುದ್ರ ಶಿವನೆಂದೂ, ಪೌರಾಣಿಕ ಯುಗದಲ್ಲಿ ಶಿವ ನೆಂದೂ ಪ್ರತೀತನಾದ ಮಹಾದೇವನೇ ದೈವತವೆಂದು ದೃಢಭಾವದಿಂದ ಭಜಿಸುವವರೂ ಶೈವರಲ್ಲಿಯ ಒಂದು ಪಕ್ಷದವರೂ ಆದ ವೀರಶೈವರು ಕೂಡ ಹಿಂದುಗಳಿಂದ ಭಿನ್ನರೆಂದು ಕಲ್ಪಿಸುವದು ಅಶಕ್ಯವು; ಆದುದ ರಿಂದ ವೀರಶೈವರು ಹಿಂದೂಧರ್ಮದಿಂದ ಹೊರಗಿದ್ದವರಲ್ಲ. ಅವರು ಹಿಂದುಗಳೇ ಎಂದು ನಿಶ್ಚಯವಾಗಿ ಹೇಳಬಹುದು.

**ಉಗಮಃ—** ಕ್ರೈಸ್ತಧರ್ಮದ ಉಗಮವನ್ನು ಜೀಸಸ್ಸ ಕ್ರಾಯಿಸ್ಟ (*Jesus christ*) ನಿಗೂ, ಮಹಮ್ಮದಿಯ ಧರ್ಮದ ಉಗಮವನ್ನು ಮಹಮ್ಮದ ಪೈಗಂಬರನಿಗೂ, ಬೌದ್ಧ, ಜೈನ ಧರ್ಮಗಳ ಉಗಮವನ್ನು ಬುದ್ಧ ಜನರಿಗೂ ಅನ್ವಯಿಸುವಂತೆ ಹಿಂದೂಧರ್ಮದ ಉಗಮವನ್ನು ಯಾವ ವ್ಯಕ್ತಿಗಳಿಗೂ ಸಂಬಂಧಿಸಲಾಗುವದಿಲ್ಲ. ಇದಕ್ಕೆ ಕಾರಣಗಳು ಹಿಂದೂಧರ್ಮದ ಪ್ರಾಚೀನತೆಯೂ, ಆಯಾ ಕಾಲಗಳಿಗನುಸರಿಸಿ

ಇವು ತನ್ನಲ್ಲಿ ಪರಿವರ್ತನೆಯನ್ನು ಮಾಡಿಕೊಳ್ಳುವ ಅದರ ಗುಣವೂ ಆಗಿರಬೇಕೆಂದು ಅನ್ನಿಸುವದು. ಆದುದರಿಂದಲೇ ಪಾಶ್ಚಾತ್ಯರಲ್ಲಾಗಲಿ ಪೌರ್ವಾತ್ಯರಲ್ಲಾಗಲಿ ಬಹುಜನರಿಗೆ ಹಿಂದೂಧರ್ಮದ ಸ್ವರೂಪವು ನಿಜವಾಗಿ ಗೊತ್ತಾಗಿರುವದಿಲ್ಲ. ಹಿಂದೂಧರ್ಮದಂತೆಯೇ ಶೈವಧರ್ಮದ ಅಥವಾ ಅದರ ಅನೇಕ ಪಂಥಗಳ ಸ್ಥಿತಿಯಿದೆ. ಅವುಗಳ ಉಗಮಗಳನ್ನು ಕಂಡುಹಿಡಿಯುವದಾದರೂ ಬಲು ಕಠಿಣವಾದ ಕೆಲಸ. ಅದರಂತೆಯೇ ವೀರಶೈವ ಪಂಥದ ಉಗಮವನ್ನು ಕೂಡ ಪ್ರಮಾಣಗಳಿಂದ ಸಾಧಿಸಲು ಈಗ ನಮಗೆ ದೊರೆತ ಆಧಾರಗಳಿಂದ ಸಾಧ್ಯವಿಲ್ಲ. ಆದುದರಿಂದಲೇ ನಮಗೆ ಅದರ ಉಗಮವು ನಿಶ್ಚಿತವಾಗಿ ಇನ್ನೂ ಗೊತ್ತಾಗಿಲ್ಲವೆಂದು ಹೇಳಬಹುದು.

ವೀರಶೈವಧರ್ಮದ ಕೆಲವು ಗ್ರಂಥಗಳಲ್ಲಿ ಇದರ ಉಗಮವು ಐದು ಜನ ಆಚಾರ್ಯರಿಗೆ ಅನ್ವಯಿಸಿದೆಯೆಂದು ಉಲ್ಲೇಖವಿದೆ. ಇವರು ಪರಮೇಶ್ವರನ ಪಂಚಮುಖಗಳಿಂದುದ್ಭವಿಸಿದ ಪಂಚಗಣಾಧೀಶ್ವರರೆಂದೂ, ಯುಗಯುಗಾಂತರಗಳಲ್ಲಿ ಬೇರೆ ಬೇರೆ ನಾಮಗಳಿಂದ ಭೂಮಿಯಲ್ಲವತರಿಸಿ ಶೈವಮಾರ್ಗವನ್ನು ಪ್ರಸ್ಥಾಪಿಸಿದರೆಂದೂ, ಕಲಿಯುಗದಲ್ಲಿ ಕೊಲ್ಲಿಪಾಕೆ, ವಟಕ್ಷೇತ್ರ, ಸುಧಾಕುಂಡ, ದ್ರಾಕ್ಷಾರಾಮ, ವಾರಾಣಸಿಗಳೆಂಬಭರತಖಂಡದ ಪ್ರಸಿದ್ಧ ಕ್ಷೇತ್ರಗಳಲ್ಲಿ ಲಿಂಗಗಳೊಳಗಿಂದುದ್ಭವಿಸಿ, ಸರ್ವತ್ರಸಂಚರಿಸಿ, ಬಾಳೇಹಳ್ಳಿ, ಉಜ್ಜಯಿನಿ, ಶ್ರೀಶೈಲ, ಹಿಮವತ್ಕೇದಾರ, ಮತ್ತು ಕಾಶೀಕ್ಷೇತ್ರಗಳಲ್ಲಿ ಮಠಗಳನ್ನು ಸ್ಥಾಪಿಸಿದರೆಂದೂ ಪ್ರತೀತಿಯಿದೆ. ಇವರಿಗೆ ಕಲಿಯುಗದಲ್ಲಿ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮ, ವಿಶ್ವಾರಾಧ್ಯರೆಂದು ಹೆಸರು. ಇವರಿಗೆ ಈಗ ಪಂಚಾಚಾರ್ಯರೆಂದು ಹೆಸರು. ಇವರಿಂದ ಸ್ಥಾಪಿಸಲ್ಪಟ್ಟವೆಂದು ಪ್ರತೀತಿಯಿದ್ದ ಮಠಗಳು ಈಗಲೂ ಅಸ್ತಿತ್ವದಲ್ಲಿವೆ. ಇಲ್ಲಿ ಮುಖ್ಯ ಮಾತೆಂದರೆ ಇದು ಕಟ್ಟುಕಥೆಯೋ ಅಥವಾ ಐತಿಹಾಸಿಕಸಂಗತಿಯೊ ಎಂಬದನ್ನು ನಿರ್ಣಯಿಸುವದು. ಚಿಕಿತ್ಸಕರಿಗೆ ಇದು ಐತಿಹಾಸಿಕ ಸಂಗತಿಯಂತೆ ಕಾಣುವದಿಲ್ಲ; ಏಕೆಂದರೆ ಈಗಿನ ಮನ್ವಂತರದ ಚಿಕಿತ್ಸಕರು ಸ್ಥಾವರಲಿಂಗಗಳಿಂದಾದ ಆಚಾರ್ಯರ ಉದ್ಭವವನ್ನು ನಂಬುವದಿಲ್ಲ ಏಕೆಂದರೆ ಅದು ಸಾಮಾನ್ಯ ನಿಯಮ (*Natural law*) ಕ್ಕೆ ವಿರೋಧವಾಗಿರುವದು. ಅಸಾಮಾನ್ಯ ಅಥವಾ ಅಮಾನುಷ ವೃತ್ತಗಳಲ್ಲಿ ಈಗಿನ ಚಿಕಿತ್ಸಕರ ವಿಶ್ವಾಸವಿಲ್ಲ. ಆದರೂ ಇದ

ರಲ್ಲಿ ಇತಿಹಾಸದ ಅಂಶವಿಲ್ಲೆಂದು ಅನ್ನಲು ಬರುವದಿಲ್ಲ. ಸ್ವಲ್ಪ ಇತಿಹಾಸದ ಆಧಾರದ ಮೇಲೆ ಅಸಾಮಾನ್ಯ ಮತ್ತು ಅಮಾನುಷ ಕೃತಿಗಳನ್ನು ಪೋಣಿಸಿ ದೊಡ್ಡ ದೊಡ್ಡ ಕಟ್ಟುಕಥೆಗಳನ್ನು ಕಟ್ಟಿದ ಉದಾಹರಣೆಗಳು ನಮ್ಮ ಪುರಾಣಗಳಲ್ಲಿ ವಿಪುಲವಾಗಿ ದೊರೆಯುವವು. ಮೇಲಿನ ಆಚಾರ್ಯರ ಸಂಗತಿಯು ಕೂಡ ಇಂಥ ಪೌರಾಣಿಕ ಕಥೆಗಳಲ್ಲೊಂದಾಗಿರಬೇಕೆಂದು ಅನ್ನಿಸುವುದು. ಮೇಲೆ ಹೇಳಿದ ಆಚಾರ್ಯರ ಸಂಗತಿಗಳನ್ನೊಳಕೊಂಡ ಒಂದೆರಡು ಗ್ರಂಥಗಳು ನನ್ನ ದೃಷ್ಟಿಗೆ ಬಿದ್ದಿವೆ. ಅವುಗಳ ಭಾಷೆ, ಶೈಲಿ, ವಿಷಯವಿವೇಚನಪದ್ಧತಿ ಮೊದಲಾದವುಗಳ ಮೇಲಿಂದ ಅವು ಬಹುತರ ಅರ್ವಾಚೀನ ಗ್ರಂಥಗಳಾಗಿರಬೇಕೆಂದು ಅನ್ನಿಸುವುದು. ಆದುದರಿಂದಲೇ ಸಂಶಯಕ್ಕೆ ಮತ್ತಿಷ್ಟು ಆಸ್ಪದವಾಗಿದೆ. ಈ ಆಚಾರ್ಯರು ಐತಿಹಾಸಿಕ ಪುರುಷರಾಗಿರಬೇಕೆಂದು ಊಹಿಸಲು ಕೂಡ ಅವಕಾಶವಿದೆ. ಜೈನಕವಿಗಳು ತಮ್ಮ ಗ್ರಂಥಗಳ ಆದಿಯಲ್ಲಿ ಕವಿಪರಮೇಷ್ಠಿ, ಸಮಂತಭದ್ರ, ಪೂಜ್ಯಪಾದರನ್ನು ಸ್ಮರಿಸುವರಂತೆ, ವೀರಶೈವ ಕವಿಗಳು ಶಿವಲೆಂಕ ಮಂಚಣ್ಣ, ಶ್ರೀಪತಿಪಂಡಿತ, ಮಲ್ಲಿಕಾರ್ಜುನಪಂಡಿತರನ್ನು ಸ್ಮರಿಸಿರುವರು. ಆದುದರಿಂದ ಶ್ರೀಪತಿಪಂಡಿತನು ಪ್ರಜ್ಞಾಶಾಲಿಗಳಾದ ವೀರಶೈವರಲ್ಲಿ ಉನ್ನತಸ್ಥಾನವನ್ನಲಂಕರಿಸಿರಬೇಕೆಂದು ತೋರುವುದು. ಈತನು ೧೨ ನೇ ಶತಮಾನದ ಆದಿಯಲ್ಲಿದ್ದಿರಬೇಕೆಂದೂ, ಬಸವಣ್ಣನವರ ಸಮಕಾಲದವನೆಂದೂ, ಕೆಲ ವಿದ್ವಾಂಸರ ಕಲ್ಪನೆ. ಈತನು ಬರೆದ ಶ್ರೀಕರ ಅಥವಾ ಶ್ರೀಂಕರ ಭಾಷ್ಯದಿಂದ ಏಕೋರಾಮಪಂಡಿತರು ಬ್ರಹ್ಮಸೂತ್ರಕ್ಕೆ ಒಂದು ಭಾಷ್ಯವನ್ನು ಬರೆದಿರುವುದಾಗಿ ಕಂಡುಬರುವುದು. ಈ ಏಕೋರಾಮಪಂಡಿತರು ಪಂಚಾಚಾರ್ಯರಲ್ಲೊಬ್ಬರಾದ ಏಕೋರಾಮಾಚಾರ್ಯರೇ ಅಥವಾ ಅವರಿಂದ ಭಿನ್ನರೇ ಎಂಬುದನ್ನು ನಿರ್ಣಯಿಸುವುದು ಅತ್ಯಗತ್ಯ. ಏಕಂದರೆ ಈರ್ವರೂ ಒಂದೇ ವ್ಯಕ್ತಿಯೆಂದು ಸಿದ್ಧವಾದರೆ ಆಚಾರ್ಯರು ಶ್ರೀಪತಿಪಂಡಿತರಿಗೆ ಹಿರಿಯರಾಗಿದ್ದರೆಂದು ನಿರ್ಣಯಿಸಲು ಅನುಕೂಲವಾಗುವದಲ್ಲದೆ ಆಚಾರ್ಯರು ಕಾಲ್ಪನಿಕ ವ್ಯಕ್ತಿಗಳಿರದೆ ಐತಿಹಾಸಿಕ ಪುರುಷರೆಂದು ತಾನೇ ಸಿದ್ಧವಾಗುವುದು. ದುರ್ದೈವದಿಂದ ನನ್ನ ಹತ್ತರ ಶ್ರೀಕರಭಾಷ್ಯವಿಲ್ಲ; ಮತ್ತು ಏಕೋರಾಮರ ಭಾಷ್ಯವು ಉಪಲಬ್ಧವಿಲ್ಲ. ಆದುದರಿಂದ ಈ ವಿಷಯವನ್ನು ಇಲ್ಲಿಗೇ ತಡೆಯಬೇಕಾಯಿತು. ಆಚಾರ್ಯರ ಪೀಠಾರೂಢರಾದ ಸ್ವಾಮಿಗಳು ಪ್ರಮಾಣ ಬದ್ಧ

ವಾದ ಮತ್ತು ಈ ಮನ್ವಂತರದ ಚಿಕಿತ್ಸಕರ್ಗೆ ಮನದಟ್ಟಾಗುವಂಥ ಆಧಾರಗಳಿಂದೊಡಗೂಡಿದ ತಮ್ಮ ತಮ್ಮ ಪೀಠಗಳ ಮತ್ತು ಆಚಾರ್ಯರ ಇತಿಹಾಸವನ್ನು ಬೈಲಿಗೆ ತರಲು ಹವಣಿಸುವರೆಂದೂ, ಹಾಗೆ ಮಾಡಿ ವೀರಶೈವ ಮತದ ಪ್ರಾಚೀನತೆಯ ನಿಜಸ್ವರೂಪವನ್ನು ಕಂಡು ಹಿಡಿಯಲು ಕಾರಣೀಭೂತರಾದ ಶ್ರೇಯಸ್ಸಿಗೆ ಪಾತ್ರರಾಗುವರೆಂದೂ ನಮ್ಮ ಬಲವಾದ ಆಶೆ. ಮಹಾತ್ಮರ ಮೇಲಿನ ಅತುಲವಾದ ಶ್ರದ್ಧಾಭಕ್ತಿಗಳಿಂದ ಅಂಧರಾದ ಮಾನವರನ್ನು ಕಾಲ್ಪನಿಕ ಕಥೆಗಳ ಸೆಳವಿಗೆ ಬೀಳಗೊಡದಂತೆ ಮಾಡಿ ಮಹಾತ್ಮರ ನಿಜವಾದ ಸ್ವರೂಪವನ್ನೂ, ಅವರ ಮಹಾತ್ಮ್ಯದ ತಿರುಳನ್ನೂ ತೋರಿಸುವದರಲ್ಲಿಯೇ ಶ್ರೇಯಸ್ಸಿದೆ. ಪಂಚಾಚಾರ್ಯರ ಹೆಸರಿನ ಹಲಕೆಲವರು ೧೩ನೇ ಶತಮಾನದಲ್ಲಿದ್ದರು. ಅವರೇ ಐತಿಹ್ಯ ಪುರುಷರಾದ ಆಚಾರ್ಯರೆನ್ನಲು ಸಾಧನವಿಲ್ಲ. ರೇವಣಸಿದ್ಧರೆಂಬ ಹೆಸರಿನವರು ಹಲವರಿರುವರು. ಓರ್ವ ರೇವಣದೇವ ಅಥವಾ ರೇವಣಸಿದ್ಧನೆಂಬವನು ೧೨—೧೩ ಶತಮಾನದ ಮಧ್ಯದಲ್ಲಿದ್ದನೆಂಬುದು ಹಿಂದೆ ಒಮ್ಮೆ ಶಿವಾನುಭವದಲ್ಲಿ ಪ್ರಸಿದ್ಧಮಾಡಿದ ಚೌಡದಾಂಪುರದ ಶಿಲಾಶಾಸನಗಳಿಂದ ಕಂಡುಬರುವದು. ಅಮರಗುಂಡದ ಮಲ್ಲಿಕಾರ್ಜುನನೇ ಪಂಡಿತಾರಾಧ್ಯನೆಂದೂ ಏಕಾಂತದ ರಾಮಯ್ಯನೇ ಏಕೋರಾಮನೆಂದೂ ಕೆಲವಿದ್ವಾಂಸರ ತಪ್ಪುತಿಳುವಳಿಕೆಯಿದೆ. ಆದುದರಿಂದ ವೀರಶೈವ ಮತದ ಉತ್ಪಾದಕರೆಂದು ಪ್ರತೀತಿಯುಳ್ಳ ಪಂಚಾಚಾರ್ಯರ ಅಸ್ತಿತ್ವವನ್ನು ಸಿದ್ಧ ಮಾಡುವ ವರೆಗೆ ನಾವು ವೀರಶೈವ ಮತದ ಉಗಮವು ಗೊತ್ತಿಲ್ಲೆಂದೇ ಹೇಳಬೇಕಾಗುವದು.

ಇನ್ನು ಬಸವಣ್ಣನವರಿಂದಲೇ ವೀರಶೈವ ಮತದ ಸ್ಥಾಪನೆಯಾಯಿತೆಂದು ಕೆಲವರ ಗ್ರಹಿಕೆ. ಇದಾದರೂ ಸರಿಯಲ್ಲವೆಂದೆನಿಸುವದು. ಬಸವಣ್ಣನವರ ಚರಿತ್ರವನ್ನು ವಿವರಿಸುವ ಗ್ರಂಥಗಳ ಮೇಲಿಂದ ಅವರು ಮತಸ್ಥಾಪಕರಿದ್ದಂತೆ ತೋರುವದಿಲ್ಲ. ಭೀಮ ಕವಿಯಂತೂ ಅವರು ವೀರಶೈವ ದೀಕ್ಷೆಯನ್ನು ಪಡೆದರೆಂದು ಹೇಳುವನು. ಬಸವಣ್ಣನವರ ಭಕ್ತಿ ಮತ್ತು ಧರ್ಮದ ಮೇಲಿನ ಪ್ರೇಮವನ್ನು ಕೇಳಿ ದೇಶ ದೇಶಗಳಿಂದ ಶರಣರು ಅವರ ಹತ್ತರ ಬರಹತ್ತಿದರೆಂದು ಸ್ಪಷ್ಟವಾಗಿ ಉಲ್ಲೇಖವಿದೆ. ಈ ಎಲ್ಲ ಶರಣರಿಗೆ ಬಸವಣ್ಣನವರು ಗುರುಗಳಾಗಿಲ್ಲ; ತಿರುಗಿ ಬಸವಣ್ಣನವರೇ ಅವರೆಲ್ಲರನ್ನು ಪೂಜಿಸುತ್ತಿದ್ದರು. ಬಸವಣ್ಣನವರೇ ಮತಸ್ಥಾಪಕರಾಗಿ

ದ್ದರೆ ಹೀಗಾಗುತ್ತಿದ್ದಿಲ್ಲ. ಬೇರೆ ಬೇರೆ ಭಾಗಗಳಿಂದ ಶರಣರು ಬಂದು ಬಸವನ ಹತ್ತರ ಕವಿಯಹತ್ತಿದುದರಿಂದ ಆಯಾ ಭಾಗಗಳಲ್ಲಿ ವೀರಶೈವ ಮತವು ಅಲ್ಪ ಪ್ರಮಾಣದಲ್ಲಿಯಾದರೂ ಕೂಡ ಇತ್ತೆಂದು ನಂಬಬೇಕಾಗುವದು. ಕ್ರಿ. ಶ. ೧೨೬೦ ರಲ್ಲಿ ಹುಟ್ಟಿದ ಒಂದು ಶಾಸನದ ಮೇಲಿಂದ ಬಸವಣ್ಣನವರು ಧರ್ಮೋದ್ಧಾರಕ್ಕಾಗಿ, ಧರ್ಮಸ್ಥಾಪನೆಗಾಗಿ ಅಲ್ಲ, ಭೂಮಿಯಲ್ಲಿ ಬಂದರೆಂದು ಕಂಡುಬರುವದು. ಆಗಲೂ ಕೂಡ ಬಸವಣ್ಣನವರು ಧರ್ಮಸ್ಥಾಪಕರೆಂದು ತಿಳಿಯಲ್ಪಟ್ಟಿದ್ದಿಲ್ಲ. ಭೀಮಕವಿಯಾದರೂ ಧರ್ಮೋದ್ಧಾರಕ್ಕಾಗಿ ನಂದಿಯು ಭೂಮಿಯಲ್ಲಿ ಬಸವಣ್ಣನೆಂಬಭಿಧಾನದಿಂದವತರಿಸಿದಂತೆ ತಿಳಿಸಿದ್ದಾನೆ. ಶೈವಧರ್ಮಾನುಯಾಯಿಗಳು ಅಲ್ಲಲ್ಲಿ ಅಡಗಿಕೊಂಡಿರುವರೆಂದೇ ನಾರದನ ಮುಖದಿಂದ ಭೀಮನು ಕೈಲಾಸದಲ್ಲಿ ಒಡ್ಡೋಲಗಂಗೊಟ್ಟ ಶಿವನಿಗೆ ಬಿನ್ನವಿಸಿಕೊಂಡಿದ್ದಾನೆ. ಬಸವಣ್ಣನವರಿಗೂ ಮೊದಲು ಹಲವರು ಮತಪ್ರಸಾರಕ್ಕಾಗಿ ಹೆಣಗಾಡಿದಂತೆ ಆಧಾರಗಳು ದೊರೆಯಹತ್ತಿವೆ. ಆದುದರಿಂದ ಕ್ರೈಸ್ತಮುಹಮ್ಮದರಂತೆ ಬಸವಣ್ಣನವರು ವೀರಶೈವಮತಸ್ಥಾಪಕರಲ್ಲವೆಂದು ಒಪ್ಪಬೇಕಾಗುವದು. ಆದುದರಿಂದ ೧೨ನೇ ಶತಮಾನದಲ್ಲಿ ಇದು ಉದಯಿಸಿರಲಾರದು. ಆದರೂ ೧೨ನೇ ಶತಮಾನದಲ್ಲಿ ಇದರಲ್ಲಿ ಬಹಳವಾಗಿ ಮಾರ್ಪಾಡಾಗಿರಬೇಕು.

**ಪ್ರಾಚೀನತ್ವ:—** ಡಾ. ಫ್ಲೀಟ ಮತ್ತು ಡಾ. ರಾಮಕೃಷ್ಣಗೋಪಾಲ ಭಾಂಡಾರಕರ ಮೊದಲಾದ ಕೆಲ ಪಂಡಿತರು ಏಕಾಂತದ ರಾಮಯ್ಯನೇ ವೀರಶೈವಮತಸ್ಥಾಪಕನಿರಬಹುದೆಂದೂ, ವೀರಶೈವ ಮತವು ಬಸವಣ್ಣನವರಿಗಿಂತ ಸುಮಾರು ೧೦೦ ವರ್ಷ ಮೊದಲು ಉದಯಿಸಿರಬೇಕೆಂದೂ ಅಭಿಪ್ರಾಯಪಡುವರು. ಏಕೆಂದರೆ ಏಕಾಂತದ ರಾಮಯ್ಯನು ಮತಸ್ಥಾಪಕನೆಂದು ಬಸವಪುರಾಣದಲ್ಲಾಗಲೀ ಅಬ್ಬಲೂರ ಶಿಲಾಶಾಸನದಲ್ಲಾಗಲೀ ಇಲ್ಲ. ಇದು ಕೇವಲ ಡಾ. ಮಹಾಶಯರುಗಳ ಕಲ್ಪನೆಯೋ ಹೊರ್ತು ಇದಕ್ಕೆ ಆಧಾರವು ಇದ್ದಂತೆ ತೋರುವುದಿಲ್ಲ. ಈ ಮತವು ೧೧ ನೇ ಶತಮಾನಕ್ಕೂ ಪೂರ್ವದಲ್ಲಿ ಉದಯಿಸಿರಬೇಕು. ಎಷ್ಟು ಶತಮಾನಗಳ ಪೂರ್ವದಲ್ಲಿ ಉದಯಿಸಿತ್ತೆಂಬದನ್ನು ಹೇಳಲು ಈಗ ಸಾಧ್ಯವಿಲ್ಲ. ಆದರೂ ಮಹಾಭಾರತದ ಕಾಲದಲ್ಲಿ ಈ ಮತದ ವಿಚಾರಗಳನೇಕ ಅಸ್ತಿತ್ವದಲ್ಲಿದ್ದಿರಬೇಕೆಂದು ಊಹಿಸಲವಕಾಶವಿದೆ. ಅದು ಹೇಗೆಂದರೆ:—

೧. ವೀರಶೈವರ ತತ್ವಜ್ಞಾನ ಶಾಸ್ತ್ರ (*Metaphysics*) ವನ್ನು ಶೋಧಿಸಿದರೆ ಅದರಲ್ಲಿ ಅತಿ ಪ್ರಾಚೀನ ತತ್ವಗಳು ಅಡಕವಾಗಿವೆಯೆಂದು ಕಂಡು ಬರುವದು. ಚನ್ನಬಸವಣ್ಣನವರೇ ಬರೆದಿರುವರೆಂದು ಪ್ರತೀತಿಯಿರುವ ಕರಣ ಹಸುಗೆಯಲ್ಲಿ ಆವ ತತ್ವಗಳ ಸಮ್ಮಿಶ್ರಣದಿಂದ ಶರೀರವು ಉಂಟಾಗಿದೆಯೆಂಬದು ವಿವೇಚಿಸಲ್ಪಟ್ಟಿರುವದು. ಆ ತತ್ವಗಳಾವವೆಂದರೆ—

೫ ಕರ್ಮೇಂದ್ರಿಯಗಳು, ೫ ಜ್ಞಾನೇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ತನ್ಮಾತ್ರೆಗಳು, ೫ ಪ್ರಾಣವಾಯುಗಳು ಮತ್ತು ೫ ಅಂತಃಕರಣಗಳು. ಈ ಎಲ್ಲ ತತ್ವಗಳಿಂದೊಡಗೂಡಿದುದು ಶರೀರವು. ಹಿಂದೂಧರ್ಮದ ತತ್ವಶಾಸ್ತ್ರದಲ್ಲಿ ಸಾಂಖ್ಯರೇ ಅಗ್ರಗಣ್ಯರು. ಈಶ್ವರ ಕೃಷ್ಣನಿಂದ ಬರೆಯಲ್ಪಟ್ಟ "ಸಾಂಖ್ಯಕಾರಿಕಾ" ಎಂಬ ಗ್ರಂಥವೇ ಮುಖ್ಯವಾದುದು. ಈಶ್ವರ ಕೃಷ್ಣನು ಸುಮಾರು ೫ ನೇ ಶತಮಾನದಲ್ಲಿ ಇದ್ದಿರಬೇಕೆಂದು ಪಂಡಿತರ ಮತ. ಈತನಿಗೂ ಮೊದಲು ಸಾಂಖ್ಯದರ್ಶನವು ಪ್ರಚಾರದಲ್ಲಿತ್ತು. ಆದರೆ ಆಗ ಅದು ಒಂದೇ ಸ್ವರೂಪದಲ್ಲಿದ್ದಿಲ್ಲ. ಈಶ್ವರ ಕೃಷ್ಣನೇ ಆ ಎಲ್ಲ ವಿಚಾರಗಳನ್ನು ಒಂದೇ ಕಡೆಗೆ ಸಂಕಲಿಸಿ, ಅವೆಲ್ಲವುಗಳಲ್ಲಿ ಒಂದೇ ಸ್ವರೂಪವುಂಟಾಗುವಂತೆ ಮಾಡಿ, ಸಾಂಖ್ಯದರ್ಶನದ ಆಚಾರ್ಯನಾದನೆಂದು ಹಲವು ಬಹುದೊಡ್ಡ ವಿದ್ವಜ್ಜನರ ಮತವು. ಈಶ್ವರ ಕೃಷ್ಣನಿಂದಿತ್ತಿತ್ತಲಾಗಿ ಆವ ಪ್ರತಿಯೊಂದು ಮತದ ತತ್ವಜ್ಞಾನದ ಮೇಲೆ ಸಾಂಖ್ಯರ ಪ್ರಭಾವವು ಬಿದ್ದಿದೆ. ಸಾಂಖ್ಯರ ಪ್ರಕಾರ ಶರೀರಗಳು ಅದೇಕೆ ವಿಶ್ವವು ೨೫ ತತ್ವಗಳಿಂದಲೇ ಆಗಿರುವದು. ಅವಾವೆಂದರೆ— ಪುರುಷ, ಪ್ರಕೃತಿ, ಬುದ್ಧಿ, ಮನಸ್ಸು, ಅಹಂಕಾರ, ೫ ಜ್ಞಾನೇಂದ್ರಿಯಗಳು ೫ ಕರ್ಮೇಂದ್ರಿಯಗಳು, ೫ ತನ್ಮಾತ್ರೆಗಳು, ಮತ್ತು ೫ ಮಹಾಭೂತಗಳು.

ಪ್ರಕೃತಿಪುರುಷರ ಸಂಯೋಗದಿಂದ ಉಳಿದ ತತ್ವಗಳ ಉತ್ಪತ್ತಿ. ಪಂಚಮಹಾಭೂತಗಳೇ ಕಡೆಯ ತತ್ವಗಳು. ಅವು ತನ್ಮಾತ್ರೆಗಳಿಂದ ಬಂದವು. ಕರಣಹಸುಗೆಯ ಪ್ರಕಾರ ಮಹಾಭೂತಗಳೇ ಮೊದಲನೆಯವು. ಅವುಗಳಿಂದಲೇ ಉಳಿದ ತತ್ವಗಳ ಉತ್ಪತ್ತಿ. ಮೇಲಾಗಿ ಸಾಂಖ್ಯರಲ್ಲಿ ಮೂರೆ ಅಂತಃಕರಣಗಳು, ಕರಣಹಸುಗೆಯಲ್ಲಿ ಐದು. ಸಾಂಖ್ಯರಲ್ಲಿ ಪ್ರಾಣವಾಯುಗಳು ತತ್ವಗಳೊಳಗೆ ಗಣಿಸಲ್ಪಟ್ಟಿಲ್ಲ. ಕರಣಹಸುಗೆಯಲ್ಲಿ ಅವು ತತ್ವಗಳಾಗಿವೆ. ಆದುದರಿಂದ ಸಾಂಖ್ಯರಿಗೂ ಕರಣಹಸುಗೆಗೂ

ಅಂತರವಿದೆ. ಕರಣಹಸುಗೆಯಲ್ಲಿಯ ತತ್ವಗಳು ಚನ್ನಬಸವಣ್ಣನಿಂದ ಕಲ್ಪಿಸಲ್ಪಟ್ಟವಲ್ಲ. ಏಕೆಂದರೆ ಅವೆಲ್ಲವನ್ನು ವಿಜಯಭೈರವಿಯೆಂಬ ಆಗಮದಿಂದ ತೆಗೆದುಕೊಳ್ಳಲಾಗಿದೆಯೆಂದು ಸ್ಪಷ್ಟವಾಗಿ ಉಲ್ಲೇಖವು ಕರಣಹಸುಗೆಯಲ್ಲಿದೆ. ಆದುದರಿಂದ ಅವು ೧೨ಶತಮಾನದಲ್ಲಿ ಕಲ್ಪಿತವಾಗಿಲ್ಲ. ಸಾಂಖ್ಯರಿಗೂ ಕರಣಹಸುಗೆಗೂ ಮುಖ್ಯಮಾತುಗಳಲ್ಲಿ ಭಿನ್ನಾಭಿಪ್ರಾಯವಿರುವದರಿಂದ ಅವನ್ನು ಸಾಂಖ್ಯರಿಂದ ತೆಗೆದುಕೊಂಡಿಲ್ಲೆಂದು ಹೇಳಬಹುದು.

ಮಹಾಭಾರತ ಪರ್ವ ೧೨ ಅಧ್ಯಾಯ ೩೧೧ಳ ಶ್ಲೋಕ ೪ ಮತ್ತು ೧೪ರಲ್ಲಿ ತತ್ವಗಳ ಉತ್ಪತ್ತಿಯ ಬಗ್ಗೆ ವಿವೇಚನೆಯಿದೆ. ಅದರಲ್ಲಿ ಅಂತಃಕರಣ, ಬುದ್ಧೀಂದ್ರಿಯ, ಕರ್ಮೇಂದ್ರಿಯ ಮತ್ತು ತನ್ಮಾತ್ರೆಗಳು ಮಹಾಭೂತಗಳಿಂದಲೇ ಉದ್ಭವಿಸಿವೆಯೆಂದು ಉಲ್ಲೇಖವಿದೆ. ಕರಣಹಸುಗೆಯಲ್ಲಿ ಮಹಾಭೂತಗಳಿಂದಲೇ ಉಳಿದ ತತ್ವಗಳ ಉತ್ಪತ್ತಿಯೆಂದು ಹೇಳಿದೆ. ಮಹಾಭಾರತದ ಈ ವಿವೇಚನೆಗೂ ಕರಣಹಸುಗೆಯಲ್ಲಿಯ ವಿವೇಚನೆಗೂ ಮುಖ್ಯ ಮಾತಿನಲ್ಲಿ ಅಂದರೆ ಮಹಾಭೂತಗಳಿಂದ ಉಳಿದ ತತ್ವಗಳ ಉತ್ಪತ್ತಿಯೆಂಬುದರಲ್ಲಿ ಸರಿ ಬೀಳುವದು. ಮಹಾಭಾರತದಲ್ಲಿಯೇ ಮತ್ತೊಂದು ಕಡೆಗೆ ಪ್ರಾಣವಾಯುಗಳನ್ನು ತತ್ವಗಳಲ್ಲಿ ಗಣಿಸಿರುವರೆಂದು ಡಾ. ಆರ್ಥರ ಬ್ಯಾರಿಡೆಲ ಕೀಥರವರು ತಮ್ಮ "ಸಾಂಖ್ಯದರ್ಶನ" ವೆಂಬ ಪುಸ್ತಕದಲ್ಲಿ ಎತ್ತಿ ಹೇಳಿರುವರು. ಇದರ ಮೇಲಿಂದ ಕರಣಹಸುಗೆಯಲ್ಲಿಯ ಮಾತುಗಳು ಅನೇಕ ಮಹಾಭಾರತದಲ್ಲಿಯವುಗಳಿಗೆ ಸರಿ ಬೀಳುವದರಿಂದ ವೀರಶೈವರು ತಮ್ಮ ತತ್ವಜ್ಞಾನ ಶಾಸ್ತ್ರವೆಂದು ತಿಳಿಯುವ ಕರಣಹಸುಗೆಯಲ್ಲಿಯ ತತ್ವ ವಿವೇಚನವು ಮಹಾಭಾರತಕಾಲದಷ್ಟು ಹಳೆಯದೆಂಬುದನ್ನು ಒಪ್ಪಿಕೊಳ್ಳಬೇಕಾಗುವದು.

೨. ವೀರಶೈವರಲ್ಲಿ ಇನ್ನೂ ನಡೆಯುತ್ತ ಬಂದ ಹಲಕೆಲವು ಆಚಾರಗಳನ್ನು ಶೋಧಿಸಿ ನೋಡುವಾ. ಬಸವಣ್ಣನ ಕಾಲದ ಶರಣರು ಅಥವಾ ವಚನಶಾಸ್ತ್ರಕಾರರು ಜಾತಿವರ್ಣಗಳ ಭೇದವನ್ನೆಣಿಸಿಲ್ಲ. ಈಗಲೂ ಕೂಡ ಲಿಂಗವಂತರು ಸಾಮಾಜಿಕ ಮತ್ತು ಧಾರ್ಮಿಕ ಬಾಬುಗಳಲ್ಲಿ ಸ್ತ್ರೀಪುರುಷ, ಬ್ರಾಹ್ಮಣ, ಶೂದ್ರ, ಇತ್ಯಾದಿ ಭೇದಗಳನ್ನು ಮಾಡುವದಿಲ್ಲ. ಈಗಲೂ ಕೂಡ ಲಿಂಗವಂತರಲ್ಲಿ ಚಾತುರ್ವರ್ಣ್ಯ ವ್ಯವಸ್ಥೆಯಿಲ್ಲ. ಪಂಚಸೂತಕಗಳನ್ನು ಮಾನಿಸುವದಿಲ್ಲ. ವೀರಶೈವ ಗುರುಗಳು ಕಾಷಾಯ ವಸ್ತ್ರ

ಗಳನ್ನು ಧರಿಸುವರು; ಭಿಕ್ಷೆಬೇಡುವರು; ತಲೆ ಮತ್ತು ಮುಖಗಳ ಮೇಲಿನ ಕೂದಲುಗಳನ್ನು ಸಂಪೂರ್ಣವಾಗಿ ತೆಗೆದುಬಿಡುವರು. ವೀರಶೈವರು ವೈದಿಕ ಕರ್ಮಕಾಂಡವನ್ನು ಮನ್ನಿಸುವದಿಲ್ಲ, ಅಂದರೆ ವೇದದ ಮುಖ್ಯ ಭಾಗವನ್ನು ಬಿಟ್ಟಿರುವರು. ಅವರು ಶೈವಾಗಮಗಳಿಗೆ ಕೊಡುವ ಮನ್ನಣೆಯು ವೇದಗಳಿಗೆ ಇಲ್ಲ; ಅಂದರೆ ವೇದಗಳಿಗಿಂತಲೂ ವೀರಶೈವರ ದೃಷ್ಟಿಯಲ್ಲಿ ಶೈವಾಗಮಗಳು ಹೆಚ್ಚು ಪ್ರಮಾಣಗ್ರಂಥಗಳು. ವೀರಶೈವರಿಗೆ ಪುನರ್ಜನ್ಮದ ಭೀತಿಯಿಲ್ಲ. ಈ ಪ್ರಕಾರ ಆ ವಿಚಾರಗಳುಳ್ಳ ಶೈವರು ಮಹಾಭಾರತದ ಕಾಲದಲ್ಲಿಯೂ ಕೂಡ ಇದ್ದರೆಂದು ಕಂಡು ಬರುವುದು. ಮಹಾಭಾರತ ಪರ್ವ ೧೨ ಅಧ್ಯಾಯ ೧೮ ಶ್ಲೋಕ ೩೨ ರಲ್ಲಿ ಕೆಲವು ಮಾತುಗಳಿವೆ. ಅವಾವೆಂದರೆ:—

"ವೇದಗಳನ್ನು ತ್ಯಜಿಸಿ, ಮುಖ ತಲೆಗಳನ್ನು ಬೋಳಿಸಿಕೊಂಡು, ಕಾಷಾಯ ವಸ್ತ್ರಗಳನ್ನು ಧರಿಸಿ ಭಿಕ್ಷುಕರಾಗಿ ತಿರುಗುವಂಥವರು"

*(Dr. Hopkins Great Epic of India P. 88)*

ಮಹಾಭಾರತ ಪರ್ವ ೧೨ ಅಧ್ಯಾಯ ೧೬೦ ಶ್ಲೋಕ ೩೩

"ಪರಲೋಕದ ಭಯವಾಗಲಿ ಮರಣಾನಂತರ ತಿರುಗಿ ಬಂದೇವೆಂಬ ಭೀತಿಯಾಗಲೀ ಇಲ್ಲದಂಥವರು"

*(Dr. Hopkins Great Epic of India P. 88)*

"ನಾನೇ, ರುದ್ರನು, ಮೊದಲು ಮೊದಲನೇ ಸಾರೆ ಸರ್ವತ್ರವ್ಯಾಪಿಯೂ ಸರ್ವರಿಗೂ ಹಿತಕರವೂ ಗೂಢವೂ ಆದ ಪಾಶುಪತ ಧರ್ಮವನ್ನು ಹುಡುಕಿ ತೆಗೆದೆನು. ಅದನ್ನು ಕಲಿಯಲು ವರ್ಷಗಳುಬೇಕು. ಆದರೂ ಹತ್ತೇ ದಿವಸಗಳಲ್ಲಿ ಕೂಡ ಅದನ್ನು ಕಲಿಯಲು ಸಾಧ್ಯವಿದೆ. ವರ್ಣ ವ್ಯವಸ್ಥೆಗೆ ಮತ್ತು ಶಾಸ್ತ್ರಗಳ ನಿಯಮಗಳಿಗೆ ವಿರುದ್ಧವಾಗಿದೆಯೆಂದು ತಿಳಿಗೇಡಿಗಳಿಂದ ತಿರಸ್ಕರಿಸಲ್ಪಟ್ಟರೂ ಬಲ್ಲವ (ಗತಾಂತ) ರು ಅದನ್ನು ಬಣ್ಣಿಸುವರು. ಅದು ನಿಜವಾಗಿಯೇ ವರ್ಣ ವ್ಯವಸ್ಥೆಯುಳ್ಳದುದಕ್ಕೂ ಮಿಗಿಲಾದುದು."

(*Dr. Hopkins Great Epic of India P. 164*)

ಈ ಅವತರಣಿಕೆಗಳಲ್ಲಿ ಕಂಡು ಬರುವ ಆಚಾರಗಳೆಲ್ಲವೂ ವೀರಶೈವರಲ್ಲಿ ಇನ್ನೂ ಪ್ರಚಾರದಲ್ಲಿವೆ. ಮೇಲಿನವೆರಡು ಅವತರಣಿಕೆಗಳು ಬೌದ್ಧ

ರಿಗೆ ಸಂಬಂಧಿಸಿರಬೇಕೆಂದು ಕೆಲ ಪಂಡಿತರ ಅಭಿಪ್ರಾಯ. ಆದರೆ ಅವು ಶೈವರಿಗೆ ಸಂಬಂಧಿಸಿರಬೇಕೆಂದು ನಮ್ಮ ಅಭಿಪ್ರಾಯ. ಮಹಾಭಾರತದ ಅಭ್ಯಾಸದಲ್ಲಿ ತಮ್ಮ ಆಯುಷ್ಯವನ್ನೇ ಧಾರೆಯೆರೆದ ಮತ್ತು ಜೀವಂತ ವಿದ್ವಜ್ಜನರಲ್ಲಿ ಮಹಾಭಾರತದ ವಿಷಯಕ್ಕೆ ಬಲ್ಲಿದರೆಂದು (*authority on the Mahabharata*) ಹೆಸರಾದ ಅಮೇರಿಕೆಯ ಯುಲಿ ವಿಶ್ವ ವಿದ್ಯಾಲಯದ ಸಂಸ್ಕೃತಾಧ್ಯಾಪಕರಾದ ಡಾ. ಹಾಪಕಿನ್ಸರವರೂ ಹೀಗೆ ಅಭಿಪ್ರಾಯ ಪಡುವರು. ಮೂರನೇಯ ಅವತರಣಿಕೆಯಲ್ಲಿ ಪಾಶುಪತರ ಹೆಸರು ಸ್ಪಷ್ಟವಾಗಿದೆ. ಈ ಮೂರು ಅವತರಣಿಕೆಗಳು ಶೈವರಾದ ಪಾಶು ಪತರಿಗೆ ಸಂಬಂಧಿಸಿರಬೇಕೆಂದು ನಮ್ಮ ಗ್ರಹಿಕೆ. ಅದು ನಿಜವಿದ್ದ ಪಕ್ಷ ದಲ್ಲಿ ಈಗ ನಾಮಶೇಷನಾಗಿರುವ ಅತಿ ಪ್ರಾಚೀನ ಶೈವಮತವಾದ ಪಾಶು ಪತಧರ್ಮದಲ್ಲಿಯ ಆಚಾರ ವಿಚಾರಗಳು ಇನ್ನೂ ವೀರಶೈವರಲ್ಲಿ ಕಂಡು ಬರುವವೆಂಬುದನ್ನು ಒಪ್ಪಿಕೊಳ್ಳಬೇಕಾಗುವುದು.

ವೀರಶೈವರ ಪ್ರಾಚೀನ ಇತಿಹಾಸವು ಉಪಲಬ್ಧವಿಲ್ಲ. ಸುಮಾರು ೧೧-೧೨ ಶತಮಾನಗಳಿಂದ ಇತ್ತಿತ್ತಲಾಗಿಯೇ ವಿಶ್ವಸನೀಯವಾದ ಈ ಮತದ ಇತಿಹಾಸವು ಉಪಲಬ್ಧವಿದೆ. ಪ್ರಾಚೀನ ಕಾಲದ ಶಿಲಾಶಾಸನ ಗಳು ಮತ್ತು ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಬರೆಯಲ್ಪಟ್ಟ ಧಾರ್ಮಿಕ ಮತ್ತು ಇತರ ಗ್ರಂಥಗಳು ವಿಪುಲವಾಗಿ ದೊರೆತಿವೆ. ಇನ್ನೂ ಇವುಗಳ ಬಹು ಭಾಗವು ಬೈಲಿಗೆ ಬರತಕ್ಕದ್ದಿದೆ. ಆದಾಗ್ಯೂ ಈಗ ದೊರೆತ ಸಾಹಿ ತ್ಯದ ಮೇಲಿಂದ ಪ್ರಾಚೀನ ಭಾರತೀಯರ ಧಾರ್ಮಿಕ ಮತ್ತು ಸಾಮಾ ಜಿಕ ಸಂಗತಿಗಳ ಗುರುತಾಗುವುದು. ಈಗ ದೊರೆತ ಸಾಹಿತ್ಯದಲ್ಲಿ ಶೈವ ಧರ್ಮದ ಬಗ್ಗೆ ಅಷ್ಟೇ ಅಲ್ಲ, ಆದರೆ ಶೈವಧರ್ಮದ ಒಳಪಂಗಡಗಳ ಬಗ್ಗೆಯೂ ಎಷ್ಟೋ ಸಂಗತಿಗಳು ದೊರೆಯುವವು. ನನಗೆ ದೊರೆತ ಈ ಸಾಹಿತ್ಯದ ಭಾಗದಲ್ಲಿ ವೀರಶೈವರ ಬಗ್ಗೆ ಟೀಕಾತ್ಮಕ ರೀತಿಯಿಂದಾದರೂ ಉಲ್ಲೇಖವಿದ್ದುದು ನನ್ನ ದೃಷ್ಟಿಗೆ ಬಿದ್ದಿಲ್ಲ. ಇನ್ನೂ ವರೆಗೆ ಯಾರ ದೃಷ್ಟಿಗೂ ಬಿದ್ದಂತೆ ತೋರುವುದಿಲ್ಲ, ಏಕೆಂದರೆ ಹಾಗೆ ಎಲ್ಲಿಯಾದರೂ ಕಂಡುದು ನನ್ನ ಲಕ್ಷದಲ್ಲಿಲ್ಲ. ಆದುದರಿಂದಲೇ ಕ್ರಿ. ಶ. ೧೧-೧೨ ಶತಮಾನಗಳ ಪೂರ್ವದಲ್ಲಿ ಈ ಮತವು ಇದ್ದಿರಲಿಲ್ಲೆಂದು ಪಂಡಿತರ ಅಭಿಪ್ರಾಯ. ಈ ಅಭಿಪ್ರಾಯವು ಸರಿಯಾದುದಲ್ಲವೆಂದು ಮೇಲೆ ಹೇಳಲಾಗಿದೆ. ಕ್ರಿ. ಶ. ೧೧ ಶತಮಾನಕ್ಕೂ ಪೂರ್ವದಲ್ಲಿ ಇದರ ಗುರುತು ದೊರೆಯದಿರುವುದಕ್ಕೆ

ಇದು ಇಲ್ಲದೇ ಇರುವುದೇ ಕಾರಣವೆಂದು ಹೇಳಲಾಗುವುದಿಲ್ಲ. ಕ್ರಿ. ಶ. ೧೪ ನೇ ಶತಮಾನದಲ್ಲಿ ಈ ಮತವು ಅಸ್ತಿತ್ವದಲ್ಲಿದ್ದ ಬಗ್ಗೆ ಯಾರಿಗೂ ಶಿಲ ಮಾತ್ರ ಸಂಶಯಕ್ಕೂ ಆಸ್ಪದವಿಲ್ಲ. ಆದರೂ ಅದೇ ಶತಮಾನದಲ್ಲಿ ಇದ್ದ ಮಾಧವಾಚಾರ್ಯನು ತನ್ನ ಸರ್ವ ದರ್ಶನ ಸಂಗ್ರಹದಲ್ಲಿ ವೀರಶೈವರ ಹೆಸರನ್ನೂ ಕೂಡ ಎತ್ತಿಲ್ಲ. ಶೈವ ಧರ್ಮದ ಪಂಥಗಳಾದ ಪಾಶುಪತ, ನಕುಲೀಶ, ಪ್ರತ್ಯಭಿಜ್ಞಾ ಮೊದಲಾದ ಪಂಥಗಳನ್ನೂ ಅವುಗಳ ದರ್ಶನಗಳನ್ನೂ ವಿವರಿಸಿದ್ದಾನೆ. ಇದೇ ಕಾಲದಲ್ಲಿ ಬಹುತರ ವೀರಶೈವಾಚಾರ್ಯನಾಗಿರಬಹುದಾದ ಕ್ರಿಯಾಶಕ್ತಿಯು ವಿಜಯನಗರದ ಆ ಕಾಲದ ರಾಜನಿಗೆ ಗುರುವಾಗಿ ವಿದ್ಯಾನಗರಿಯ ಪಂಡಿತರಿಂದ ಬಹಳ ಮನ್ನಣೆ ಪಡೆದಿದ್ದನೆಂದು ಗೊತ್ತಾಗುವುದು. ಕೆಲ ಪಂಡಿತರು ತಮ್ಮ ಗ್ರಂಥಗಳ ಆದಿಯಲ್ಲಿ ತಮ್ಮ ಗ್ರಂಥ ನಿರ್ವಿಘ್ನ ಸಮಾಪ್ತಿಗಾಗಿ ಈತನನ್ನೇ ಸ್ತುತಿಸಿರುವರು. ಈತನು ಆ ಕಾಲದ ಪ್ರಸಿದ್ಧ ಪುರುಷನಾದ ಮಾಧವಾಚಾರ್ಯನ ಗುರುವೂ ಆಗಿದ್ದನೆಂದು ಕಂಡು ಬರುವುದು. ಅಂದಮೇಲೆ ಸರ್ವ ದರ್ಶನಕಾರನಿಗೆ ವೀರಶೈವ ಧರ್ಮವು ದೃಷ್ಟಿಗೆ ಬೀಳದೆ ಇದ್ದುದು ಅಚ್ಚರಿಯಲ್ಲವೇ? ವಿಚಾರಮಾಡಿ ನೋಡಿದರೆ ಮಾಧವಾಚಾರ್ಯನಿಗೆ ವೀರಶೈವ ಮತವು ಗೊತ್ತಿರಲೇಬೇಕು. ಆತನಿಗೆ "ವೀರಶೈವ" ಅಥವಾ "ಲಿಂಗವಂತ" ಎಂಬ ಹೆಸರು ಜನರಿಂದ ಸಾಮಾನ್ಯವಾಗಿ ಕರೆಯಲ್ಪಟ್ಟವೇ ಅಲ್ಲದೆ ಮತದ ನಿಜವಾದ ಹೆಸರಾಗಿರಲಾರದೆಂದು ಅನ್ನಿಸಿರಬಹುದು. ಶಿವನಲ್ಲಿ ಒಳ್ಳೇ ಅಭಿಮಾನಿಗಳಾಗಿರುವುದರಿಂದಲೂ, ಶಿವನ ಹೆಚ್ಚಳವನ್ನು ಕಾಯ್ದುಕೊಳ್ಳಲು ಪ್ರಾಣವನ್ನು ಕೂಡ ಲೆಕ್ಕಿಸದೇ ಇರುವುದರಿಂದಲೂ, ಶೈವ ಧರ್ಮದ ಕಠೋರ ಮತ್ತು ಬಲು ಬಿಕ್ಕಟ್ಟಾದ ಆಚರಣೆಗಳನ್ನು ಪಾಲಿಸುವುದರಿಂದ ಇವರಿಗೆ ವೀರಶೈವರೆಂದೂ, ಲಿಂಗವನ್ನು ಸದಾ ಧರಿಸುವುದರಿಂದ ಲಿಂಗವಂತರೆಂದೂ, ಇವರನ್ನು ಕರೆದಿರಬಹುದೆಂದು ಆತನಿಗೆ ಕಂಡಿರಬಹುದು. ಆತನ ಕಾಲದಲ್ಲಿ ಕಾಲಾಮುಖರ ಬಹುತರ ಎಲ್ಲ ಮಠಗಳು ವೀರಶೈವರಾಗಿದ್ದುದರಿಂದ ವೀರಶೈವರಿಗೂ ಕಾಲಾಮುಖರಿಗೂ ಭೇದವಿಲ್ಲೆಂದು ಕಲ್ಪಿಸಿ ಲಕುಲೀಶ ಪಂಥವನ್ನಷ್ಟೇ ತನ್ನ ಗ್ರಂಥದಲ್ಲಿ ಉಲ್ಲೇಖಿಸಿರಬಹುದು. ಸುಮಾರು ೯ನೇ ಶತಮಾನದಿಂದ ಒಳ್ಳೇ ಪ್ರಸಿದ್ಧಿಗೆ ಬಂದ, ಕನ್ನಡನಾಡಿನ ಶಾಸನಗಳಲ್ಲಿ ವಿಪುಲವಾಗಿ ಬಣ್ಣಿಸಲ್ಪಟ್ಟ, ಅತಿ ಪ್ರತಿಭಾಶಾಲಿಗಳಾದ ಕಾಲಾಮುಖರು ಶೈವ

ರಲ್ಲಿಯ ಒಂದು ಪ್ರಬಲ ಪಂಥದವರಾದವರೂ ವೀರಶೈವರಾಗಿರಲಾರರು. ವೀರಶೈವರ ಆಚರಣೆ, ವಿಧಿ (*Ritualism*) ತತ್ವಜ್ಞಾನ (*Philosophy*) ಮೊದಲಾದವುಗಳಿಗೂ ಕಾಲಾಮುಖರ ಆಚರಣೆ, ವಿಧಿ, ತತ್ವಜ್ಞಾನಗಳಿಗೂ ಅನೇಕ ವ್ಯತ್ಯಾಸಗಳಿವೆ. ಈರ್ವರೂ ಶೈವರಿದ್ದರೂ ಆಚಾರ ವಿಚಾರಗಳಲ್ಲಿ ಭೇದ ಕಂಡುಬರುವುದರಿಂದ ಅವರು ಬೇರೆಯವರಾಗಿರಬೇಕು. ಕಾಳಾಮುಖಾಚಾರ್ಯರನ್ನು ಶಾಸನಗಳಲ್ಲಿ "ಲಾಕುಳಾಗಮಜ್ಞರು" "ಲಾಕುಳ ಸಮಯ ಸಮುದ್ಧರಣರು" ಎಂದು ಮೊದಲಾಗಿ ಸ್ತುತಿಸಿರುವುದರಿಂದಲೂ, ಆಚಾರ್ಯರಲ್ಲಿ ಕೆಲವರಿಗೆ "ಲಕುಲೀಶಪಂಡಿತ" ರೆಂದು ಹೆಸರಿರುವುದರಿಂದಲೂ, ಕನ್ನಡ ದೇಶದ ಕಾಳಾಮುಖರು ಲಕುಲೀಶ ಪಾಶುಪತರೇ ಆಗಿರಬೇಕೆಂದು ಊಹಿಸಲವಕಾಶವಿದೆ. ಲಕುಲೀಶ ಪಾಶುಪತರು ತಮ್ಮ ಉಗಮವನ್ನು ಭಟ್ಟಾರಕ ಲಕುಲೀಶನಿಗೆ ಅನ್ವಯಿಸುವರು. ಮಹಾದೇವನೇ ಬಡೋದೆಯ ಹದ್ದಿಯಲ್ಲಿರುವ ಈಗ ಕಾರ್ವಾನ್‌ವೆಂದು ಹೆಸರುಳ್ಳ ಕಾಯಾರೋಹಣವೆಂಬ ಊರಲ್ಲಿ ಮೃತದೇಹದೊಳಗೆ ಪ್ರವೇಶಿಸಿ ಭಟ್ಟಾರಕ ಲಕುಲೀಶನಾಗಿ ಶೈವಧರ್ಮವನ್ನು ಲಾಟ (ಈಗಿನ ಗುಜರಾಥ) ದೇಶದಲ್ಲಿ ಸ್ಥಾಪಿಸಿದಂತೆ ಕಂಡುಬರುವುದು. ಲಕುಲೀಶ ಭಟ್ಟಾರಕನಿಗೆ ಕುಶಿಕ, ಗಾರ್ಗ್ಯ, ಕೌರುಷ, ಮೈತ್ರೇಯರೆಂದು ನಾಲ್ವರು ಶಿಷ್ಯರಿದ್ದಂತೆಯೂ, ಅವರು ಚತುರಾರ್ಣವ ಮುದ್ರಿತವಾದ ಭೂಮಿಯನ್ನು ಭೂಷಿಸಿದಂತೆಯೂ ಶಿಂತ್ರಾಶಾಸನವು ಸಾರುವುದು. ವೀರಶೈವರ ಪುರಾಣಗಳಲ್ಲೆಲ್ಲಿಯೂ ಲಕುಲೀಶ ಭಟ್ಟಾರಕನ ಪ್ರಾಶಸ್ತ್ಯವಿಲ್ಲ. ಆದುದರಿಂದ ಮೊದಲು ವೀರಶೈವರಿಗೂ ಲಕುಲೀಶಪಂಥದವರಾದ ಕಾಲಾಮುಖರಿಗೂ ಭೇದವಿದ್ದಿರಬೇಕು. ಆದರೆ ೧೨ನೇ ಶತಮಾನದ ನಂತರ ವೀರಶೈವಮತದ ಪ್ರಬಲತೆಯು ಹೆಚ್ಚಿದನಂತರ ಇಲ್ಲಿಯ ಕಾಳಾಮುಖರೆಲ್ಲರೂ ವೀರಶೈವರಾಗಿರಬೇಕೆಂದು ಊಹಿಸಲು ಬಲವಾದ ಆಧಾರಗಳಿವೆ. ಪೂಲಿ ಅಥವಾ ಪೂವಲ್ಲಿಯ ಮಠದ ಆಚಾರ್ಯರ ವಂಶಾವಳಿಯು ಶಿವಾನುಭವದಲ್ಲಿ ಹಿಂದೆಯೊಮ್ಮೆ ಪ್ರಸಿದ್ಧವಾಗಿದೆ. ಅದರೊಳಗಿನ ಆಚಾರ್ಯರ ಹೆಸರುಗಳನೇಕ ಶಿಲಾಶಾಸನಗಳಲ್ಲಿ ದೊರೆಯುವವು. ಬೆಳಗಾಂವ ಜಿಲ್ಲೆಯ ನೇಸರಗಿ ಗ್ರಾಮದಲ್ಲಿಯೊಂದು ಶಿಲಾಶಾಸನವಿದೆ. ಅದರಲ್ಲಿ ಪೂಲಿಯಾಚಾರ್ಯರ ಹೆಸರುಗಳು ಕೆಲವು ದೊರೆಯುವವು. ಆದರೆ ಶಾಸನಗಳಲ್ಲಿ ಇವರು ಕಾಳಾಮುಖಾಚಾರ್ಯರೆಂದೇ ಉಲ್ಲೇಖವಿದೆ.

ಈಗಿನ ಹೂಲಿಯ ಹಿರೇಮಠದ ಸ್ವಾಮಿಗಳು ಈ ಆಚಾರ್ಯರ ಸಂತತಿಯವರಿದ್ದರೆ ಪೂರ್ವದಲ್ಲಿ ಇವರ ವಂಶದವರು ಕಾಳಾಮುಖ ಪಂಥದವರಾಗಿದ್ದರೆಂದು ಒಪ್ಪಿಕೊಳ್ಳಬೇಕಾಗುವುದು. ಉದಾಹರಣೆಗಾಗಿ ಈ ಮಠದ ಹೆಸರನ್ನು ಉಲ್ಲೇಖಿಸಬೇಕಾಯಿತು. ಮೊದಲು ಕಾಳಾಮುಖರಿದ್ದು ಈಗ ವೀರಶೈವರಾದ ಇಂಥ ಅನೇಕ ಮಠಗಳು ನಮ್ಮ ನಾಡಿನಲ್ಲಿವೆ. ಕ್ರಿ. ಶ. ೧೨ನೇ ಶತಮಾನದಿಂದಿತ್ತಿತ್ತಲಾಗಿ ವೀರಶೈವ ಮತವು ಶೈವಧರ್ಮದ ಅನೇಕ ಪಂಗಡಗಳನ್ನು ತನ್ನ ಹೊಟ್ಟೆಯೊಳಗೆ ಸೇರಿಸಿಕೊಂಡಿರಲೇಬೇಕು. ಆದುದರಿಂದ ಸರ್ವದರ್ಶನ ಸಂಗ್ರಹಕಾರನಾದ ಮಾಧವಾಚಾರ್ಯನು ವೀರಶೈವ ಮತವು ಲಕುಲೀಶಪಂಥವೆಂದು ಒಂದು ವೇಳೆ ಕಲ್ಪಿಸಿದ್ದರೆ ಅದು ನಿಜವಲ್ಲವೆಂದು ನಮಗೆ ಈಗ ದೊರೆತ ಆಧಾರಗಳಿಂದ ಹೇಳಬಹುದು.

ಇನ್ನು ವೀರಶೈವ, ಲಿಂಗವಂತ, ಲಿಂಗಾಯತ, ಶಿವಾಚಾರ, ಶಿವಭಕ್ತ, ಮೊದಲಾದ ಸಾಮಾನ್ಯವಾದ ಹೆಸರುಗಳು ವೀರಶೈವ ಮತಕ್ಕೆ ಆವಕಾಲದಲ್ಲಿ ಬಂದವೆಂಬುದನ್ನು ನಿಶ್ಚಯವಾಗಿ ಹೇಳಲು ಈಗ ಸಾಧ್ಯವಿಲ್ಲ. ಆದರೂ ಊಹಿಸಲು ತಪ್ಪಿಲ್ಲ. ಮಲಕಾಪುರದ ಶಾಸನದಲ್ಲಿಯ "ವೀರಶೈವ" ಶಬ್ದವೇ ನಾನು ಕಂಡದುದರಲ್ಲಿ ಹಳೆಯದೆಂದು ಹೋದ ಶಿವಾನುಭವದ ಸಂಚಿಕೆಯಲ್ಲಿ ತಿಳಿಸಿರುವೆನು. ವಚನಶಾಸ್ತ್ರಗಳಲ್ಲಿ ಈ ಎಲ್ಲ ಶಬ್ದಗಳು ದೊರೆಯುವವು. ವಚನಶಾಸ್ತ್ರಗಳನ್ನೆಲ್ಲ ಭಾಷಾಶಾಸ್ತ್ರದ (*Philology*) ಪ್ರಕಾರ ಶೋಧಿಸತಕ್ಕ ದೊಡ್ಡ ಕೆಲಸ ಇನ್ನೂ ಇರುವುದರಿಂದ ಅದಾಗುವ ವರೆಗೆ ವಚನಶಾಸ್ತ್ರಗಳನ್ನೊತ್ತಟ್ಟಿಗೆ ಇಡಬೇಕಾಗುವುದು. ಶೈವಾಗಮಗಳ ಉತ್ತರಭಾಗವು ವೀರಶೈವ ಧರ್ಮವನ್ನು ಬೋಧಿಸುವದೆಂದು ಪ್ರತೀತಿಯಿದೆ. ಆದರೆ ವೀರಶೈವಮತವನ್ನು ಬೋಧಿಸುವ ಆವ ಶೈವಾಗಮದ ಉತ್ತರಭಾಗವೂ ಈಗ ಉಪಲಬ್ಧವಿಲ್ಲ. ನನಗೆ ದೊರೆತ ಹಲಕೆಲವು ಶೈವಾಗಮಗಳಲ್ಲಿ ವೀರಶೈವರ ಉಲ್ಲೇಖವಿಲ್ಲ. ವಾತುಲಶುದ್ಧಾಖ್ಯತಂತ್ರದಲ್ಲಿಯು ಕೆಲವು ಶ್ಲೋಕಗಳಲ್ಲಿ ವೀರಶೈವರ ಸಾಮಾನ್ಯ ವಿಶೇಷ ಮತ್ತು ನಿರಾಭಾರವೆಂಬ ಭೇದಗಳು ಹೇಳಲ್ಪಟ್ಟಿವೆ. ವಾತುಲಶುದ್ಧಾಖ್ಯತಂತ್ರದ ಕಾಲವನ್ನು ನಿರ್ಣಯಿಸಲು ಸಾಧ್ಯವಿಲ್ಲ. ಅದರಲ್ಲಿ ಪ್ರಾಚೀನ ವಿಷಯಗಳನೇಕವಿವೆ; ಆದರೂ ಅರ್ವಾಚೀನ ವಿಷಯಗಳೂ ಅನೇಕ ಕೂಡಿಕೊಂಡಿವೆ. ಆದುದರಿಂದ ಆವದು ಪ್ರಾಚೀನ ಆವದು

ಅರ್ವಾಚೀನವೆಂಬುದನ್ನು ಒಂದೆರಡು ಪ್ರತಿಗಳ ಸಹಾಯದಿಂದ ನಿರ್ಣಯಿಸುವುದು ಕಠಿಣ. ವೀರಶೈವರ ಬಗ್ಗೆ ಕ್ರಿ. ಶ. ೧೧ನೇ ಶತಮಾನಕ್ಕೂ ಪೂರ್ವದಲ್ಲಿ ಉಲ್ಲೇಖವಿರದೇ ಇರುವುದರಿಂದ ವೀರಶೈವ, ಲಿಂಗವಂತ, ಮೊದಲಾದ ಶಬ್ದಗಳು ೧೨ನೇ ಶತಮಾನದಿಂದೀಚೆಗೆ ಬಂದಿರಬಹುದೆಂದು ಪ್ರಕೃತಕ್ಕೆ ಗ್ರಹಿಸುವಾ. ಈ ಮತದಲ್ಲಿ ಅತಿ ಪ್ರಾಚೀನ ವಿಚಾರಗಳಿರುವವೆಂದು ಮೇಲೆ ತೋರಿಸಲಾಗಿದೆ. ಅಂದಮೇಲೆ ಕ್ರಿ. ಶ. ೧೨ನೇ ಶತಮಾನಕ್ಕೂ ಅಥವಾ ವೀರಶೈವ ಮೊದಲಾದ ಶಬ್ದಗಳು ಪ್ರಚಾರದಲ್ಲಿ ಬರುವುದಕ್ಕಿಂತಲೂ ಮೊದಲು ಈ ಮತಕ್ಕೊಂದು ಹೆಸರಿದ್ದಿರಬೇಕೆಂದು ಊಹಿಸಬೇಕಾಗುವುದು. ಆ ಹೆಸರಾವುದು? ಆ ಹೆಸರಿನ ಶೈವಪಂಥವು ಪ್ರಾಚೀನ ಗ್ರಂಥಗಳಲ್ಲಿ ದೊರೆಯುವುದೇ? ಪ್ರಾಚೀನ ಗ್ರಂಥಗಳಾಧಾರದಿಂದ ಆ ಹೆಸರಿನ ಮತದ ಆಚಾರ ವಿಚಾರಗಳು ಈಗಿನ ವೀರಶೈವ ಮತದಲ್ಲಿ ಅವಶೇಷದ ಸ್ವರೂಪದಲ್ಲಾದರೂ ಕಂಡುಬರುವವೇ? ಇತ್ಯಾದಿ ಪ್ರಶ್ನೆಗಳನ್ನು ಬಿಡಿಸುವುದು ಅಗತ್ಯ. ಈ ಎಲ್ಲ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವು ದೊರೆಯಬೇಕಾದರೆ ಸಂಶೋಧಕನು ತನ್ನ ಆಯುಷ್ಯದ ಬಹುಭಾಗವನ್ನು ಶೋಧದಲ್ಲಿಯೇ ಕಳೆಯಬೇಕಾಗುವುದು. ಅದಕ್ಕೆ ಸರಿಯಾದ ಸಾಧನವೂ ಧನಸಹಾಯವೂ ಬೇಕಾಗುವುದು. ಆದುದರಿಂದ ಇವೆಲ್ಲವುಗಳಿಗೆ ಸರಿಯಾದ ಉತ್ತರವನ್ನು ಕೊಡುವುದು ಈಗ ಸಾಧ್ಯವಿದೆಯೆಂದು ಹೇಳಲು ಬರುವುದಿಲ್ಲ. ಆದರೂ ಶೋಧಕರಿಗೆ ಸಹಾಯವಾಗಲೆಂದು ನನ್ನ ವಿಚಾರಗಳನ್ನು ಅವರ ಮುಂದಿಡುವೆನು.

ವೀರಶೈವರ ಅರ್ವಾಚೀನ ಪ್ರಸಿದ್ಧ ಗ್ರಂಥಕಾರನಾದ ನಿಷ್ಠೂರ ನಂಜಣಾಚಾರ್ಯನು (ಕ್ರಿ. ಶ. ೧೭೨೫) ತನ್ನ ವೇದಾಂತಸಾರ ವೀರಶೈವ ಚಿಂತಾಮಣಿ ಪಾನ ೪೯೮ ರಲ್ಲಿ ವೀರಶೈವರನ್ನು ಮಹಾ ಪಾಶುಪತರೆಂದು ಕರೆದಿದ್ದಾನೆ. ಮತ್ತು ಮೇಲೆ ಮಹಾಭಾರತದ ಕಾಲವಲ್ಲಿ ಅಸ್ತಿತ್ವದಲ್ಲಿದ್ದ ಪಾಶುಪತರ ಕೆಲ ಆಚಾರ ವಿಚಾರಗಳು ಈಗಲೂ ಕೂಡ ವೀರಶೈವರಲ್ಲಿ ಕಂಡು ಬರುವವೆಂದು ಮೇಲೆ ಸೂಚಿಸಲಾಗಿದೆ. ಕ್ರಿ. ಶ. ೧೧-೧೨ ಶತಮಾನಗಳಲ್ಲಿ ಪಾಶುಪತರೂ, ಕಾಶ್ಮೀರಶೈವರೂ, ಕಾಲಾಮುಖರೂ, ನಮ್ಮ ಕನ್ನಡ ನಾಡಿನಲ್ಲಿ ಇದ್ದರೆಂದು ಶಿಲಾಶಾಸನಗಳಿಂದ ಕಂಡು ಬರುವುದು. ಆದುದರಿಂದ ಆ ಕಾಲದ ಶೈವ ಪಂಥಗಳನ್ನೆಲ್ಲ ಒಳಕೊಂಡ

ಈಗಿನ ವೀರಶೈವ ಮತವು ಪ್ರಾಚೀನ ಕಾಲದಲ್ಲಿ ಪಾಶುಪತ ಪಂಥವಾಗಲೀ ಅಥವಾ ಆದರ ಒಳಭೇದಗಳಲ್ಲೊಂದಾಗಲೀ ಆಗಿರಬಹುದೆಂದು ನಮ್ಮ ತರ್ಕ.

(ಮುಂದೆ ಸಾಗುವದು.)

---

# ಶೈವಾಗಮಗಳು.

(ಡಾ॥ ನಂದೀಮಠ ಇವರ ನಿಬಂಧದ ವಿಮರ್ಶಾತ್ಮಕ ನಿರೂಪಣೆ.)

ಲೇಖಕ:—ರಾ|| ಸಾ॥ ಫ. ಗು. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ.

---

ಆಗಮ ಗ್ರಂಥಗಳು ಅನೇಕರು ತಿಳಿದಿರುವಂತೆ ಕೇವಲ ವೀರಶೈವ ಧರ್ಮವನ್ನೇ ನಿರೂಪಿಸುವದಿಲ್ಲ. ಅವುಗಳಲ್ಲಿ ಶೈವಧರ್ಮಗಳ ಬಗ್ಗೆ ಬೇರೆ ಬೇರೆ ವಿವೇಚನೆಗಳು ಬರುವವಲ್ಲದೆ, ಒಂದು ಆಗಮದಲ್ಲಿಯ ವಿಷಯುಗಳು ಬೇರೆ ಆಗಮಗಳಲ್ಲಿಯ ವಿಷಯುಗಳಿಗೆ ಹೊಂದುವದಿಲ್ಲ. ವೀರಶೈವವೆಂಬುದು ಆಗಮಧರ್ಮಗಳಿಂದ ಹೊರಹೊರಟ ಒಂದು ಸಾರ ಭೂತವಾದ ಧರ್ಮವೆಂದು ಹೇಳಬಹುದು. ಈ ವೀರಶೈವದ ಸ್ವರೂಪು ಯಾವಾಗ್ಗೆ ಮತ್ತು ಯಾರಿಂದ ಮತ್ತು ಹ್ಯಾಗೆ ಹೊರಟಿತೆಂಬುದು ಐತಿಹಾಸಿಕ ಶೋಧದ ಒಂದು ಮುಖ್ಯ ವಿಷಯವಾಗಿದೆ.

ವೀರಶೈವರಲ್ಲಿ ಲಿಂಗದ ಅರ್ಥವು ಬಹು ವಿಶೇಷತರ ರೀತಿಯಿಂದ ಮಾಡಲ್ಪಟ್ಟ ಹಾಗೆ ತೋರುತ್ತದೆ. ಆದರ ನಾನಾಬಗೆಯ ಸಂಬಂಧಗಳು, ಮರ್ಮಗಳು, ಅರ್ಥಗಳು ಹ್ಯಾಗೆ ವಚನಶಾಸ್ತ್ರ ಗ್ರಂಥಗಳಲ್ಲಿ ನಿರೂಪಿಸಲ್ಪಡುತ್ತವೆಯೋ ಹಾಗೆ ಆಗಮ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟ ಹಾಗೆ ಕಂಡುಬರುವದಿಲ್ಲ. ಡಾ॥ ನಂದೀಮಠ ಇವರು ಬೇರೆ ಬೇರೆ ಆಗಮ ಗ್ರಂಥಗಳನ್ನು ಪರಿಶೀಲಿಸಿ ಅವುಗಳಲ್ಲಿ ಪ್ರಚಲಿತವಿರುವ ಲಿಂಗದ ಅರ್ಥಗಳನ್ನೂ ಅದರ ವಿಶೇಷಗಳನ್ನೂ ತಮ್ಮ ನಿಬಂಧದಲ್ಲಿ ಬರೆದಿರುವರು. ಅವು ವಿಚಾರಾರ್ಹವಾಗಿದ್ದು, ವಾಚಕರು ಅವುಗಳಿಗೆ ಗಮನ ಕೊಟ್ಟು, ಲಿಂಗಕ್ಕಿರುವ ವೀರಶೈವಾರ್ಥವನ್ನು ವಿವೇಚಿಸಬೇಕೆಂದು ನಮ್ಮ ಸೂಚನೆ ಇದೆ. ಡಾ॥ ನಂದೀಮಠ ಇವರು ಅನ್ನುವದೇನೆಂದರೆ:—

ಶೈವಾಗಮಗಳಲ್ಲಿ ಲಿಂಗದ ಅರ್ಥವು ನಿಷ್ಕಲರೂಪನಾದ ಅಂದರೆ ನಿರಾಕಾರರೂಪನಾದ ಪರಶಿವನ ಗುರ್ತು ಎಂದು ತಿಳಿಯಲ್ಪಟ್ಟಿದೆ. ಮತ್ತು ಶಿವನ ಸಾಕಾರ ಮೂರ್ತಿಗಳು ಸಕಲವೆಂದು ಭಾವಿಸಲ್ಪಟ್ಟಿವೆ. ಆದ್ದರಿಂದ ಲಿಂಗದ ಆಕೃತಿಯು ಶಿವಾಗಮಗಳಲ್ಲಿ ಒಂದು ಮೂರ್ತಿ ಎಂದು ತಿಳಿಯಲ್ಪಟ್ಟಿಲ್ಲ.

ಶಿವಾಗಮಗಳಲ್ಲಿ ಶಿವನು ಮನುಷ್ಯಾಕೃತಿಯಾಗಿಯೂ, ಲಿಂಗರೂಪಾಗಿಯೂ ಹೀಗೆ ಉಭಯರೀತಿಯಲ್ಲಿ ಪೂಜೆಗೆ ಅರ್ಹನೆಂದು ಹೇಳಲ್ಪ[ಟ್ಟಿ]ದೆ. ಆದರೆ ಶಿವನ ಮನುಷ್ಯಾಕೃತಿಯನ್ನು ಪೂಜಿಸುವದಕ್ಕಿಂತ ಲಿಂಗ[ವ]ನ್ನು ಪೂಜಿಸುವದು ಶ್ರೇಷ್ಠತರವಾದದ್ದು.

ಲಿಂಗಪೂಜೆಯು ಹಿಂದುಸ್ತಾನದಲ್ಲಿ ಬಹು ಪುರಾತನಕಾಲದಿಂದಲೂ ನಡೆದುಬಂದಿದೆ. ಮಹಾಭಾರತದಲ್ಲಿ ಅದರ ವರ್ಣನೆಯುಂಟು. ರಾಮಾಯಣದಲ್ಲಿ ರಾಮನು ಮತ್ತು ಅವನ ಪ್ರತಿಸ್ಪರ್ಧಿಯಾದ ರಾವಣನು ಲಿಂಗಪೂಜಕರಾಗಿದ್ದದ್ದು ಕಂಡುಬರುತ್ತದೆ. ಪುರಾಣಗಳಲ್ಲಿಯಂತೂ ಲಿಂಗಪೂಜೆಯ ಉಲ್ಲೇಖಗಳು ಹೇರಳವಾಗಿವೆ. ಮತ್ತು ೧೮ ಪುರಾಣಗಳಲ್ಲಿ ಲಿಂಗಪುರಾಣವೆಂಬ ಸ್ವತಂತ್ರ ಪುರಾಣವೂ ಉಂಟು.

ಶಿಲಾಲೇಖಗಳಿಂದಲೂ ಲಿಂಗಪೂಜೆಯು ಇದ್ದದ್ದು ತೋರಿಬರುತ್ತದೆ. ೫ ನೇ ಶತಮಾನದಲ್ಲಿದ್ದ ಶಿಲಾಲಿಪಿಯಲ್ಲಿ ವಾಕಟಕದ ರಾಜಪುತ್ರನು ತನ್ನ ಹೆಗಲ ಮೇಲೆ ಲಿಂಗವನ್ನು ಧಾರಣ ಮಾಡಿ ಶಂಭುವಿನನ್ನು ಪ್ರೀತ ಮಾಡಿದನೆಂದು ಹೇಳಿದೆ.

೧೯೦೯-೧೦ ರಲ್ಲಿ ಪ್ರಸಿದ್ಧಿಸಲ್ಪಟ್ಟ ಸರಕಾರೀ ಶಿಲಾಲೇಖಗಳ ವರದಿಯಲ್ಲಿ ಟಿ. ಗೋಪೀನಾಥರಾವು ಇವರು ಭಿಟಲಿಂಗವನ್ನು ಉಲ್ಲೇಖಿಸಿ, ಇದು ಮುಖಲಿಂಗವೆಂದು ಸಿದ್ಧಪಡಿಸಿರುತ್ತಾರೆ. ಮಿ॥ ಬಾನರ್ಜಿಯವರು ಈ ಭಿಟಲಿಂಗದ ಕಾಲವು ಕ್ರಿಸ್ತಿಶಕ ಪೂರ್ವದ ೧ ನೇ ಶತಮಾನವೆಂದು ಹೇಳಿರುತ್ತಾರೆ. ಟಿ. ಗೋಪೀನಾಥರಾವು ಇವರು ಗುಡಿಮಲ್ಲಂ ಲಿಂಗವು ಇದಕ್ಕೂ ಹಿಂದಿನದೆಂದು ಅಭಿಪ್ರಾಯಪಟ್ಟಿರುತ್ತಾರೆ. ಇವರು ಪರಶುರಾಮೇಶ್ವರ ಲಿಂಗದ ಕಾಲವು ಕ್ರಿಸ್ತಿಶಕ ಪೂರ್ವ ೨ ನೇ ಶತಮಾನವೆಂದು ಹೇಳುತ್ತಾರೆ.

ಲಿಂಗಗಳಲ್ಲಿ ಚಲವೆಂತಲೂ ಅಚಲವೆಂಬಲೂ ಎರಡು ಭೇದಗಳು. ಅಚಲ ಲಿಂಗಗಳು ಕಲ್ಲಿನಿಂದ ಮಾಡಿ, ಸ್ಥಿರವಾಗಿ ನೆಡಿಸಿದವುಗಳು. ಚಲ ಲಿಂಗಗಳು ಅಥವಾ ಜಂಗಮ ಲಿಂಗಗಳು ಅತ್ತಿಂದಿತ್ತ ಒಯ್ಯಲ್ಪಡುವಂಥ ವಿದ್ದು ಇವುಗಳಲ್ಲಿ ಮಣ್ಣು, ಲೋಹ, ರತ್ನ, ಕಟ್ಟಿಗೆ, ಕಲ್ಲು ಹೀಗೆ ಬೇರೆ ಬೇರೆ ಜೀನಸುಗಳಿಂದ ಮಾಡಿದಂತೆ ಭಿನ್ನ ಭಿನ್ನ ತೆರನಾಗಿರುತ್ತವೆ. ಇವು ಪ್ರಸಂಗಕ್ಕೋಸ್ಕರ ಮಾಡಿದವುಗಳಿದ್ದರೆ ಕ್ಷಣಿಕವೆಂದು ಹೇಳಲ್ಪಡುತ್ತವೆ.

ಸುಪ್ರಭೇದಾಗಮದ ಪ್ರಕಾರ ಅಚಲ ಲಿಂಗಗಳಲ್ಲಿ ೯ ಭೇದಗಳು. ಅವು ಸ್ವಯಂಭುವ, ಪುರಾಣ, ದೈವತ, ಗಾಣಪತ್ಯ, ಅಸುರ, ಆರ್ಷ, ರಾಕ್ಷಸ, ಮಾನುಷ ಮತ್ತು ಬಾಲ. ಇವು ಆಯಾ ವರ್ಗದ ಜನರು ಪೂಜಿಸುವ ಪ್ರಕಾರ ಕಲ್ಪಿಸಲ್ಪಟ್ಟಿರಬಹುದು.

ಬೇರೆ ಶಿವಾಗಮಗಳಲ್ಲಿ ಶಿವಲಿಂಗ, ಪಾಶುಪತಲಿಂಗ, ಕಾಲಲಿಂಗ, ಕಾಲಾಮುಖಲಿಂಗ, ವಾಮಲಿಂಗ ಮತ್ತು ಭೈರವಲಿಂಗ ಎಂಬ ಭೇದ ಗಳು ಹೇಳಲ್ಪಟ್ಟಿವೆ. ಇವು ಆಯಾ ಶೈವ ಭೇದಗಳ ಪ್ರಕಾರ ಮಾಡಿದ ವಿರಬಹುದು.

ಮಕುಟಾಗಮದಲ್ಲಿ ೪ ಭೇದಗಳು ಅಂದರೆ ದೈವ, ಆರ್ಷ, ಗಾಣ ಪತ್ಯ ಮತ್ತು ಮಾನುಷ ಎಂತಲೂ ಕಾಮಿಕದಲ್ಲಿ ಸ್ವಾಯಂಭುವ ದೈವಿಕ, ಆರ್ಷ, ಗಾಣಪತ್ಯ, ಬಾಣ ಎಂತಲೂ ಭೇದಗಳು ಇವೆ. ಈ ಲಿಂಗಗಳ ಅಳತೆಗಳ ಬಗ್ಗೆಯೂ ವಿಶೇಷ ವಿವರಣೆಗಳು ಆಗಮಗಳಲ್ಲಿ ಬಂದಿರುತ್ತವೆ.

ಲಿಂಗಗಳು ಪೀಠಗಳ ಮೇಲೆ ಸ್ಥಾಪಿಸಲ್ಪಡತಕ್ಕದ್ದು. ಈ ಪೀಠ ಗಳು ಚೌಕು, ಒಂದೇ ಮಗ್ಗಲು ಉದ್ದಾದ ಚೌಕು, ೮ ಮೂಲೆಯು ಳ್ಳದು, ಒಂದುಕಡೆ ಉದ್ದ ಮಾಡಲ್ಪಟ್ಟ ೮ ಮೂಲೆಯುಳ್ಳದು, ೨೦ ಮೂಲೆಯುಳ್ಳದು, ಒಂದುಕಡೆ ಉದ್ದ ಮಾಡಲ್ಪಟ್ಟ ೨೦ ಮೂಲೆಯು ಳ್ಳದು, ೧೬ ಮೂಲೆಯುಳ್ಳದು, ವರ್ತುಳ, ಅಥವಾ ಉದ್ದಮಾಡಲ್ಪಟ್ಟ ವರ್ತುಳ, ದೀರ್ಘವರ್ತುಳ, ತ್ರಿಕೋಣ, ಅಥವಾ ಅರ್ಧವರ್ತುಳ ಹೀಗೆ ಇರಬಹುದು. ಆದರೆ ಪೀಠಗಳ ಆಕೃತಿಯು ದೇವಾಲಯದ ವಿಮಾ ನಕ್ಕೆ ಅನುಸರಿಸಿ ಇರತಕ್ಕದ್ದು. ಅಂದರೆ ನಾಗರಪದ್ಧತಿಯ ವಿಮಾನ ವುಳ್ಳ ದೇವಾಲಯದಲ್ಲಿ ನಾಗರಪೀಠವಿರಬೇಕು. ನಾಗರಪೀಠವು ಚೌಕಾ ದದ್ದು, ದ್ರಾವಿಡವು ೮ ಮೂಲೆಯುಳ್ಳದ್ದು, ಮತ್ತು ವೇಸರವು ದುಂಡಾ

ದೆದ್ದು ಇರುತ್ತದೆ. ಈ ಪೀಠಗಳ ಪ್ರಮಾಣ ಮತ್ತು ಆಳತೆಯು ಇಷ್ಟಿಷ್ಟೇ ಇರಬೇಕೆಂಬ ಬಗ್ಗೆ ನಿಯಮಗಳು ಆಗಮಗಳಲ್ಲಿ ಬಂದಿರುತ್ತವೆ.

ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ಲಿಂಗದ ಪೀಠದ ಬಗ್ಗೆ ಚರ್ಚೆಗಳು ನಡೆದಿದ್ದು ವಾಚಕರ ಸ್ಮರಣೆಯಲ್ಲಿರಬಹುದು. ಅವರು ಈ ವಿಷಯವನ್ನು ಮೇಲ್ಕಂಡ ಆಗಮ ವಿಷಯಗಳ ಮೇಲಿಂದ ಚೆನ್ನಾಗಿ ವಿಚಾರ ಮಾಡಬೇಕೆಂದು ನಮ್ಮ ಸೂಚನೆ ಇದೆ. ಈ ಬಗ್ಗೆ ನಾವು ಹಿಂದಿನಿಂದ ವಿಸ್ತಾರವಾಗಿ ನಿರೂಪಿಸುವೆವು

ಮನುಷ್ಯಾಕೃತಿಯ ಶಿವನ ಸ್ವರೂಪುಗಳು ಆತನ ೨೫ ಲೀಲೆಗಳ ಮೇಲೆ ಅವಲಂಬಿಸಿ ರಚಿಸಲ್ಪಟ್ಟವಿರುತ್ತವೆ.

ಶಿವಾಲಯಗಳಲ್ಲಿ ಶಿವನ ವಿಗ್ರಹವಲ್ಲದೆ ಪರಿವಾರ ದೇವತೆಗಳೆಂತಲ್ಲೂ ಅನೇಕ ವಿಗ್ರಹಗಳು ಇರುತ್ತವೆ. ಇವುಗಳಲ್ಲಿ ವೈಷ್ಣವ ಮತ್ತು ಶಾಕ್ತರ ದೇವತೆಗಳೂ ಸಹ ಬರುತ್ತವೆ. ಗಣಪತಿ, ಸ್ಕಂದ, ನಂದಿ, ಪಾರ್ವತಿ, ಚಂಡೇಶ ಮೊದಲಾದ ಭಕ್ತರ ವಿಗ್ರಹಗಳೂ ಇವುಗಳಲ್ಲಿ ಸಮಾವೇಶವಾಗುತ್ತದೆ. ಈ ವಿಗ್ರಹಗಳು ದೇವಾಲಯದ ಇಂಥಿಂಥ ಭಾಗಗಳಲ್ಲಿಯೇ ಇರಬೇಕೆಂದು ಸ್ಥಿರಪಡಿಸಿರುತ್ತಾರೆ. ಈ ಎಲ್ಲ ವಿಗ್ರಹಗಳ ಪ್ರಮಾಣ ಅವುಗಳಮೇಲಿನ ಶಸ್ತ್ರಗಳು, ಅವುಗಳ ನಿಲ್ಲುವಿಕೆ ಮುಂತಾದವುಗಳ ಬಗ್ಗೆ ವಿಸ್ತಾರವಾದ ವರ್ಣನೆಗಳು ಆಗಮಗಳಲ್ಲಿದ್ದು ಕೆತ್ತಿಗೆಯ ಕೆಲಸದವರು ಅವುಗಳನ್ನು ವಿಚಾರಮಾಡುವ ಹಾಗೆ ಇರುತ್ತವೆ.

ಹೀಗೆ ವಿಗ್ರಹಗಳ ರಚನೆಯಲ್ಲದೆ ಅವುಗಳ ಸ್ಥಾಪನೆಯ ವಿಧಿಗಳು ಬಹು ವಿಸ್ತಾರವಾಗಿ ಆಗಮಗಳಲ್ಲಿ ಹೇಳಿರುತ್ತದೆ. ಹೀಗೆ ವಿಧಾನ ಪೂರ್ವಕವಾಗಿ ಪ್ರತಿಷ್ಠಾಪನೆ ಮಾಡದ ಹೊರ್ತು, ವಿಗ್ರಹಗಳಲ್ಲಿ ಶಕ್ತಿಯು ಬರಲಾರದು. ಬೇರೆ ಬೇರೆ ಲಿಂಗ ಮತ್ತು ಪ್ರತಿಮೆಗಳಿಗೆ ಬೇರೆ ಬೇರೆ ವಿಧದ ವಿಧಾನಗಳೂ, ಮಂತ್ರಗಳೂ ಇದ್ದು ಅವು ಸವಿಸ್ತಾರವಾಗಿ ಆಗಮಗಳಲ್ಲಿ ಹೇಳಲ್ಪಟ್ಟಿವೆ. ಇವಕ್ಕೆಲ್ಲ ಪ್ರತಿಷ್ಠಾಪನ ವಿಧಿಗಳೆಂಬ ಹೆಸರು.

ಆಗಮಗಳಲ್ಲಿಯ ಕ್ರಿಯಾಪಾದದಲ್ಲಿ ಮೇಲ್ಕಂಡ ವಿಷಯಗಳು ಮಾತ್ರ ಬರುವದುಂಟು.

ಆ ಆಗಮಗಳಲ್ಲಿಯ ಈ ಕ್ರಿಯಾಪಾದ ವಿಷಯಗಳನ್ನು ನಾವು ಆಲೋಚಿಸಿದರೆ, ಇವುಗಳಿಗೂ ವೀರಶೈವ ಧರ್ಮಕ್ಕೂ ಏನೂ ಸಂಬಂಧವಿಲ್ಲೆಂದು ವಾಚಕರಿಗೆ ತೋರದೆ ಇರಲಾರದು.

ನಿಜಗುಣಶಿವಯೋಗಿಗಳು ಕ್ರಿಯಾಪಾದದಲ್ಲಿ ವೀರಶೈವ ಪದ್ಧತಿಯ ಶಿವಪೂಜೆಯನ್ನು ವಿವರಿಸಿರುವರು. ಆದರೆ ಹೀಗೆ ಮೂಲ ಆಗಮ ಗ್ರಂಥ ಗಳಲ್ಲಿ ಇರುವದಿಲ್ಲ. ನಿಜಗುಣಶಿವಯೋಗಿಗಳು ವೀರಶೈವರಾದ್ದರಿಂದ ಕ್ರಿಯಾಪಾದಕ್ಕೆ ಈ ವೀರಶೈವ ಸ್ವರೂಪವನ್ನು ಕೊಟ್ಟಿರಬಹುದೆಂದು ತೋರು ತ್ತದೆ.

## ಚರ್ಯಾಪಾದ.

ಆಗಮ ಗ್ರಂಥಗಳು ಕ್ರಿಯಾಪಾದವನ್ನು ನಿರೂಪಣೆ ಮಾಡಿದ ತರು ವಾಯ ಚರ್ಯಾಪಾದವನ್ನು ನಿರೂಪಿಸುವದುಂಟು. ಕ್ರಿಯಾಪಾದದಲ್ಲಿ ಪ್ರಸಂಗಾನುಸಾರ ಮಾಡುವ ವಿಧಿವಿಧಾನಗಳನ್ನು ಅಂದರೆ ಮೂರ್ತಿಗಳ ಪ್ರತಿಷ್ಠಾಪನೆ, ನಗರಸ್ಥಾಪನೆ ಇಂಥವುಗಳನ್ನು ವಿವರಿಸುವದುಂಟು. ಇವು ಗಳನ್ನು ನಾವು ನೈಮಿತ್ತಿಕ ಕರ್ಮಗಳೆಂದು ಅನ್ನಬಹುದು. ಆದರೆ ಚರ್ಯಾಪಾದದಲ್ಲಿ ಮನುಷ್ಯನು ಪ್ರತಿದಿವಸ ಮಾಡುವ ಕರ್ಮಗಳು ಅಂದರೆ ಲಿಂಗಪೂಜಾದಿ ಕ್ರಿಯೆ ಇಂಥವುಗಳನ್ನು ವಿವರಿಸುವದುಂಟು.

ಸ್ನಾನಃ— ಕಾಮಿಕಾಗಮ ೩ನೇ ಅಧ್ಯಾಯದಲ್ಲಿ ಇದರ ವಿಷಯ ವಾಗಿ ೧೬೨ ಶ್ಲೋಕಗಳಿವೆ. ಸ್ನಾನ ವಿಧಿಯಲ್ಲಿ ೬ ತರಗಳು. ಅವು ಯಾವ ವೆಂದರೆ, ವಾರುಣ, ಆಗ್ನೇಯ, ಮಂತ್ರ, ಮಾನಸ, ವಾಯುವ್ಯ, ಮಹೇಂದ್ರ. ಸ್ನಾನ ವಿಧಿಯಲ್ಲಿ ಪಿತೃ, ಋಷಿ, ದೇವ, ಭೂತ ಮೊದಲಾದವರಿಗೆ ತರ್ಪಣ ಕೊಡುವದೂ ಸಂಧ್ಯೆಯೂ ಹೇಳಲ್ಪಟ್ಟಿರುತ್ತವೆ. ಇವುಗಳಲ್ಲೆಲ್ಲ ವೈದಿಕ ದೇವತೆಗಳ ಉಲ್ಲೇಖವಿದ್ದು, ವೈದಿಕಮಂತ್ರಗಳೂ ವಿವರಿಸಲ್ಪಟ್ಟಿರುತ್ತವೆ. ಅಲ್ಲದೆ ವೈದಿಕವಲ್ಲದ ದೇವತೆಗಳೂ, ಮಂತ್ರಗಳೂ ಕೂಡ ಇವುಗಳಲ್ಲಿ ತೋರಿಬರುವದುಂಟು. ಆದರೆ ವೈದಿಕ ದೇವತೆಗಳಿಗೆ ಮತ್ತು ಮಂತ್ರಗಳಿಗೆ ಮಹತ್ವದ ಸ್ಥಾನವನ್ನು ಇವುಗಳಲ್ಲಿ ಕೊಟ್ಟಿರದೆ, ಶಿವ, ಮತ್ತು ಶಕ್ತಿಗ ಳಿಗೆ ಸಂಬಂಧಪಟ್ಟ ಮಂತ್ರಗಳಿಗೆ ಮಹತ್ವದ ಸ್ಥಾನವು ಕೊಡಲ್ಪಟ್ಟಿರು ತ್ತದೆ. ಪಂಚಾಕ್ಷರೀ ಮಂತ್ರದೊಂದಿಗೆ ಗಾಯತ್ರೀ ಮಂತ್ರವೂ ಹೇಳಲ್ಪ ಟ್ಟಿರುತ್ತದೆ.

ಅರ್ಚನೆಃ— ಕಾಮಿಕಾಗಮ ೪ನೇ ಅಧ್ಯಾಯದಲ್ಲಿ ಈ ಬಗ್ಗೆ ೬೧೮ ಶ್ಲೋಕಗಳು ಇವೆ. ಅರ್ಚನೆಯಲ್ಲಿ ಸ್ವಾರ್ಥ ಮತ್ತು ಪರಾರ್ಥ ವೆಂದು ೨ ಭೇದಗಳು. ಮಂತ್ರಗಳು ಶಿವಮಂತ್ರಗಳಿದ್ದು ಅವು ಯಾವ

ವೆಂದರೆ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಮತ್ತು ಈಶಾನ. ಪರಾರ್ಥಪೂಜೆಯು ಅರಸು, ದೇಶ, ಗ್ರಾಮ, ಮತ್ತು ಬೇರೆ ಭಕ್ತರಿಗೋಸ್ಕರ ಜರಗಿಸಿದ್ದು ಇದ್ದು ಇದನ್ನು ದೇವಾಲಯಗಳಲ್ಲಿ ನೆರವೇರಿಸತಕ್ಕದ್ದು. ಈ ಅರ್ಚನಾ ವಿಧಿಗಳನ್ನು ಮಾಡುವವನಿಗೆ ಶಿವವಿಪ್ರನೆಂಬ ಹೆಸರು.

ಸ್ವಾರ್ಥಪೂಜೆಯು ತನ್ನಗೋಸ್ಕರವಾಗಿ ಇದ್ದು ಅದನ್ನು ಪ್ರತಿಯೊಬ್ಬನು ಚರಲಿಂಗಕ್ಕೆ ಉದ್ದೇಶಿಸಿ ದಿನಾಲು ತನ್ನ ಗ್ರಹದಲ್ಲಿಯೇ ಮಾಡತಕ್ಕದ್ದು. ಆ ಕಾಲಕ್ಕೆ ಪೂಜಕನು ಅತ್ಯಂತ ಶುದ್ಧಮನಸ್ಕನಾಗಿ ಮತ್ತು ಶುಚಿರ್ಭೂತನಾಗಿ ಇರತಕ್ಕದ್ದು. ಈ ಬಗ್ಗೆ ಅತ್ಯಂತ ಕಟುವಾದ ನಿರ್ಬಂಧಗಳು ಆಗಮಗಳಲ್ಲಿ ಹೇಳಲ್ಪಟ್ಟಿವೆ. ಆದರೆ ಇದರ ವಿಧಿವಿಧಾನಗಳು ಪರಾರ್ಥಪೂಜೆಗಿಂತಲೂ ಕಡಿಮೆ ಇರುತ್ತವೆ. ಆದರೆ ಲಿಂಗದ ಅರ್ಥದಲ್ಲಿ ಶಿಶ್ನದೇವ ಅಥವಾ ಇಂಥ ಅಭಿಪ್ರಾಯದ ಯಾವ ಅಶುಚಿ ವಿಚಾರಗಳು ಇರದೆ, ಅತ್ಯಂತ ಶುದ್ಧ ಮತ್ತು ಸಾತ್ವಿಕ ವಿಚಾರಗಳು ಇದರಲ್ಲಿ ತೋರಿಬರುತ್ತವೆ.

ನೈವೇದ್ಯಃ— ಇದನ್ನು ಪೂಜೆಯ ಅಂತ್ಯದಲ್ಲಿ ನೆರವೇರಿಸತಕ್ಕದ್ದು. ನೈವೇದ್ಯ ಪದಾರ್ಥಗಳಾವವೆಂಬದನ್ನು ಆಗಮಗಳು ಬಹು ವಿಸ್ತಾರವಾಗಿ ಹೇಳುತ್ತವೆ. ಪ್ರತಿಯೊಂದು ಪದಾರ್ಥವು ಸದಾಶಿವನಿಗೆ ಅರ್ಪಿಸದೆ ಸ್ವೀಕರಿಸಬಾರದೆಂದು ಆಗಮಗಳು ಬಹು ನಿರ್ಬಂಧವಾಗಿ ಹೇಳುತ್ತವೆ.

ಕುಂಡಃ— ಆಗಮಗಳಲ್ಲಿ ಅಗ್ನಿಕುಂಡಗಳು ಉಲ್ಲೇಖಿಸಲ್ಪಟ್ಟಿವೆ. ಬೇರೆ ಬೇರೆ ದೇವತೆಗಳಿಗೆ ಇಷ್ಟಿಷ್ಟು ಮೂಲೆಗಳ ಕುಂಡಗಳಿರಬೇಕೆಂದು ಹೇಳಿದೆ.

ಕಾಮಿಕಾಗಮದ ಪ್ರಕಾರ ಕುಂಡದಲ್ಲಿ ಪುಟ ಮಾಡತಕ್ಕ ಅಗ್ನಿಯು ಮೂರು ವಿಧವಾಗಿದೆ. ಯಾವವೆಂದರೆ, ವೈದಿಕಾಗ್ನಿ, ಮಿಶ್ರಾಗ್ನಿ, ಮತ್ತು ಶೈವಾಗ್ನಿ. ವೈದಿಕಕರ್ಮದ ಪ್ರಕಾರ ಮಾಡಿದ್ದು ವೈದಿಕಾಗ್ನಿ. ಇದರಲ್ಲಿ ಮೂರು ಉಪಭಾಗಗಳು. ಅವು ಯಾವವೆಂದರೆ, ಗಾರ್ಹಪತ್ಯ, ದಕ್ಷಿಣ, ಮತ್ತು ಆಹವನೀಯ. ಇವುಗಳ ವರ್ಣನೆಯು ಸೂತ್ರಗ್ರಂಥಗಳಲ್ಲಿ ಹೇಳಿದಂತೆಯೇ ಇದೆ. ವೈದಿಕ ಮತ್ತು ಶೈವ ಮಂತ್ರಗಳನ್ನು ಮಿಶ್ರ ಮಾಡಿದ್ದೇ ಮಿಶ್ರಾಗ್ನಿ ಎನ್ನಿಸಿಕೊಳ್ಳುತ್ತದೆ. ಶೈವಾಗ್ನಿಯಲ್ಲಿ ಕೇವಲ ಶೈವ ಪದ್ಧತಿಗಳು ಇರುತ್ತವೆ. ಇದರಲ್ಲಿ ಪುನಃ ಮೂರು ಭೇದಗಳು. ಯಾವ

ವೆಂದರೆ, ಬಾಲ, ಯೂವಾ ಮತ್ತು ವೃದ್ಧ. ಬಾಲ ಶೈವಾಗ್ನಿಯು ಮೂರ್ತಿ ಸ್ಥಾಪನೆಯ ಕಾಲಕ್ಕೆ, ಯೂವಾ ಇದು ಸಮಾರಂಭಗಳ ಕಾಲಕ್ಕೆ, ವೃದ್ಧ ಇದು ಬೇರೆ ಕಾಲಗಳ ಕಾಲಕ್ಕೆ ಉಪಯೋಗ ಮಾಡತಕ್ಕದ್ದು. ವೃದ್ಧವು ಮನೆಯಲ್ಲಿ ಯಾವಾಗಲೂ ಇರತಕ್ಕದ್ದು.

ಶೈವಾಗ್ನಿಯಲ್ಲಿ ಹೋಮ ಮಾಡುವದು ಅತ್ಯುತ್ತಮವು, ಮಿಶ್ರಾಗ್ನಿಯಲ್ಲಿ ಮಾಡುವದು ಮಧ್ಯಮವು, ವೈದಿಕಾಗ್ನಿಯಲ್ಲಿ ಮಾಡುವದು ಕನಿಷ್ಟವು.

ದೀಕ್ಷೆ ಹೊಂದದೆ ಇದ್ದ ಬ್ರಾಹ್ಮಣರು ವೈದಿಕಾಗ್ನಿಯನ್ನು ಮಾತ್ರ ಉಪಯೋಗಿಸತಕ್ಕದ್ದು. ದೀಕ್ಷೆ ಹೊಂದಿದವರು ಬೇಕಾದ ಅಗ್ನಿಯನ್ನು ಉಪಯೋಗಿಸಬಹುದು.

ಕಾಮಿಕಾಗಮದ ೮ ನೇ ಅಧ್ಯಾಯದಲ್ಲಿ ಈ ಅಗ್ನಿಗಳನ್ನು ಸ್ಥಾಪಿಸುವ ವಿಧಿಗಳು ಬಹು ವಿಸ್ತಾರವಾಗಿ ಹೇಳಲ್ಪಟ್ಟಿವೆ. ಇವುಗಳ ಮೇಲಿಂದ ಶೈವಾಗಮಗಳು ವೈದಿಕ ಕ್ರಿಯೆಗಳಿಂದ ಬಿಡುಗಡೆ ಹೊಂದಿರುವದಿಲ್ಲವೆಂದು ಗೊತ್ತಾಗುತ್ತದೆ. ಆದರೆ ಅವು ಈ ಮಂತ್ರಗಳಲ್ಲಿ ಕೆಲವು ಬದಲಾವಣೆ ಮಾತ್ರ ಮಾಡಿ ಅವುಗಳಿಗೆ ಶೈವ ಮಂತ್ರಗಳೆಂಬ ಹೆಸರು ಕೊಟ್ಟು ಕೇವಲ ವೈದಿಕ ಕ್ರಿಯೆಗಳಿಗೆ ಕೆಳಗಿನ ತರಗತಿಯನ್ನು ಕೊಡಲು ಪ್ರಯತ್ನಿಸಿದ್ದು ತೋರಿಬರುತ್ತದೆ.

ಶೈವಾಗಮಗಳು ವೈದಿಕವಲ್ಲದಂಥ ಇನ್ನೂ ಅನೇಕ ಕ್ರಿಯೆಗಳನ್ನು ನಿರೂಪಿಸುತ್ತವೆ. ಅವು ನಿತ್ಯೋತ್ಸವ ಅಂದರೆ ದಿನಾಲು ಮೂರ್ತಿಗಳನ್ನು ಹೊರಗೆ ಒಯ್ಯುವದು, ಮಹೋತ್ಸವ ಅಂದರೆ ಉತ್ಸವಗಳಲ್ಲಿ ಮಾತ್ರ ಅವುಗಳನ್ನು ಹೊರಗೆ ಒಯ್ಯುವದು, ಸ್ನಪನ ಎಂದರೆ ಮೂರ್ತಿಗಳನ್ನು ಸ್ನಾನಕ್ಕೆ ಒಯ್ಯುವದು ಇತ್ಯಾದಿ ಇದ್ದು ದಕ್ಷಿಣ ದೇಶದಲ್ಲಿ ಈ ಎಲ್ಲ ವಿಧಿಗಳು ದೇವಾಲಯಗಳಲ್ಲಿ ದಿನಾಲು ನಡೆಯುತ್ತವೆ. ಆದರೆ ಇವು ವೈದಿಕ ವಾಙ್ಮಯದಲ್ಲಿ ಇದ್ದದ್ದು ಕಂಡು ಬರುವದಿಲ್ಲ. ಈ ಪ್ರಕಾರ ಅನೇಕ ವಿಧಿಗಳು ಆಗಮಗಳಲ್ಲಿ ಹೇಳಿರುತ್ತದೆ.

## ವರ್ಣಾಶ್ರಮ ಧರ್ಮಗಳು.

ಶೈವಾಗಮಗಳು ವರ್ಣಾಶ್ರಮ ಧರ್ಮಗಳನ್ನು ಒಪ್ಪಿಕೊಂಡಿದ್ದು ತೋರಿಬರುತ್ತದೆ.

ಸುಪ್ರಭೇದಾಗಮದಲ್ಲಿ ಶಿವಸೃಷ್ಟಿಯು ಬ್ರಹ್ಮ ಸೃಷ್ಟಿಗಿಂತಲೂ ಪೂರ್ವದ್ದೆಂದು ಹೇಳಿ ಪುರುಷ ಸೂಕ್ತದಲ್ಲಿ ಹೇಳಿದ ಪ್ರಕಾರ ವರ್ಣಗಳು ಹೇಳಲ್ಪಟ್ಟಿವೆ. ಅಂದರೆ ವಿರಾಟ ಪುರುಷನ ಮುಖದಿಂದ ಬ್ರಾಹ್ಮಣರು, ಭುಜದಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು ಮತ್ತು ಕಾಲುಗಳಿಂದ ಶೂದ್ರರು ಉತ್ಪನ್ನರಾದರು. ಮತ್ತು ಈ ವರ್ಣಗಳಲ್ಲಿ ಆದ ಪರಸ್ಪರ ಮಿಶ್ರ ವಿವಾಹಗಳ ಮೂಲಕ ಅನೇಕ ಉಪಜಾತಿಗಳು ಉತ್ಪನ್ನವಾಗುತ್ತವೆ. ಇವುಗಳಿಗೂ ಮನುಸ್ಮೃತಿಗಳಲ್ಲಿ ಹೇಳಿದವುಗಳಿಗೂ ಬಹಳ ಹೋಲಿಕೆ ಇದೆ.

ಉಚ್ಚ ವರ್ಣದವರಲ್ಲಿ ೪ ಆಶ್ರಮಗಳು ಇವೆ. ಅವು ಯಾವವೆಂದರೆ, ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ.

ಬ್ರಹ್ಮಚರ್ಯಃ—ಈ ಆಶ್ರಮದಲ್ಲಿ ನೈಷ್ಠಿಕಾ ಬ್ರಹ್ಮಚಾರಿ ಅಂದರೆ ಜೀವಿತವನ್ನೆಲ್ಲ ಅಭ್ಯಾಸದಲ್ಲಿಯೇ ಕಳೆಯುವವನು, ಭೌತಿಕ ಬ್ರಹ್ಮಚಾರಿ ಎಂದರೆ ಕೆಲ ಅವಧಿ ಮಾತ್ರ ಅಭ್ಯಾಸದಲ್ಲಿ ಕಳೆಯುವವನು, ಹೀಗೆ ಎರಡು ಭೇದಗಳು ಮಾಡಲ್ಪಟ್ಟಿವೆ. ಈ ಆಶ್ರಮಿಗಳು ಶಿವಾಗಮಗಳನ್ನಲ್ಲದೆ ವೇದಗಳನ್ನೂ ಓದತಕ್ಕದ್ದು.

ಗ್ರಹಸ್ಥಾಶ್ರಮಃ—ಭೌತಿಕ ಬ್ರಹ್ಮಚಾರಿಯು ಗ್ರಹಸ್ಥಾಶ್ರಮಿಯಾಗುವನು. ಇವನು ಶೈವಾಗಮಗಳಲ್ಲಿ ಹೇಳಿದ ಪ್ರಕಾರ ೬ ಕರ್ತವ್ಯಗಳನ್ನು ಮಾಡತಕ್ಕದ್ದು.

ವಾನಪ್ರಸ್ಥಃ—ಹೆಂಡತಿಯೊಂದಿಗೆ ವಾಸವಾಗಿದ್ದರೆ, ಗ್ರಹಸ್ಥಾಶ್ರಮಿಯಂತೆ ಇರತಕ್ಕದ್ದು. ಹೆಂಡತಿಯನ್ನು ಬಿಟ್ಟಿದ್ದರೆ, ಸನ್ಯಾಸಿಯಂತೆ ಇರತಕ್ಕದ್ದು. ಅವನು ಕಂದ ಮೂಲಗಳನ್ನು ತಿಂದಿರತಕ್ಕದ್ದು.

ಸನ್ಯಾಸಾಶ್ರಮಃ—ಪಟ್ಟಣವನ್ನು ಬಿಟ್ಟುಕೊಟ್ಟು ಸ್ವಾತ್ಮ ಚಿಂತನೆಯಲ್ಲಿ ಇರುವವನು ಈ ಆಶ್ರಮಕ್ಕೆ ಹೊಂದಿದವನು.

## ಗೋತ್ರಗಳು.

ಸುಪ್ರಭೇದದಲ್ಲಿ ಶೈವರಿಗೆ ೫ ಗೋತ್ರ ಅಥವಾ ಗೋಚರಗಳಿವೆ. ಅವು ಯಾವವೆಂದರೆ, ಶಿವಗೋಚರ, ಶಿಖಾಗೋಚರ, ಜ್ಯೋತಿಗೋಚರ, ಸಾವಿತ್ರಿಗೋಚರ ಮತ್ತು ವ್ಯೋಮಗೋಚರ. ಇವುಗಳಿಗೆ ಸಂಬಂಧಿಸಿದ ಋಷಿಗಳಾರೆಂದರೆ, ಕಶ್ಯಪ, ಕೌಶಿಕ, ಭಾರದ್ವಾಜ, ಗೌತಮ ಮತ್ತು

ಆತ್ರೇಯ. ಈ ಪ್ರತಿಯೊಂದರಲ್ಲಿ ಅನೇಕ ಉಪಗೋತ್ರಗಳಿದ್ದು ಈ ಪ್ರತಿಯೊಂದು ಉಪಗೋತ್ರಕ್ಕೆ ಒಬ್ಬೊಬ್ಬ ಋಷಿಯು ಇರುತ್ತಾನೆ. ಈ ಪ್ರಕಾರ ಶಿವಗೋತ್ರಗಳು ೧೬, ಶಿಖಾಗೋತ್ರಗಳು ೧೬, ಜ್ಯೋತಿರ್ಗೋತ್ರಗಳು ೧೩ ಮಾತ್ರ ಡಾ|| ನಂದೀಮಠ ಇವರು ನೋಡಿದ ಗ್ರಂಥದಲ್ಲಿ ಇದ್ದು ಮುಂದಿನ ಗೋತ್ರಗಳು ಪುಟಹರಿದದ್ದರಿಂದ ತಿಳಿಯುವದಿಲ್ಲ. ಸಾವಿತ್ರಿಗೋತ್ರಗಳು ೧೬, ವ್ಯೋಮಗೋತ್ರಗಳು ಎಷ್ಟೆಂಬದು ಅವರು ನೋಡಿದ ಗ್ರಂಥವಲ್ಲಿ ಉಲ್ಲೇಖವಿಲ್ಲ. ಈ ಪ್ರಕಾರ ಉಪಭೇದಗಳು ಇವೆ.

## ಷೋಡಶ ಸಂಸ್ಕಾರಗಳು.

ಸಂಸ್ಕಾರಗಳು ೧೬ ಇದ್ದು ಇವು ಸೂತ್ರಗ್ರಂಥಗಳಲ್ಲಿ ಇದ್ದವುಗಳೇ ಇವೆ. ಆದರೆ ಇಲ್ಲಿ ಉಪಯೋಗಿಸುವ ಮಂತ್ರಗಳು ಶಿವಮಂತ್ರಗಳಿವೆ. ಬ್ರಾಹ್ಮಣ ಪದ್ಧತಿಯ ಪ್ರಕಾರ ಅರ್ಘ್ಯವನ್ನು ಸೂರ್ಯನಿಗೆ ಮಾತ್ರ ಕೊಡತಕ್ಕದ್ದು. ಆದರೆ ಆಗಮಗಳ ಪ್ರಕಾರ ಈ ಅರ್ಘ್ಯವನ್ನು ಶಿವನಿಗೂ ಸೂರ್ಯನಿಗೂ ಸಲ್ಲತಕ್ಕದ್ದು.

ಲಗ್ನವಿಧಿಗಳು ೮ ಇದ್ದು ಇವು ಮನುವಿನ ಗ್ರಂಥದಲ್ಲಿ ಹೇಳಿದಂತೆಯೇ ಇವೆ. ಬ್ರಾಹ್ಮ ಪದ್ಧತಿಯ ಲಗ್ನದಲ್ಲಿ ವಾಮದೇವ, ಉಮಾಮಾಹೇಶ್ವರ ಮೊದಲಾದ ಶೈವ ಮಂತ್ರಗಳ ಉಪಯೋಗವಿದ್ದು ವೈದಿಕ ಮಂತ್ರಗಳಿರುವದಿಲ್ಲ. ಆಗಮ ಲಗ್ನವಿಧಿಯಲ್ಲಿ ಸಪ್ತಪದಿಯೂ ಲಗ್ನಕುಂಡವೂ ಹೇಳಲ್ಪಟ್ಟಿವೆ.

ಅಂತ್ಯವಿಧಿಃ—ಶಿವಾಗಮಗಳಲ್ಲಿ ಹುಗಿಯುವದೂ ಸುಡುವದೂ ಎರಡೂ ಉಂಟು. ಸನ್ಯಾಸಿ ಮೊದಲಾದ ಪುಣ್ಯಪುರುಷರನ್ನು ಹುಗಿಯತಕ್ಕದ್ದು. ಉಳಿದವರನ್ನು ಸುಡತಕ್ಕದ್ದು.

ಸುಪ್ರಭೇದಾಗಮದಲ್ಲಿ ಹೇಳಿದ ಅಂತ್ಯವಿಧಿಯು ಏನೆಂದರೆಃ— ಶವಕ್ಕೆ ಸ್ನಾನಮಾಡಿಸಿ ಭಸ್ಮದಿಂದ ಅದನ್ನು ಹೂಸತಕ್ಕದ್ದು. ಆಮೇಲೆ ಶವವನ್ನು ಸಿದಿಗೆಗೆ ಹಗ್ಗಗಳಿಂದ ಕಟ್ಟಿ ಅಘೋರಮಂತ್ರದಿಂದ ಅದನ್ನು ಎತ್ತಿ ಸ್ಮಶಾನಕ್ಕೆ ಒಯ್ಯತಕ್ಕದ್ದು. ಅಲ್ಲಿ ಒಟ್ಟಿದ ಕಟ್ಟಿಗೆಗಳ ಮೇಲೆ ಅದನ್ನು ಇಟ್ಟು ಅಘೋರಮಂತ್ರದಿಂದ ಹಗ್ಗಗಳನ್ನು ಹರಿದು ೯ ಚಟ್ಟಿಗೆಗಳನ್ನು ಮಂತ್ರಗಳ ಮೂಲಕ ಶವದ ಆಯಾ ಅವಯವಗಳ ಮೇಲೆ ಇಟ್ಟು, ಅದಕ್ಕೆ ಅಗ್ನಿಪುಟಮಾಡತಕ್ಕದ್ದು.

ಯತಿಯ ಶವವನ್ನು ವಿಮಾನದಲ್ಲಿ ಒಯ್ದು ಸಮಾಧಿಯಲ್ಲಿ ಹೂಳ ತಕ್ಕದ್ದು. ಇದರಲ್ಲಿ ಸೂತಕವಿಲ್ಲ. ಇವನಿಗೆ ಇತರರಂತೆ ಪಿತೃಯಜ್ಞ, ಸಪಿಂಡೀಕರಣ ಇವೂ ಇಲ್ಲ.

ಪಿತೃಯಜ್ಞಃ-- ಶವವನ್ನು ಮುಟ್ಟಿ ಬಳಿಕ ಬಲಿದಾನ ಮತ್ತು ಏಕೋದ್ದಿಷ್ಟವನ್ನು ಮಾಡತಕ್ಕದ್ದು. ೯ನೇ ದಿವಸ ಎಲುಬುಗಳನ್ನು ಕೂಡಿಸಿ ಹುಗಿಯತಕ್ಕದ್ದು. ೯ನೇ ಅಥವಾ ೧೦ನೇ ದಿವಸಗಳಲ್ಲಿ ಪುಣ್ಯಾಹವು ಆಗಿ ಏಕೋದ್ದಿಷ್ಟವು ಜರಗುವುದು.

ಸಪಿಂಡೀಕರಣವುಃ-- ಇದರ ಉದ್ದೇಶವು ಸತ್ತವನು ಶಿವಲೋಕವನ್ನು ಪ್ರವೇಶಿಸುವಂತೆ ಮಾಡುವದು ಇರುತ್ತದೆ. ಸತ್ತಬಳಿಕ ೧೨ನೇ ದಿವಸ, ಅಥವಾ ೩, ೬, ಅಥವಾ ೧೨ ತಿಂಗಳ ಮೇಲೆ ಈ ವಿಧಿಯು ಜರಗತಕ್ಕದ್ದು. ಆಗ ಸಾದಾಖ್ಯವು ಪೂಜಿಸಲ್ಪಡುವದು. ೧೨ ಅಂಗುಲ ಪ್ರಮಾಣವುಳ್ಳ ಲಿಂಗವೂ ಪೂಜಿಸಲ್ಪಡುವದು. ಪ್ರತಿಯೊಂದು ತತ್ವಕ್ಕೆ ಪಿಂಡವು ಕೊಡಲ್ಪಡುವದು. ಆಗ ಸತ್ತವನು ಮೊದಲು ಸಾಲೋಕ್ಯ, ಆ ಮೇಲೆ ಸಾಮೀಪ್ಯ, ಆ ಮೇಲೆ ಸಾರೂಪ್ಯ, ಆ ಮೇಲೆ ಸಾಯುಜ್ಯವನ್ನು ಹೊಂದಿದನೆಂದು ಭಾವಿಸಿ ಕ್ರಿಯೆಗಳನ್ನು ಮಾಡತಕ್ಕದ್ದು.

ಶೈವಾಗಮುಗಳಲ್ಲಿ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟಿವೆ. ಸುಪ್ರಭೇದಾಗಮದಲ್ಲಿ ಈ ಪ್ರಾಯಶ್ಚಿತ್ತಗಳ ಸಂಖ್ಯೆಯು ಬಹಳ ಇದೆ. ಇವುಗಳಲ್ಲಿ ಮುಖ್ಯವಾಗಿ ಜಪಗಳೂ ರುದ್ರಾಭಿಷೇಕಗಳೂ ಹೇಳಲ್ಪಟ್ಟಿರುತ್ತವೆ.

ಡಾ॥ ನಂದೀಮಠ ಇವರು ಮೇಲ್ಕಂಡ ವಿಷಯಗಳನ್ನು ಉಲ್ಲೇಖಿಸಿ ಅನ್ನುವದೇನೆಂದರೆ, ಇವೆಲ್ಲವೂ ಮೂಲದಲ್ಲಿ ವೈದಿಕ ಕ್ರಿಯೆಗಳೇ ಇದ್ದು ಆಗಮ ಶಾಸ್ತ್ರಕಾರರು ಇವುಗಳಿಗೆ ಶಿವಸಂಬಂಧವನ್ನುಂಟುಪಡಿಸಿ ಬೇರೆ ಸ್ವರೂಪು ಕೊಟ್ಟಿರುತ್ತಾರೆ. ಮತ್ತು ಹೀಗೆ ಒಂದು ಸ್ವರೂಪು ಕೊಟ್ಟ ವೈದಿಕ ಕ್ರಿಯೆಗಳಿಗೆ ಮಹತ್ವವಲ್ಲದ ಸ್ಥಾನವನ್ನು ಕೊಟ್ಟಿರುತ್ತಾರೆ. ಆದರೆ ಹೀಗಿದ್ದರೂ ವೈದಿಕ ಕ್ರಿಯೆಗಳಿಗೆ ಅವರು ವಿರೋಧ ಭಾವ ತೋರಿಸಿದ್ದು ಕಂಡುಬರುವದಿಲ್ಲ.

ದೀಕ್ಷೆಃ-- ಈ ಎಲ್ಲ ವಿಧಿಗಳಲ್ಲಿ ದೀಕ್ಷೆಗೆ ಅತ್ಯಂತ ಮಹತ್ವದ ಸ್ಥಾನವನ್ನು ಆಗಮುಗಳು ಕೊಟ್ಟಿರುತ್ತವೆ. ಶೈವಾಗಮುಗಳಲ್ಲಿ ಈ ವಿಧಿ

ಯಲ್ಲಿ ಹಲಕೆಲವು ಭಿನ್ನತೆಗಳು ತೋರಿಬಂದರೂ ಮುಖ್ಯ ಭಾಗಗಳಲ್ಲಿ ಬಹುತರ ಸಂಪೂರ್ಣ ಏಕ ಮತವು ಇದ್ದದ್ದು ಕಂಡುಬರುತ್ತದೆ.

ದೀಕ್ಷೆಯಲ್ಲಿ ಸಮಯದೀಕ್ಷೆ ಮತ್ತು ನಿರ್ವಾಣದೀಕ್ಷೆ ಎಂದು ಎರಡು ವಿಧಗಳು. ಸಮಯದೀಕ್ಷೆಯನ್ನು ಮೊದಲು ಹೊಂದಿದ್ದಾದರೆ ಅವನು ಗುರುವಿನಿಂದ ವಿದ್ಯೆಯನ್ನು ಪಡೆಯಲು ಅರ್ಹತೆಯನ್ನು ಪಡೆಯುವನು. ನಿರ್ವಾಣದೀಕ್ಷೆಯನ್ನು ಶಕ್ತಿಯು ಶರೀರದಲ್ಲಿ ಉತ್ಪನ್ನವಾದವನಿಗೆ ಅಂದರೆ ಶಕ್ತಿಪಾತವಾದವನಿಗೆ ಕೊಡತಕ್ಕದ್ದು. ಇದರಿಂದ ಅವನಿಗೆ ಮೋಕ್ಷವಾಗುವದು.

ದೀಕ್ಷಾವಿಧಿಯಲ್ಲಿ ಕುಂಡ, ಮಂಟಪ, ಕುಂಭ ಮೊದಲಾದವುಗಳ ಸ್ಥಾಪನೆಯಾಗಬೇಕಾಗುತ್ತದೆ. ಆಗ ನಾನಾ ದೇವತೆಗಳ ಆಹ್ವಾನವೂ ಆಗಬೇಕು. ಆಮೇಲೆ ಗುರುವು ದರ್ಭೆಯಿಂದ ಶಿಷ್ಯನ ಮಸ್ತಕದ ಮೇಲೆ ಉದಕವನ್ನು ಸಿಂಪಡಿಸಿ ಅವನಿಗೆ ಭಸ್ಮಧಾರಣಮಾಡಿಕೊಳ್ಳಲಿಕ್ಕೆ ಹೇಳುವನು. ಆಗ ಶಿಷ್ಯನಿಗೆ ಒಂದು ಹೊಸ ಹೆಸರು ಕೊಡಲ್ಪಡುವದು. ಬ್ರಾಹ್ಮಣನಿದ್ದರೆ, ಅವನ ಹೆಸರಿನ ಅಂತ್ಯಕ್ಕೆ ಶಿವ ಎಂತಲೂ, ಕ್ಷತ್ರಿಯನಿದ್ದರೆ ಗಣ ಎಂತಲೂ, ವೈಶ್ಯನಿದ್ದರೆ ದೇವ ಎಂತಲೂ ಅವನ ಹೆಸರಿನ ಮುಂದೆ ಹಚ್ಚಲ್ಪಡುವದು. ಶೂದ್ರನಿದ್ದರೆ ಅಥವಾ ಸ್ತ್ರೀಯಳಿದ್ದರೆ ಅವರ ಹೆಸರಿನ ಮುಂದೆ ಶಕ್ತಿ ಎಂದು ಹಚ್ಚಲ್ಪಡುವದು. ಇಷ್ಟಾದ ಮೇಲೆ ಕುಂಡದ ಕಡೆಗೆ ದೀಕ್ಷಿತನು ಒಯ್ಯಲ್ಪಡುವನು. ಆಗ ಗುರುವು ಶಿಷ್ಯನನ್ನು ಒಂದು ಯೋಗದ ವಿಧಿಯಿಂದ ಶುದ್ಧಮಾಡಿ ಅವನಿಗೆ ಯಜ್ಞೋಪವೀತವನ್ನು ಕೊಡುವನು. ಹೀಗೆ ದೀಕ್ಷೆಯನ್ನು ಹೊಂದಿದ ಬಳಿಕ ಶಿವಪೂಜೆಯನ್ನು ಮಾಡಲೂ ಅಭ್ಯಾಸಮಾಡಲೂ ಅವನು ಅರ್ಹನಾಗುವನು. ನಿರ್ವಾಣದೀಕ್ಷೆಯನ್ನು ಹೊಂದದೆ ಸತ್ತವನು ರುದ್ರಪಾದವನ್ನು ಮಾತ್ರ ಹೊಂದುವನು.

ಸಮಯ ದೀಕ್ಷೆಯನ್ನು ಹೊಂದಲು ಎಲ್ಲ ವರ್ಣದವರೂ ಸ್ತ್ರೀಯರೂ ಅರ್ಹರಿರುವರು. ಕಾಮಿಕಾಗಮದಲ್ಲಿ ಶೂದ್ರರಿಗೆ ಬೇರೊಂದು ವಿಧದ ದೀಕ್ಷೆಯು ಹೇಳಿದೆ. ಶೂದ್ರರು ದೀಕ್ಷೆಯಿಂದ ಬ್ರಾಹ್ಮಣರ ಸ್ಥಿತಿಗೆ ಬಂದರೂ ಕೂಡ ವೈದಿಕ ಮಂತ್ರಗಳನ್ನು ಅವರು ಉಪಯೋಗಿಸಬಾರದು. ಕಾಮಿಕಾಗಮದಲ್ಲಿ ಹೀಗೆ ಹೇಳಿದ್ದು, ಈಶಾನಶಿವನು ಇದನ್ನು

ಒಪ್ಪುವದಿಲ್ಲ. ಆದರೆ ಕಾಮಿಕದಲ್ಲಿ ಸ್ತ್ರೀಯಳಿಗೆ ದೀಕ್ಷೆಯು ಹೇಳಿದೆ.

ನಿರ್ವಾಣದೀಕ್ಷೆಯಲ್ಲಿ ಅಧ್ವಶುದ್ಧಿ ಮತ್ತು ಮಲಶುದ್ಧಿಯು ಹೇಳಿದೆ. ಈ ಶುದ್ಧಿಗಳು ಗುರುವಿನ ಯೋಗಬಲದಿಂದ ಆಗತಕ್ಕದ್ದು. ಇದು ವೀರ ಶೈವ ದೀಕ್ಷಾಪದ್ಧತಿಯನ್ನು ಹೋಲುತ್ತದೆ. ಇದರಿಂದ ಶಿಷ್ಯನು ಪುನ ರ್ಜನ್ಮವನ್ನು ಹೊಂದುವದಿಲ್ಲ.

ಕಾರಣಾಗಮದಲ್ಲಿ ಹೇಳಿದ ದೀಕ್ಷಾಪದ್ಧತಿಯು ಸ್ವಲ್ಪ ಭಿನ್ನತೆರನಾಗಿದೆ. ಗುರುವು ಶಿಷ್ಯನ ಮಸ್ತಕದಲ್ಲಿ ತನ್ನ ಹಸ್ತವನ್ನಿಡುವನು. ಆಮೇಲೆ ಶಿಷ್ಯನು ಲಿಂಗದ ಸುತ್ತಲು ಮೂರುಪ್ರದಕ್ಷಿಣೆ ಮಾಡುವನು. ಮತ್ತು ಗುರುವು ಶಿಷ್ಯನ ಕರ್ಣದಲ್ಲಿ ಪ್ರಣವವನ್ನೂ ಪಂಚಾಕ್ಷರಿಯನ್ನೂ ಉಚ್ಚ ರಿಸುವನು.

ಕೆಲವು ಶಿವಾಗಮಗಳಲ್ಲಿ ಸಮಯದೀಕ್ಷೆಯಲ್ಲಿ ಒಂದು ಕುಂಭವನ್ನೂ ನಿರ್ವಾಣದೀಕ್ಷೆಯಲ್ಲಿ ಪಂಚಕುಂಭಗಳನ್ನೂ ಉಪಯೋಗಿಸಬೇಕೆಂದು ಹೇಳಿದೆ.

ದೀಕ್ಷಾಕಾಲದಲ್ಲಿ ವೈದಿಕ ಮಂತ್ರಗಳು ಹೇಳಲ್ಪಡುವದಿಲ್ಲ. ಈ ವಿಧಿಯು ವೈದಿಕ ವಿಧಾನದ ಉಪನಯನ ವಿಧಿ ಅಥವಾ ಯಜ್ಞದ ಆರಂಭ ಕಾಲದ ವಿಧಿಯಂತೆ ಏನೂ ಇರುವದಿಲ್ಲ. ಈ ಶಿವದೀಕ್ಷಾ ವಿಧಿಯು ಆಗಮ ಪದ್ಧತಿಯಲ್ಲಿ ಒಂದು ವಿಶಿಷ್ಟ ತೆರವಾದ ವಿಧಿಯಾಗಿದೆ.

ಈ ಪ್ರಕಾರ ಶಿವಾಗಮಗಳಲ್ಲಿ ಸೂತ್ರ ಮತ್ತು ಸ್ಮೃತಿಗಳಲ್ಲಿ ಹೇಳಿದ ರೀತಿಗಳಲ್ಲಿ ಶೈವ ಪದ್ಧತಿಗಳನ್ನು ಬೆರಿಸಿದ್ದು ಕಂಡು ಬರುತ್ತದೆ. ಆದರೆ ಇವುಗಳಲ್ಲಿ ಶೈವಪದ್ಧತಿಗಳಿಗೆ ಮಹತ್ವದ ಸ್ಥಾನವನ್ನು ಅವು ಕೊಟ್ಟಿರು ತ್ತವೆ. ಈ ಪ್ರಕಾರ ಶೈವಾಗಮಗಳು ಪೂರ್ವದ ವೈದಿಕ ಪದ್ಧತಿಗಳಲ್ಲಿ ಹೊಸ ಸ್ವರೂಪನ್ನು ಉಂಟುಪಡಿಸಿ ಅವುಗಳಲ್ಲಿ ಸುಧಾರಣೆ ಮಾಡಲು ಯತ್ನಿಸಿದ್ದು ತೋರಿಬರುತ್ತದೆಂದು ಡಾ॥ ನಂದೀಮಠ ಇವರ ಅಭಿಪ್ರಾ ಯವಿದೆ.

ಈ ಪ್ರಕಾರ ಚರ್ಯಾಪಾದದ ವಿವರಣೆಗಳು ಆಗಮ ಗ್ರಂಥಗಳಲ್ಲಿ ಕಂಡು ಬರುತ್ತವೆ.



# ಕೆಲ ವೀರಶೈವ ರಾಜ್ಯಭಾರ ಪಟುಗಳು.

(ಲೇಖಕರು— ರಾ॥ ಸಾ॥ ಫ. ಗು ಹಳಕಟ್ಟಿ ಬಿ ಎ. ಎಲ್. ಎಲ್. ಬಿ. ವಿಜಾಪುರ.)



ಕರ್ನಾಟಕದಲ್ಲಿ ಸುವ್ಯವಸ್ಥೆಯಿಂದ ನಡೆದ ಅನೇಕ ರಾಜ್ಯಾಧಿಪತ್ಯಗಳು ಕ್ರಿಸ್ತಶಕದ ಆರಂಭದಿಂದಲೂ ಇದ್ದುದು ತೋರಿಬರುತ್ತದೆ. ಗ್ರೀಕ ಭೂಗೋಲಕಾರನಾದ ಟಾಲೆಮಿಯು ತನ್ನ ಭೂಗೋಲದಲ್ಲಿ ಐಹೊಳೆ, ಬದಾಮಿ, ಹೊನ್ನಾವರ, ಬನವಾಸಿ ಮೊದಲಾದ ಕರ್ನಾಟಕದಲ್ಲಿಯ ಅನೇಕ ಮಹತ್ವದ ವ್ಯಾಪಾರದ ಪಟ್ಟಣಗಳನ್ನು ಉಲ್ಲೇಖಿಸಿರುವನು. ಪುರಾತನ ಅನೇಕ ಶಿಲಾಶಾಸನಗಳು ಭೂಮಿಯ ವ್ಯವಸ್ಥಿತ ಅಳತೆಗಳನ್ನೂ ಮಾಪುಗಳನ್ನೂ ಸುಂಕ ಕಂದಾಯದ ಪದ್ಧತಿಗಳನ್ನೂ ಉಲ್ಲೇಖಿಸಿರುತ್ತವೆ. ಇವುಗಳ ಮೇಲಿಂದ ಆಗಿನ ಕಾಲದ ಸಕ್ರಮವಾದ ರಾಜ್ಯವ್ಯವಸ್ಥೆಗಳನ್ನೂ ವ್ಯಾಪಾರೋದ್ಯೋಗಗಳ ನಡವಳಿಕೆಗಳನ್ನೂ ಊಹಿಸಬಹುದಾಗಿದೆ. ಅಲ್ಲದೆ, ಈ ಶಿಲಾಶಾಸನಗಳಲ್ಲಿ ರಾಜ್ಯಭಾರದಲ್ಲಿಯ ನಾನಾವಿಧ ಅಧಿಕಾರಿಗಳನ್ನೂ ವಿವರಿಸುತ್ತವೆ. ಇವುಗಳ ಮೇಲಿಂದ ರಾಜ್ಯಭಾರದ ಕ್ರಮಬದ್ಧತೆ ನಿಯಮಾನುಸರಣೆ ಇವುಗಳ ಅಸ್ತಿತ್ವವನ್ನು ಕಂಡುಹಿಡಿಯಬಹುದಾಗಿದೆ. ಇವುಗಳೆಲ್ಲವನ್ನು ಕರ್ನಾಟಕ ಇತಿಹಾಸಕಾರರು ಸಂಶೋಧಿಸಿ ನಿಜಸ್ಥಿತಿಯನ್ನು ಪ್ರಸಿದ್ಧಪಡಿಸುವದು ಈಗಿನ ಒಂದು ಮಹತ್ವದ ಕಾರ್ಯವಾಗಿರುತ್ತದೆ.

ಕರ್ನಾಟಕದಲ್ಲಿ ಈ ಪ್ರಕಾರ ಕ್ರಮಯುಕ್ತ ರಾಜ್ಯಾಧಿಪತ್ಯಗಳನ್ನು ನಡಿಸಿದವರನ್ನು ನಾವು ಶೋಧಿಸಿದರೆ, ಅವರಲ್ಲಿ ಕೆಲ ವೀರಶೈವರೂ ಅವರಲ್ಲಿ ನಮ್ಮ ದೃಷ್ಟಿಗೆ ಬೀಳುತ್ತಾರೆ. ಅವರಲ್ಲಿ ನಿಷ್ಠೀ ವೀರಪ್ಪ, ಶಿವಪ್ಪ ನಾಯಕ, ಮತ್ತು ಲಿಂಗರಾಜ ಈ ಮೂವರು ಮುಖ್ಯರಾಗಿದ್ದು ಅವರು ತಮ್ಮ ರಾಜ್ಯಗಳಲ್ಲಿ ಬಹು ವ್ಯವಸ್ಥಿತವಾದ ಕಂದಾಯ ಪದ್ಧತಿಗಳನ್ನು ನೆಲೆಗೊಳಿಸಿದ್ದು ತೋರಿಬರುತ್ತದೆ. ನಿಷ್ಠೀ ವೀರಪ್ಪನು ಸುರಪುರ ರಾಜ್ಯದಲ್ಲಿ ಮುಖ್ಯ ಮಂತ್ರಿಯಾಗಿದ್ದು ಅವನು ಅಲ್ಲಿ ಅನೇಕ ಮಹತ್ವದ ರಾಜ್ಯವ್ಯವಸ್ಥೆಗಳನ್ನು ನೆಲೆಗೊಳಿಸಿದನು. ಶಿವಪ್ಪ ನಾಯಕನು ಇಕ್ಕೇರಿ ರಾಜವಂಶದಲ್ಲಿ ಒಬ್ಬ ಶ್ರೇಷ್ಠ ರಾಜನಾಗಿದ್ದು ಅವನು ತನ್ನ ರಾಜ್ಯದಲ್ಲಿ

ಒಂದು ಉತ್ತಮತರದ ಕಂದಾಯ ಪದ್ಧತಿಯನ್ನು ಸ್ಥಾಪಿಸಿದನು. ಲಿಂಗ ರಾಜನು ಕೊಡಗಿನ ರಾಜನಾಗಿದ್ದು ಅವನು ಏರ್ಪಡಿಸಿದ ಮೂಲಕ ಏರ್ಪಾಡುಗಳು ಇನ್ನೂ ಅಲ್ಲಿ ಪ್ರಚಾರದಲ್ಲಿವೆ. ಇವರ ಪದ್ಧತಿಗಳ ಸಾಮಾನ್ಯ ಸ್ವರೂಪವನ್ನು ನಾವು ಈ ಲೇಖದಲ್ಲಿ ಕೊಡಲೆಣಿಸಿದ್ದೇವೆ.

೧

## ನಿಷ್ಠೀ ವೀರಪ್ಪನ ಸಂಚಿಣಿ.

ಸುರಪುರದ ದೊರೆಗಳ ರಾಜವಂಶವು ಕರ್ನಾಟಕದಲ್ಲಿ ಬಹು ಮಹತ್ವವಾದದ್ದಿರುತ್ತದೆ ಈ ದೊರೆಗಳು ವಿಜಾಪುರ ಬಾದಶಹರ ಕೂಡ ಅತ್ಯಂತ ಮಿತ್ರತ್ವದಿಂದಿದ್ದು ಅವರ ಪ್ರತಿಯೊಂದು ಬಿಕ್ಕಟ್ಟಿನ ಪ್ರಸಂಗದಲ್ಲಿ ಕೇವಲ ಸಹಾಯಕರಾಗಿ ವರ್ತಿಸುತ್ತಿದ್ದರು. ಮೊಗಲ, ವಿಜಯನಗರ, ಮೊದಲಾದವರ ಕೂಡಿ ಈ ಬಾದಶಹರು ಹೂಡಿದ ಪ್ರತಿಯೊಂದು ಯುದ್ಧದಲ್ಲಿಯೂ ಈ ಸುರಪುರದ ಬೇಡರ ದೊರೆಗಳು ಬಹು ಸಾಹಸದಿಂದ ಅವರಿಗೆ ಬೆನ್ನಾಸರೆಯಾಗಿ ಕಾದಾಡಿದ್ದಾರೆ. ಔರಂಗಜೇಬನ ದಂಡಾಳುಗಳು ಮಹಾರಾಷ್ಟ್ರ ಮತ್ತು ಕರ್ನಾಟಕವನ್ನು ಉರವಣಿಸಲು ಸುರಪುರದ ದೊರೆಗಳು ತೋರಿಸಿದ ಶೌರ್ಯ ಸಾಹಸಾದಿಗಳು ಆ ಬಾದಶಹನ ದಂಡಾಳುಗಳನ್ನು ಬಹುವಾಗಿ ಕಂಗೆಡಿಸಿದವು. ಮುಂದೆ ೧೮೫೭ ರ ವರೆಗೂ ಈ ಅರಸರು ಅವ್ಯಾಹತವಾಗಿ ರಾಜ್ಯವಾಳಿ ಆ ವರುಷ ಅವರು ಎಬ್ಬಿಸಿದ ದಂಗೆಯ ಮೂಲಕ ಅವರ ರಾಜ್ಯವನ್ನು ಬ್ರಿಟಿಶರು ತಮ್ಮ ಅಂಕಿತಮಾಡಿಕೊಂಡರು. ಹೀಗೆ ಈ ರಾಜ್ಯವು ಉತ್ತರಕರ್ನಾಟಕದ ನಡುಪ್ರದೇಶದಲ್ಲಿದ್ದುಕೊಂಡು ಸುತ್ತಲೂ ಇದಿರಾಳಿಗಳು ಕೆಣಕುತ್ತಲಿದ್ದರೂ ಕೂಡ ಈ ರಾಜರು ಯಾರಿಗೂ ಹಣಿಯಲಿಲ್ಲ. ಆದರೆ ಈ ರಾಜ್ಯದ ವಿಶಿಷ್ಟತ್ವವೆಂದರೆ ಈ ಅರಸರು ಬರೇ ಸಮರಾಂಗಣದಲ್ಲಿ ಪ್ರಸಿದ್ಧರಾಗಿದ್ದರಷ್ಟೇ ಅಲ್ಲ, ಕರ್ನಾಟಕ ವಾಙ್ಮಯ, ಲಲಿತಕಲೆ ಇವುಗಳಿಗೆ ಅತ್ಯಂತ ಪರಿಪೋಷಕರಾಗಿ ಪ್ರಸಿದ್ಧರಾಗಿರುವರು. ಇವರು ಆಳಿದ ಪ್ರದೇಶದಲ್ಲಿ ಪ್ರಜೆಗಳು ಸುಖಸಮಾಧಾನದಿಂದಿದ್ದು ಬಾಳಿರುವರು. ಈ ರಾಜ್ಯದಲ್ಲಿ ಅನೇಕ ಕವಿಗಳೂ ಗಾಯಕರೂ ಸಾಧು ಸತ್ಪುರುಷರೂ ಉತ್ಪನ್ನರಾಗಿರುವರು. ಜೈಮಿನಿ ಭಾರತದ ಲಕ್ಷ್ಮೀಶ ಕವಿಯೂ, ಪಾರಿಜಾತದ ಕರ್ತೃವಾದ ತಮ್ಮಣ್ಣನು ಅಲ್ಲದೆ ಮಹಾಂತಸ್ವಾಮಿ, ಘನಮಠದಾರ್ಯ, ಮೊದಲಾದ

೧ ಈತನ ಚರಿತ್ರೆಯು ಶಿವಾನುಭವ ಸಂಚಿಕೆ ೧-೪-೩೩ ಇದರಲ್ಲಿ ಬಂದಿರುತ್ತದೆ.

ಸಾಧುಗಳು ಈ ನಾಡಿನಲ್ಲಿಯೇ ಉದ್ಭವಿಸಿರುತ್ತಾರೆ. ಈ ಬಗೆಯ ಪರಂಪರೆಯು ಇಲ್ಲಿ ಎರಡು ಶತಮಾನಗಳಿಂದಲೂ ನಡೆಯುತ್ತ ಬಂದಿರುತ್ತದೆ. ಇದಕ್ಕೆ ಮುಖ್ಯ ಕಾರಣವು ಈ ರಾಜ್ಯದ ಆಡಳಿತೆಯನ್ನು ಸುಮಾರು ನೂರುವರ್ಷಗಳ ವರೆಗೆ ನಿಷ್ಠೀ ಮನೆತನದವರು ಬಹು ಜಾಣತನದಿಂದ ನಡಿಸುತ್ತ ಬಂದದ್ದೇ ಇರುತ್ತದೆ. ಈ ಅವಧಿಯಲ್ಲಿ ಇವರು ಬಹುಕಾಲ ಪರ್ಯಂತ ಮಂತ್ರಿಸ್ಥಾನದಲ್ಲಿದ್ದು, ಅದಕ್ಕೆ ಈ ಬಗೆಯ ಸುಸ್ಥಿತಿಯನ್ನು ತಂದರು. ಇವರಲ್ಲಿ ಕಲ್ಲಪ್ಪ ಮತ್ತು ವೀರಪ್ಪ ಎಂಬವರು ಪ್ರಮುಖರಾಗಿದ್ದು ೧೭೫೪ ರಿಂದ ೧೭೭೪ ರ ವರೆಗೆ ಆಳಿದ ಪಾಮನಾಯಕ ಮತ್ತು ೧೭೭೪ ರಿಂದ ೧೮೦೩ ರ ವರೆಗೆ ಆಳಿದ ಹಿರೇ ವೆಂಕಟಪ್ಪ ನಾಯಕ ಇವರ ಕಾಲದಲ್ಲಿ ಈ ಮಂತ್ರಿಗಳು ಪ್ರಸಿದ್ಧರಾದರು. ಇವರಿಬ್ಬರಲ್ಲಿ ವೀರಪ್ಪನೇ ಬಹು ಶ್ರೇಷ್ಠನು ಮತ್ತು ರಾಜ್ಯಕಾರ್ಯ ಪಟುವು. ಆಗಿನ ಮರಾಟರ ಮತ್ತು ನಿಜಾಮರ ಉಪಟಳದಲ್ಲಿ ಸಹ ಇವನು ಬಹು ಜಾಣತನದಿಂದ ತನ್ನ ರಾಜ್ಯಭಾರವನ್ನು ನಡಿಸಿದನು.

ನಿಷ್ಠೀ ವೀರಪ್ಪನು ತನ್ನ ಆಳಿಕೆಯಲ್ಲಿ ಮಾಡಿದ ಮಹತ್ವದ ಕಾರ್ಯವೆಂದರೆ ಈ ಪ್ರಾಂತದಲ್ಲಿ ಅವನು ನೆಲೆಗೊಳಿಸಿದ ಕಂದಾಯದ ಪದ್ಧತಿಯೇ ಇರುತ್ತದೆ. ಅವನ ಪೂರ್ವದಲ್ಲಿ ಭೂಮಿಯ ಅಳತೆಯ ಲೆಖ್ಖವು ಸರಿಯಾಗಿರಲಿಲ್ಲ. ಅವನು ಒಂದು ಅಳತೆಯ ಪದ್ಧತಿಯನ್ನು ಗೊತ್ತುಪಡಿಸಿ ಅದರಂತೆ ರಾಜ್ಯದೊಳಗಿನ ಎಲ್ಲ ಭೂಮಿಯನ್ನು ಅಳೆಯಿಸಿದನು. ಇದು ಹ್ಯಾಗೆಂದರೆ ೫ ಮೊಳಾ+೫ ಮುಷ್ಟಿ= ೧ ಮಾರು, ೨೦ ಮಾರು= ೧ ಬಿಘೆ, ೧೦೦ ಬಿಘೆ=೧ ಚಾವುರ ಎಂಬ ಪ್ರಮಾಣವನ್ನು ಗೊತ್ತುಪಡಿಸಿದನು. ಜನರ ಮೊಳಗಳು ಹೆಚ್ಚುಕಡಿಮೆ ಇರುವದರಿಂದ ಐದು ಜನರು ಕೂಡಿ ತಮ್ಮ ತಮ್ಮ ಕೈಯಿಂದ ಒಂದೊಂದು ಮೊಳ ಮತ್ತು ಒಂದೊಂದು ಮುಷ್ಟಿ ಈ ರೀತಿಯಾಗಿ ಅಳೆದರೆ ಅದು ಒಂದು "ಪಂಚರ ಮಾರು" ಆಯಿತೆಂದು ಗೊತ್ತುಪಡಿಸಿದನು. ಈ ಮಾರಿನಿಂದ ಪ್ರತಿಯೊಂದು ಹಳ್ಳಿಯಲ್ಲಿ ಒಂದು ಚಚ್ಚೌಕು ಕಟ್ಟೆಯನ್ನು ಅಳತೆಗೋಸ್ಕರ ಕಟ್ಟಿಸಿದನು. ಇದು ಬಿಘೇದ ಅಳತೆಯನ್ನು ತೋರಿಸುತ್ತಿದ್ದದರಿಂದ ಇದಕ್ಕೆ "ಬಿಘೇದ ಕಟ್ಟೆ" ಎಂಬ ಹೆಸರು. ಈ ಬಿಘೇದ ಅಳತೆಯಿಂದ ವೀರಪ್ಪನು ತನ್ನ ರಾಜ್ಯದ ಯಾವತ್ತು ಭೂಮಿಯನ್ನು ಅಳೆಯಿಸಿ ಪ್ರತಿಯೊಂದು ಜಮೀನಿನ ಕಂದಾಯವನ್ನು ಗೊತ್ತುಪಡಿಸಿದನು. ಭೂಮಿಯಲ್ಲಿ ಮಸಬು,

ಮೊರಡಿ ಮತ್ತು ಎರಿ ಎಂಬ ಮೂರು ವರ್ಗಗಳನ್ನು ಮಾಡಿ ಆ ಪ್ರಕಾರ ಸರಿಯಾಗಿ ಕಂದಾಯವನ್ನು ಕೂಡ್ರಿಸಿದನು. ಈ ಪದ್ಧತಿಗೆ "ನಿಷ್ಠೀವೀರಪ್ಪನ ಸಂಚಣಿ" ಎಂಬ ಹೆಸರು ಇದ್ದು ಇದು ನಿಜಾಮ ಇಲಾಖೆಯ ದಪ್ತರಗಳಲ್ಲಿ ಈಗಲೂ ಉಪಲಬ್ಧವಿರುತ್ತದೆ.

ಇದೇ ಪ್ರಕಾರ ಅವನು ಜಕಾತಿಯ ಪದ್ಧತಿಯನ್ನೂ ವ್ಯವಸ್ಥೆಗೊಳಿಸಿದನು. ಅವನು ಪ್ರತಿಯೊಂದು ಜೀನಿಸಿನ ಮೇಲೆ ನಿಶ್ಚಿತ ದರಗಗಳನ್ನು ಗೊತ್ತುಪಡಿಸಿ ಆ ಪ್ರಕಾರ ಶರ್ತುಗಳನ್ನಿಟ್ಟು ಲಿಲಾವು ಮಾಡುತ್ತಿದ್ದನು. ಇದರಿಂದ ಸರಕಾರೀ ಅಧಿಕಾರಿಗಳ ಅನ್ಯಾಯಗಳು ತಪ್ಪಿದ್ದಲ್ಲದೆ ಸಂಸ್ಥಾನಕ್ಕೂ ಉತ್ಪನ್ನವು ಹೆಚ್ಚಿಗೆ ಬರಹತ್ತಿತು. ಅವನು ಪಲ್ಲೆಕಾಯಿಗೆ ಮಣ ೧ ಕ್ಕೆ ೪ ಸೇರು, ಹಣ್ಣುಹಂಪಲಗಳಿಗೆ ಎತ್ತಿನ ಒಜ್ಜೆಗೆ ೧ ರೂಪಾಯಿ, ಧಾನ್ಯಗಳಿಗೆ ಎತ್ತಿಗೆ ೬ ಸೇರ, ಕಿರಾಣೀ ಜೀನಸುಗಳಿಗೆ ಎತ್ತಿಗೆ ೧౨ ಆಣೆ ಈ ಪ್ರಕಾರ ಸುಂಕಗಳಲ್ಲದೆ ಬೇರೆ ಬೇರೆ ಕಸಬುದಾರರಿಗೂ ದರಗಳನ್ನು ಗೊತ್ತುಪಡಿಸಿದನು. ಆದರೆ ಗ್ರಾಮಗಳಲ್ಲಿ ಆಗ ಪಂಚಾಯತಿ ಪದ್ಧತಿಯು ಇದ್ದದರಿಂದ ಹೀಗೆ ಬಂದ ಉತ್ಪನ್ನದಲ್ಲಿ ಕೆಲವು ಭಾಗ ಸರಕಾರಕ್ಕೆ, ಕೆಲವು ಭಾಗ ಪಟ್ಟಣಶೆಟ್ಟಿ, ತಳವಾರ, ಚೋರಗಸ್ತಿ ಇವರಿಗೆ ಕೊಡತಕ್ಕದ್ದೆಂದು ಕೆಲವು ಪ್ರಮಾಣಗಳನ್ನು ಗೊತ್ತುಪಡಿಸಿದನು. ಉದಾ:— ಪಲ್ಲೇ ಕಾಯಿಗಳಿಂದ ೪ ಸೇರು ಕರ ಎತ್ತುತ್ತಿದ್ದು, ಅದರಲ್ಲಿ ಸರಕಾರಕ್ಕೆ ೧ ಶೇರು, ಪಟ್ಟಣಶೆಟ್ಟಿಗೆ ೧ ಶೇರು, ತಳವಾರನಿಗೆ ೧ ಶೇರು, ಚೋರಗಸ್ತಿಗೆ ೧ ಶೇರು. ಈ ಪ್ರಕಾರ ಕೊಡಬೇಕೆಂದು ಗೊತ್ತುಪಡಿಸಿದನು.

ಇದರಂತೆಯೇ ನಿಷ್ಠೀ ವೀರಪ್ಪನು ದರ್ಬಾರ ಪದ್ಧತಿಯನ್ನು ಗೊತ್ತುಪಡಿಸಿದ್ದನು. ಅಂದರೆ ರಾಜನ ಅಂತಃಪುರದ ಖರ್ಚನ್ನು ನಿಶ್ಚಯಿಸಿ ದೊಡ್ಡ ಜನರ ಮಾನಮರ್ಯಾದೆಗಳ ಸ್ಥಾನಗಳನ್ನು ನಿರ್ಣಯಿಸಿದನು. ಇದರಿಂದ ರಾಜ್ಯದಲ್ಲಿಯ ಅನೇಕ ಅಂತಸ್ಥ ಕಲಹಗಳು ಅಡಗಿದವು.

ಅವನು ತನ್ನ ರಾಜ್ಯದಲ್ಲಿ ಬಹುಕಡೆಗೆ ಕೆರೆ ಬಾವಿಗಳನ್ನು ನಿರ್ಮಿಸಿದನು. ಹುಲ್ಲಕಲಗೇರಿ, ಡೊಣ್ಣೇಗೇರಿ, ಕರಿಗುಡ್ಡಕೇರಿ, ಸಗರ, ಹಸನಾಪುರ, ಅಂತರಗಂಗೆ, ರುಕುಮಪೇಟೆ, ವೆಂಕಟಾಪುರ, ವಜ್ಜಲ, ಸತ್ಯಮನಪೇಟೆ, ಹೆಬ್ಬಾಳ, ಬಾಚಿಮಟ್ಟಿ ಇಲ್ಲಿಯ ಕೆರೆಗಳೆಲ್ಲವೂ ಇವನಿಂದಲೇ ನಿರ್ಮಿತವಾದವು.

ನಿಷ್ಠೀ ವೀರಪ್ಪನು ಅತ್ಯಂತ ಧಾರ್ಮಿಕ ಪುರುಷನಾಗಿದ್ದನು. ಅವನು ಸಂಸ್ಥಾನದಲ್ಲಿ ವೈದಿಕ ಬ್ರಾಹ್ಮಣರು ಜಂಗಮರು, ಯಾಚಕರು ಯಾರಾದರೂ ಬಂದರೆ ಅವರಿಗೆ ಊಟದ ಸಲುವಾಗಿ ಇಂತಿಷ್ಟು ಕೊಡಬೇಕೆಂದು ಎಲ್ಲ ಗ್ರಾಮಸ್ತರಿಗೆ ಹುಕುಮುಗಳನ್ನು ಮಾಡಿದ್ದನು. ಇದರಂತೆ ಹಳ್ಳಿಗಳ ಲೆಕ್ಕ ಪತ್ರಗಳಲ್ಲಿ ಸರಕಾರೀ ಖರ್ಚು ಬಿದ್ದಿರುವದು ಈಗ್ಗೆಯೂ ಕಂಡುಬರುತ್ತದೆ.

ಈ ಪ್ರಕಾರ ನಿಷ್ಠೀ ವೀರಪ್ಪನು ಆಗಿನ ಅಶಾಂತತೆಯ ಕಾಲದಲ್ಲಿ ಸಹ ತನ್ನ ರಾಜ್ಯದಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸಿ ಅತ್ಯಂತ ಧರ್ಮದಿಂದ ರಾಜ್ಯವಾಳಿದನು. ಜನರು ಈತನು ಒಬ್ಬ ಮಹಾತ್ಮನು, ಒಬ್ಬ ವರದೀ ಪುರುಷನು ಎಂದು ತಿಳಿಯುತ್ತಿದ್ದರು. ಮತ್ತು ಈಗಲೂ ತಿಳಿಯುತ್ತಾರೆ. ಈ ಪ್ರಾಂತದಲ್ಲಿ ಈಗ್ಗೆಯೂ "ನಿಷ್ಠೀ ವೀರಪ್ಪನ ದುರಾಯಿ" ಎಂದು ಅವನ ಹೆಸರಿನ ಆಣೆಯನ್ನು ಇಟ್ಟರೆ ಸಾಕು, ಜನರು ಅದನ್ನು ಮೀರುವದಿಲ್ಲ. ಅವನ ಜಾಣತನ ಮತ್ತು ಸಮಯೋಚಿತ ವರ್ತನೆಗಳ ಬಗ್ಗೆ ಅಲ್ಲಿಯ ಜನರು ಅನೇಕ ದಂತಕಥೆಗಳನ್ನು ಹೇಳುತ್ತಾರೆ. ಈ ಪ್ರಕಾರ ನಿಷ್ಠೀ ವೀರಪ್ಪನು ಕರ್ನಾಟಕದ ಮಹಾ ಪುರುಷರಲ್ಲಿ ಒಬ್ಬನಾಗಿರುವನು.

ನಿಷ್ಠೀ ವೀರಪ್ಪನ ವಂಶದವರು ಸುರಪುರ ಪ್ರಾಂತದಲ್ಲಿ ಈಗ್ಗೆಯೂ ಇದ್ದು ಅವರಿಗೆ ಜಹಾಗೀರುಗಳು ನಡಿಯುತ್ತಿವೆ.

## ಶಿವಪ್ಪನಾಯಕನ ಶಿಸ್ತು.

ಬಿದನೂರಿನ ರಾಜವಂಶದವರಾದರೂ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧರಾಗಿರುವರು. ಇವರು ಕರ್ನಾಟಕ ವಾಙ್ಮಯವನ್ನೂ ಅದರ ಕಲಾಕೌಶಲ್ಯಗಳನ್ನೂ ಬಹುವಾಗಿ ಅಭಿವೃದ್ಧಿಪಡಿಸಿದ್ದಾರೆ. ಇವರಲ್ಲಿ ೧೬೪೫ ರಿಂದ ೧೬೭೦ ರ ವರೆಗೆ ಆಳಿದ ಶಿವಪ್ಪನಾಯಕನು ಅತ್ಯಂತ ಮುಖ್ಯನು. ಅವನು ಬಹು ಶೂರನೂ, ಧರ್ಮಿಷ್ಠನೂ ರಾಜ್ಯಕಾರ್ಯಪಟುವೂ ಆಗಿ ಅತ್ಯಂತ ಪ್ರಸಿದ್ಧನಾಗಿರುತ್ತಾನೆ. ಇವನು ತನ್ನ ರಾಜ್ಯದಲ್ಲಿಯ ಎಲ್ಲ ಬಗೆಯ ಜಮೀನುಗಳನ್ನು ಅಳೆಯಿಸಿ ಒಂದು ಕಂದಾಯಪದ್ಧತಿಯನ್ನು ನೆಲೆಗೊಳಿಸಿದನು. ಇದಕ್ಕೆ "ಶಿವಪ್ಪನಾಯಕನ ಶಿಸ್ತು" ಎಂಬ ಹೆಸರು.

ಅವನು ೧೨ ವರ್ಷಗಳ ವರೆಗೆ ಬೇರೆ ಬೇರೆ ತರದ ಜಮೀನುಗಳಲ್ಲಿ ಎಷ್ಟೆಷ್ಟು ಬೆಳೆಯುತ್ತದೆಂಬದನ್ನು ಪ್ರಯೋಗಗಳಿಂದ ಗೊತ್ತುಪಡಿಸಿ ಆ ಪ್ರಕಾರ ಅವನು ಜಮೀನುಗಳಲ್ಲಿ ಉತ್ತಮ, ಮಧ್ಯಮ, ಕನಿಷ್ಠ, ಅಧಮ ಮತ್ತು ಅಧಮಾಧಮ ಎಂಬ ೫ ವರ್ಗಗಳನ್ನು ಮಾಡಿದ್ದಲ್ಲದೆ ಈ ಪ್ರತಿಯೊಂದರಲ್ಲಿಯೂ ಶ್ರೇಷ್ಠ ಮತ್ತು ಕನಿಷ್ಠ ಎಂಬ ಎರಡು ಭಾಗಗಳನ್ನು ಮಾಡಿ ಆಯಾ ವರ್ಗಗಳ ಜಮೀನಿಗೆ ಇಷ್ಟಿಷ್ಟು ಕಂದಾಯವಿರಬೇಕೆಂಬದನ್ನು ಗೊತ್ತುಪಡಿಸಿದನು. ಉದಾಹರಣಾರ್ಥವಾಗಿ ೧ ನೇ ವರ್ಗದ ಉತ್ತಮ ಭೂಮಿಯ ಕನಿಷ್ಟ ಬೆಳೆಯು ೨೬ ಖಂಡುಗ ಧಾನ್ಯವಿದೆಂದು ಗೊತ್ತುಪಡಿಸಿ ಅದರ ಪರಮಾವಧಿ ದರ ೧ ಪೊಗದಿ ಮತ್ತು ಕನಿಷ್ಟದರ ೮ ಹಣ ೧೨ ಆಣೆ ಎಂದು ಗೊತ್ತುಪಡಿಸಿದನು. ಇದೇ ಪ್ರಕಾರ ಎಲ್ಲ ತರದ ಜಮೀನುಗಳಿಗೆ ಕಂದಾಯಗಳನ್ನು ನಿರ್ಧರಿಸಿದನು. ಅವನು ಜಮೀನಿಯ ಉತ್ಪನ್ನದ ಒಂದು ಮೂರಾಂಶ ಭಾಗವು ಸರಕಾರಕ್ಕೆ ಸಲ್ಲತಕ್ಕದ್ದೆಂದು ತಿಳಿದು ಆ ಪ್ರಕಾರ ವಸೂಲ ಮಾಡುತ್ತಿದ್ದನು.

ಅದರಂತೆಯೇ ಅವನು ಎಲ್ಲ ತೋಟಗಳನ್ನೂ ಒಂದು ಅಳತೆಯ ಕಟ್ಟಿಗೆಯಿಂದ ಅಳೆಯಿಸಿದನು. ಈ ಕಟ್ಟಿಗೆಯು ಇಕ್ಕೇರಿಯ ಅಘೋರೇಶ್ವರ ದೇವಾಲಯದ ಮೆಟ್ಟುಗಲ್ಲಿನ ಉದ್ದಳತೆಯಷ್ಟು ಇದ್ದು ಇದು ೧೮ ಫೂಟು ೬ ಇಂಚು ಆಗುತ್ತದೆ. ಇದರಿಂದ ತೋಟಗಳನ್ನೂ ಅಳೆಯಿಸಿ ಅವುಗಳ ಫಲದ್ರುಪತೆಯ ಮೇರೆಗೆ ಬೇರೆ ಬೇರೆ ದರಗಳನ್ನು ಗೊತ್ತುಪಡಿಸಿದನು. ಈ ದರಗಳು ೭ ರಿಂದ ೨೫ ಪೊಗದಿಗಳ ವರೆಗ ಇರುತ್ತವೆ.

ಈ 'ಶಿಸ್ತು' ೩೯ ವರ್ಷಗಳ ವರೆಗೆ ಅವ್ಯಾಹತವಾಗಿ ಸಾಗಿತು. ಮಧ್ಯದಲ್ಲಿ ಯಾವ ಅರಸರೂ ಇದರಲ್ಲಿ ಹೆಚ್ಚುಕಡಿಮೆ ಮಾಡಲಿಲ್ಲ. ಆದರೆ ಧರ್ಮಿಷ್ಠಳಾದ ಚನ್ನಮ್ಮಾಜಿ ರಾಣಿಯು ಜಂಗಮ ಮತ್ತು ಬೈರಾಗಿಗಳಿಗೋಸ್ಕರ ಒಂದು ಪೊಗದಿಗೆ ಒಂದು ಆಣೆಯಂತೆ ಹೆಚ್ಚಿಗೆ ಈ ತೆರಿಗೆಯನ್ನು ಏರಿಸಿದಳು. ಮುಂದೆ ೩೬ ವರ್ಷಗಳ ಮೇಲೆ ಮೊಗಲರ ಹಾವಳಿಯು ಹೆಚ್ಚಾದ್ದರಿಂದ ಚಿಕ್ಕ ಸೋಮಶೇಖರರಾಜನು ೧೭೩೬ ಇಸ್ವಿಯಲ್ಲಿ ಒಂದು ಪೊಗದಿಗೆ ೪ ಆಣೆಯಂತೆ ಹೆಚ್ಚಿಗೆ ಈ ತೆರಿಗೆಯನ್ನು ಏರಿಸಿದನು. ಮತ್ತು ೧೭೫೩ ರಲ್ಲಿ ಬಸವಪ್ಪ ನಾಯಕನು ಮಾರಾಟರ

ಚೌಥವನ್ನು ಕೊಡುವ ಸಲುವಾಗಿ ಪೊಗದಿಗೆ ೪ ಆಣೆಯಂತೆ ಪುನಃ ಹೆಚ್ಚಿಗೆ ಈ ತೆರಿಗೆಯನ್ನು ಏರಿಸಿದನು.

ಶಿವಪ್ಪ ನಾಯಕನು ಈ ಪ್ರಕಾರ ಮಲೆನಾಡನ್ನಷ್ಟೇ ಅಲ್ಲ, ಬೈಲು ಸೀಮೆಯನ್ನೂ ಆಳಿಯಿಸಿದನು. ಅಲ್ಲಿ ಜಮೀನುಗಳಲ್ಲಿ ಆರು ವರ್ಗಗಳನ್ನು ಮಾಡಿ ಅವುಗಳ ಫಲದ್ರುಪತೆಯಂತೆ ದರಗಳನ್ನು ಗೊತ್ತುಪಡಿಸಿದನು. ಈ ಆರು ವರ್ಗಗಳ ಹೆಸರುಗಳು ಯಾವವೆಂದರೆ, ಎರಿ, ಕರಿಮುಸಬು, ಕೆಮ್ಮಣ್ಣು, ಮಳಲು, ಇಮ್ಮನ (ಅಂದರೆ ಮಿಶ್ರಭೂಮಿ) ಸುಣಕಲ್ಲು ಎಂದು ಇರುತ್ತವೆ. ಇವುಗಳ ದರಗಳು ೨ ಪೊಗದಿ ೨ ಹಣ ೮ ಆಣೆಯಿಂದ ೭ ಹಣ ೮ ಆಣೆ ವರೆಗೆ ಇರುತ್ತವೆ.

ಈ ಪ್ರಕಾರ ಶಿವಪ್ಪ ನಾಯಕನು ತನ್ನ ರಾಜ್ಯದಲ್ಲಿ ಕಂದಾಯ ಪದ್ಧತಿಯನ್ನು ನೆಲೆಗೊಳಿಸಿ ಅವರಲ್ಲಿ ಸುಸ್ಥಿತಿಯನ್ನುಂಟುಪಡಿಸಿದನು.

## ಲಿಂಗರಾಜನ ಶಿಸ್ತು.

ಕೊಡಗು ದೇಶವಾದರೂ ಕರ್ನಾಟಕದಲ್ಲಿ ಮತ್ತೊಂದು ಮಹತ್ವದ ರಾಜ್ಯವಾಗಿರುತ್ತದೆ. ಇವರಲ್ಲಿಯೂ ಅನೇಕ ಇತಿಹಾಸ ಪ್ರಸಿದ್ಧ ಪುರುಷರು ಆಗಿಹೋಗಿರುವರು. ಅವರಲ್ಲಿ ೧೮೦೯ ರಿಂದ ೧೮೨೦ರ ವರೆಗೆ ಆಳಿದ ಲಿಂಗರಾಜನು ತನ್ನ ರಾಜ್ಯದಲ್ಲಿ ಒಂದು ವ್ಯವಸ್ಥಿತ ಕಂದಾಯ ಪದ್ಧತಿಯನ್ನು ನೆಲೆಗೊಳಿಸಿದನು. ಈ ಏರ್ಪಾಡಾದರೂ ಪ್ರಜೆಗಳಿಗೆ ಸುಖಕರವಾಗಿ ಪರಿಣಮಿಸಿತು. ಇವನು ಜಮೀನನ್ನೆಲ್ಲ ಸರಿಯಾಗಿ ಅಳತೆ ಮಾಡಿಸಿ, ಅದರ ಸ್ಥಿತಿಯಂತೆ ತಕ್ಕ ಕಂದಾಯವನ್ನು ಗೊತ್ತುಪಡಿಸಿದನು. ಆದರೆ ಈ ಪದ್ಧತಿಯಲ್ಲಿ ವಿಶೇಷವೇನೆಂದರೆ, ಅವನು ಯಾವ ಯಾವ ಜಮೀನು ಯಾರ ಯಾರ ಸ್ವಾಧೀನದಲ್ಲಿದೆ, ಜಮೀನಿನ ಚಕಬಂದಿ, ಅದರ ವಿಸ್ತಾರ, ಕಂದಾಯ ಮುಂತಾದ್ದನ್ನು ಕ್ರಮವಾಗಿ ಪುಸ್ತಕದಲ್ಲಿ ಬರೆಯಿಸಿದನು. ಈ ದಾಖಲೆಗೆ "ಶಿಸ್ತು" ಎಂಬ ಹೆಸರು. ಈ ಪ್ರಾಂತದಲ್ಲಿ "ಲಿಂಗರಾಜನ ಶಿಸ್ತು" ಬಹು ಪ್ರಸಿದ್ಧವಾಗಿರುತ್ತದೆ. ಇದನ್ನು ನಾವು ಈಗ ಮುಂಬಯಿ ಇಲಾಖೆಯಲ್ಲಿ ವ್ಯವಹಾರದಲ್ಲಿದ್ದ ಹಕ್ಕ ರಜಿಸ್ಟರಕ್ಕೆ ಹೋಲಿಸಬಹುದು.

ಈ ಪ್ರಕಾರ ವೀರಶೈವ ರಾಜ್ಯಭಾರ ಪಟುಗಳ ಹೆಸರುಗಳು ಕರ್ನಾಟಕ ದೇಶದ ಇತಿಹಾಸದಲ್ಲಿ ಕಂಡುಬರುತ್ತಾರೆ.

---

# ಭಕ್ತಿಭಂಡಾರಿ ಬಸವಣ್ಣನವರು.

(ವಿಮರ್ಶಾತ್ಮಕ ವಿವೇಚನೆ—ಸಂಪಾದಕರಿಂದ)

---

ಈ ಗ್ರಂಥವನ್ನು ಶ್ರೀಯುತ ಎಂ. ಆರ್. ಶ್ರೀನಿವಾಸ ಮೂರ್ತಿಗಳು ಬಹು ಅಂದವಾಗಿ ಮುದ್ರಿಸಿ ಕನ್ನಡಿಗರ ಎದುರಿಗೆ ಇಟ್ಟಿದ್ದಕ್ಕಾಗಿ ನಾವು ಅವರನ್ನು ಅತ್ಯಂತವಾಗಿ ಶ್ಲಾಘಿಸುತ್ತೇವೆ. ಅವರು ಮಾಡಿದ ಈ ಮಹತ್ಕಾರ್ಯಕ್ಕೋಸ್ಕರ ವಿಶೇಷವಾಗಿ ವೀರಶೈವರು ಅವರಿಗೆ ಅತ್ಯಂತ ಕೃತಜ್ಞರಾಗಿರುವರು. ಶ್ರೀಯುತ ಶ್ರೀನಿವಾಸ ಮೂರ್ತಿಗಳು ಬಸವಣ್ಣನವರನ್ನು ಕುರಿತು ಪ್ರಬುದ್ಧ ಕರ್ನಾಟಕ ಪತ್ರಿಕೆಯಲ್ಲಿ ಕೆಲವು ಸವಿಸ್ತಾರವಾದ ಲೇಖಗಳನ್ನು ಕೆಲವು ವರ್ಷಗಳ ಹಿಂದೆ ಬರೆದಿದ್ದು ಅವುಗಳೆಲ್ಲವನ್ನೂ ಅವರು ಈ ಗ್ರಂಥದಲ್ಲಿ ಸಂಗ್ರಹಿಸಿ ಬಹು ವ್ಯವಸ್ಥಿತವಾಗಿ ಪ್ರಚುರಪಡಿಸಿರುವರು. ಇದಲ್ಲದೆ ಇದರಲ್ಲಿ ಬಾಗೇವಾಡಿ ಬಸವೇಶ್ವರ, ಹಿಪ್ಪರಿಗೆಯ ಕಲ್ಲಿನಾಥ, ಕೂಡಲ ಸಂಗಮೇಶ್ವರ, ಸೊಲ್ಲಾಪುರದ ಸಿದ್ಧರಾಮೇಶ್ವರ ದೇವಾಲಯಗಳ ಸುಂದರವಾದ ಚಿತ್ರಗಳನ್ನು ಸೇರಿಸಿ, ಉತ್ತಮವಾದ ಬೈಂಡು, ದಪ್ಪವಾದ ಕಾಗದ ಇವುಗಳಿಂದ ಗ್ರಂಥದ ಬಹಿರಾಕೃತಿಯನ್ನು ಚಿತ್ತಾಕರ್ಷಕವಾಗಿ ಮಾಡಿದ್ದಾರೆ. ಅದರಂತೆಯೇ ಇದರ ಅಂತರಂಗಿಕ ವಿಚಾರ ವಿಷಯಗಳು ಎಷ್ಟು ಮಹತ್ವವಾದವುಗಳೆಂಬುದು ಈ ಗ್ರಂಥಕ್ಕೆ ದೇವರಾಜ ಪಾರಿತೋಷಕಗಳಲ್ಲಿ ಪ್ರಥಮ ಸ್ಥಾನವು ದೊರೆದದ್ದರ ಮೇಲಿಂದ ವಾಚಕರಿಗೆ ಗೊತ್ತಾಗದೆ ಇರದು.

ಒಂದು ಕಾಲಕ್ಕೆ ಬಸವಣ್ಣನ ಧರ್ಮಪ್ರಸಾರ ಕಾರ್ಯ ವಿಷಯದಲ್ಲಿ ಮತ್ತು ಅವನ ರೀತಿನಡಾವಳಿಗಳ ವಿಷಯದಲ್ಲಿ ಅತ್ಯಂತ ಹೇಯಬುದ್ಧಿಯನ್ನು ತೋರಿಸುವ ಸ್ಥಿತಿಯು ಇದ್ದಿತು. ಅವನು ನೀತಿಬಾಹಿರರಾದ ಜನಸಮುದಾಯಗಳನ್ನು ತನ್ನ ಸುತ್ತಲೂ ನೆರಹಿಕೊಂಡು ಅವರ ದುಷ್ಟ ಮತ್ತು ನೀಚ ಪ್ರವೃತ್ತಿಗಳಿಗೆ ಆಶ್ರಯನಾಗಿ ದೇಶದಲ್ಲೆಲ್ಲ ನಿರಾತಂಕ ಸ್ವೈರವೃತ್ತಿಗೆ ಚಾಲನೆ ಕೊಟ್ಟು, ಧರ್ಮಪ್ರಸಾರ ಕಾರ್ಯ ಮಾಡಿದನೆಂಬ ಅಭಿಪ್ರಾಯಗಳು ಬಹುತರ ಎಲ್ಲ ವರ್ಗದ ಜನರಲ್ಲಿ ತುಂಬಿಕೊಂಡಿದ್ದವು. ಇದಕ್ಕೆ ಜೈನಗ್ರಂಥಗಳು ಪುಷ್ಟಿಯನ್ನು ಕೊಡುತ್ತಿದ್ದು ಬಸವಪುರಾಣ ಮತ್ತು ಇನ್ನುಳಿದ ವೀರಶೈವ ಪುರಾಣಗಳ ಕಟ್ಟು

ಕಥೆಗಳಾದರೂ ಈ ಭಾವವನ್ನೇ ಸಮರ್ಥಿಸುತ್ತಿದ್ದವು. ಯಾಕೆಂದರೆ ಈ ಗ್ರಂಥಗಳಲ್ಲಿ ಕಂಡುಬರುವ ಜಂಗಮರ ವರ್ಣನೆ, ಮಿಂಡ ಜಂಗಮರ ಉಲ್ಲೇಖ, ಅಲ್ಲಲ್ಲಿ ಕಂಡುಬರುವ ಜಾರ ಚೋರರ ಕಥೆಗಳು, ಹಿಂಸಾತ್ಮಕ ಕ್ರೂರ ವರ್ತನೆಗಳು ಇವುಗಳಿಂದ ಓದುಗರ ಮನಸ್ಸಿನ ಮೇಲೆ ಹೀಗೆ ಪರಿಣಾಮ ಮಾಡುತ್ತಿದ್ದರೆ, ಅದರಲ್ಲೇನೂ ಆಶ್ಚರ್ಯವಲ್ಲ. ಒಂದು ವೇಳೆ ವೀರಶೈವ ಧರ್ಮಸ್ಥಿತಿಯ ವಿಷಯವಾಗಿ ಈ ಪುರಾಣಗಳಷ್ಟೇ ಜನರ ತಿಳುವಳಿಕೆಯಲ್ಲಿ ಉಳಿದಿದ್ದರೆ ಈ ಬಗೆಯ ಅನುಚಿತ ಅಭಿಪ್ರಾಯಗಳು ಇನ್ನೂ ಹಾಗೆಯೇ ಉಳಿಯುತ್ತಿದ್ದವೆಂಬದರಲ್ಲಿ ಸಂದೇಹವಿರಲಾರದು. ಆದರೆ ವಚನ ಗ್ರಂಥಗಳು ಉಪಲಬ್ಧವಾಗಿ ಅವುಗಳ ನಿಜಾಂಶಗಳು ದೃಷ್ಟಿಗೆ ಬಿದ್ದಹಾಗೆ ಈ ವಿಚಾರಗಳು ಮೆಲ್ಲನೆ ಪಲ್ಲಟಿಸಿ, ವೀರಶೈವವೆಂಬುದೊಂದು ಹಿಂದೂ ಸಂಸ್ಕೃತಿಯಲ್ಲಿ, ಕರ್ನಾಟಕದ ಸಾಮಾಜಿಕ ಮತ್ತು ರಾಜಕೀಯ ಏಳ್ಗೆಯಲ್ಲಿ ಒಂದು ಮಹತ್ತರ ಕಾರ್ಯ ಮಾಡಿರುತ್ತದೆಂಬುದು ಜನರಲ್ಲಿ ಮನದಟ್ಟವಾಗಹತ್ತಿರುತ್ತದೆ. ಬಸವೇಶ್ವರನ ಬಗ್ಗೆ ಶ್ರೀಯುತ ಶ್ರೀನಿವಾಸಮೂರ್ತಿಗಳು ತಮ್ಮ ಮುನ್ನುಡಿಯ ಆರಂಭ ವಾಕ್ಯದಲ್ಲಿ ಅಂದಿರುವದೇನೆಂದರೆ:— "ರಾವ್‌ಸಾಹೇಬ್ ಪಿ. ಜಿ. ಹಳಕಟ್ಟಿಯವರು "ವಚನ ಶಾಸ್ತ್ರಸಾರ'' ವನ್ನೂ "ಬಸವೇಶ್ವರ ವಚನಗಳ'' ನ್ನೂ ಪ್ರಕಾಶಪಡಿಸಿ ಕನ್ನಡಿಗರಿಗೆ ಬಹಳ ಉಪಕಾರ ಮಾಡಿದರು. ಇವುಗಳಿಂದ ಬಸವಣ್ಣನವರ ಮತ್ತು ಇತರ ಮಹಿಮಾ ಪುರುಷರ ಮೂರ್ತಿಸ್ವರೂಪಗಳನ್ನು ಗ್ರಹಿಸುವದಕ್ಕೆ ಹೆಚ್ಚು ಸಹಾಯವಾಯಿತು" ಎಂದು ಬರೆದಿದ್ದು ಈ ಕಾರ್ಯವು ನಿಜವಾಗಿ ಕೊನೆಗಂಡ ಪಕ್ಷದಲ್ಲಿ ನಾನು ಈ ದಿಶೆಯಿಂದ ಈ ವರೆಗೆ ಮಾಡುತ್ತ ಬಂದ ಪ್ರಯತ್ನಗಳು ಸಾಫಲ್ಯ ಹೊಂದಿದವೆಂದು ಭಾವಿಸುತ್ತೇನೆ.

ಶ್ರೀ ಶ್ರೀನಿವಾಸಮೂರ್ತಿಯವರು ತಮ್ಮ ಗ್ರಂಥದ ಮೊದಲನೇ ಪ್ರಕರಣದಲ್ಲಿ ಬಸವಣ್ಣನವರ ಚರಿತ್ರೆ ವಿಷಯಗಳನ್ನು ಕುರಿತು ಪ್ರಸ್ತಾಪಿಸಿರುವರು. ಇದರಲ್ಲಿ ಅವರು ಈ ಬಗ್ಗೆ ಗ್ರಂಥಾಂತರಗಳಲ್ಲಿ ಇರುವ ವ್ಯತ್ಯಾಸಗಳನ್ನು ಉಲ್ಲೇಖಿಸಿ ಈಗ ಜನರಲ್ಲಿ ಪ್ರಚುರವಾಗಿರುವ ಭೀಮಕವಿಯ ಕಥಾವಿಷಯಗಳನ್ನೇ ಮುಖ್ಯವಾಗಿಟ್ಟುಕೊಂಡು ಬರೆದಿರುವರು. ಇದು ಸಹಜಿಕವಿದೆ. ಆದರೆ ಬಸವೇಶ್ವರನ ನಿಜವಾದ ಚರಿತ್ರೆಯು ಇನ್ನೂ ಹೊರಬಿದ್ದಿಲ್ಲವೆಂತಲೇ ನಾವು ಅನ್ನಬೇಕಾಗುತ್ತದೆ. ಇದಕ್ಕೆ ಕಾರಣಗಳು

ಆಗ ಉಂಟಾದ ರಾಜ್ಯಕ್ರಾಂತಿ ಮತ್ತು ಕ್ಷೋಭೆ, ಕಲಚೂರ್ಯರಾಜ್ಯದ ಅನಾವಸ್ಥೆ, ಮತ್ತು ಮುಂದಿನ ಮುಸಲ್ಮಾನರ ಘೋರ ಉಪಟಳಗಳು ಇವುಗಳ ಮೂಲಕ ಅವನ ಚರಿತ್ರೆಗಳ ನಿಜಾಂಶಗಳು ಅಡಗಿಹೋಗಿರ ಬಹುದೆಂದು ತೋರುತ್ತದೆ. ಇದಲ್ಲದೆ ಮುಂದೆ ಒಂದು ಕಾಲದಲ್ಲಿ ವೀರಶೈವ ಧಾರ್ಮಿಕ ವರ್ಗದವರು ಪ್ರಬಲಿಸಲು ಅವರು ಬಸವೇಶ್ವರನ ಭಕ್ತಿಕೃತಿಗಳಿಗೆ ಮೂಢಜನರ ತಿಳುವಳಿಕೆಗೋಸ್ಕರ ನಾನಾವಿಧ ಪವಾಡ ಗಳನ್ನು ಹಚ್ಚಿ, ಅವನ ಉಜ್ವಲ ಚರಿತ್ರಾಂಶಗಳನ್ನು ಮತ್ತಿಷ್ಟು ಮರೆಮಾಜಿರಬೇಕು. ಆದರೆ ಈ ಬಗೆಯ ಪವಾಡಗಳು ಅಂಥ ಭಕ್ತಿ ಪೂರಿತರಾದವರನ್ನು ತೃಪ್ತಿಗೊಳಿಸಿದರೂ ವಿಚಾರಾಂಶಗಳಿಗೆ ಮಹತ್ವ ಕೊಡುವ ಈಗಿನ ಶಾಸ್ತ್ರೀಯ ಯುಗದ ಕಾಲದಲ್ಲಿ ಈ ಮಹಾತ್ಮನ ಮಹತ್ವವನ್ನು ಹೆಚ್ಚಿಸಲಾರವು. ಈ ಬಗ್ಗೆ ಶ್ರೀಯುತ ಶ್ರೀನಿವಾಸ ಮೂರ್ತಿಗಳು ತಮ್ಮ ಗ್ರಂಥದಲ್ಲಿ ಅನ್ನುವದೇನೆಂದರೆಃ— "ಬಸವಣ್ಣನ ವರ ಜೀವನ ಚರಿತ್ರೆಯಲ್ಲಿ ಈ ಪವಾಡಗಳೇ ಆದ್ಯಂತಗಳಲ್ಲವೆಂದು ನಾವು ಅಭಿಪ್ರಾಯಪಡುತ್ತೇವೆ. ಧಾರ್ಮಿಕ ಪುರುಷರ ಇತಿಹಾಸಗ ಳಲ್ಲಿ ಮನುಷ್ಯ ಜೀವನವನ್ನು ಉತ್ತಮಗೊಳಿಸುವ ಸಾಧನವು ಕೇವಲ ಪವಾಡವಲ್ಲ. ಸಾಮಾನ್ಯಜನರನ್ನು ಬೆರಗುಮಾಡಿ ಅವರ ಭಕ್ತಿಶ್ರದ್ಧೆಗ ಳನ್ನು ಆಕರ್ಷಿಸಿಕೊಳ್ಳುವದಕ್ಕೆ ಪವಾಡುಗಳು ಸಹಕಾರಿಯಾದರೂ ಕೇವಲ ಪವಾಡಗಳಿಂದಲೇ ಯಾವ ಧಾರ್ಮಿಕ ಪುರುಷನ ಉನ್ನತಿಯನ್ನೂ ನಿಶ್ಚ ಯಿಸಲಾಗುವದಿಲ್ಲ. ಇತಿಹಾಸದಲ್ಲಿ ನಾವು ಈ ಬಯಲಾಟಗಳನ್ನೂ ವಾದ್ಯಘೋಷಗಳನ್ನೂ ಬಿಟ್ಟುಬಿಡಬೇಕಾಗುತ್ತದೆ." ಗ್ರಂಥಕಾರರ ಈ ಮಾತುಗಳನ್ನು ನಾವು ಸಂಪೂರ್ಣವಾಗಿ ಒಪ್ಪುತ್ತೇವೆ. ಮತ್ತು ಎಲ್ಲ ವೀರಶೈ ವರೂ ಈ ಸಂಗತಿಯನ್ನು ಮುಂದಿಟ್ಟುಕೊಂಡೇ ತಮ್ಮ ಮಹಾಪುರು ಷರ ವಿಚಾರ ವಿಶೇಷಗಳನ್ನು ಪ್ರಕಟಿಸುವದು ಅತ್ಯಾವಶ್ಯಕವೆಂದು ನಾವು ಒತ್ತಿಹೇಳದೆಇರಲಾರೆವು.

ಶ್ರೀಯುತ ಶ್ರೀನಿವಾಸಮೂರ್ತಿಯವರು ಬಸವಣ್ಣನವರನ್ನು ಅರಿ ಯಲಿಕ್ಕೆ ಬಸವಣ್ಣನವರ ವಚನಗಳೇ ಉತ್ತಮ ಸಾಧನಗಳೆಂದು ಗ್ರಹಿಸಿ, ಆ ಬಗೆಯಾಗಿ ಈ ಗ್ರಂಥವನ್ನು ಬರೆದಿರುವರು. ಬಸವಣ್ಣನನ್ನು ನಿಷ್ಕ ರ್ಷಿಸಲಿಕ್ಕೆ ಇದೊಂದು ಗಟ್ಟಿಯಾದ ಮತ್ತು ನಿಜವಾದ ಹಾದಿ ಎಂದು ನಾವು ಒಡಂಬಡುತ್ತೇವೆ. ಮತ್ತು ಗ್ರಂಥಕಾರರು ತಮ್ಮ ಗ್ರಂಥದಲ್ಲಿ

ಈ ವಿಷಯದಲ್ಲಿ ೭ ಭಾಗಗಳನ್ನು ಮಾಡಿ ಆ ಬಗೆಯಾಗಿ ಬಸವಣ್ಣನವರನ್ನು ವಿವೇಚಿಸಿರುವರು. ಈ ಭಾಗಗಳು ಯಾವವೆಂದರೆ, ಬಸವಣ್ಣನವರ ಭಕ್ತಿಸಾಧನೆ, ಅಂದರೆ ಸಂಸಾರಹ್ಯೇಯಸ್ಥಲದ ಅವರ ಹೃದಯದ್ರಾವಕವಾದ ವಿಚಾರ ಪರಂಪರೆಗಳ ವಿವೇಚನೆ, ಜಂಗಮಲಿಂಗ ಸಾಮರಸ್ಯ ವಿಷಯಗಳು, ಅಂದರೆ ಜಂಗಮಕ್ಕೂ ಅವರಿಗೂ ಇರುವ ಸಂಬಂಧ ವಿಶೇಷಗಳು, ಐಕಮತ್ಯ ಸಾಧನೆ, ಅಂದರೆ ಅವರ ಜಾತಿಭೇದಗಳನ್ನು ದೂರೀಕರಿಸಿದ ವಿಷಯಗಳು, ಅನ್ಯಮತವಿಡಂಬನೆ, ಅಂದರೆ ಬ್ರಾಹ್ಮಣ ಮೊದಲಾದ ಕರ್ಮಮಾರ್ಗಗಳನ್ನು ಖಂಡಿಸಿದ ವಿಷಯಗಳು ಬಸವಣ್ಣನವರ ಬೋಧೆ, ವಿಶೇಷವಾಗಿ ನೈತಿಕ ವಿಚಾರಗಳು, ಬಸವಣ್ಣನವರ ಮೇಲೆ ಇರುವ ದೋಷಾರೋಪಣೆಗಳ ವಿವೇಚನೆ ಅಂದರೆ ಬಿಜ್ಜಳವಧ ಮುಂತಾದ ವಿಷಯಗಳು, ಬಸವಣ್ಣನವರ ಪ್ರಭಾವಮುದ್ರೆ, ಇದರಲ್ಲಿ ಅವರ ವಿಶೇಷ ಕಾರ್ಯಗಳ ಸಾಮಾನ್ಯ ವಿವೇಚನೆ, ಈ ಪ್ರಕಾರ ಅಧ್ಯಾಯಗಳನ್ನು ಮಾಡಿದ್ದು ಈ ಪ್ರತಿಯೊಂದರಲ್ಲಿಯೂ ಬಸವಣ್ಣನವರ ಬಗ್ಗೆ ಪೂಜ್ಯಭಾವ ಯುಕ್ತವಾದ ವಿಮರ್ಶಾತ್ಮಕ ಚರ್ಚೆಗಳೂ ನಿರೂಪಣೆಗಳೂ ಬಂದಿರುತ್ತವೆ. ಇವುಗಳನ್ನು ವಾಚಕರು ಅವಶ್ಯವಾಗಿ ಓದಿ ಮನನಮಾಡಬೇಕೆಂದು ನಾವು ಅವರಿಗೆ ಒತ್ತಿಹೇಳದೆ ಇರಲಾರೆವು.

ಆದರೆ ವಚನಗ್ರಂಥಗಳನ್ನು ಓದಿ ವಿಮರ್ಶೆಮಾಡುವಲ್ಲಿ ಉಂಟಾಗುವ ಒಂದು ಅಪೂರ್ಣತೆಯನ್ನು ನಾವು ಇಲ್ಲಿ ಉಲ್ಲೇಖಿಸದೆ ಇರಲಾರೆವು. ಅದು ಏನೆಂದರೆ, ಯಾವುದಕ್ಕೆ ಇಂಗ್ಲಿಷದಲ್ಲಿ 'ಮಿಸ್ಟಿಸಿಜಮ್' ಎಂಬ ಹೆಸರು ಇದೆಯೋ (ಇದಕ್ಕೆ ನಾವು "ಶಿವಾನುಭವ" ಎಂಬ ಹೆಸರನ್ನು ಕೊಟ್ಟಿದ್ದೇವೆ.) ಆ ವಿಷಯವು ವೀರಶೈವರ ಷಟ್‌ಸ್ಥಲವಿಷಯಗಳಲ್ಲಿ ಅಡಕವಾಗಿದ್ದು ಈ ಸ್ಥಲಗಳಿಗೆ ಅನುಸರಿಸಿ ವಚನಗಳ ಜೋಡಣೆ ಇರುವದುಂಟು. ಆದರೆ ಈ ಸ್ಥಲಗಳ ಮರ್ಮವು ಇನ್ನೂ ಸಮಾಜದಲ್ಲಿ ಅಸ್ಫುಟವಾಗಿ ಪ್ರಕಟವಾಗಿರುವದರಿಂದ ಆ ದೃಷ್ಟಿಯಿಂದ ಶಿವಶರಣರ ವಿಚಾರ ವಿಶೇಷಗಳನ್ನು ಪರಾಮರ್ಶಿಸುವದು ಅವಶ್ಯವಿರುತ್ತದೆ. ಶ್ರೀಯುತ ಶ್ರೀನಿವಾಸಮೂರ್ತಿಯವರು ತಮ್ಮ ಗ್ರಂಥದಲ್ಲಿ ಬಸವಣ್ಣನವರು ಒಬ್ಬ ಸಮಾಜ ಪುರುಷರು, ಸಮಾಜ ಸುಧಾರಕರು, ಎಂಬ ದೃಷ್ಟಿಯನ್ನಿಟ್ಟುಕೊಂಡು ಅವರ ವ್ಯವಹಾರ ಸಾಮರ್ಥ್ಯ, ಮತ್ತು ಅವರ ಜನಸಂಬಂಧ ವಿಶೇಷ

ಗಳನ್ನು ಈ ಗ್ರಂಥದಲ್ಲಿ ವಿವರಿಸಿರುವರು. ಅಂದರೆ 'ಮಿಸ್ಟಿಸಿಜಮ್'ದ ದೃಷ್ಟಿಯಿಂದ ಅಥವಾ ಶಿವಾನುಭವ ವಿಚಾರದೃಷ್ಟಿಯಿಂದ ಇವು ಅವರ ಆರಂಭದ ಅಂದರೆ ಭಕ್ತಮಾಹೇಶ್ವರಸ್ಥಲದ ವಿಚಾರಗಳಾದವು. ಆದರೆ ಅವರ ಮುಂದಿನಸ್ಥಲ ವಿಷಯಕ ವಿಚಾರಗಳು ಹೆಚ್ಚಿಗೆ ಗೂಢತರವೂ ಪಾರಮಾರ್ಥಿಕವೂ ಇದ್ದು ಆ ದೃಷ್ಟಿಯಿಂದಲೂ ಬಸವಣ್ಣನವರನ್ನು ಅರಿಯುವದು ಅವಶ್ಯವಿರುತ್ತದೆ. ಹೀಗೆ ವಿವೇಚಿಸಿದ ಇನ್ನೊಂದು ಬಸವಣ್ಣನವರ ವಿಮರ್ಶಾತ್ಮಕ ಗ್ರಂಥವಾಗಬೇಕೆಂಬುವದೇ ನಮ್ಮ ಅಭಿಪ್ರಾಯ. ಷಟ್‌ಸ್ಥಲ ವಿಷಯವಿಚಕ್ಷಣರೇ ಈ ಕಾರ್ಯವನ್ನು ನಿರ್ವಹಿಸುವದು ಅವಶ್ಯಕ.

ಶ್ರೀಯುತ ಶ್ರೀನಿವಾಸಮೂರ್ತಿಯವರು ಮೊದಲಿನ ಪ್ರಕರಣದಲ್ಲಿ ಬಸವೇಶ್ವರನ ಚರಿತ್ರೆಯನ್ನು ವಿವರಿಸಿ ೨ ನೇ ಪ್ರಕರಣಲ್ಲಿ ಅವನ ಭಕ್ತಿಸಾಧನೆಯ ವಿಷಯಗಳನ್ನು ಬಹು ವಿಸ್ತಾರವಾಗಿ ಮತ್ತು ಹೃದಯಂಗಮವಾಗಿ ನಿರೂಪಿಸಿರುವರು. ವಚನಕಾರರೆಲ್ಲರೂ ಬಸವಣ್ಣನೇ ನಿಜವಾದ ಭಕ್ತನು, ಅವನೇ ಭಕ್ತಸ್ಥಲದಲ್ಲಿ ಅಗ್ರಗಣ್ಯನು ಎಂದು ಅವನನ್ನು ಹಾಡಿ ಹೊಗಳಿರುತ್ತಾರೆ. ಅವನ ಭಕ್ತಿಸ್ಥಲದ ವಚನಗಳು ಮಾಧುರ್ಯದಲ್ಲಿ ಅವನ ಇತರ ಸ್ಥಲಗಳ ವಚನಗಳಿಗಿಂತಲೂ ಅತ್ಯಂತ ಮಿಗಿಲಾದವುಗಳು. ಅವು ಓದುಗರ ಮನಸ್ಸನ್ನು ವಿದ್ರಾವಿಸುವಂಥವು ಇರುತ್ತವೆ. ಅವುಗಳಲ್ಲಿ ಉತ್ತಮವಾದವುಗಳನ್ನು ಗ್ರಂಥಕಾರರು ಆಯ್ದು ಅವುಗಳ ಸಾರವನ್ನು ವಾಚಕರೆದುರಿಗೆ ಇಡಲು ಈ ಪ್ರಕರಣದಲ್ಲಿ ಪ್ರಯತ್ನಿಸಿರುವರು. ಷಟ್‌ಸ್ಥಲಶಾಸ್ತ್ರದ ಆರು ಸ್ಥಲಗಳಲ್ಲಿ ಭಕ್ತಸ್ಥಲವು ಮೊದಲನೆಯದು. ಅದು ಪಾರಮಾರ್ಥಿಕಮಂದಿರ ಪ್ರವೇಶಕ್ಕೆ ಮೊದಲನೇ ಮೆಟ್ಟಲಾಗಿದೆ. ಈ ಸ್ಥಲದಲ್ಲಿ ಮನಸ್ಸಿನ ನೈರ್ಮಲ್ಯವನ್ನು ಹೊಂದಿದವನೇ ಮುಂದಿನ ಮೆಟ್ಟಲುಗಳನ್ನು ಹಗುರಾಗಿ ಏರಬಲ್ಲನು. ಆದ್ದರಿಂದ ಪ್ರತಿಯೊಬ್ಬ ವಚನಕಾರನು ಈ ಸ್ಥಲದಲ್ಲಿ ತನ್ನ ವಿಚಾರಗಳ, ತನ್ನ ಮನೋಭಾವನೆಗಳ, ಸಹಜ ನಿರ್ಮಲತೆಯನ್ನು ಬಿಚ್ಚಿ ಹೇಳಲು ಯಾವಾಗಲೂ ಅತ್ಯಂತ ಆತುರಪಡುತ್ತಾನೆ. ಆದರೆ ಇವುಗಳಲ್ಲಿ ಬಸವೇಶ್ವರ ವಚನಗಳು ಅತೀವ ಸುಂದರವಾಗಿರುತ್ತವೆ. ಅವು ಮನಃಕ್ಷುಬ್ಧತೆಯನ್ನು ಹೋಗಲಾಡಿಸುವಂಥವಿರುತ್ತವೆ. ಇಂಥವುಗಳನ್ನು ಗ್ರಂಥಕಾರರು ಬೇರೆಯಾಗಿ ತೆಗೆದು ಅವುಗಳನ್ನು ಇಲ್ಲಿ ವರ್ಣಿಸಿರುತ್ತಾರೆ. ಆದರೆ ಇಲ್ಲಿ ಒಂದು ಸಂಗತಿ

ಯನ್ನು ವಿವರಿಸುವದು ಅವಶ್ಯತೋರುತ್ತದೆ. ಅದೇನೆಂದರೆ, ಬಸವಣ್ಣನ ವಚನಗಳನ್ನು ತೆಗೆದುಕೊಂಡು ಅವುಗಳು ಆತನ ಸ್ವಂತ ಚರಿತ್ರೆಗೆ ಅನ್ವಯಿಸುವ ಪ್ರಯತ್ನಗಳನ್ನು ಗ್ರಂಥಕಾರರು ಇಲ್ಲಿ ಮಾಡಿದ್ದು ತೋರಿಬರುತ್ತದೆ. ಆದರೆ ಸ್ಪಷ್ಟ ಉಲ್ಲೇಖಗಳಿರದ ಹೊರ್ತು ಅವುಗಳಿಂದ ಅವನ ಜೀವಿತದಲ್ಲಿ ನಡೆದ ಸಂಗತಿಗಳನ್ನು ಊಹಿಸುವದು ತಪ್ಪಾಗುವದು. ಯಾಕಂದರೆ ಬಸವೇಶ್ವರನ ಮೊದಲ್ಗೊಂಡು ವಚನಕಾರರೆಲ್ಲರಲ್ಲಿ ಆತ್ಮನಿವೇದನಪೂರ್ವಕವಾಗಿ ಜನಸಾಮಾನ್ಯಕ್ಕೆ ಬುದ್ಧಿವಾದ ಹೇಳುವ ಪದ್ಧತಿಯುಂಟು. ಇದು ಅವರು ಉಪದೇಶಮಾಡುವ ಒಂದು ರೀತಿ, ಧರ್ಮತತ್ವಗಳನ್ನು ಬಿಂಬಿಸುವ ಅವರ ಒಂದು ಬಗೆ. ಒಟ್ಟಿಗೆ ಈ ಪ್ರಕರಣವು ಗ್ರಂಥದಲ್ಲಿ ಅತ್ಯುತ್ತಮವಾಗಿ ರಚಿತವಾಗಿದೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.

ಎರಡನೇ ಪ್ರಕರಣವು ಬಸವೇಶ್ವರನ ಜಂಗಮಲಿಂಗ ಸಾಮರಸ್ಯ ವಿಷಯವಾಗಿ ಇರುತ್ತದೆ. ಬಸವೇಶ್ವರ ಭಕ್ತಸ್ಥಲ ವಚನಗಳಲ್ಲಿ ಜಂಗಮಭಕ್ತಿಯ ವಿಷಯವಾಗಿ ವಚನಗಳು ಹೇರಳವಾಗಿವೆ. ಷಟ್‌ಸ್ಥಲದಲ್ಲಿ ಜಂಗಮಕ್ಕೆ ಒಂದು ಮಹತ್ವದ ಸ್ಥಾನವಿದ್ದು ಆರಂಭದಲ್ಲಿ ಜಂಗಮಪೂಜೆ, ಜಂಗಮ ದಾಸೋಹ, ಜಂಗಮಭಕ್ತಿ ಇಂಥವುಗಳು ವಿಶೇಷವಾಗಿ ಪ್ರಸ್ತಾಪಿಸಲ್ಪಡುವದುಂಟು. ಆದರೆ ಮುಂದಿನ ಸ್ಥಲಗಳಲ್ಲಿ ಈ ಜಂಗಮಭಕ್ತಿಯು ಒಳಕೊಂಡ ಹಾಗೆ ಆತ್ಮನಲ್ಲಿ ಲಿಂಗ ಚೈತನ್ಯವು ಹೆಚ್ಚೆಚ್ಚು ತಲೆದೋರುತ್ತ ಹೋಗುತ್ತಪೆಂದು ಷಟ್‌ಸ್ಥಲ ವಿಚಾರವು. ಈ ಚೈತನ್ಯವನ್ನು ಕಾರಣ ಶರೀರದಲ್ಲಿ ಬರಮಾಡಿಕೊಳ್ಳುದೇ ಜಂಗಮಲಿಂಗದ ಸಾಮರಸ್ಯವು. ಶ್ರೀಯುತ ಶ್ರೀನಿವಾಸ ಮೂರ್ತಿಗಳು ಬಾಹ್ಯಜಂಗಮ ಭಕ್ತಿಯ ಭಕ್ತಿಸ್ಥಲದ ವಚನಗಳನ್ನು ತೆಗೆದುಕೊಂಡು ಜಂಗಮರ ಸಾಮರಸ್ಯವನ್ನುದಹರಿಸಿರುವರು. ಇವುಗಳಲ್ಲಿ ಬಸವೇಶ್ವರನ ಟೀಕಾತ್ಮಕ ವಿವೇಚನೆಗಳೂ ಮೇಲಿಂದ ಮೇಲೆ ಬರುವದುಂಟು. ಇವುಗಳನ್ನು ಗ್ರಂಥಕಾರರು ಈ ಅಧ್ಯಾಯದಲ್ಲಿ ವಿವರಿಸಿರುವರು. ವಚನಕಾರರು ತಾವು ವಿವರಿಸುವ ವಿಷಯಗಳು ಜನರ ಮನಸ್ಸಿನಲ್ಲಿ ಚನ್ನಾಗಿ ಮನವಟ್ಟಾಗಲೆಂದು ಟೀಕಾತ್ಮಕ ರೀತಿಯಿಂದ ಅಂದರೆ ದೋಷಗಳಿವೆ ಎಂದು ಭಾವಿಸಿ ಅವುಗಳನ್ನು ಖಂಡನಾತ್ಮಕವಾಗಿ ವಿವೇಚಿಸುವದುಂಟು. ಈ ಪ್ರಕಾರವು ಬಸವೇಶ್ವರನ ವಚನಗಳಲ್ಲಿಯೂ ಅಲ್ಲಲ್ಲಿ ಕಂಡುಬರುತ್ತದೆ. ಆದರೆ ಇಂಥವುಗಳನಷ್ಟೇ ಆಯ್ದು

ಬಸವೇಶ್ವರನ ಕಾಲದಲ್ಲಿ ಜಂಗಮರೆಲ್ಲರೂ ದುರ್ವ್ಯಾಪಾರ ವೃತ್ತಿಯವರು ಇದ್ದರೆಂದು ಭಾವಿಸಲು ಮಾತ್ರ ಬರಲಾರದು. ಇದಲ್ಲದೆ ಬಸವೇಶ್ವರನ ಕಾಲಕ್ಕೆ ಜಂಗಮದ ಅರ್ಥವು ಈಗಿನಂತೆ ಒಂದು ಜಾತಿವಾಚಕವಾಗಿರಲಿಲ್ಲ. ಅದು ಒಂದು ವಿಶಿಷ್ಟ ಪಾರಮಾರ್ಥಿಕ ಸ್ಥಿತಿಯನ್ನು ನಿದರ್ಶಿಸುವ ಒಂದು ಸ್ಥಲವಾಗಿದೆ. ಈ ಸ್ಥಲದ ಜ್ಞಾನನನ್ನುಹೊಂದಿ ಉಚ್ಚ ಆಚಾರ ವಿಚಾರಗಳುಳ್ಳಂಥವರೇ ನಿಜವಾದ ಜಂಗಮರು. ವಚನ ಗ್ರಂಥಗಳ ವಿಚಾರಗಳನ್ನು ಪರೀಕ್ಷಿಸಿದರೆ ಅವುಗಳಲ್ಲಿ ಯಾವ ಬಗೆಯ ನೈತಿಕ ಅನಾಚಾರಕ್ಕೆ ಇಂಬು ಇರುವದಿಲ್ಲ. ಹೀಗಿದ್ದರೂ ಕೂಡ ಅಲ್ಲಲ್ಲಿ ಇದಕ್ಕೆ ವಿರೋಧವಾಗಿರುವ ವಚನಗಳೂ, ಪೌರಾಣಿಕ ಕಥೆಗಳೂ ಕಂಡುಬರುತ್ತವೆ. ಇಂಥವುಗಳು ಸಮಾಜದ ದುಃಸ್ಥಿತಿಯ ಕಾಲಕ್ಕೆ ಮೂಢ ಜನರ ಅಂಧಶ್ರದ್ಧೆಯನ್ನು ಹೆಚ್ಚಿಸುವ ಉದ್ದೇಶದಿಂದ ಇಲ್ಲವುಗಳನ್ನು ಕಲ್ಪಿಸಿ ಈ ಗ್ರಂಥಗಳಲ್ಲಿ ಸೇರಿಸಿದಂಥವುಗಳಿರಬಹುದೆಂದು ನಮಗೆ ತೋರುತ್ತದೆ. ಬಸವೇಶ್ವರನ ಕಾಲಕ್ಕೆ ಜಂಗಮರು ಈಗಿನಂತೆ ಭಿಕ್ಷಾ ಜೀವಿಗಳಾಗಿರದೆ, ಒಂದು ಕಾಯಕ, ಎಂದರೆ ಒಂದು ಉದ್ಯೋಗವನ್ನು ಅವಲಂಬಿಸಿ ನೀತಿ ಆಚಾರದಿಂದ ಕೂಡಿಕೊಂಡು ಆಚರಿಸುವಂಥವರಾಗಿದ್ದರು. ಈ ದೃಷ್ಟಿಯಿಂದ ಜಂಗಮತ್ವದ ಪ್ರಭಾವವನ್ನು ಕಂಡುಹಿಡಿದು, ಜಂಗಮದ ಚೈತನ್ಯವನ್ನು ತನ್ನೊಳಗೆ ಪ್ರಜ್ವಲಿಸಿಕೊಂಡು ವ್ಯವಹರಿಸಿ ಜಂಗಮ ಪದವನ್ನು ಹೊಂದುವದೇ ಜಂಗಮಲಿಂಗ ಸಾಮರಸ್ಯವೆನಿಸಿಕೊಳ್ಳುವದು. ಈ ದೃಷ್ಟಿಯಿಂದಲೇ ಈ ವಿಧದ ವಚನಗಳನ್ನು ಅಭ್ಯಾಸಿಸುವದು ಮತ್ತು ವಿಚಾರಮಾಡುವದು ಯುಕ್ತವೆಂದು ನಮಗೆ ತೋರುತ್ತದೆ.

ನಾಲ್ಕನೆಯ ಪ್ರಕರಣದಲ್ಲಿ ಬಸವಣ್ಣನವರ ಐಕಮತ್ಯ ಸಾಧನೆಯ ವಿಷಯವಿರುವದು. ಅಂದರೆ ಆತನು ಜಾತಿಭೇದವನ್ನು ನಿರಾಕರಿಸಿ ಎಲ್ಲರಲ್ಲಿಯೂ ಸಮತಾಭಾವವನ್ನು ಉಂಟಾಗುವಂತೆ ಮಾಡಿದ ಕಾರ್ಯಗಳ ವಿವರಣೆ ಇರುತ್ತದೆ. ಶ್ರೀಯುತ ಶ್ರೀನಿವಾಸ ಮೂರ್ತಿಗಳು ಈ ಬಗ್ಗೆ "ಬಸವಣ್ಣನವರು ಕೈಕೊಂಡ ಕಾರ್ಯವನ್ನು ಬುದ್ಧದೇವನ ಹೊರತು ಮತ್ತಾವ ಅವತಾರ ಪುರುಷರೂ ಮಾಡಲಿಲ್ಲ. ಯಾವ ಹೀನಜಾತಿಯವನಾದರೂ ಅವನನ್ನು ಕೈಹಿಡಿದು ಸಮಾಜದಲ್ಲಿ ಅವನಿಗೊಂದು ಸ್ಥಾನವನ್ನು ಸಮಾಜದಲ್ಲಿ ಸಮಾನವಾದ ಹಕ್ಕು ಬಾಧ್ಯತೆಗಳನ್ನು ಕಲ್ಪಿಸಿಕೊಡಲಿಲ್ಲ." ಎಂಬ ಬರೆದಿದ್ದು ಇದರಲ್ಲಿ ಪೂರ್ಣ ಸತ್ಯಾಂಶವಿದೆ.

ಹಿಂದುಸ್ತಾನದಲ್ಲಿ ವೀರಶೈವ ಧರ್ಮದ ಮತ್ತು ಬಸವೇಶ್ವರನ ಮಹತ್ವವು ಈ ವಿಶಿಷ್ಟ ಕಾರ್ಯವನ್ನು ದೃಢವಾಗಿ ಸಾರಿ ಅದನ್ನು ಜರಗಿಸಿದ್ದರಿಂದಲೇ ಉತ್ಪನ್ನವಾಗಿರುತ್ತದೆ. ಈ ಬಗ್ಗೆ ಬಸವೇಶ್ವರನ ಅನೇಕ ವಚನಗಳನ್ನು ಗ್ರಂಥಕಾರರು ಇದರಲ್ಲಿ ಕೊಟ್ಟಿದ್ದಾರೆ. ಈ ಮಹತ್ತರ ಸಮಾಜ ಸಂಸ್ಕಾರಣ ಕಾರ್ಯದಲ್ಲಿ ಬಸವೇಶ್ವರನಿಗೆ ಅನೇಕ ತೊಂದರೆಗಳು ಸಂಭವಿಸಿರಬಹುದು. ಆದರೆ ಅವನು ಅತ್ಯಂತ ಸ್ಥೈರ್ಯ ಧೈರ್ಯವುಳ್ಳವನಾಗಿ ಅವುಗಳನ್ನು ನಿರಾಕರಣೆ ಮಾಡಿದ ವಿಷಯವಾಗಿ ಮಾಹೇಶ್ವರಸ್ಥಲದಲ್ಲಿಯ ಅವನ ಅನೇಕ ತೇಜಃಪುಂಜವಾದ ವಚನಗಳನ್ನು ಗ್ರಂಥಕಾರರು ಇದರಲ್ಲಿ ಕೊಟ್ಟಿರುವರು. ಅವುಗಳನ್ನು ವಾಚಕರು ಅವಶ್ಯವಾಗಿ ಲಕ್ಷಿಸತಕ್ಕದ್ದು.

ಐದನೆಯ ಪ್ರಕರಣವು "ಅನ್ಯಮತವಿಡಂಬನೆ" ಈ ವಿಷಯವಾಗಿ ಇದೆ. ಇದರಲ್ಲಿ ಸೂತಕಾದಿಗಳನ್ನೂ ಯಜ್ಞಾದಿ ಹಿಂಸಾಕರ್ಮಗಳನ್ನೂ ಬಸವೇಶ್ವರನು ತಿರಸ್ಕರಿಸಿ ನುಡಿದ ವಚನಗಳು ಉದಹರಿಸಲ್ಪಟ್ಟಿವೆ. ವೀರಶೈವ ಧರ್ಮವು ಮಾನಸಿಕ ಮತ್ತು ನೈತಿಕ ಶ್ರೇಷ್ಠತೆಗೆ ಮನ್ನಣೆ ಕೊಡುವಂಥದಿರುತ್ತದೆ. ಅದು ಬಾಹ್ಯ ಸ್ಥೂಲ ಆಚಾರಗಳಿಗೆ ಮತ್ತು ಕೃತ್ರಿಮ ಭೇದ ವಿಭೇದಗಳಿಗೆ ಎಂದೂ ಒಪ್ಪುವದಿಲ್ಲ. ಅದರಂತೆಯೇ ಅದು ಕೇವಲ ಅಹಿಂಸಾತ್ಮಕ ಧರ್ಮವಾಗಿರುವದರಿಂದ ಯಜ್ಞಯಾಗಾದಿ ಕರ್ಮಗಳನ್ನೂ ನಿರಾಕರಿಸಿರುವದು. ಈ ಎಲ್ಲ ವಿಷಯಗಳು ಈ ಪ್ರಕರಣದಲ್ಲಿ ಬಂದಿರುತ್ತವೆ.

ಆರನೆಯ ಪ್ರಕರಣವು "ಬಸವಣ್ಣನವರ ಬೋಧೆ" ಈ ವಿಷಯವಾಗಿ ಇರುತ್ತದೆ. ಇದರಲ್ಲಿ ಮನಸ್ಸಿನ ಶುದ್ಧತೆ, ನಿಃಸ್ವಾರ್ಥತೆ, ಅಸ್ತೇಯ, ನಿರಹಂಕಾರ ಮುಂತಾದ ಶ್ರೇಷ್ಠ ಮಾನವೀ ಗುಣಗಳಿಗನುಸಾರವಾಗಿ ನಡೆಯುವದೇ ಮನುಷ್ಯನ ಜೀವಿತದ ಕರ್ತವ್ಯವೆಂಬುದು ಬಹು ಸರಸಾಗಿ ನಿರ್ದಿಷ್ಟವಾಗಿರುತ್ತದೆ. ಈ ಅಭಿಪ್ರಾಯದ ಅನೇಕ ವಚನಗಳು ಈ ಪ್ರಕರಣದಲ್ಲಿ ಬಂದಿರುತ್ತವೆ.

ಏಳನೆಯ ಪ್ರಕರಣದಲ್ಲಿ ಬಸವಣ್ಣನ ದೋಷಾರೋಪಣೆಗಳ ವಿಮರ್ಶೆಬಂದಿರುತ್ತದೆ. ಈ ದೋಷಗಳಲ್ಲಿ ಬಸವಣ್ಣನು ಸಿಕ್ಕಿದ ಜನರನ್ನು ಸೇರಿಸಿಕೊಂಡು ಗುಪ್ತ ಸೈನ್ಯವನ್ನು ಬಿಜ್ಜಳನ ವಿರುದ್ಧವಾಗಿ ಸಜ್ಜುಗೊಳಿಸುತ್ತಿದ್ದನೆಂಬುದೊಂದು ಆರೋಪವು. ಬಸವಣ್ಣನು ತನ್ನ ಶುದ್ಧಶೀಲದ

ಪ್ರಭಾವದಿಂದ ತನ್ನ ಸುತ್ತಲಿನವರೆಲ್ಲರನ್ನು ಸನ್ಮಾರ್ಗಗಾಮಿ ಗಳಾಗಿ ಮಾಡಲು ಯತ್ನಿಸುತ್ತಿದ್ದನ್ನು ಗ್ರಂಥಕಾರರು ಉಲ್ಲೇಖಿಸಿ, ಜೈನ ಗ್ರಂಥಕಾರರು ಈ ವಿಷಯವಾಗಿ ಬರೆದುದು ನಂಬಿಗೆಗೆ ಅರ್ಹವಲ್ಲೆಂಬುದನ್ನು ಅನೇಕ ವಚನಕಾರರ ವಚನಗಳಿಂದ ಸಿದ್ಧಪಡಿಸಲು ಪ್ರಯತ್ನಿಸಿದ್ದಾರೆ. ಹಾಗೆಯೇ ಬಿಜ್ಜಳನ ಭಂಡಾರ ಸೂರೆಮಾಡಿದನೆಂಬ ಅಪವಾದವಾದರೂ ಅಸತ್ಯ ವಾದುದೆಂದು ಅವನ ಅನೇಕ ವಚನಗಳನ್ನು ಗ್ರಂಥಕಾರರು ಉದಹರಿ ಸಿರುತ್ತಾರೆ. ಬಸವಣ್ಣನು ಮಾಡಿದ ವರ್ಣಸಂಕರ ಕಾರ್ಯವು ಅವನ ಮೇಲೆ ಹೊರಿಸುವದು ಮತ್ತೊಂದು ದೋಷವು. ಈ ವಿಷಯದಲ್ಲಿ ಮೂರು ಪಕ್ಷಗಳಿವೆ ಎಂದು ಗ್ರಂಥಕಾರರು ತಮ್ಮ ಗ್ರಂಥದಲ್ಲಿ ಬರೆದಿರುವರು. ಅವು ಯಾವವೆಂದರೆ, ಬಸವಣ್ಣನು ಹೀಗೆ ಮಾಡಿದ್ದು ಅನ್ಯಾಯವೆಂದೂ ಶಾಸ್ತ್ರವಿರೋಧವೆಂದೂ ಹೇಳುವವರದೊಂದು ಪಕ್ಷ, ಬಸವಣ್ಣನವರು ನೀಚ ಜಾತಿಯವರಿಗೆ ಲಿಂಗಧಾರಣೆ ಮಾಡಿಸಲೇ ಇಲ್ಲವೆಂದು ಹೇಳು ವವರದೊಂದು ಎರಡನೇ ಪಕ್ಷ, ಬಸವಣ್ಣನವರು ಮಾಡಿದುದು ನ್ಯಾಯವೂ ಶಾಸ್ತ್ರಸಮ್ಮತವೂ ಆಗಿರುವದೆಂದು ತಿಳಿದವರದೊಂದು ಮೂರನೇ ಪಕ್ಷ, ಹೀಗೆ ವೀರಶೈವ ಸಮಾಜದಲ್ಲಿ ಪಕ್ಷಗಳಿವೆ ಎಂದು ಗ್ರಂಥಕಾರರು ಭಾವಿ ಸಿರುತ್ತಾರೆ. ಆದರೆ ಈ ಪಕ್ಷ ವಿಚಾರಗಳನ್ನು ಪಂಚಾಚಾರ್ಯ ಪಕ್ಷದವ ರೆಂದು ಹೇಳಿಕೊಳ್ಳುವ ಹಲಕೆಲವರು ಈಚೀಚೆಗೆ ಎಬ್ಬಿಸಿದ ಗೊಂದಲ ವನ್ನು ನೋಡಿ ಶ್ರೀಯುತ ಶ್ರೀನಿವಾಸಮೂರ್ತಿಗಳು ಹೀಗೆ ಬರೆದಿರಬ ಹುದೆಂದು ತೋರುತ್ತದೆ. ಆದರೆ ಈ ಬಗೆಯ ಭಿನ್ನಾಭಿಪ್ರಾಯಗಳು ವೀರಶೈವ ಧರ್ಮದಲ್ಲಿ ಇಲ್ಲವೆಂಬುದು ಅದರ ಪೂರ್ವದ ಯಾವ ಗ್ರಂಥ ವನ್ನು ತೆಗೆದುಕೊಂಡು ನೋಡಿದರೂ ತಿಳಿದುಬರುವಂತೆ ಇದೆ. ಬಸ ವಾದಿ ಪ್ರಮಥರ ವಿಚಾರಗಳಂತೂ ಈ ವಿಷಯದಲ್ಲಿ ಖಂಡಿತ ಅಭಿಪ್ರಾ ಯವುಳ್ಳವಾಗಿವೆ. ಅವುಗಳಲ್ಲಿ ಈ ಬಗ್ಗೆ ಲವಲೇಶವಾದರೂ ಭಿನ್ನಾಭಿ ಪ್ರಾಯಗಳು ಇಲ್ಲ. ಆದ್ದರಿಂದ ಈ ಬಗೆಯ ವಿಚಾರಗಳಿಗೆ ಶ್ರೀಯುತ ಶ್ರೀನಿವಾಸಮೂರ್ತಿಗಳು ತಮ್ಮ ಗ್ರಂಥದಲ್ಲಿ ಯಾವುದೊಂದು ಮಹತ್ವ ವನ್ನು ಕೊಡುವ ಅವಶ್ಯವಿದ್ದಿದ್ದಿಲ್ಲ. ಸ್ವಾಮಿಘಾತುಕರೆಂಬ ದೋಷಾ ರೋಪಣೆಯು ಬಸವಣ್ಣನವರ ಮೇಲಿದ್ದ ಮತ್ತೊಂದು ಅಪವಾದವು. ಈ ವಿಷಯವನ್ನು ಶ್ರೀಯುತ ಶ್ರೀನಿವಾಸಮೂರ್ತಿಗಳು ಬಹು ವಿಸ್ತಾರವಾಗಿ ತಮ್ಮ ಗ್ರಂಥದಲ್ಲಿ ವಿವೇಚಿಸಿರುವರು. ಇದೊಂದು ವಿಚಾರಮಾಡತಕ್ಕ

ಮಹತ್ವದ ವಿಷಯುವದೆ. ಇದರಲ್ಲಿ ಗ್ರಂಥಕಾರರು ಬಸವೇಶ್ವರನ ಆಗಿನ ಪರಿಸ್ಥಿತಿಯನ್ನು ಇಲ್ಲಿ ವಿವರಿಸಿ ಅನ್ನುವದೇನಂದರೆ, ಬಸವಣ್ಣನವರು ಕೈಕೊಂಡು ಮತೋದ್ಧಾರ ಕಾರ್ಯಕ್ಕೆ ರಾಜಕೀಯ ಛಾಯೆಯು ಅನಿರೀಕ್ಷಿತವಾಗಿ ಉಂಟಾಯಿತು, ಪರಮತದ್ವೇಷವು ಪರಸ್ಪರ ಬೆಳೆಯಿತು, ಚತುರ್ವರ್ಣಗಳ ಕಟ್ಟು ಮುರಿದಿದ್ದಕ್ಕೆ ಸಮಾಜ ಸಮಾಜಗಳಲ್ಲಿ ಬೇಗೆಯು ಉತ್ಪನ್ನವಾಯಿತು, ಬಿಜ್ಜಳನಿಗೂ ಬಸವಣ್ಣನಿಗೂ ಮನಸ್ತಾಪ ಪ್ರಸಂಗಗಳು ಆಗಿಂದಾಗ್ಗೆ ಹೆಚ್ಚಿದವು, ಮುಂದೆ ಬಿಜ್ಜಳನು ಇಬ್ಬರು ಶಿವಶರಣರನ್ನು ಕ್ರೌರ್ಯದಿಂದ ಹಿಂಸಿಸಿದನು, ಈ ಸ್ಥಿತಿಯಲ್ಲಿ ಧರ್ಮೋದ್ಧಾರ ಕಾರ್ಯನಿರತನಾದ ಬಸವಣ್ಣನಿಗೂ ಬಿಜ್ಜಳನಿಗೂ ವಿರೋಧಭಾವವು ಸಹಜಿಕವಾಗಿಯೇ ಉತ್ಪನ್ನವಾಯಿತು. ಈ ರೀತಿಯಾಗಿ ವಿರೋಧಭಾವಗಳು ಬೆಳೆಯುತ್ತ ಬೆಳೆಯುತ್ತ ಕಡೆಗೆ ಬಿಜ್ಜಳನ ಕೊಲೆಯಾಗಿರಬಹುದು ಎಂದು ವಿವರಿಸಿದ್ದಾರೆ. ವೀರಶೈವ ಪುರಾಣಗಳಲ್ಲಿ ಈ ಬಗೆಯಾಗಿ ಜರಗಿದ್ದರ ಉಲ್ಲೇಖವಿರುವದು ನಿಜವು. ಆದರೆ ಕೆಲವು ವೀರಶೈವ ಮತ್ತು ಜೈನ ಗ್ರಂಥಗಳಲ್ಲಿ ಬಿಜ್ಜಳನ ಕೊಲೆಯಾಗಿಲ್ಲವೆಂಬ ಉಲ್ಲೇಖಗಳೂ ದೊರೆಯುತ್ತವೆ. ಇವಾದರೂ ವಿಚಾರಾರ್ಹವಾಗಿವೆ ಆದ್ದರಿಂದ ಈ ವಿಷಯುವನ್ನು ಈಗಳೇ ನಿರ್ಧಾರವಾಗಿ ಹೇಳಲು ಬರಲಾರದೆಂದು ನಮಗೆ ತೋರುತ್ತದೆ. ಈ ವಿಷಯುದ ಬಗ್ಗೆ ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ಪ್ರಸಿದ್ಧವಾದ ಲೇಖಗಳನ್ನು ವಾಚಕರು ಅವಶ್ಯವಾಗಿ ನೋಡಬೇಕು

ಎಂಟನೆಯ ಪ್ರಕರಣದಲ್ಲಿ "ಬಸವಣ್ಣನವರ ಪ್ರಭಾವಮುದ್ರೆ" ಎಂಬ ಹೆಸರಿನಿಂದ ವಿಷಯುಗಳು ನಿರೂಪಿತವಾಗಿದ್ದು, ಇವುಗಳಲ್ಲಿ ಕಾಯಕಗಳ ಮಹತ್ವ, ಸ್ತ್ರೀಯರ ಮಹತ್ವ, ವಿಧವೆಗಳನ್ನು ಉಚಿತರೀತಿಯಿಂದ ನಡಿಸುವದು, ಸದಾಚಾರವರ್ತನೆ, ಗದ್ಯಗ್ರಂಥಗಳ ಪ್ರಸಾರ, ಅಹಿಂಸಾತತ್ವಪ್ರಚಾರ ಮುಂತಾದ ವಿಷಯುಗಳನ್ನು ಗ್ರಂಥಕಾರರು ವಿವರಿಸಿರುವರು. ಇವುಗಳನ್ನೆಲ್ಲ ವಾಚಕರು ಗ್ರಂಥವನ್ನು ತರಿಸಿಯೇ ಓದಬೇಕು. ಈ ವಿಷಯುಗಳು ಬಹು ಹೃದಯಂಗಮವೂ ಬೋಧಪ್ರದವೂ ಆಗಿರುತ್ತವೆ. ಮತ್ತು ಕಡೆಗೆ ಈ ಕೆಳಗೆ ಕಾಣಿಸಿದ ಮಾತುಗಳನ್ನು ಗ್ರಂಥಕಾರರು ಹೇಳಿ ಈ ಗ್ರಂಥವನ್ನು ಮುಗಿಸಿರುವರು. ಅವುಗಳನ್ನು ಪ್ರತಿಯೊಬ್ಬ ವೀರಶೈವನು ಇಷ್ಟೇಅಲ್ಲ, ಪ್ರತಿಯೊಬ್ಬ ಕರ್ನಾಟಕಸ್ಥನು ಅವಧಾನಿಸಬೇಕು.

"ಅಭಿಮಾನಶಾಲಿಗಳಾದ ವೀರಶೈವ ಮಹಾಜನಗಳು ಬಸವಣ್ಣನವರನ್ನು ಕೇವಲ ನಂದೀಶ್ವರಾವತಾರವೆಂದು ಭಾವಿಸಲಿ; ಅಭಿಜ್ಞರು ಅವ

ರೆನ್ನು ಮಾನವರಾಗಿ ಜನಿಸಿ ದೇವತ್ವಕ್ಕೆ ಏರಿದ ಮಹಿಮಾಪುರುಷರೆಂದೇ ಭಾವಿಸಲಿ. ಬಸವಣ್ಣನವರು ಮಾಡಿರುವ ಕಾರ್ಯನಿರ್ವಾಹದಿಂದ ಅವರನ್ನು ನಾವು ಕಾರಣಪುರುಷರೆಂದು ಹೇಳಲೇಬೇಕು. ಪ್ರಪಂಚದ ಇತಿಹಾಸದಲ್ಲಿ ಮತಸ್ಥಾಪಕರೂ ಮತೋದ್ಧಾರಕರೂ ಯಾವುದೊಂದು ಚಿತ್ಕಳೆಯನ್ನು ಪಡೆದು ಭಗವಂತನ ಸಂಕಲ್ಪಕ್ಕಾಗಿ ಅವತರಿಸಿದರೋ, ಅದೇ ಚಿತ್ಕಳೆಯನ್ನು ಪಡೆದು ಬಸವಣ್ಣನವರೂ ಅವತರಿಸಿದರು. ಮತಸ್ರಚಾರಕರಾಗಿ ಅವರ ಸ್ಥಾನವು ಉನ್ನತವಾಗಿದೆ. ತತ್ವಬೋಧಕರಾಗಿ ಅವರ ಸ್ಥಾನವು ಇನ್ನೂ ಉನ್ನತವಾಗಿದೆ. ಭಕ್ತರಾಗಿ ಅವರ ಸ್ಥಾನವು ಅತ್ಯುನ್ನತವಾಗಿದೆ. ಇಂತಹ ಮಹಾತ್ಮರು ಕರ್ಣಾಟಕದೇಶದಲ್ಲಿ ಅವತರಿಸಿದರು. ಕರ್ನಾಟಕದ ಕೀರ್ತಿಯು ಅವರಿಂದಲೂ ಹೆಚ್ಚಿರುವುದು. ಸಮಾಜಸುಧಾರಣೆಗಾಗಲಿ, ರಾಷ್ಟ್ರಸುಧಾರಣೆಗಾಗಲಿ, ಅವರು ಹಾಕಿರುವ ಮೇಲ್ಪಂಕ್ತಿಯನ್ನು ಇಂದಿಗೂ ನಾವು ಅನುಸರಿಸಬೇಕಾಗಿದೆ. ಅವರ ವಚನಗಳಿಂದ ಅವರ ಮೂರ್ತಸ್ವರೂಪವನ್ನು ಚಿತ್ರಿಸಿ, ಅವರ ಕಾರ್ಯಕಲಾಪಗಳಿಂದ ಅವರ ಮಹಿಮೆಯನ್ನು ರೂಪಿಸಿ, ಲೋಕದ ಮುಂದೆ ನಿಜವಾದ ಬಸವಣ್ಣನವರನ್ನು ಸ್ಥಾಪಿಸುವುದೇ ಅವರಿಗೆ ನಾವು ನ್ಯಾಯವಾಗಿ ಸಲ್ಲಿಸುವ ಭಕ್ತಿಯ ಕಾಣಿಕೆಯಾಗಿರುತ್ತದೆ. ಬಸವಣ್ಣನವರು ವೀರಶೈವರಿಗೆ ಮಾತ್ರ ಸಂಬಂಧಪಟ್ಟವರಲ್ಲ; ಕರ್ಣಾಟಕಕ್ಕೆ ಮಾತ್ರ ಸಂಬಂಧಪಟ್ಟವರೂ ಅಲ್ಲ, ಅವರು ಇಡೀ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ, ಸಂಬಂಧಪಟ್ಟ ಮಹಾಪುರುಷರು.”

ಎಂದು ಗ್ರಂಥಕಾರರು ಬಸವಣ್ಣನವರ ಕಾರ್ಯಕಲಾಪಗಳನ್ನೂ ವಿಚಾರ ಪರಂಪರೆಗಳನ್ನೂ ಲೋಕೋತ್ತರ ಭಕ್ತಿಭಾವವನ್ನೂ ವರ್ಣಿಸಿ ಆ ಮಹಾತ್ಮನನ್ನು ರೂಪಿಸಿ ಅವನ ಶುದ್ಧ ನಡಾವಳಿಗಳನ್ನೂ ನಮ್ಮ ಮುಂದೆ ತಂದು ಇಟ್ಟದ್ದಕ್ಕೆ ನಾವು ಗ್ರಂಥಕಾರರನ್ನು ಅತ್ಯಂತವಾಗಿ ಪ್ರಶಂಸಿಸುತ್ತೇವೆ.

ಪ್ರತಿಯೊಬ್ಬ ಕನ್ನಡಿಗನು, ಅದರಲ್ಲಿ ವಿಶೇಷವಾಗಿ ಪ್ರತಿಯೊಬ್ಬ ವೀರಶೈವನು ಶ್ರೀಯುತ ಶ್ರೀನಿವಾಸಮೂರ್ತಿಗಳು ಬರೆದ ಈ ಮಹತ್ವದ ಗ್ರಂಥವನ್ನು ತರಿಸಿ ಓದಬೇಕೆಂದು ನಾವು ಇಲ್ಲಿ ಒತ್ತಿ ಹೇಳದೆ ಇರಲಾರೆವು.

---

# ಬಸವಣ್ಣನ ವಚನಗಳು.

(ಮಿಥಿಕ್‌ಸೋಸಾಯಿಟಿಯು ಪತ್ರಿಕೆಯಲ್ಲಿಯ ಲೇಖದ ವಿಮರ್ಶೆ.)

"*Sayings of Basavanna*" ಬಸವಣ್ಣನ ವಚನಗಳು ಎಂಬ ಶಿರೋಲೇಖದ ಕೆಳಗೆ ಶ್ರೀಯುತ ಮಾಸ್ತಿ ವೆಂಕಟೇಶ ಅಯ್ಯಂಗಾರ ಎಮ್. ಎ. ಇವರು ಬೆಂಗಳೂರು ಮಿಥಿಕ್ ಸೊಸಾಯಿಟಿಯ ತ್ರೈಮಾಸಿಕ ಪತ್ರಿಕೆಯಲ್ಲಿ ಇಂಗ್ಲಿಷ ಭಾಷೆಯಲ್ಲಿ ಒಂದು ಸುಂದರವಾದ ಲೇಖವನ್ನು ಬರೆದಿರುವರು. ಅವರು ಇವರಲ್ಲಿ ಬಸವಣ್ಣನವರ ಅನೇಕ ವಚನಗಳನ್ನು ಇಂಗ್ಲಿಷ ಭಾಷೆಯಲ್ಲಿ ಭಾಷಾಂತರಿಸಿ ಅವರ ವಿಚಾರಾಂಶಗಳನ್ನು ಜನರ ಮುಂದಿಟ್ಟಿದ್ದಾರೆ. ಈ ವಚನಗಳ ಇಂಗ್ಲಿಷ ಭಾಷಾಂತರವು ಉತ್ತಮವಾಗಿದ್ದು, ಅವನ ಸುಲಭ ಸರಳ ಭಾಷಾಶೈಲಿಯು ಇದರಲ್ಲಿ ಬಹು ಚನ್ನಾಗಿ ಮೂಡಿರುತ್ತದೆ.

ಶ್ರೀಯುತ ಮಾಸ್ತಿ ವೆಂಕಟೇಶಯ್ಯಂಗಾರರವರು ತಮ್ಮ ಲೇಖದಲ್ಲಿ 'ಬಸವಣ್ಣ' ಎಂಬುವದೇ ವಾಡಿಕೆಯ ಶಬ್ದವಾಗಿದ್ದು ಹೀಗೆಯೇ ಆತನು ಕರೆಯಲ್ಪಟ್ಟಿರಬಹುದೆಂದು ಊಹೆಪಡುತ್ತಾರೆ. ಆದರೆ ಉತ್ತರಕರ್ನಾಟಕಸ್ತರಲ್ಲಿ "ಅಣ್ಣಾ" ಅಥವಾ "ಅಣ್ಣನವರು" ಎಂದು ಬಹುಮಾನವಾಚಕವಾಗಿ ಕರೆಯುವ ಪದ್ಧತಿ ಇದ್ದು ಹಾಗೆಯೇ ಅವರು ಬಸವಣ್ಣನಿಗೆ ಸಂಬಂಧಿಸಿ ಕರೆದಿರಬೇಕು. ಆದರೆ ಈ ಶಬ್ದವು ಶಿಲಾಲೇಖಗಳಲ್ಲಿ ಬಂದಕಾಲಕ್ಕೆ ಅವುಗಳಲ್ಲಿ ಈತನು "ಬಸವ" ಎಂದು ಮಾತ್ರ ಕರೆಯಲ್ಪಟ್ಟಿದ್ದಾನೆ. ಆದ್ದರಿಂದ ಈ ಹೆಸರೇ ಬಸವನ ಅಂಕಿತವಾಗಿರಬೇಕೆಂದು ನಮಗೆ ತೋರುತ್ತದೆ. ಆದರೆ ಆತನು ಹಿಂದುಗಡೆ ಶ್ರೇಷ್ಠ ಅಧಿಕಾರವನ್ನು ಹೊಂದಿದ ಬಳಿಕ ಬಸವಗಂಡಾಧಿಪ, ಬಸವರಾಜ, ಬಸವರಸ, ಬಸವೇಶ್ವರ ಎಂದು ಮೊದಲಾಗಿ ಕರೆಯಲ್ಪಟ್ಟಿರಬೇಕೆಂದು ತೋರುತ್ತದೆ.

ಶ್ರೀಯುತ ಮಾಸ್ತಿ ವೆಂಕಟೇಶ ಅಯ್ಯಂಗಾರರವರು ಬಸವನ ನಿಜೇತಿಹಾಸವು ತಿಳಿದಿಲ್ಲವೆಂಬುದನ್ನು ಉಲ್ಲೇಖಿಸಿ ಅವನ ವಚನಗಳಿಂದ ಆತನ ಹೃದ್ಗತವನ್ನು ಚನ್ನಾಗಿ ಅರಿಯಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ. ಇವು ಅವನ ಮನಸ್ಸಿನ ತರಂಗಗಳನ್ನು ಹೊರಗೆಡವುವಂಥವು ಇವೆ, ಅವು ಚಿಕ್ಕನಾದ ಗದ್ಯ ರಚನೆಗಳು, "ಮಾರ್ಕಸ ಆರೇಲಿಯಸ್" ಅಥವಾ "ಇಮಿಟೇಶನ ಆಫ ಕ್ರಾಯಿಸ್ತ" ಈ ಗ್ರಂಥಗಳಲ್ಲಿಯ ಆತ್ಮನಿವೇ

ದನೆಯ ಶೈಲಿಯನ್ನು ಹೋಲುವಂಥವು ಇವೆ, ಅವುಗಳೊಳಗಿಂದ ಯಾವ ಕಲ್ಪನಾತರಂಗಗಳು ಹೊರಹೊಮ್ಮಿದರೂ ಅವು ಮಾನವೀ ಸ್ವಭಾವದ ಶ್ರೇಷ್ಠತೆಯನ್ನು ಹೊರಗೆಡವುತ್ತವೆ, ಅವು ದೀನವಾಣಿಯಿಂದ ನುಡಿದವಿದ್ದರೂ ಕ್ರಿಯೆಯಲ್ಲಿ ಅತ್ಯಂತ ಸ್ಥೈರ್ಯವುಳ್ಳವು ದೇವರಲ್ಲಿ ವಿಶ್ವಾಸ ಭಾವವನ್ನು ಬೀರುವಂಥವು, ಉತ್ತಮತನಕ್ಕೋಸ್ಕರ ಹೆಣಗಾಡುವಂಥವು, ದಯಾ ಪ್ರೀತಿ ಭಾವವನ್ನು ತೋರಿಸುವಂಥವು ಇವೆ ಎಂದು ಅವುಗಳನ್ನು ಶ್ಲಾಘಿಸಿರುತ್ತಾರೆ.

ಶ್ರೀಯುತ ವೆಂಕಟೇಶಯ್ಯಂಗಾರರವರು ಸುಮಾರು ೪೦ ಉತ್ತಮ ವಚನಗಳನ್ನು ಆಯ್ದು ಅವುಗಳ ಭಾಷಾಂತರವನ್ನು ಇಂಗ್ಲಿಷನಲ್ಲಿ ಮಾಡಿ ಬಸವಣ್ಣನ ಉದಾತ್ತಭಾವಗಳನ್ನೂ ಶ್ರೇಷ್ಠ ವಿಚಾರ ಪರಂಪರೆಗಳನ್ನೂ ತಮ್ಮ ಲೇಖದಲ್ಲಿ ವಿವರಿಸಿದ್ದಾರೆ. ಅವುಗಳನ್ನು ಹೀಗೆ ವಿವರಿಸಿ ಅವರು ಅನ್ನುವದೇನೆಂದರೆ:—

ಈ ವಚನಗಳು ಬಸವಣ್ಣನವರ ಸಮೀಪಕ್ಕೆ ನಮ್ಮನ್ನು ಒಯ್ಯುತ್ತವೆ. ಇಂಥ ವಚನಗಳನ್ನು ಮಾಡಿದಂಥ ಆ ಮಹಾತ್ಮನ ವಿಷಯದಲ್ಲಿ ಮನಸ್ಸಿನಲ್ಲಿ ಪ್ರೀತಿ ಮತ್ತು ಆದರ ಭಾವಗಳು ಉತ್ಪನ್ನವಾಗುತ್ತವೆ. ಆತನು ಸತ್ಯಶೋಧನೆಗಾಗಿ ತಳಮಳಿಸುವವನಾಗಿ ಅದಕ್ಕೋಸ್ಕರ ಸ್ವಾರ್ಥತೆಯನ್ನು ಸಂಪೂರ್ಣ ತ್ಯಜಿಸಿದವನಾಗಿರಬೇಕು, ಮಾನವೀ ಜಾತಿಗೋಸ್ಕರ ಪ್ರೀತಿ ದಯಾ ಭಾವವುಳ್ಳವನಾಗಿರಬೇಕು, ಇಷ್ಟೇ ಅಲ್ಲ, ಇಡೀ ಪ್ರಾಣಿ ಮಾತ್ರಕ್ಕೂ ಕನಿಕರತೆಯನ್ನು ತಾಳಿದವನಾಗಿರಬೇಕು ಎಂದು ತೋರುತ್ತದೆ. ಈ ಭಾವಗಳೇ ಬಸವಣ್ಣನ ಧಾರ್ಮಿಕ ತತ್ವಗಳ ತಳಹದಿಯು. ಯಾವ ವಿಚಾರಗಳು ಜೀಜಸ ಕ್ರಾಯಿಸ್ತನ ಪ್ರಾರ್ಥನೆಗಳಲ್ಲಿ ಕಾಣಬರುತ್ತವೋ ಅಥವಾ ಸೇಂಟ ಅಗಸ್ಟಾಯಿನನ ಆತ್ಮನಿವೇದನೆಯಲ್ಲಿ ತೋರುತ್ತವೋ, ನಮ್ಮಾಳ್ವರ್ ಹಿಡಿದು ಪುರಂದರದಾಸನವರೆಗಿನ ವೈಷ್ಣವ ದಾಸರ ಪದ್ಯಗಳಲ್ಲಿ ತುಂಬಿರುತ್ತವೋ ಅವುಗಳೇ ಈ ವಚನಗಳ ಭಾವದಲ್ಲಿ ತುಂಬಿತುಳುಕುತ್ತವೆ ಎಂದು ಲೇಖಕರು ಹೇಳಿರುತ್ತಾರೆ.

ಈ ಪ್ರಕಾರ ಶ್ರೀಯುತ ಮಾಸ್ತಿ ವೆಂಕಟೇಶಯ್ಯಂಗಾರರು ಬಸವಣ್ಣನ ಬಗ್ಗೆ, ಆತನ ಆಚಾರ ವಿಚಾರಗಳಬಗ್ಗೆ ಉತ್ಕೃಷ್ಟರೀತಿಯಿಂದ ತಮ್ಮ ಲೇಖದಲ್ಲಿ ವಿವರಿಸಿರುವರು. ಅವೆಲ್ಲವೂ ಬಹು ವಿಚಾರಾರ್ಹವಾಗಿವೆ. ವಾಚಕರು ಅವುಗಳನ್ನು ಅವಶ್ಯವಾಗಿ ಮನನಮಾಡಿಕೊಂಡು ಮೂಲ ಕನ್ನಡ ಗ್ರಂಥವನ್ನೇ ಚನ್ನಾಗಿ ನೋಡಬೇಕೆಂದು ನಮ್ಮ ಸೂಚನೆ.

ಮತ್ತು ಕಡೆಗೆ ಲೇಖಕರು ಅಂದಿರುವದೇನೆಂದರೆ:— ವೀರಶೈವ ವಚನಕಾರರ ವಚನಗಳು ಕೆಲವರ್ಷಗಳ ಹಿಂದೆ ಅತ್ಯಂತ ಅಶುದ್ಧವಾಗಿ ಹೊಲಸು ಕಾಗದದ ಮೇಲೆ ಅಚ್ಚಾಗಿ ಪೇಟೆಬಾಜಾರದಲ್ಲಿ ಮಾರಲಿಕ್ಕೆ ದೊರೆಯುತ್ತಿದ್ದವು. ಆದರೆ ಈಗ ವಿಜಾಪುರದ ರಾ॥ ಸಾ॥ ಪಿ. ಜಿ. ಹಳಕಟ್ಟಿಯವರು ಇವುಗಳ ಶುದ್ಧ ಪ್ರತಿಗಳನ್ನು ಪ್ರಸಿದ್ಧಪಡಿಸುವ ಕಾರ್ಯವನ್ನು ಕೈಕೊಂಡು ಈ ವಚನಗಳನ್ನು ಮನೋಹರವಾದ ರೀತಿಯಿಂದ ಅಚ್ಚುಹಾಕಿಸಿ ಯಾವ ಆದರ ಮತ್ತು ಲಕ್ಷವನ್ನು ಈ ಕನ್ನಡ 'ಶಿಕ್ಷಕ'ರಿಗಾಗಿ ಅವಶ್ಯವಾಗಿ ಪೂರೈಸಬೇಕಾಗಿತ್ತೋ ಹಾಗೆ ಆಗುವಂತೆ ಶ್ರೀಯುತ ಹಳಕಟ್ಟಿಯವರು ಮಾಡಿದ್ದಕ್ಕೆ ಎಲ್ಲ ಕನ್ನಡಿಗರು ಅವರಿಗೆ ಋಣಿಯಾಗಿದ್ದಾರೆ ಎಂದು ಹೇಳಿರುವರು.



## ಶ್ರೀ ಬಸವೇಶ್ವರನ ಮೇಲಿನ ಪದ.

(ಲೇಖಕ:— ಕೀರ್ತನಸರಸ್ವತಿ-ಗುರುಲಿಂಗವ್ವಾ ಬಾಗವಾಡಿ-ಬನಾರಸ. ೧.)

ಜೋ ಜೋ ಜೊ ಜೊ ಬಸವರಾಜೇಂದ್ರಾ। ಜೋ ಜೋ ಜೊ ಜೊ ಸದ್ಗುಣಸಾಂದ್ರಾ। ಜೋ ಜೋ ಭಕ್ತಗಣ ದಿವಿಜೇಂದ್ರಾ। ಪಾಡೀ। ಜೋ ಜೋ ಶಿವಮತಶರಧಿಚಂದ್ರಾ ಜೋ ಜೋ ॥೧॥

ಮೇದಿನಿಗಧಿಕ ಭರತಖಂಡದಲ್ಲಿ। ಮುದದಿಬಾಗವಾಡಿ ಎಂಬ ಗ್ರಾಮದಲ್ಲಿ। ಮಧುವರಸ ಮಾದಲಾಂಬಿಕೆಯ ಗರ್ಭದಲ್ಲಿ। ಬಂದು। ಉದಯಿಸಿದ ಶ್ರೀಮಹಾದೇವನಾಜ್ಞೆಯಲ್ಲಿ। ಜೋ ಜೋ ॥೨॥

ಹುಟ್ಟಿದಾಗಳೆ ಸಂಗಮೇಶನು ಬಂದು। ಇಟ್ಟುಹಸ್ತವ ಶಿಶುವಿನ ಮಸ್ತಕದಲ್ಲಂದು। ಕೊಟ್ಟು ದೀಕ್ಷೆಯ ಲಿಂಗಕಟ್ಟಿದರಂದು। ಮಹಾ ಶ್ರೇಷ್ಠ ಶಿವಮಂತ್ರವ ಬೋಧಿಸಿದರಂದು ಜೋ ॥೩॥

---

೧. ಇವರು ಕವಿಗಳಿದ್ದು, ಅನೇಕ ವರ್ಷಗಳವರೆಗೆ ಕೀರ್ತನಗಳನ್ನು ತಮ್ಮ ಪತಿಯೊಂದಿಗೆ ಮಾಡುತ್ತಲಿದ್ದರು. ಆದರೆ ಅವರ ಪತಿಯು ತೀರಿಕೊಂಡ ಬಳಿಕ ಈಗ ಏಕಾಂಗಿನಿಯರಾಗಿ ಪರಮಾರ್ಥ ಚಿಂತನೆಯಲ್ಲಿ ಬನಾರಸದಲ್ಲಿ ಕಾಲಕಳೆಯುತ್ತಲಿರುವರು. ಇವರು ಕೀರ್ತನತರಂಗಿಣಿ ಎಂಬ ಗ್ರಂಥವನ್ನು ರಚಿಸಿರುವರು. ಇವರ ಮೂಲ ಗ್ರಾಮವು ಬೆಳಗಾವಿಯ ಸಮೀಪವಿರುವ ಹೊಸಟ್ಟಿಯು. ಅವರ ಪ್ರಾರ್ಥನೆಯ ಮೇರೆಗೆ ಅವರ ಪದ್ಯಗಳನ್ನು ಇಲ್ಲಿ ಕೊಟ್ಟಿದ್ದಾಗಿದೆ. ಸಂಪಾದಕ.

ಹೋದ ಸಂಗವ ಪ್ರಮಥಗಣಸಹಿತ। ಮಾದಲಾಂಬಿಕೆ ಎಚ್ಚರಾಗಿ ನೋಡುತ। ಇದು ಏನು ಸೋಜಿಗವೆಂದು ನುಡಿವುತ! ಬಹು। ಮುದದಿಂದ ಮಧುವರಸನ ಕರೆಸಿ ಪೇಳುತ। ಜೋ ॥೪॥

ಆದ ವೃತ್ತಾಂತವ ಆದರದಿ ಕೇಳಿ। ಮಧುವರಸ ಮನದೊಳು ಸಂತೋಷತಾಳಿ। ಇದು ನಮ್ಮಪುಣ್ಯ ಒಲಿದನು ಚಂದ್ರಮೌಳಿ। ಎಂದು। ಸದು ಹೃದಯನು ತನ್ನ ಸತಿಯಳಿಗೆ ಪೇಳಿ। ಜೋ ॥೫॥

ಬಡವನಿಗೆ ಭಾಗ್ಯದ ನಿಧಿ ದೊರೆದಂತೆ। ಮಡದಿ ಅಗಲಿದ ಪುರುಷ ಮನೆಗೆ ಬಂದಂತೆ। ನಡೆಯಲಾರದವಂಗೆ ರಥವು ಸಿಕ್ಕಂತೆ। ಹೀಗೆ। ಅಡಿಗಡಿಗಾನಂದವಾಗಿ ದಂಪತಿಗೆ। ಜೋ ॥೬॥

ಕಂದಜನಿಸಿದನೆಂದು ಆನಂದದಿಂದ। ಮಂದಿರವ। ಶೃಂಗರಿಸಿದರು ಮುದದಿಂದ। ಚಂದ ಚಂದದ ಕದಳಿ ಸ್ತಂಭಗಳಿಂದ। ಅತಿ। ಸುಂದರ ತೋರಿತು ನೋಡು। ವರಿಗಂದು। ಜೋ ॥೭॥

ಮಿಂದುಮಡಿಯನುಟ್ಟು ಭಸಿತವನು ಧರಿಸಿ। ನಂದಿನಾಥನ ದೇವಾಲಯವ ಶೃಂಗರಿಸಿ। ಅಂದದಿ ಅಭಿಷೇಕ ಮಜ್ಜನಗೈಸಿ। ಹೀಗೆ। ಗಂಧ ಅಕ್ಷತ ಪುಷ್ಪತಂದು ಪೂಜಿಸಿ। ಜೋ ॥೮।

ತಾಳಜಾಗುಟೆ ಸಮಾಳಗಂಟೆಯು। ಕಾಳಿ ಕರ್ಣಿನಗಾರಿ ಮರ್ದಳಿಯು। ಸಾಳವ ಶಂಖವ ತಮ್ಮಟಭೇರಿಯು। ಭರದಿ। ಕೇಳುವ ವಾದ್ಯದರವದಬೊಬ್ಬುಳಿಯು। ಜೋ ॥೯॥

ಕಪ್ಪುರ ಕಾಯಿ ಕಡ್ಡಿ ಬತ್ತಿಗಳಿಂದ। ತುಪ್ಪದಾರುತಿ ಧೂಪದೀಪಗಳಿಂದ। ತಪ್ಪದೆ ಹಾರುವ ಛತ್ರ ಚಾಮರಗಳಿಂದ। ಹೀಗೆ ಒಪ್ಪುವ ನೈವೇದ್ಯ ತಾಂಬೂಲಗಳಿಂದ। ಜೋ ॥೧೦॥

ನಂದಿನಾಥನ ನೋಂಪಿ ಚಂದಾಗಿ ಮಾಡಿ। ಮುಂದಗಮನೆ ಮಾದಲಾಂಬೆಯೊಡಗೂಡಿ। ಬಂದ ಜನಕ್ಕೆ ಬಾಗಿಣಇತ್ತು ನಲಿದಾಡಿ। ಮುದ। ದಿಂದಲಿ ಆತನ ಮಹಿಮೆ ಕೊಂಡಾಡಿ। ಜೋ ॥೧೧॥

ಹುಟ್ಟಿದ ಶಿಶುವಿಗೆ ಹನ್ನೆರಡು ದಿವಸಕ್ಕೆ। ತೊಟ್ಟಿಲ ಶೃಂಗರಿಸಿ ಕಟ್ಟಿ। ಸದ್ಯಕ್ಕೆ ; ಶ್ರೇಷ್ಠಮುತ್ತೈದೇರು ಬಂದರು ಬಾಗಿಣಕೆ। ಹೆಸ। ರಿಟ್ಟರು ಬಸವೇಶನೆಂದು ಆ ಕ್ಷಣಕೆ। ಜೋ ॥೧೨॥

ಬೆಳೆವ ಬಿದಿಗೆಯ ಚಂದ್ರನಂತೆ ಬಸವೇಶ। ಕಳೆಯುಳ್ಳ ಕಮಲ ಮುಖ ಸದ್ಗುಣಕೋಶ। ಇಳೆಯೊಳಧಿಕ ಪ್ರತಿಶಂಭುವಿಶ್ವೇಶ। ಭಕ್ತ। ನಿಳಯಸ್ವಯಂಜ್ಯೋತಿ ಪರಮಪ್ರಕಾಶ। ಜೋ ॥೧೩॥

ತ್ರಿಪುರಾರಿಭಕ್ತ ಬಸವೇಶನಿಗಂದು। ಉಪನಯನದೀಕ್ಷೆಯ ಕೊಡಿಸಬೇಕೆಂದು। ಅಪರಮಿತ ಸಂಭ್ರಮ ನಡೆಸಿದರಂದು। ಇದು। ಅಪಹಾಸ್ಯವಾಗುವುದು ಜನಮನಕಂದು। ಜೋ ॥೧೪॥

ಅಲ್ಲಿಂದ ಕಲ್ಯಾಣಪಟ್ಟಣಕೆ ಸಾಗಿ। ಬಲ್ಲಿ। ದ ಬಿಜ್ಜಳನ ಮಂತ್ರಿ। ತಾನಾಗಿ। ಖುಲ್ಲ ಜೈನರ ಕೊಬ್ಬು ಮುರಿದವನಾಗಿ। ಸದಾ। ಸುಲಲಿತ ಶಿವಭಕ್ತಿಯೊಳು ಮಗ್ನನಾಗಿ। ಜೋ ॥೧೫॥

ಮುಚ್ಚಿದ ಶಿವಮತ ಬಿಚ್ಚಿ। ಲೋಕದಲಿ। ಸ್ವಚ್ಛವಾಗಿ ಹರವಿದ ದೇಶ ದೇಶದಲ್ಲಿ। ಸಚ್ಚಿದಾನಂದ ಸರ್ವೇಶನಾಜ್ಞೆಯಲ್ಲಿ। ಬಂದು। ಎಚ್ಚರಿಸಿದ ಶಿವಕುಲವ ಸಾಂಗದಲಿ। ಜೋ ॥೧೬॥

ಗುರುಬಸವೇಶನ ಜೋಗುಳ ಪದವ। ಹರುಷದಿ ಕೇಳಿದವರಿಗೆ ವರವ। ಕರುಣದಿ ಕೊಡುವನು ಮಕ್ಕಳ ಫಲವಾ। ಇದು। ಸ್ಥಿರವೆಂದು ಪೇಳ್ದಳು ಗುರುಲಿಂಗವ್ವ। ಜೋ ॥೧೭॥



# ವೀರಶೈವ ವರ್ಣಭೇದವಿದಾರಿಕಾ.

ಲೇಖಾಂಕ ೮.

(ಲೇಖಕಃ— ಶ್ರೀಯುತ ಸಿದ್ಧರಾಮಪ್ಪ ಮಂ. ಪಾವಟೆ ಬಿ. ಏ. ಎಲ್. ಎಲ್. ಬಿ. ಹುಬ್ಬಳ್ಳಿ.)



ಕ್ರಿಯಾಸಾರದ ಐದನೆಯುಪದೇಶದ ೯೦—೯೩ ಶ್ಲೋಕಗಳು ಜಗದೀಶ ಶಾಸ್ತ್ರಿಗಳವರ ವರ್ಣಭೇದ ಮಂದಿರದ ನೆಲಗಟ್ಟು ಆಗಿವೆ. ಅವೆಷ್ಟು ಗಟ್ಟಿಮುಟ್ಟೋ ನೋಡುವಣ—"ಅತಃಶ್ರೇಯೋಭಿವೃದ್ಧ್ಯರ್ಥಂ ವೀರಶೈವಃ ಸಮಾಚರೇತ್ । ಉಪನ್ಯಸ್ತಾನಿ ಕರ್ಮಾಣಿ ವೀರಶೈವಾವಿರೋಧತಃ ॥೯೦॥ ಬ್ರಹ್ಮಪಂಥಾನಮಾಶ್ರಿತ್ಯ ಸ್ನಾನಂದಾನಂ ಶಿವಾರ್ಚನಂ । ವಿದಧೀತ ಕ್ಷಾತ್ರ ಮಾರ್ಗಮಾಶ್ರಿತೋ ರಾಷ್ಟ್ರ ವೃದ್ಧಯೇ ॥೯೧॥ ಕಾರಯೇದ್ವೇದಕರ್ಮಾಣಿಯುಸ್ಯಾರ್ಥಸ್ತಸ್ಯತತ್ಫಲಂ । ವೈದಿಕಾಂಸ್ತಾನ್ಸಮಾಹೂಯ ರಾಜಾಸೋಯಂಕ್ರಮಾತ್ತತಃ ॥೯೨॥ ಉಪಾಸಕೋ ವೈಶ್ಯವೃತ್ತೇಃ ಸ್ನಾಯಾದ್ದೇಯಂ ಧನಾಧಿಕಂ । ಸ್ವವೃತ್ತ್ಯಾಜೀವನಂ ಪ್ರಾಪ್ಯನಿವರ್ತೇತ ಪುನರ್ಬುಧಃ ॥೯೩॥

ಮೂಲದಲ್ಲಿ ಉದಾಸ್ಯತೋ ವೈಶ್ಯವೃತ್ತಿಂ ಎಂದೂ "ಶ್ವವೃತ್ತ್ಯಾ" ಎಂದೂ ಇಹುದು. ಶಾಸ್ತ್ರಿ ಮಹಾಶಯವರು "ಉಪಾಸಕೋ ವೈಶ್ಯವೃತ್ತೇಃ" ಎಂದೂ "ಸ್ವವೃತ್ತ್ಯಾ" ಎಂದೂ ಇಳಿಸಿರುವರು. ಅದಿರಲಿ

ಈ ಶ್ಲೋಕಗಳಿಗೆ ಶಾಸ್ತ್ರಿಗಳ ಕನ್ನಡವಿದು— ವೀರಶೈವರು ತಮ್ಮ ಧರ್ಮಕ್ಕೆ ವಿರೋಧಬಾರದಂತೆ ವರ್ಣಾಶ್ರಮೋಚಿತವಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಲಿಕ್ಕೆ ಅರ್ಹರು. ಬ್ರಾಹ್ಮಣನು ತನ್ನ ಶ್ರೇಯೋಭಿವೃದ್ಧಿಯ ಸಲುವಾಗಿ ತನ್ನ ಧರ್ಮಕ್ಕೆ ಚ್ಯುತಿಬಾರದಂತೆ ಸಂಕ್ರಾಂತಿ ಮೊದಲಾದ ಪರ್ವ ಕಾಲಗಳಲ್ಲಿ ಸ್ನಾನದಾನ ಶಿವಾರ್ಚನೆಗಳನ್ನು ಮಾಡುವದು. ಕ್ಷಾತ್ರಮಾರ್ಗವೃತ್ತಿಯಾದ ಅರ್ಥಾತ್ ಕ್ಷತ್ರಿಯ ಜಾತಿಯವನಾದ ವೀರಶೈವ ರಾಜನು ರಾಷ್ಟ್ರದ ಕಲ್ಯಾಣದ ಸಲುವಾಗಿ ತಾನು ಸ್ನಾನ ದಾನ ಶಿವಾರ್ಚನೆಗಳನ್ನು ಯಥೋಚಿತ ಮಾಡುವದಲ್ಲದೆ ವೈದಿಕರಾದ ವೀರಶೈವರನ್ನು ಕರೆಯಿಸಿ. ಅವರ ಕಡೆಯಿಂದ ವೇದಕರ್ಮಗಳನ್ನು ಮಾಡಿಸಬೇಕು. ವೈಶ್ಯವೃತ್ತಿಯನ್ನು ಆಶ್ರಯಿಸಿದ ವೀರಶೈವನು ಅಂತಹ ಪರ್ವ ಕಾಲದಲ್ಲಿ ಯಥಾವಿಧಿ ಸ್ನಾನದಾನಗಳನ್ನು ಮಾಡಬೇಕು.

"ಯಸ್ಯಾರ್ಥಸ್ತಸ್ಯತತ್ಫಲಂ" ಎಂಬೀ ಪಂಕ್ತಿಯ ಮತ್ತು "ಸ್ವವೃತ್ತ್ಯೈ (ಶ್ವವೃತ್ತ್ಯೈ) ಜೀವನಂ ಪ್ರಾಪ್ಯನಿವರ್ತೇತಪುನರ್ಬುಧಃ" ಇಂತೆಂಬ ವಾಕ್ಯದ ಅನುವಾದವನೇಕೆಬಿಟ್ಟರೊ!

ಕ್ರಿಯಾಸಾರದ ಈ ಗ್ರಂಥಗಳ ಯಥಾರ್ಥವಾದ ಅನುವಾದವನ್ನು ಹಿಂದಿನಿಂದ ಯತ್ನಿಸುವಣ. ಅಷ್ಟರಲ್ಲಿ ಶಾಸ್ತ್ರಿಗಳ ಅನುವಾದವನ್ನೆ ಮುಂದಿಟ್ಟು ಕೊಂಡು ವೀರಶೈವ ಸಿದ್ಧಾಂತವು ಲಿಂಗವಂತರಲ್ಲಿ ಜಾತಿಭೇದದ ಮಂದಿ ರವನ್ನು ಕಟ್ಟಲೆಣಿಸುವರಿಗೆ ಹೇಗೆ ಮಳಲಭೂಮಿಯಾಗಿಹುದೆಂಬುದನ್ನು ತೋರಿಸುವಣ. "ವೀರಶೈವರು ತಮ್ಮ ಧರ್ಮಕ್ಕೆ ವಿರೋಧಬಾರದಂತೆ ವರ್ಣಾಶ್ರಮೋಚಿತ ಕರ್ಮಗಳನ್ನು ಮಾಡಲಿಕ್ಕೆ ಅರ್ಹರು" ಎನ್ನುವುದ ರಿಂದ ವೀರಶೈವ ಧರ್ಮವು ವರ್ಣಾಶ್ರಮೋಚಿತ ಕರ್ಮಗಳುಳ್ಳ ಧರ್ಮ ವಲ್ಲ. ಅವುಗಳನ್ನು ಮಾಡಬೇಕೆಂಬ ವೀರಶೈವನು ತನ್ನ ವೀರಶೈವ ಧರ್ಮವನ್ನು ನೆನಪಿನಲ್ಲಿಟ್ಟು ಅದಕ್ಕೆ ಬಾಧೆಬಾರದಂತೆ ಮಾಡಬೇಕು ಎಂದುದಾಯ್ತು. ತನ್ನ ಧರ್ಮವಲ್ಲದುದನ್ನು ಮಾಡುವನು ಆ ಧರ್ಮಾ ನುಷ್ಠಾನದಲ್ಲಿ ಅಶಕ್ತನಾಗಲಿ ಬೇರೊಂದು ದೋಷವುಳ್ಳಾತನಾಗಲಿ ಇರ ಬೇಕು. ಅಲ್ಲದೆ ಸ್ವಧರ್ಮ ಶಕ್ತಸಿರಲಾರನು. ಇಂತಹ ದುರ್ಬಲನ ನಡೆಯು ಧರ್ಮದಲ್ಲಿ ಪ್ರಮಾಣವಾಗದು.

ಇನ್ನು ಕ್ರಿಯಾಸಾರದ ಈ ಪ್ರಮಾಣಗಳನ್ನು ನಿಂತುನೋಡುವಣ. ಕ್ರಿಯಾಸಾರವು ಪೌರುಷೇಯವಾದುದರಿಂದ ಆದರ ವಚನಗಳು ಸ್ಪಷ್ಟ ವಾದ ಶಿವಾಗಮ ವಾಕ್ಯಗಳಿಗೆ ವಿರುದ್ಧವಿರುವಲ್ಲಿ ಪ್ರಮಾಣವೆನಿಸವು. ವಿರೋಧೇತ್ವನಪೇಕ್ಷಂ ಸ್ಯಾದಸತಿಹ್ಯನುಮಾನಂ' ಪೂರ್ವಮೀಮಾ. ಸಾ. ೧-೩-೩. ಪ್ರತ್ಯಕ್ಷವಾದ ಶಿವಾಗಮ ವಚನಂಗಳಿಗೆ ವಿರೋಧವಿದ್ದರೆ ಸ್ಮೃತಿ ವಚನಗಳು ಪ್ರಮಾಣವೆನಿಸಲಾರವು. ವಿರೋಧವಿರದಿದ್ದರೆ ಮಾತ್ರ ಸ್ಮೃತಿ ಯು ಹೇಳುವ ಅರ್ಥದಲ್ಲಿ ಮೂಲಭೂತವಾದ ಆಗಮವಾಕ್ಯವಿರಬೇಕು ಎಂದು ಅನುಮಿತಿಯು ಹೊರಟು ಅಂತಪ್ಪ ಅನುಮಿತವಾದ ಆಗಮ ವಾಕ್ಯದಲ್ಲಿಯ ಪ್ರಾಮಾಣ್ಯವು ಸ್ಮೃತಿ ವಾಕ್ಯದ ಪ್ರಾಮಾಣ್ಯಕ್ಕೆ ಕಾರಣ ವಾಗುವುದು. ಅಂದರೆ ಧರ್ಮದಲ್ಲಿ ನಿಜವಾದ ಪ್ರಮಾಣವು ಶೃತ್ಯಾಗ ಮವಲ್ಲದೆ ಸ್ಮೃತಿಯು ಅಲ್ಲ. ಸ್ಮೃತಿಯು ಪ್ರತ್ಯಕ್ಷವಿರುವ ಆಗಮ ವಚ ನಕ್ಕೆ ವಿರುದ್ಧವಿದ್ದರೆ ಅದು ಪ್ರಮಾಣವಲ್ಲ. ಅದರಿಂದ ಕ್ರಿಯಾಸಾರದ ಗ್ರಂಥಗಳು ವೀರಶೈವರಲ್ಲಿ ವರ್ಣಭೇದವನ್ನು ಹೇಳುತ್ತಿದ್ದರೆ ಅಥವಾ

ವರ್ಣವೃತ್ತಿಯನ್ನು ಹೇಳುತ್ತಿದ್ದರೆ ಅವು ಅಪ್ರಮಾಣವಾಗಿವೆ. ಏಕೆಂದರೆ ನಾನಾವಿಧಾನಿಕಾಷ್ಠಾನಿ ವಹ್ನಿಯೋಗಾದ್ಯಥೈಕತಾಂ । ತಥಾನೇಕವಿಧಾ ಮರ್ತ್ಯಾಗುರುತಃ ಶಿವತಾಮಿಯುಃ ॥ ಕಾಂಚನಂ ರಜತಂ ತಾಮ್ರಂ ರಸ ಯೋಗಾತ್ಸುವರ್ಣತಾಂ। ತಥಾಶಿವಜ್ಞಾನರಸಾಚ್ಛೂದ್ರಾದಿಃಶಿವತಾಂ ವ್ರಜೇತ್ ॥ ಯಸ್ಯೈಪರಿ ಶಾಂಭವೀದೀಕ್ಷಾ ಸಂಜಾತಾ ಗುರುಕೃಪಾವಶಾತ್ ॥ ಪೂರ್ವಜಾತ್ಯಾದಿಕಂ ತಸ್ಯ ನಸ್ಮರೇತ್ಪ್ರಾಕೃತಂ ಹಿತತ್। ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮಲಾಂಬುಜಾತ್ ॥ ಪುನರ್ಜಾತಸ್ಯಾತ್ರ ಜನ್ಮಜಾತ್ಯಾದಿನಚಕಲ್ಪಯೇತ್ ॥ ಇತ್ಯಾದಿ ಸೂಕ್ಷ್ಮಾಗಮ ವಾಕ್ಯಗಳು ಶಿವದೀಕ್ಷಾ ಸಂಪನ್ನರಾದ ಲಿಂಗವಂತರಲ್ಲಿ ಜಾತಿಭೇದವನ್ನು ನಿವಾರಿಸುವಲ್ಲಿ ಜಾಗರೂಕವಾಗಿರಲು 'ನಸ್ತ್ರೀಭೇದೋ ನಪುಂಭೇದೋ ಜಾತಿವರ್ಣಾಶ್ರಮಾದಿಕಂ ಸರ್ವಾತೀತಮಿದಂ ವಿದ್ಧಿ ವೀರಶೈವಮತಂಮಮ ॥೫-೪೧॥ ಎಂದು ಪಾರಮೇಶ್ವರಾಗಮವು, ವೀರಶೈವರಲ್ಲಿ ಜಾತಿಭೇದವನ್ನು ಹೊಗಗೊಡದೆ ಕಾಯುತ್ತಿರಲು "ನಬ್ರಹ್ಮವೃತ್ತ್ಯಾನಕ್ಷತ್ರ ವೃತ್ತ್ಯಾನೋ ವೈಶ್ಯವೃತ್ತಿತಃ। ನಶೂದ್ರವೃತ್ತ್ಯಾಜೀವೇತ ಯದಿಲಿಂಗೀಹತೇ ಸುಖಂ ॥೭-೫೮॥ ಎಂದು ಅದೇ ಆಗಮವು ಲಿಂಗವಂತರು ಬ್ರಾಹ್ಮಣಾದಿವೃತ್ತಿಯಿಂದ ಬಾಳಬಾರದೆಂದು ಸಾರುತ್ತಿರಲು, ವೀರಮಾಹೇಶ್ವರಂ ತಂತ್ರಂಜ್ಞಾತವ್ಯಂ ತ್ರಿವಿಧಂ ಸುತ। ಸಾಮಾನ್ಯಂಚ ವಿಶೇಷಂಚ ನಿರಾಭಾರಂಕ್ರಮಾದ್ಭವೇತ್ ॥೧೦-೩೦॥ ಎಂದು ವಾತೂಲಾದ್ಯಾಗಮಗಳು ವೀರಶೈವರಲ್ಲಿ ಸಾಮಾನ್ಯವಿಶೇಷ ನಿರಾಭಾರವೆಂಬ ಪ್ರಾಗತಿಕ ಭೇದಗಳಲ್ಲದೆ ವರ್ಣಭೇದವಿಲ್ಲೆಂದು ಜಡಿಯುತ್ತಿರುವಾಗ ಕ್ರಿಯಾಸಾರಕಾರನಾದ ಶ್ರೀ ನೀಲಕಂಠಾಚಾರ್ಯನು ನಿಜವಾದ ವೀರಶೈವರಲ್ಲಿ ವರ್ಣಭೇದವನ್ನಾಗಲಿ ವೃತ್ತಿಭೇದವನ್ನಾಗಲಿ ವಿಧಿಸಲು ಎಷ್ಟರವನು? "ತಸ್ಮಾಲ್ಲಿಂಗಾರ್ಚನಂ ಕುರ್ಯಾತ್ಸರ್ವಧರ್ಮೋತ್ತಮೋತ್ತಮಂ ॥ ನತಿಥಿರ್ನಚ ನಕ್ಷತ್ರಂ ನಯೋಗಕರಣಾದಿಕಂ। ಸಾಮುದ್ರಿಕಂಚಭಕ್ತಾನಾಂ ನಾಸ್ತಿಲಿಂಗಾಂಗ ಸಂಗಿನಾಂ ॥ ಸರ್ವಂಶಿವಮಯಂ ಪಶ್ಯೇದನ್ಯಭಾವೋನ ವಿದ್ಯತೇ ॥ ಲಿಂಗಾಂಗಸಂಬಂಧ ಪದಾರ್ಥಜ್ಞಾನಂ ಮೋಕ್ಷಸಾಧನಂ ॥ ಎಂದು ಸೂಕ್ಷ್ಮಾಗಮಾದಿಗಳು ಲಿಂಗಾಂಗಿಗಳಿಗೆ ತಿಥಿ ನಕ್ಷತ್ರಾದಿಗಳಲ್ಲಿ ಲಿಂಗಪೂಜೆಯೆ ಸಮಗ್ರ ಧರ್ಮವೆಂದು ಡಂಗುರಿಸುತ್ತಿರಲು, ತದಿತರನಿತ್ಯ ಕರ್ಮಗಳನ್ನಾಗಲಿ ನೈಮಿತ್ತಿಕಗಳನ್ನಾಗಲಿ ತಿಥಿ

ಕಾಲ ಪರ್ವ ಧರ್ಮಗಳನ್ನಾಗಲಿ ಒತ್ತಿಹೇಳಲು ಕ್ರಿಯಾಸಾರದ ಬಲು ಮೆಏನು? ಶ್ರೀ ನೀಲಕಂಠನು ಈ ಹವಣಿಕೆಗೆ ಬಿದ್ದಿಲ್ಲ.

ಕ್ರಿಯಾಸಾರಕಾರನು ಈ ಆಗಮಗಳಿಗೆ ಇದೇ ೫ನೆಯ ಉಪದೇಶದಲ್ಲಿ ತಲೆಬಾಗಿರುವನು ನೋಡಿರಿ 'ವೀರಶೈವೀಯ ಸಮಯಾ ಅತ್ಯಾಶ್ರಮ ಪುರಃಸರಾಃ। ನಿರಾಭಾರಾದಿ ಭೇದೇನ ಭಿನ್ನಾನಿಯಮಿನಶ್ಚತೇ ॥೩೨॥ ನತೇಷಾಂ ವಿದ್ಯತೇ ತೀರ್ಥಂ ನಯಜ್ಞಾನ ವ್ರತಾನ್ಯಪಿ। ನಯೋಗಕರಣಾಪೇಕ್ಷಾನವಾರಪರಿಶೋಧನಂ॥೩೩॥ ವೀರಶೈವರ ಸಮಯಾಚಾರಗಳು ಅತ್ಯಾಶ್ರಮವನ್ನು ಮುಂದುಗೊಂಡಿವೆ. ಆ ವೀರಶೈವರು ನಿರಾಭಾರಾದಿ ಭೇದಗಳನ್ನುಳ್ಳವರು. ಅವರಿಗೆ ನಿಯಮಗಳುಂಟು. ಅವರಿಗೆ ತೀರ್ಥಂಗಳಿಲ್ಲ. ಯಜ್ಞಂಗಳಿಲ್ಲ. ವ್ರತಂಗಳಿಲ್ಲ. ಯೋಗಕರಣಂಗಳಾಗಲಿ ವಾರಶುದ್ಧಿಗಳಾಗಲಿ ಇರುವುದಿಲ್ಲ. ಎಂಬೀ ಸಂದರ್ಭವು ಮೇಲುದಾಹರಿಸಿದ ಶ್ರೀಮದ್ವಾತುಲಾಗಮ ಸೂಕ್ಷ್ಮಾಗಮಂಗಳ ಪ್ರತಿಧ್ವನಿಯಲ್ಲದೆ ಬೇರೆ ಏನಲ್ಲ. ಅತ್ರೋಚ್ಯತೇ ವೀರಶೈವಮತಮೇತಚ್ಛಿವೋದಿತಂ। ತತ್ರಾಪಿ ವಿವಿಧಾಭೇದಾನಿರಾಭಾರಾದಿಭೇದತಃ ॥೭೭॥ ನಿರಾಭಾರಸ್ಯಯೋಧರ್ಮಾಸ್ತಾನ್ವಿಶೇಷೋ ನಚಾರ್ಹತಿ। ವಿಶೇಷಧರ್ಮಾನ್ಸಾಮಾನ್ಯಶೈವೋ ನೈವಾರ್ಹತಿಕ್ವಚಿತ್ ॥೭೮॥ ಈ ವೀರಶೈವ ಮತವು ಶಿವನು ಹೇಳಲಾದುದು. ಅದರಲ್ಲಿ ನಿರಾಭಾರಾದಿ ಭೇದದಿಂದ ಬಹಳ (ಎರಡಕ್ಕಿಂತಹೆಚ್ಚು=ಮೂರು) ಭೇದಗಳುಂಟು. ನಿರಾಭಾರನಿಗಾವ ಧರ್ಮಗಳೊ ಅವು ವಿಶೇಷನಿಗಿಲ್ಲ. ವಿಶೇಷನಿಗಿಹ ಧರ್ಮಗಳು ಸಾಮಾನ್ಯನಿಗಿಲ್ಲ. ಇಂತಿದು ವೀರಶೈವರಲ್ಲಿ ನಿರಾಭಾರಾದಿ ಧರ್ಮಭೇದವಲ್ಲದೆ ವರ್ಣಭೇದವಿಲ್ಲೆಂದು ಬಿಚ್ಚಿ ಹೇಳುವುದು. ನಿರಾಭಾರಾದಿಭೇದವಾದರು ಧರ್ಮಾನುಷ್ಠಾನದಲ್ಲಿಯೂ ತಾತ್ವಿಕ ಜ್ಞಾನದಲ್ಲಿಯೂ ಮೆಟ್ಟುಗಳನ್ನು ತೋರಿಸುವುದು ಅಲ್ಲದೆ ಹುಟ್ಟಿನಿಂದಾದ ತಾರತಮ್ಯವಲ್ಲ. ಸರ್ವ ವೀರಶೈವರಿಗು ಗುರುವಿನ ಹಸ್ತಕಮಲವೆ ಉತ್ಪತ್ತಿಯ ಇಂಬು. 'ನ ಗುರೋಃ ಸದೃಶೀ ಮಾತಾ ನ ಗುರೋಃ ಸದೃಶಃ ಪಿತಾ ॥೧--೯॥ ಎಂಬುದು "ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮತಾಂಬುಜಾತ್। ಪುನರ್ಜಾತಸ್ಯ" ॥೫--೬೪॥ ಸೂಕ್ಷ್ಮಾಗಮವನ್ನೆ ಬಳಿವಿಡಿದಿವೆ. ಐದನೆಯ ಉಪದೇಶದ ತಸ್ಮಾನ್ಮೂಲಂ ಸದಾಚಾರಾಸ್ತೇಷಾಂ ಮೂಲಂಗುರುಃ ಸ್ವಯಂ। ಗುರೂಪದಿಷ್ಟ ಮಾರ್ಗೇಣ ಸದಾಚಾರರತೋಭವೇತ್ ॥೬॥ ಎಂದು ಸರ್ವ ಸದಾಚಾರಂಗಳಿಗೂ ಗುರುವೆ ಮೂಲ

ವಾಗಿಹುದನ್ನು ಸಾರುವುದರಿಂದ ವೀರಶೈವಾಗಮಂಗಳಲ್ಲಿ ಗುರುವು ದೀಕ್ಷಿತನಿಗೆ ಬೋಧಿಸುವ ಸದಾಚಾರಗಳೆ ಮುಖ್ಯ ಧರ್ಮವೆಂದು ಸೂಚಿಸುವನು. ಆದರಿಂದ ಸೂಕ್ಷ್ಮಾಗಮದ ೫ ನೆಯ ಪಟಲದಲ್ಲಿ ಗುರುವು ದೀಕ್ಷಾನಂತರದಲ್ಲಿ ಶಿಷ್ಯನಿಗೆ ತಿಳಿಸುವ ಉಪದೇಶವು ಸದಾಚಾರಕ್ಕೆ ಮೂಲವೆಂದು ಪ್ರತಿಷ್ಠಿಸಿರುವನು. ಆದರಿಂದಲೆ ವೀರಶೈವಾಗಮಸಾರಜ್ಞನಾದ ಗುರುವು ಭಕ್ತಿಯ ಅತಿಶಯುವನ್ನು ನೋಡಿ ಜಾತಿಯಲ್ಲಿ ಅಧಃಕರಿಸಿ ಶಿವದೀಕ್ಷೆಯುನ್ನು ಮಾಡಬೇಕೆಂಬ ವಿಧಿಯುನ್ನು ಪುರಸ್ಕರಿಸಿರುವನು ನೋಡಿರಿ. ವಿಶೇಷಂಯತ್ರ ದೀಕ್ಷಾಸುಪೂರ್ವಿಕಾ ಭಕ್ತಿರಸ್ತಿ ಹಿನತತ್ರ ಜಾತಿಭೇದೋಸ್ತಿ ಸರ್ವೇರುದ್ರ ಸ್ವರೂಪಿಣಃ॥ ಸೂ ೩---೨೬॥ ಏವಂ ಗುಣಾನ್ವಿತಂ ಶಿಷ್ಯಂ ಪರೀಕ್ಷ್ಯ ಗುರುರಾದರಾತ್ । ಶಿಕ್ಷಯೇತ್ರಸ್ಯ । ವೈ ಚಿತ್ತಂ ಯಥಾಭವತಿ ನಿರ್ಮಲಂ॥ ತತಃ ಪ್ರಸನ್ನ ಮನಸಾ ಶಿಷ್ಯಮಾಲೋಕ್ಯ ದೇಶಿಕಃ। ಸಮಾದಿಶೇಚ್ಛಿವಾಚಾರಂ ಭೂತಿಧಾರಣ ಪೂರ್ವಕಂ॥ ಆದುದರಿಂದ ವೀರಶೈವರಿಗೆ ಗುರೂಕ್ತ ಸದಾಚಾರವೆ ಮುಖ್ಯ ಧರ್ಮವಲ್ಲದೆ ಇತರವಾವುದು ಅದರ ಮುಂದೆ ಪ್ರಮಾಣವಲ್ಲೆಂಬುದು ಕ್ರಿಯಾಸಾರಕಾರನ ಮತವೆಂದು ಸ್ಪಷ್ಟವದೆ.

ಇದನ್ನು ನೆನಪಿನಲ್ಲಿಟ್ಟು ಶಾಸ್ತ್ರಿಮಹಾಶಯರುದಾಹರಿಸಿದ ಗ್ರಂಥಗಳ ತಾತ್ಪರ್ಯವನ್ನು ಪರಿಶೀಲಿಸುವಣ. ಕ್ರಿಯಾಸಾರಕಾರನು ಗುರೂಕ್ತ ಸದಾಚಾರವೆ ಮುಖ್ಯವಾದ ಆಚಾರವೆನ್ನುವುದನ್ನು ಸ್ವಕಂಠದಿಂದಲೆ ಹೇಳಿರುವನು. ಆದುದರಿಂದ ಸ್ಮೃತಿಶಾಸ್ತ್ರ ಪ್ರಧಾನವಾದ ಬ್ರಾಹ್ಮಣಾದಿ ವೃತ್ತಿಗಳನ್ನು ವೀರಶೈವರಿಗೆ ಹೇಳಿಹನೆಂಬುದು ಅಸಂಗತವು. ಇದಕ್ಕೆ ಶಾಸ್ತ್ರಿಮಹಾಶಯರು ಹೂಡಬಹುದಾದ ಒಂದು ಪ್ರತ್ಯುಕ್ತಿ ಪ್ರಪಂಚವನ್ನು ಪರಿಕಿಸುವುದು ಅಸಂಗತವಲ್ಲ. ಅವರ ಈ ಯುಕ್ತಿ ಪ್ರಪಂಚವು ವೀರಶೈವ ಧರ್ಮಶಿರೋಮಣಿಯ ಕೆಲವು ಶ್ಲೋಕಗಳನ್ನು ಉದಾಹರಿಸಿ ಬರೆದುದರಲ್ಲಿ ಪ್ರತಿಬಿಂಬಿಸಿಯದೆ. ಆ ಸಂದರ್ಭವನ್ನು ಚರ್ಚಿಸುವಾಗ ಅದರ ಸಮಾಚಾರವನ್ನು ತುಂಬಾ ತೆಗೆದುಕೊಳ್ಳಬೇಕಾಗುವುದು. ಅಷ್ಟರಲ್ಲಿ ನಾವು ಕ್ರಿಯಾಸಾರ ಸಂದರ್ಭವನ್ನು ವ್ಯವಸ್ಥಾಪಿಸುವಾಗ ಬಿಡಬಾರದ ಮಟ್ಟಿಗೆ ತಕ್ಕೊಳ್ಳುವುದು ಅವಶ್ಯವು. ಅವರ ಯುಕ್ತಿವಿಧಾನವೇನೆಂದರೆ, ಶಿವಾರೂಢರಾದ ಕೊನೆಯ ಮೆಟ್ಟಿನವರಲ್ಲಿ ಜಾತಿ ಭೇದಗಳಿಲ್ಲ. ಆದರೆ

ಆ ಮೆಟ್ಟಿಗೆ ಮುಟ್ಟುವ ಪೂರ್ವದಲ್ಲಿ ಜಾತಿಭೇದಗಳಿಹವು. ಈ ಮಾತಿಗೆ ಕ್ರಿಯಾಸಾರವು ಶ್ರೀ ಜಗದೀಶಶಾಸ್ತ್ರಿಗಳಿಗೆ ಬೆಂಬಲವೀವುದಿಲ್ಲ. ಮೇಲೆ ಇಳಿಸಿದ ೩೨ ಮತ್ತು ೩೩ ನೆಯ ಶ್ಲೋಕಗಳು ನಿರಾಧಾರ ವಿಶೇಷ ಸಾಮಾನ್ಯವೆಂಬ ಮೂವರಿಗೂ ತಿಥಿನಕ್ಷತ್ರಾದಿಗಳಿಲ್ಲವೆಂದು ಹೇಳುತ್ತಿವೆ. ಆ ಮೂವರಿಗೆ ನಿಯಮಗಳುಂಟು (ನಿಯಮಿನಶ್ಚತೇ) ಎಂದು ಸಾರುತ್ತಿದೆ. ಅವರಿಗೆ ಭಿನ್ನ ಭಿನ್ನ ವರ್ಣಗಳನ್ನು ಹೇಳಿಲ್ಲ. ಆವ ವೀರಶೈವಾಗಮದಲ್ಲಿಯು ಜಾತಿಗಳು ಕ್ರಮೇಣ ಇಲ್ಲವಾಗುತ್ತವೆಂದು ವಿಧಿಸಿಲ್ಲ. ಸದ್ಗುರುವಿನ ಕೃಪಾಕಟಾಕ್ಷದಿಂದಾದ ದೀಕ್ಷೋತ್ತರದಲ್ಲಿಯೆ ವರ್ಣವಿಭಂಜನವನ್ನು ಸರ್ವ ವೀರಶೈವಾಗಮಗಳು ಹೇಳುತ್ತವೆ. ಮೇಲುದಾಹರಿಸಿದ ಆಗಮಗಳನ್ನು ನೋಡಿರಿ.

ಇನ್ನು ಪ್ರಕೃತ ಶ್ಲೋಕಸಂದರ್ಭವನ್ನು ಪರಾಮರ್ಶಿಸುವಣ. ಇದಕ್ಕೆ ೧೫ ನೆಯ ಉಪದೇಶದಲ್ಲಿ ಪ್ರತಿಪಾದಿಸಲು ಪ್ರತಿಜ್ಞೆಯನ್ನು ಮಾಡಿದ ವಿಷಯವಾವುದು ಎಂಬುದನ್ನು ಗ್ರಹಿಸುವಣ. ಈ ಉಪದೇಶವು ವೀರಶೈವರಲ್ಲಿ ವರ್ಣಭೇದವನ್ನು ಪ್ರಸ್ಥಾಪಿಸಲು ಹೊರಟಿದೆಯೊ? ಇಲ್ಲ. "ದಂತಧಾವನ ಮುಖ್ಯಾನಿ ಕರ್ಮಾಣಿ ಕಥಿತಾನಿಹಿ ॥೪೩॥ ಉಪದೇಶೇಪಂಚಮಕೇ ಉಪೋದ್ಘಾತ ಪ್ರಕರಣ ಎಂದು ಶ್ರೀ ನೀಲಕಂಠಾಚಾರ್ಯನು ಐದನೆಯ ಉಪದೇಶದ ಪ್ರತಿಪಾದ್ಯವನ್ನು ಹೇಳಿರುವನು. ವೀರಶೈವರಲ್ಲಿ ವರ್ಣಭೇದವನ್ನು ಸ್ಥಾಪಿಸುವುದಾಗಿದ್ದರೆ ಅಂತಹ ಮಹತ್ವದ ವಿಷಯವನ್ನು ಬಿಟ್ಟು ದಂತಧಾವನವೆ ಮುಂತಾದ ಕರ್ಮಗಳನ್ನು ಹೇಳುವೆನೆಂದು ಬರೆಯುತ್ತಿರಲಿಲ್ಲ.

ಐದನೆಯ ಉಪದೇಶದಲ್ಲಾದರು ಆ ಉಪದೇಶದ ಪ್ರವೃತ್ತಿಯು ಲಿಂಗಾಂಗಿಗಳಲ್ಲಿ ವರ್ಣಭೇದವನ್ನು ಮಾಡಲಿಕ್ಕೆಂದು ಹೇಳಿಲ್ಲ. ಇದೆ ಕೊಳ್ಳಿರಿ. ಸದಾಚಾರ ಬಹುವಿಧಾಃ ಪ್ರಮಾಣೈರುಪವರ್ಣಿತಾಃ । ಸಂಕ್ಷೇಪತಃ ಪಂಚವಿಧಾ ಆಚಾರಾ ನಿರ್ವಿಶೇಷಕಾಃ ॥೯॥ ನಿತ್ಯಂ ನೈಮಿತ್ತಿಕಂ ಕಾಮ್ಯಂ ನಿತ್ಯನೈಮಿತ್ತಿಕಂತಥಾ । ನಿತ್ಯಕಾಮ್ಯಮಿತಿ ಪ್ರಾಹುಃ ಪಂಚಧಾ ಶಾಸ್ತ್ರಕೋವಿದಾಃ ॥೧೦॥ ಸವಿಶೇಷಾಃ ಸದಾಚಾರಾ ಆಗಮೈರುಪಪಾದಿತಾಃ । ಪಂಚಾಚಾರಾ ವೀರಶೈವೈಃ ಸಾದರಂ ಸ್ವೀಕೃತಾಃ ಸದಾ ॥೧೧॥ ಅನಪೇಕ್ಷ್ಯ ಶರೀರಾಂತಂ ವಿಚ್ಛೇದೇ ಪ್ರಾಣಸಂಶಯಂ । ಪ್ರಾಯಶ್ಚಿತ್ತೇನ ಸಹಿತಂ । ನಿರ್ವಿಶೇಷಂ ವಿದುರ್ಬುಧಾಃ ॥೧೨॥ ಅಪೇಕ್ಷ್ಯೈವ ಶರೀರಾಂ

ತಂ ವಿಚ್ಛೇದೇ ಪ್ರಾಣಸಂಶಯಂ । ಪ್ರಾಯಶ್ಚಿತ್ತೇನರಹಿತಂ ಸವಿಶೇಷಂ ವಿದುರ್ಬುಧಾಃ ॥೧೩॥ ಸವಿಶೇಷ ಪ್ರಪಂಚಸ್ತು ವೀರಶೈವೀಯ ಸಂಗ್ರಹೇ। ಉಪಾತ್ತೋ ನಿರ್ವಿಶೇಷಸ್ತು ವೀರಶೈವೈರ್ಮತೋನವಾ ॥೧೪॥ ಇತ್ಯೇವಂ ಸಂದಿಹಾನಾನಾಂ ಶಂಕಾಶೂಕನಿವೃತ್ತಯೇ । ಪ್ರಪಂಚ್ಯತೇ ಮಯಾ ಸರ್ವಂ ತತ್ವಮಾರ್ಗಾನುಸಾರತಃ ॥೧೫॥ ಎಂಬೀ ವಚನಗಳು ನಿರ್ವಿಶೇಷ ಸವಿಶೇಷವೆಂಬ ಆಚಾರಗಳನ್ನು ವಿವರಿಸಿ, ನಿರ್ವಿಶೇಷ ಆಚಾರಗಳೆಂದರೆ ನಿತ್ಯನೈಮಿತ್ತಿಕ ಕಾಮ್ಯ ನಿತ್ಯನೈಮಿತ್ತಿಕ ನಿತ್ಯಕಾಮ್ಯಗಳೆಂದು ಪಂಚವಿಧವಾದುವು. ಇವುಗಳ ಆಚಾರದಲ್ಲಿ ತಪ್ಪಿದರೆ ಪ್ರಾಯಶ್ಚಿತ್ತದಿಂದ ಶುದ್ಧಿಯಹುದು ಎಂದು ವಿವರಿಸುತ್ತ ಸವಿಶೇಷ ಆಚಾರಗಳೆಂದರೆ ಲಿಂಗಾಚಾರ ಶಿವಾಚಾರ ಸದಾಚಾರ ನಿಯತಾಚಾರ ಗಣಾಚಾರಗಳೆಂಬ ವೀರಶೈವ ಪಂಚಾಚಾರಗಳು, ಅವುಗಳಲ್ಲಿ ಪ್ರಮಾದವಾದರೆ ಪ್ರಾಣತ್ಯಾಗವಲ್ಲದೆ ಪ್ರಾಯಶ್ಚಿತ್ತವಿಲ್ಲೆಂದು ಹೇಳಿ, ಈ ವೀರಶೈವ ಪಂಚಾಚಾರಗಳು ಶಿವಾಗಮಂಗಳಲ್ಲಿ ಪ್ರತಿಪಾದಿತವಾಗಿ ವೀರಶೈವರವುಗಳನ್ನಾದರಿಸುವರು. ನಿರ್ವಿಶೇಷಗಳಲ್ಲಿ ಅವರ ಆದರವಿದೆಯೊ ಇಲ್ಲವೊ ಎಂಬುದು ಅಧ್ಯಾಯ ವಿಷಯವೆಂದು ತಿಳಿಸುತ್ತವೆ. ಈ ನಿರ್ವಿಶೇಷ ಆಚಾರಗಳು ಕೆಲವು, ವೀರಶೈವರಿಗುಂಟೆಂದು ಹೇಳುವಲ್ಲಿ ದಂತಧಾವನಾದಿ ಕ್ರಿಯೆಗಳು ವೀರಶೈವರಿಗುಚಿತವೆಂದು ಹೇಳುವ ತಾತ್ಪರ್ಯವಲ್ಲದೆ ವೀರಶೈವರಲ್ಲಿ ವರ್ಣಭೇದವನ್ನುಂಟುಮಾಡುವುದಲ್ಲ. ೧೦೨ ನೆಯ ಶ್ಲೋಕದಿಂದ ೧೫೫ ನೆಯ ಶ್ಲೋಕದ ಕೊನೆಯವರೆಗೆ ನೋಡಿರಿ. ಇವು ಪ್ರಾತಃಕಾಲದಲ್ಲಿ ಎದ್ದು ಮಾಡಬೇಕಾದ ಶೌಚದಂತಧಾವನಾದಿಗಳನ್ನು ವಿವರಿಸುವುವು. ಅಂದರೆ:—

ವೀರಶೈವನಿಗೆ ಬೇಕಾಗುವ ಲಿಂಗಾಚಾರಾದಿ ಪಂಚಾಚಾರಗಳನ್ನು ವೀರಶೈವಾಗಮವು ವಿಧಿಸುವುದು. ಪ್ರಾತರ್ವಿಧಾನಗಳನ್ನು ಬಣ್ಣಿಸುವ ಗೊಡವೆಗದು ಹೋಗುವುದಿಲ್ಲ. ಆದುದರಿಂದ ವೀರಶೈವರು ತಮ್ಮ ಆಗಮಗಳಲ್ಲಿ ಹೇಳದೆ ಇರುವುವಾದ ಪ್ರಾತಃಕಾರ್ಯವು ಮುಂತಾದವುಗಳ ಮಾಡುವಲ್ಲಿ ಪೂರ್ವ ಅಥವಾ ಪಶುಶಾಸ್ತ್ರದಲ್ಲಿ ಹೇಳಿದಂತೆ ವರ್ತಿಸಬಹುದೆ? ಬಾರದೆ? ಎಂಬ ಸಂದೇಹವು ಬಪ್ಪುದು. ಇಂತಹ ವಿಷಯದಲ್ಲಿ ಆ ಪಶು ಶಾಸ್ತ್ರವು ಪತಿಶಾಸ್ತ್ರದೊಡನೆ ವಿರೋಧವನ್ನುಳ್ಳುದಲ್ಲ. ಅದು

ದರಿಂದ ಅದರಂತೆ ನಡೆಯಬಹುದೆಂದು ಸಿದ್ಧಾಂತವನ್ನು ಕ್ರಿಯಾಸಾರವು ಪ್ರತಿಪಾದಿಪುದು.

ಕ್ರಿಯಾಸಾರದ ಪ್ರಥಮೋಪದೇಶದಲ್ಲಿ ಧರ್ಮವು ಪಶುಧರ್ಮವೆಂದೂ ಪತಿಧರ್ಮವೆಂದೂ ಇಬ್ಬಗೆಯಾದುದೆಂದು ಹೇಳಿಯದೆ. (ಸಚ) ಧರ್ಮೋ ದ್ವಿಧಾಮತಃ ಪಶುಧರ್ಮಃ ಪ್ರಾಥಮಿಕಃ ಪತಿಧರ್ಮೋದ್ವಿತೀಯಕಃ ॥೭೩॥ ಅನುತಿಷ್ಠನ್ಪಶೋರ್ಧರ್ಮಾನ್ಪತಿ ಧರ್ಮಾನ್ಸಚಾರ್ಹತಿ । ಯಥಾಪಿಪೀಲಿಕಾ ವೃಕ್ಷ ಮೂಲಮಾಶ್ರಯತತ್ಫಲಂ ॥೭೪॥ ಆರುಹ್ಯಲಭತೇ ತದ್ವತ್ಪತಿ ಧರ್ಮೈಕತತ್ಪರಃ । ಯಥಾವಿಹಂಗಃ ಪಕ್ಷಾಭ್ಯಾಂ ಫಲಿತಂ ವೃಕ್ಷಮಾಗತಃ ॥೭೫॥ ಪಶ್ಯನ್ಫಲಮವಾಪ್ನೋತಿ ತದ್ವಚ್ಛೀಘ್ರಂತದರ್ಹತಿ॥— ಪಶು ಧರ್ಮವನ್ನು ಅನುಷ್ಠಿಸುತ್ತ ಚಿತ್ತಶುದ್ಧಿಯಿಂದ ಪತಿಧರ್ಮವನ್ನು ಹೊಂದುವನು. ಇದಕ್ಕೆ ಬೇರನ್ನು ಮೂಸಿ ಫಲಕ್ಕೇರುವ ಇರುವೆಂಬ ದೃಷ್ಟಾಂತವು. ಪಶುಧರ್ಮ ನಿರಪೇಕ್ಷನಾಗಿ ಪತಿಧರ್ಮವನ್ನೇ ಅನುಸರಿಸುವಾತನು ಪಕ್ಷಿಯು ಫಲವನ್ನು ನೋಡಿ ಆ ಕ್ಷಣದಲ್ಲಿಯೆ ಅದನ್ನು ಹಾರಿ ಪಡೆವಂತೆ ಮೋಕ್ಷ ಧರ್ಮವನ್ನು ಪಡೆವನು. ಅಂದರೆ ಶಿವದೀಕ್ಷೆಯನ್ನು ಹೊಂದುವನು.

ಕೇವಲ ಪತಿಧರ್ಮವನ್ನು ಅನುಸರಿಸುವವರಿಗೆ ಮೊದಲಿಂದಲೆ ಸೂಕ್ಷ್ಮಾಗಮಾದಿಗಳಲ್ಲಿ ವಿವರಿಸಿದಂತೆ ಭಕ್ತಿಯ ಅತಿಶಯದಿಂದ ಪಶು ಧರ್ಮದ ಹಂಗು ಇಲ್ಲದೆ ಶಿವದೀಕ್ಷೆಯುಂಟಾಗುವುದು. ಇಂತಪ್ಪರು, ಮತ್ತು ಕ್ರಮದಿಂದಾಗಲಿ (ಪಶುಧರ್ಮಾನುಷ್ಠಾನದ್ವಾರಾ ಚಿತ್ತಶುದ್ಧಿಯಾಗಿ ದೀಕ್ಷಿತರು) ಫಳಿಲನೇ ಪೂರ್ವ (ಪುಣ್ಯದಿಂದ ಆ ಕ್ಷಣದಲ್ಲಿ ಸಂಸಾರಹೇಯವಾಗಿ ಗುರುಕಾರುಣ್ಯದಿಂದ ದೀಕ್ಷಿತರು) ಆಗಲಿ ದೀಕ್ಷಿತರಾದವರ ಸಂತತಿಯವರು ಪಶುಧರ್ಮ ನಿರಪೇಕ್ಷವಾಗಿ ಪತಿಧರ್ಮವನ್ನನುಸರಿಸುವರು. "ಸಾತುಕಾರ್ಯಾ ವೀರಶೈವೈರ್ಗರ್ಭ ದೀಕ್ಷಾದಿಸಂಸ್ಕೃತೈಃ" ಲಿಂಗಾಂಗ ಸಾಮರಸ್ಯೇನ ಶಿವಭಾವಸಮನ್ವಿತೈಃ ॥೧—೪೫॥ ಆ ಶಿವೋಪಾಸನೆಯನ್ನು ಗರ್ಭದೀಕ್ಷಾದಿಯಿಂದ ವಿಶುದ್ಧರಾಗಿ ಲಿಂಗಾಂಗ ಸಾಮರಸ್ಯವನ್ನು ಪಡೆದ ವೀರಶೈವರು ಮಾಡತಕ್ಕುದು. ಪಶುಧರ್ಮದ ಅನುಷ್ಠಾನಕ್ಕೆಉಪನಯನವೂ, ಹಲವು ವಿಧಿನಿಯಮಗಳೂ ಅಧಿಕಾರವನ್ನುಂಟುಮಾಡುವಂತೆ ಪತಿಧರ್ಮಾನುಷ್ಠಾನಕ್ಕೆ ದೀಕ್ಷೆಯೂ ಭಸ್ಮಧಾರಣಾದಿಗಳೂ ಅಧಿಕಾರಪ್ರದವಾಗಿವೆ. ಪ್ರಥಮೋಪದೇಶದ ೭೯ರಿಂದ ೮೪ರ ತನಕ ಆರು ಶ್ಲೋಕಗಳನ್ನು ನೋಡಿರಿ.

ಕ್ರಮವಿಂದಾಗಲಿ ಘಳಿಲನೆ ಆಗಲಿ ಶಿವದೀಕ್ಷೆಯನ್ನು ಹೊಂದಿದವನು ಕೇವಲ ಪತಿಧರ್ಮಗಳನ್ನೆ ಆಶ್ರಯಿಸಬೇಕಾದುವರಿಂದ ಮತ್ತು ಆ ಪತಿ ಧರ್ಮವು ಪ್ರಾಯಶ್ಚಿತ್ತರಹಿತವಾದುದರಿಂದ ಪ್ರಾಯಶ್ಚಿತ್ತದಿಂದ ಕೂಡಿದ ಪಶುಧರ್ಮವು ಅದರೊಡನೆ ಬೆರೆಯಲಾರದು. ದಂತಧಾವನಾದಿ ಶೌಚ ವಿಧಿಗಳನ್ನು ಪಶುಧರ್ಮ ಪ್ರತಿಪಾದಕವಾದ ಸ್ಮೃತಿಗಳು ಹೇಳುವುವು. ಇಂತಾಗಿ ಶೌಚವಿಧಿಯಲ್ಲಿ ವೀರಶೈವನು ಸ್ಮೃತಿಗಳನ್ನು ಅನುಸರಿಸ ಬಹುದೋ ಬಾರದೊ ಎಂಬ ಶಂಕೆಯುದ್ಭವಿಸುದು. ಅದರ ನಿವಾರ ಣಕ್ಕಾಗಿ ಐದನೆಯ ಉಪದೇಶವು.

ಪತಿಶಾಸ್ತ್ರವು ತಾನೆ ಏಕೆ ಶೌಚಾಚಾರಗಳನ್ನು ಹೇಳಲಿಲ್ಲ? ಉಚ್ಚ ವಾದ ಲಿಂಗಾಂಗ ಸಾಮರಸ್ಯವನ್ನು ಹೇಳುತ್ತ ಆ ಲಿಂಗಾಂಗ ಸಾಮ ರಸ್ಯಕ್ಕೆ ವಿರುದ್ಧವಾದವುಗಳನ್ನೆಲ್ಲ ಬಿಡಬೇಕೆಂದು ಹೇಳುವುದು. ಆದರಿಂದ ಲೋಕದಲ್ಲಿಯೂ ಪಶುಶಾಸ್ತ್ರದಲ್ಲಿಯೂ ಪ್ರಸಿದ್ಧವಾದ ವೀರಶೈವಕ್ಕೆ ವಿರು ದ್ಧವಲ್ಲದ ವಿಷಯಗಳು ತಾವೆ ಲಿಂಗಾಚಾರಕ್ಕೆ ಪರಿವರ್ತನಗೊಂಡು ಉಳಿವುವು. ಆವುದೊಂದು ವಿಷಯದಲ್ಲಿ ಶಿಷ್ಯರಿಗೆ ಸಂಶಯವು ಬಂದರೆ ಅಥವಾ ಪರವಾದಿಗಳು ಆವುದೊಂದು ವಿಷಯವನ್ನು ಆಕ್ಷೇಪಿಸಿ ವೀರ ಶೈವಕ್ಕೆ ಆ ಸಂಗತಿಯನ್ನು ತೋರಿಸಹೋದರೆ ನಿವಾರಿಸಲು ವೀರಶೈವಾ ಚಾರ್ಯರು ಸಮರ್ಥರಿರುವರು. ಶ್ರುತ್ಯಾಗಮಗಳು ಇತರ ಪ್ರಮಾಣಗ ಳಿಂದ ಸಾಧಿಸಲು ಬಾರದ ವಿಷಯಗಳನ್ನೆ ಪ್ರತಿಪಾದಿಸುವುವು. 'ಅನ ಧಿಗತಾರ್ಥಗಮಯಿತೃ ಪ್ರಮಾಣಂ' ಬೇರೊಂದರಿಂದ ಸಾಧಿಸಬಾರದ ವಿಷಯವನ್ನು ಅರುಹುದು ಪ್ರಮಾಣವು ಎಂಬುದರಿಂದ ಲೋಕ-ಸ್ಮೃತಿ ಸಿದ್ಧವಾದ ಶೌಚಾಚಾರದ ವಿಷಯವನ್ನು ಲೌಕಿಕ ಮತ್ತು ಸ್ಮಾರ್ತ ಪ್ರಮಾಣಂಗಳಿಗೆಯೆ ವೀರಶೈವವು ಬಿಡುವುದು.

ಶೌಚಾಚಾರಗಳನ್ನಾಲೋಚಿಸುವಾಗ ಸ್ಮೃತಿಗಳು ವೀರಶೈವರಿಗೆ ನಿತ್ಯನೈಮಿತ್ತಿಕಾದಿ ಕರ್ಮವಿಧಿಗಳಲ್ಲಿ ಎಷ್ಟರಮಟ್ಟಿಗಾದರು ಪ್ರಮಾಣವೊ ಎಂಬುದನ್ನು ವಿಚಾರಿಸಲು ಹವಣಿಸಿರುವನು. ವೀರಶೈವಕ್ಕೂ ವ್ಯಾಸ ಸೂತ್ರಸ್ಮೃತಿಪುರಾಣಾದಿಗಳಿಗೂ ಐಕಮತ್ಯವನ್ನು ಮತ್ತು ಅನುಕೂಲ್ಯ ವನ್ನು ತೋರಿಸುವ ಹವಣಿಕೆಯು ಶ್ರೀ ನೀಲಕಂಠಾಚಾರ್ಯನಲ್ಲಿ ವಿಶೇ ಷವಾಗಿದೆ. ಅವನ ವಿಚಾರಸರಣಿಯು ಒಂದು ತೆರನಾಗಿದೆ. ಪರಸ್ಪರ ವಿರೋಧವಿಲ್ಲದ ಅಥವಾ ವಿರೋಧ ಬಾರದಂತೆ ಹೊಂದಿಸಲಿಕ್ಕೆ ಬರುವ

ಅಂಶಗಳನ್ನು ತೋರಿಸಿದರೆ ಅವೆರಡೂ ಒಂದೆ ಎಂದು ತೋರಿಸಿದಂತಾಯ್ತೆಂದು ಆತನ ಮತವು ನೋಡಿರಿ. "ಅಥಾ ತೊ ಬ್ರಹ್ಮ ಜಿಜ್ಞಾಸಾ" ಎಂಬ ಉತ್ತರಮೀಮಾಂಸಾ ಸೂತ್ರವು ಲಿಂಗತತ್ವ ಅಥವಾ ಪರಶಿವ ತತ್ವವನ್ನು ನೂರೆಂದು ಸ್ಥಳಾತ್ಮಕವಾಗಿ ತಿಳುಕೊಳ್ಳುವ ವೀರಶೈವಧರ್ಮದ ಸಿದ್ಧಾಂತಕ್ಕೆ ಪ್ರಥಮ ಸೂತ್ರವೆಂದು ತೋರಿಸುವುದು ಕ್ರಿಯಾಸಾರಕಾರನ ಮನೀಷೆಯು ಅದೇಕೆ! ಕ್ರಿಯಾಸಾರಕಾರನು ವೈಯಾಸಿಕ ಮೀಮಾಂಸೆಯು ವೀರಶೈವಪರವೆಂದು ಸಾಧಿಸಲಿಕ್ಕೆಯೆ ಈ ಗ್ರಂಥದ ನಾಲ್ಕು ಉಪದೇಶಗಳನ್ನು ಬರೆದಿರುವನು. ಅದನ್ನು ಸಾಧಿಸುವ ಪರಿಯನ್ನು ನೋಡಿರಿ. ಶೈವೇಸ್ಮಿನ್ ಶ್ರುತಿಮೂಲತ್ವಂ ವ್ಯಾಸಸೂತ್ರಾನುಕೂಲತಾಂ। ವೈದಿಕಾಚರಣೀಯತ್ವಂ ತಾನ್ನಿರಸ್ಯ ಪ್ರದರ್ಶಯೇ॥ ಉ೧೨॥ ಈ ವೀರಶೈವವು ಶ್ರುತಿಮೂಲವಾದುದೆಂದೂ ವ್ಯಾಸಸೂತ್ರಗಳಿಗೆ ಅನುಕೂಲವಾದುದೆಂದೂ ವೈದಿಕರಿದನ್ನು ಆಚರಿಸಲಿಕ್ಕೆ ಯೋಗ್ಯವಾದುದೆಂದೂ ಇದು ಅವೈದಿಕವೆಂದು ವಾದಿಸುವ ವಾದಿಗಳನ್ನು ಖಂಡಿಸಿ ತೋರಿಸುವೆನು. ವ್ಯಾಸಸೂತ್ರಗಳಿಗೆ ಅನುಕೂಲವೆಂದು ತೋರಿಸಿದರೆ ವ್ಯಾಸಸೂತ್ರ ಪ್ರತಿಪಾದ್ಯವೆಂದು ತೋರಿಸಿದಂತಾಯ್ತೆಂದು ಶ್ರೀ ನೀಲಕಂಠಾಚಾರ್ಯರ ಬಗೆಯು. ಈ ವಿಚಾರಸರಣಿಯು ಅವನ ಗ್ರಂಥದಲ್ಲೆಲ್ಲ ಕಂಡುಬರುವುದು.

ಬ್ರಹ್ಮಮೀಮಾಂಸೆಯ ಈ ಪ್ರಥಮ ಸೂತ್ರದ ವಿವರವನ್ನು ಕ್ರಿಯಾಸಾರವು ಮಾಡುವ ರೀತಿಯಿದು. ತಲ್ಲಿಂಗಮೇವ ಸೂತ್ರೇಷು ವ್ಯಾಸೇನಾಪಿ ವಿಚಾರಿತಂ ಇತ್ಯಾದಿಯಾಗಿ ಪ್ರಥಮೋಪದೇಶದ ೫೩—೭೩ ಶ್ಲೋಕಗಳನ್ನು ನೋಡಿರಿ. ಲೇಖವು ಬೆಳೆಯುವದರಿಂದ ಅವುಗಳ ಅನುವಾದವನ್ನಷ್ಟೆ ಕೊಟ್ಟು ಮುಖ್ಯ ಶ್ಲೋಕಗಳನ್ನು ಮಾತ್ರ ಉದಾಹರಿಸುವೆನು. ಅಥವಾ=ಧರ್ಮವಿಚಾರಾನಂತರದಲ್ಲಿ ಬ್ರಹ್ಮಣಃ=ಲಿಂಗರೂಪವಾದ ಬ್ರಹ್ಮದ ಜಿಜ್ಞಾಸಾ=ವಿಚಾರವು ಧರ್ಮವಿಚಾರಾನಂತರದಲ್ಲಿ ಲಿಂಗರೂಪವಾದ ಬ್ರಹ್ಮತ್ವದ ವಿಚಾರವು ಇದಕ್ಕೆ ಪೂರ್ವಪಕ್ಷಿಯು, ಧರ್ಮವೆಂದರೆ ಜೈಮಿನಿಯು ೧೨ ಅಧ್ಯಾಯಗಳಲ್ಲಿ ಪ್ರತಿಪಾದಿಸಿದುದು. ಈ ೧೨ ಅಧ್ಯಾಯಗಳಲ್ಲಿ ವೀರಶೈವದ ಧರ್ಮವಿಚಾರವೆ ಬಂದಿಲ್ಲ. ಅಗ್ನಿಷ್ಟೋಮಾದಿವಿಚಾರವು ಬಂದಿದೆ. ಭಸ್ಮಲಿಂಗ ರುದ್ರಾಕ್ಷಧಾರಣಾದಿ ವೀರಶೈವ ಧರ್ಮವು ಅದರಲ್ಲಿ ಕಾಣಲಿಲ್ಲ. ಅಂದಬಳಿಕ ಧರ್ಮವಿಚಾರದ ಅನಂತರದಲ್ಲಿ ಲಿಂಗತತ್ವ ವಿಚಾರವೆಂದು ಹೇಗೆನ್ನುವಿ? ಪೂರ್ವಕಾಂಡ ಪ್ರಸಿದ್ಧಸ್ತು ಧರ್ಮೋ

ಗ್ನಿಷ್ಟೋಮ ಪೂರ್ವಕಃ। ವೀರಶೈವಾದಿ ನ್ಯೈವೇತಿ ಚಾನಂತರ್ಯಂಕಥಂ ಭವೇತ್ ॥೬೫॥ ಶ್ರೀನೀಲಕಂಠಾಚಾರ್ಯನ ಉತ್ತರವು ವೇದೋಕ್ತಭೂತಿ ರುದ್ರಾಕ್ಷಲಿಂಗಧಾರಣ ಕರ್ಮಠೈಃ। ವಿಚಾರ್ಯಂ ಬ್ರಹ್ಮಲಿಂಗಾಖ್ಯಂ ನಾನಂತರ್ಯಂ ವಿರುದ್ಧ್ಯತೇ ॥೬೬॥ ಪೂರ್ವಕಾಂಡಾ ವಿರುದ್ಧೋರ್ಥಃ ಪೂರ್ವಕಾಂಡೋಕ್ತ ಉಚ್ಯತೇ॥ ವೇದದಲ್ಲಿ ಹೇಳಿದ ವಿಭೂತಿ ರುದ್ರಾಕ್ಷ ಲಿಂಗಧಾರಣ ಕರ್ಮಗಳಲ್ಲಿ ವರ್ತಿಸುವವರಿಂದ ಲಿಂಗವೆಂಬ ಹೆಸರಿನ ಬ್ರಹ್ಮವು ವಿಚಾರಿಸಲು ತಕ್ಕದಾಗಿಹುದು. ಆದುದರಿಂದ ಧರ್ಮಾನಂತರದಲ್ಲಿ ಬ್ರಹ್ಮ ವಿಚಾರವೆಂಬುದು ಸಂಗತವು. ಪೂರ್ವಕಾಂಡದಲ್ಲಿ ಭಸ್ಮರುದ್ರಾಕ್ಷ ಲಿಂಗ ಧಾರಣಾದಿಯನ್ನು ಹೇಳಿಲ್ಲವಾದರು ಪೂರ್ವಕಾಂಡ ಧರ್ಮಕ್ಕೆ ವಿರುದ್ಧ ವಲ್ಲ. ಏಕೆಂದರೆ ಇದಾದರು ವೇದೋಕ್ತವಾದುದು. ವಿರುದ್ಧವಲ್ಲದರಿಂದ ಪೂರ್ವಕಾಂಡೋಕ್ತವೆಂದು ಹೇಳುತ್ತೇವೆ.

ಈಗ ನನ್ನಲ್ಲಿರುವ ತೆಲಗು ಲಿಪಿಯ ಕ್ರಿಯಾಸಾರದಲ್ಲಿ "ಪೂರ್ವಕಾಂಡವಿರುದ್ಧೋರ್ಥಃ ಪೂರ್ವಕಾಂಡೋಕ್ತಉಚ್ಯತೇ" ಎಂದು ಪಾಠವದೆ. ಅದು ತಪ್ಪುಬಿದ್ದಿರುವುದು. ಶ್ರೀ ನೀಲಕಂಠ ಶಿವಾಚಾರ್ಯನು ಪರಸ್ಪರ ವಿರುದ್ಧಾರ್ಥವನ್ನೆ ಸಾಧಿಸುವಲ್ಲಿ ತಾತ್ಪರ್ಯವುಳ್ಳವನಾಗಿರುವನು. ಹಾಗು ಈ ಪಾಠವನ್ನು ಹಿಡಿದರೆ ಅನ್ವಿತಾರ್ಥವು ಅಂದರೆ ಸಂಗತಾರ್ಥವು ಹೊರಡುವದಿಲ್ಲ. ಸೊಲ್ಲಾಪುರದವರು ಪ್ರಕಟಿಸಿದ ಕ್ರಿಯಾಸಾರದ ಉಪದೇಶದ್ವಯದ ಪ್ರತಿಯಲ್ಲಿ ನಿರ್ವಾಣಮಂತ್ರಿಯ ಟೀಕೆಯುಂಟು. ಮೂಲ ಪಾಠವು ತೆಲಗುಲಿಪಿಯ ಪಾಠವನ್ನು ಅನುಸರಿಸಿಯದೆ. ಆದರೆ ಈ ಪಂಕ್ತಿಯ ಟೀಕೆಯು ನನು ಕೇಷಾಂ ಚಿದ್ವೀರಶೈವ ಮತಪ್ರತಿಪಾದಕಾರ್ಥಾನಾಂ ಶ್ರುತಿ ಪ್ರಮಾಣ ಮೂಲತ್ವೇಪಿಕೇಷಾಂ ಚಿನ್ನಿರಾಭಾರಾದಿ ವಿಭಾಗಾನಾಂ ಷಟ್ಸ್ಥಲಾಂತರ್ಗತ ಲಿಂಗವಿಭಜನಾದೀನಾಂ ಹಸ್ತಭೇದಾನಾಮರ್ಪಿತ ಭೇದಾನಾಂಚ ಪರಿದೃಶ್ಯಮಾನ ಪ್ರತ್ಯಕ್ಷಶ್ರುತ್ಯಲಾಭ ಇತಿ ನ ಶಂಕನೀಯಂ ಪೂರ್ವಕಾಂಡನಿಷೇಧ ಶಾಸ್ತ್ರಾವಿಷಯತ್ವಾತ್। ಇದು ಪೂರ್ವಕಾಂಡ ನಿಷೇಧ ಶಾಸ್ತ್ರವಿಷಯತ್ವಾತ್ ಎಂದು ಅಚ್ಚಾಗಿದೆ.) ಪೂರ್ವಕಾಂಡ ಪ್ರಸಿದ್ಧತ್ವಂ ವರ್ತತೇ ತತ್ರಾಗಮಾಃ ಪ್ರಮಾಣಂ ತೇಷಾಂ (ಅಚ್ಚಿನಲ್ಲಿ ಕೋಷಾ ಎಂದು ತಪ್ಪುಬಿದ್ದಿದೆ) ಚಾಗಮವಾಕ್ಯಾರ್ಥನಾಂ ಪೂರ್ವಕಾಂಡಾವಿರುದ್ಧತ್ವಮೇವಪೂರ್ವಕಾಂಡೀಯತ್ವಮಿತ್ಯರ್ಥ ೩೪ನೇ ಪುಟವನ್ನು ನೋಡಿರಿ—ಎಂದಿರು

ವುದು. ಅದರಲ್ಲಿ ಪೂರ್ವಕಾಂಡಾವಿರುದ್ಧತ್ವಮೇವ ಪೂರ್ವಕಾಂಡೀಯತ್ವಂ ಎನ್ನುವುದರಿಂದ ನಾನು ಪಾಠವನ್ನು ತಿದ್ದಿದು ಯೋಗ್ಯವಾಗಿದೆ.

ಕ್ರಿಯಾಸಾರಕಾರನ ಈ ವಿಚಾರ ಸರಣಿಯನ್ನು ಮಂಡಿಸುವುದಾಗಲಿ ಖಂಡಿಸುವುದಾಗಲಿ ಈ ಲೇಖದ ವಿಷಯವಲ್ಲ. ಐದನೆಯ ಉಪದೇಶದಲ್ಲಿಯ ಅವನ ವಿಚಾರ ಸಂದರ್ಭವನ್ನು ತಿಳಿಯಲಿಕ್ಕೆ ಅವನ ಸರಣಿಯನ್ನು ತಿಳಿವುದು ಅವಶ್ಯವಿಹುದರಿಂದ ಬರೆದೆನು. ಆದರೆ ಪೂರ್ವಕಾಂಡದಲ್ಲಿ ನಿಷಿದ್ಧವಾಗದುದೆಲ್ಲಿ ಪೂರ್ವಕಾಂಡೋಕ್ತವೆಂಬುದನ್ನು ಪರವಾದಿಗಳು ಅಂಗೀಕರಿಸಲಾರರು.

ಅದಿರಲಿ. ಮುಂಪೆ ನಡೆಯುವಣ. ಸ್ಮೃತಿಗಳು ಎಷ್ಟರಮಟ್ಟಿಗೆ ವೀರಶೈವರಿಗೆ ಆಚಾರ ವಿಷಯದಲ್ಲಿ ಪ್ರಮಾಣವಾಗಿಹವೆಂಬುದನ್ನು ಕ್ರಿಯಾಸಾರದ ಬೆಂಬಳಿವಿಡಿದು ಕಂಡುಕೊಳ್ಳುವಣ. ಅಪ್ರತ್ಯಕ್ಷವಾಗಾದರು ವೀರಶೈವರಲ್ಲಿ ಜಾತಿಯನ್ನಿವುಗಳಿಂದ ಕ್ರಿಯಾಸಾರವು ಸಾಧಿಸಲು ಹವಣಿಸುತ್ತದೇನೆಂದು ಪರೀಕ್ಷಿಸುವಣ.

ಮುಂದೆ ಸಾಗುವದು.



ಶಿವಾನುಭವ ಗ್ರಂಥಮಾಲಾ ನಂ॥ ೨೩

# ಆದಯ್ಯನ ವಚನಗಳು.

ಸಂಪಾದಕರು

**ರಾ॥ ಸಾ॥ ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್. ಬಿ. ವಿಜಾಪುರ.

ಬೆಲೆ ೬ ಆಣೆ



೧೯೩೧

ಕ್ಷವಾಗಾದರು ೫೯೦


ಇದನ್ನು ವಿಜಾಪುರದಲ್ಲಿ

ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ

**"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು

ಮತ್ತು ಅವರು ವಿಜಾಪುರದಲ್ಲಿ

ಉಪಲಿಬುರುಜದ ಹತ್ತರ ತಮ್ಮ ೧೬೨೦ (ಅ) ನೇ ಮನೆಯಲ್ಲಿ

ಪ್ರಕಟಿಸಿದರು.

# ಪ್ರಸ್ತಾವನೆ.



ಆದಯ್ಯನು ಪುರಾತನ ವೀರಶೈವ ಶಿವಶರಣರಲ್ಲಿ ಪ್ರಸಿದ್ಧನಾಗಿದ್ದು, ಆತನ ವಚನಗಳನ್ನು ನಾವು ಈಗ ವಾಚಕರ ಮುಂದೆ ಇಡುತ್ತೇವೆ. ಈ ವಚನಗಳು ಬೇರೆ ಪುರಾತನ ವಚನಗಳಂತೆಯೇ ಒತ್ತಟ್ಟಿಗೆ ಸಮಗ್ರವಾಗಿ ಎಲ್ಲಿಯೂ ದೊರಕುವದಿಲ್ಲ. ಇವು ಅನೇಕ ವಚನ ಸಂಗ್ರಹಗಳಲ್ಲಿ [illegible]ಲಬ್ಧವಾಗಿವೆ. ಇಂಥವುಗಳನ್ನು ನಾವು ಬೇರೆಯಾಗಿ ಆರಿಸಿ [illegible]ದು ಈ ಗ್ರಂಥವನ್ನು ಸಿದ್ಧಪಡಿಸಿರುತ್ತೇವೆ. ಪುರಾತನ ಕಾಲದಲ್ಲಿದ್ದ ಶಿವ[illegible]ಗು ತಮಗೆ ಸ್ಫೂರ್ತಿಯುತ್ಪನ್ನವಾದಾಗ್ಗೆ ತಮ್ಮ ವಿಚಾರ [illegible]ವಚನರೂಪವಾಗಿ ಬರೆದಿಡುವ ಪದ್ಧತಿ ಇತ್ತೆಂದು ತೋರುತ್ತದೆ. ಅವರು ಅವುಗಳನ್ನು ಗ್ರಂಥರೂಪವಾಗಿ ಬರೆದಿಟ್ಟಂತೆ ತೋರುವದಿಲ್ಲ. ಆದರೆ ಹಿಂದುಗಡೆ ಅವರ ಅನುಯಾಯಿಗಳು ಅಥವಾ ಸಂಬಂಧಿಗಳು ಅವುಗಳನ್ನು ತಮಗೆ ದೊರೆತ ಹಾಗೆ ಬರೆದಿಟ್ಟಿರಬಹುದು. ಆದರೆ ಇವುಗಳನ್ನು ಸಂಗ್ರಹಿಸಿ ಗ್ರಂಥರೂಪವಾಗಿ ವ್ಯವಸ್ಥಿತ ರೀತಿಯಿಂದ ಪ್ರಸಿದ್ಧಿಸುವ ಕಾರ್ಯವು ಬಹುಕಾಲದಿಂದಲೂ ಜರಗಿರುವದಿಲ್ಲ. ಆದ್ದರಿಂದ ಅವುಗಳಲ್ಲಿ ಅನೇಕವುಗಳು ಈ ಅವಧಿಯಲ್ಲಿ ನಷ್ಟವಾಗುವದು ಸಹಜಿಕವೇ ಇರುತ್ತದೆ. ಆದರೆ ಈಗ ದೊರೆದಷ್ಟವುಗಳನ್ನು ಕನ್ನಡಿಗರು ಅದರಲ್ಲಿ ವಿಶೇಷವಾಗಿ ವೀರಶೈವರು ಸಂಗ್ರಹಿಸಿ ರಕ್ಷಿಸುವ ಭಾರವು ಅವರ ಮೇಲೆ ಬಹಳವಿರುತ್ತದೆ. ಇದಕ್ಕೆ ಅವರು ವಿಮುಖರಾದ ಪಕ್ಷದಲ್ಲಿ ಕನ್ನಡಭಾಷೆ ಮತ್ತು ಕನ್ನಡಸಂಸ್ಕೃತಿಯ ಮೇಲೆ ಅತ್ಯಂತ ಮಹತ್ವದ ಪರಿಣಾಮವನ್ನುಂಟು ಮಾಡಿದ ಈ ವಾಙ್ಮಯವೇ ನಷ್ಟವಾಗುವ ಸಂಭವವಿದೆ.

ಆದಯ್ಯನ ಈಗಿನ ವಚನ ಗ್ರಂಥವನ್ನು ನಾವು ಮೇಲೆ ಹೇಳಿದಂತೆ ಅಲ್ಲಲ್ಲಿ ದೊರೆದವುಗಳನ್ನು ಒತ್ತಟ್ಟಿಗೆ ಕೂಡಿಸಿ ಸಿದ್ಧಪಡಿಸಿದ್ದು ಇರುತ್ತದೆ. ಆದರೆ ವೀರಶೈವ ಗ್ರಂಥಗಳು ಇನ್ನೂ ಅಸಂಶೋಧಿತ ಸ್ಥಿತಿಯಲ್ಲಿ ಇರುವದರಿಂದ ಈತನ ಸ್ವತಂತ್ರ ವಚನಗ್ರಂಥವು ಬೇರೆ ಕಡೆಗೆ ಎಲ್ಲಾದರೂ ಇದ್ದರೂ ಇರಬಹುದು. ಇದು ವಾಚಕರಲ್ಲಾರಿಗಾದರೂ ದೊರೆದ್ದಾ

ದರೆ, ಅವನ್ನು ಅವರು ಅವಶ್ಯವಾಗಿ ನಮ್ಮ ಕಡೆಗೆ ಕಳುಹಿಸಬೇಕೆಂದು ನಮ್ಮ ವಿನಂತಿ ಇದೆ. ಅಂದರೆ ಅದರೊಳಗಿನ ವಚನಗಳನ್ನೂ ಮುಂದಿನ ಆವೃತ್ತಿಯಲ್ಲಿ ಈ ಗ್ರಂಥದಲ್ಲಿ ಸಮಾವೇಶ ಮಾಡಲಿಕ್ಕೆ ನಮಗೆ ಬಹಳ ಅನುಕೂಲವಾಗುವದು.

ಆದಯ್ಯನು ನಾವು ಮೇಲೆ ವಿವರಿಸಿದಂತೆ ವೀರಶೈವ ಪುರಾತನ ಶಿವಶರಣರಲ್ಲಿ ಬಹು ಪ್ರಸಿದ್ಧನಾದವನು. ಇವನ ಚರಿತ್ರೆಯನ್ನು ಕರ್ನಾಟಕದ ಬಹು ಪ್ರಸಿದ್ಧ ಕವಿಯಾದ ರಾಘವಾಂಕನು ತನ್ನ "ಸೋಮನಾಥ ಪುರಾಣ" ದಲ್ಲಿ ಬಹು ವಿಸ್ತಾರವಾಗಿ ವಾರ್ಧಿಕಷಟ್ಪದಿಯಲ್ಲಿ ನಿರೂಪಿಸಿದ್ದಾನೆ. ಈ ಗ್ರಂಥವಲ್ಲಿ ಆರು ಸಂಧಿಗಳು ಇದ್ದು ಪದ್ಯಗಳು ೫೬೩ ಇವೆ. ಈ ಕಾವ್ಯವು ರಾಘವಾಂಕನ ಕಾವ್ಯಗಳಂತೆ ಬಹು ಬಂಧುರವಾದದ್ದದೆ. ಈ ಗ್ರಂಥವನ್ನು ಅಥಣಿಯ ರಾ। ರಾ॥ ಜೋತೆಪ್ಪಗೌಡ ಶಿದ್ದನಗೌಡ ಪಾಟೀಲ ಯಲಿಹಡಲಗಿ ಇವರು ಬಹು ಶ್ರಮಪಟ್ಟು ೧೯೧೧ ಇಸ್ವಿಯಲ್ಲಿ ಪ್ರಸಿದ್ಧಿಸಿದ್ದಾರೆ. ಮತ್ತು ಕೈ. ವಾ. ಬಿ. ಬಸವಾರಾಧ್ಯ ಬಿ. ಏ. ಬಿ. ಎಲ್. ಈ ವಿದ್ವಾಂಸರು ಪರಿಶೋಧಿಸಿರುವದರಿಂದ ಗ್ರಂಥವು ಬಹು ಶುದ್ಧವಾಗಿ ಅಚ್ಚುಹಾಕಲ್ಪಟ್ಟಿದೆ. ಈ ಕಾರ್ಯವನ್ನು ಮಾಡಿದ್ದಕ್ಕೆ ಮೇಲ್ಕಂಡ ಉಭಯ ಮಹನೀಯರೂ ಕನ್ನಡಿಗರಿಂದ ಸ್ತೋತ್ರಾರ್ಹರಾಗಿರುವರು. ಆದಯ್ಯನ ಚರಿತ್ರೆಯು ಈ ಗ್ರಂಥದಲ್ಲಷ್ಟೇ ಅಲ್ಲ, ಶರಣರ ಚರಿತ್ರೆಗಳುಳ್ಳ ಪ್ರತಿಯೊಂದು ಗ್ರಂಥದಲ್ಲಿಯೂ ದೊರಕುವದುಂಟು. ರಾಘವಾಂಕನ ಕಾವ್ಯದಿಂದ ತಿಳಿಯುವದೇನೆಂದರೆ:—

ಆದಯ್ಯನ ಮೂಲಸ್ಥಾನವು ಗುಜರಾಥ ದೇಶದಲ್ಲಿರುವ ದ್ವಾರಕಾನಗರವು. ಈತನ ತಂದೆಯ ಹೆಸರು ಘೋರದತ್ತ, ತಾಯಿಯ ಹೆಸರು ಪುಣ್ಯವತಿ. ಇವರು ಸೋಮನಾಥನ ಉಪಾಸಕರಾಗಿ ಶಿವಭಕ್ತಿಯಿಂದ ಇರುತ್ತಿರಲು, ಇವರ ಮಗನಾದ ಆದಯ್ಯನು ವ್ಯಾಪಾರಕ್ಕೋಸ್ಕರ ಕರ್ನಾಟಕ ದೇಶದಲ್ಲಿ ಹುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಆಗ ಅಲ್ಲಿ ಚಂದ್ರಾದಿತ್ಯನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನು ಜೈನ ಧರ್ಮೀಯನಾಗಿದ್ದು ಪಟ್ಟಣದಲ್ಲೆಲ್ಲ ಜೈನರೇ ನಿಬಿಡವಾಗಿ ವಾಸಿಸುತ್ತಿದ್ದರು. ಆದಯ್ಯನು ಪಟ್ಟಣದಲ್ಲಿ ಹೋಗಿ ಸಂಚರಿಸುತ್ತಿರುವಾಗ ಪಾರಿಸಶೆಟ್ಟಿ ಎಂಬ ಜೈನ ವರ್ತಕನ ಮಗಳಾದ ಪದ್ಮಾವತಿ ಎಂಬವಳನ್ನು ಕಾಣಲು, ಉಭಯತರು ಪರಸ್ಪರ ಮೋಹವುಳ್ಳವರಾಗಲು,

ಪದ್ಮಾವತಿಯು ಶೈವ ದೀಕ್ಷೆಯನ್ನು ಹೊಂದಿ ಆದಯ್ಯನನ್ನು ವರಿಸಿದಳು. ಪದ್ಮಾವತಿಯು ಪಾರಿಸಶೆಟ್ಟಿಗೆ ಒಬ್ಬಳೇ ಮಗಳಾದ್ದರಿಂದ ಅವನು ತನ್ನ ಅಳಿಯನನ್ನು ಮನೆಯಲ್ಲಿಯೇ ಸ್ಥಳಕೊಟ್ಟು ಇಟ್ಟುಕೊಂಡನು. ಈ ಪ್ರಕಾರ ಆದಯ್ಯನೂ ಪದ್ಮಾವತಿಯೂ ಪುಲಗೆರೆಯಲ್ಲಿ ವಾಸವಮಾಡುತ್ತಿರಲು, ಒಂದು ದಿನ ಕೆಲ ಶಿವಭಕ್ತರು ಪಟ್ಟಣದ ಹೊರ ಉದ್ಯಾನವಲ್ಲಿ ಬಂದಿರಲು ಅವರನ್ನು ಆದಯ್ಯನು ಕಂಡು ಅವರಿಗೆ ಊಟಕ್ಕೆ ಹೇಳಿ ಅದಕ್ಕೆ ಸನ್ನಾಹ ಮಾಡಲು ಹೇಳಲು ಮನೆಗೆ ಬಂದು ಹಾಗೆ ತನ್ನ ಸತಿಗೆ ಹೇಳಿ, ತಾನು ಆ ಶಿವಭಕ್ತರಿದ್ದೆಡೆಗೆ ಬಂದನು. ಆದರೆ ಅಷ್ಟರಲ್ಲಿ ಮನೆಯಲ್ಲಿ ಕೆಲ ಶ್ರವಣ ಅತಿಥಿಗಳು ಪಾರಿಸಶೆಟ್ಟಿಯ ಗೃಹಕ್ಕೆ ಅಕಸ್ಮಾತ್ತಾಗಿ ಬರಲು, ಅವನ ಹೆಂಡತಿಯು ಶಿವಭಕ್ತರಿಗಾಗಿ ತನ್ನ ಮಗಳು ಸಿದ್ಧಮಾಡಿಟ್ಟಿದ್ದ ಅಡಿಗೆಯನ್ನೆಲ್ಲ ಬಲವಂತವಾಗಿ ಕಸೆದುಕೊಂಡು ಹೋಗಿ ಆ ಜೈನ ಅತಿಥಿಗಳಿಗೆ ಭೋಜನ ಮಾಡಿಸಿದಳು. ಅಷ್ಟರಲ್ಲಿ ಶಿವಭಕ್ತರು ಮನೆಗೆ ಊಟಕ್ಕೆ ಬರಲು ಮಾಡಿಟ್ಟಿದ್ದ ಅಡಿಗೆಯು ಇಲ್ಲದ್ದರಿಂದ ಅವರು ಅನ್ನವಿಲ್ಲದೆ ಹಿಂದಿರುಗಬೇಕಾಯಿತು. ಮತ್ತು ಅವರು ರಾತ್ರಿಯಲ್ಲಿ ಊಟಮಾಡಲು ಒಪ್ಪಲಿಲ್ಲ ಆಗ ಆದಯ್ಯನು ಅತ್ಯಂತವಾಗಿ ಮನ ನೊಂದು ಪುಲಗೆರೆಯಲ್ಲಿದ್ದ ಜೈನರ ಪ್ರಸಿದ್ಧ ಜಿನದೇವಾಲಯವಾದ ಸುರಹೊನ್ನೆ ಬಸ್ತಿಯಲ್ಲಿ ತನ್ನ ಇಷ್ಟದೇವತೆಯಾದ ಸೌರಾಷ್ಟ್ರ ಸೋಮೇಶ್ವರನನ್ನು ದ್ವಾರಕೆಯಿಂದ ಒಂದು ತಿಂಗಳಲ್ಲಿ ತಂದು ಸ್ಥಾಪಿಸುವೆನೆಂದು ಪ್ರತಿಜ್ಞೆ ಮಾಡಿದನು. ಮತ್ತು ಆ ಪ್ರಕಾರ ಆದಯ್ಯನು ಲಕ್ಷ್ಮೇಶ್ವರದಿಂದ ಗುಜರಾಥಕ್ಕೆ ಹೊರಟನು. ಅವನು ಮಾರ್ಗದಲ್ಲಿ ಅತ್ಯಂತ ಪ್ರಯಾಸಬಟ್ಟರೂ ತನ್ನ ಅತುಲ ಶಿವಭಕ್ತಿಯಿಂದ ಅದನ್ನು ತಾಳಿದವನಾಗಿ ಪರಮಾತ್ಮನನ್ನು ಸ್ಮರಿಸುತ್ತ ಮಾರ್ಗಕ್ರಮಣ ಮಾಡಿದನು. ಆದರೆ ಅವನು ಪ್ರತಿಜ್ಞೆ ಮಾಡಿದ ೧ ತಿಂಗಳಿಗೆ ೨ ದಿನಗಳು ಮಾತ್ರ ಉಳಿದವು. ಮತ್ತು ದ್ವಾರಿಕೆಯು ಬಹು ದೂರ ಉಳಿಯಿತು. ಆಗ ಸೋಮನಾಥನು ಅವನ ಬಳಲಿಕೆಯನ್ನೂ ಭಕ್ತಿ ವಿಶ್ವಾಸಗಳನ್ನೂ ಕಂಡು ಪ್ರೇಮಬಟ್ಟು ಅವನಿಗೆ ಪ್ರತ್ಯಕ್ಷನಾಗಿ ಹೇಳಿದ್ದೇನೆಂದರೆ, "ನೀನು ಈ ಮಹಾವೃಕ್ಷದ ಅಡಿಯಲ್ಲಿ ವಿಶ್ರಮಿಸಿದರೆ ನಾನು ನಿನ್ನನ್ನು ಹುಲಿಗೆರೆಯ ಬಡಗಣ ತಟಾಕದ ಏರಿಯಲ್ಲಿ ಬಿಡುವೆನು. ಮತ್ತು ನಾಳೆ ಚೈತ್ರ ಶುದ್ಧ ಚತುರ್ದಶಿ ಸೋಮವಾರ ಮಧ್ಯರಾತ್ರಿಯಲ್ಲಿ ಆ ಸುರಹೊನ್ನೆ ಬಸ್ತಿಯಲ್ಲಿ ನಾನು ನೆಲಿಸುವೆನು. ಆಗ ಆ ಬಸ್ತಿಯ ಬಾಗಿಲನ್ನು ತೆರೆಯಲಿಕ್ಕೆ

ಜೈನರಿಗೆ ಆಗದಿರಲು, ನೀನು ಆ ಬಾಗಿಲವನ್ನು ತೆಗೆಯಲಿಕ್ಕೆ ಸಮರ್ಥನಾಗುವಿ. ಬಾಗಿಲವನ್ನು ತೆರೆಯಲು ಜೈನರು ಜಿನದೇವತೆಗಳೆಲ್ಲ ಭಗ್ನವಾದುದನ್ನು ನೋಡಿ ನಿನ್ನ ಮೇಲೆ ಉರವಣಿಸಿ ಬರಲು ಅಲ್ಲಿರುವ ಇಬ್ಬರು ನಿನಗೆ ಸಹಾಯಕರಾಗುವರು. ಆಗ ಅಲ್ಲಿ ಜೈನರೊಡನೆ ಕಾಳಗವಾಗಲು ಜೈನರೆಲ್ಲರೂ ಹತರಾಗುವರು. ಮತ್ತು ಸುರಹೊನ್ನೆ ಬಸ್ತಿಯು ಶಿವದೇವಾಲಯವಾಗಿ ಸ್ಥಿರಪಡುವದು" ಎಂದು ಪರಮಾತ್ಮನು ಅರುಹಲು ಅದೇ ರೀತಿಯಾಗಿ ಆದಯ್ಯನು ಮರದಡಿಯಲ್ಲಿ ನಿದ್ದೆಹೋಗಲು ಅವನು ಲಕ್ಷ್ಮೇಶ್ವರಕ್ಕೆ ತಿರುಗಿಬರುವನು. ಅವನು ತಿರುಗಿ ಬಂದ ಬಳಿಕ ಮರುದಿನ ಪರಮಾತ್ಮನು ಹೇಳಿದಂತೆ ಸುರಹೊನ್ನೆ ಬಸ್ತಿಯ ಬಾಗಿಲವು ಏನುಮಾಡಿದರೂ ತೆರೆಯದೆ ಹೋಯಿತು. ಆಗ ಜೈನರು ಇದು ಆದಿಮಯ್ಯನ ಕೃತಕವಿರಬಹುದೆಂದು ಎಣಿಸಿ ಅವನನ್ನು ಕರೆತರಿಸಿ, ಕದವನ್ನು ತೆರೆ ಎಂದು ಅವನಿಗೆ ಹೇಳಲು ಅವನ ಹಸ್ತಸ್ಪರ್ಶದಿಂದ ಕದ ತೆರೆಯಲು ಆಗ ಒಳಗಿನ ಜಿನಮೂರ್ತಿಗಳೆಲ್ಲವು ಛಿನ್ನಭಿನ್ನವಾಗಿ ಒಳಗೆ ಶಿವಲಿಂಗವು ಸ್ಥಾಪಿತವಾದದ್ದು ತೋರಿಬಂದಿತು. ಆಗ ಜೈನರು ಕೋಪಾವಿಷ್ಟರಾಗಲು ಜೈನರಿಗೂ ಆದಯ್ಯನಿಗೂ ದೇವಾಲಯದ ಮುಂಭಾಗದಲ್ಲಿ ಕಾಳಗನೆಸಗಿತು. ಆಗ ಆದಯ್ಯನಿಗೆ ಇಬ್ಬರು ಪರಮಾತ್ಮ ಪ್ರೇಷಿತರಾದ ಭಟರು ಸಹಾಯಕರಾಗಲು ಜೈನಬಲವು ಮಡಿಯಿತು. ಈ ಪ್ರಕಾರ ದೇಶದಲ್ಲಿ ಸುಪ್ರಸಿದ್ಧವಾದ ಸುರಹೊನ್ನೆ ಬಸ್ತಿಯು ಸೋಮೇಶ್ವರ ದೇವಾಲಯವಾಯಿತು. ಮತ್ತು ಪಟ್ಟಣವೆಲ್ಲ ಶಿವಭಕ್ತಿಮಯವಾಯಿತು. ಈ ಪ್ರಕಾರ ರಾಘವಾಂಕನು ವರ್ಣಿಸಿದ ಆದಯ್ಯನ ಚರಿತ್ರೆ ಇರುತ್ತದೆ. ಎಲ್ಲ ಶಿವಶರಣರ ಚರಿತ್ರೆಗಳಲ್ಲಿಯೂ ಇದೇ ವಿಧದ ವೃತ್ತಾಂತವು ಕಂಡುಬರುತ್ತಿದ್ದು, ಇದನ್ನು ಹೆಚ್ಚಾಗಿ ತಿಳಿಯಲಪೇಕ್ಷಿಸುವವರು ರಾಘವಾಂಕನ ಮೂಲ ಗ್ರಂಥವನ್ನೇ ಓದಬೇಕೆಂದು ನಾವು ಸೂಚಿಸುತ್ತೇವೆ.

ಲಕ್ಷ್ಮೇಶ್ವರವು ಒಂದು ಕಾಲಕ್ಕೆ ಕರ್ನಾಟಕ ದೇಶದಲ್ಲಿ ಬಹು ಪ್ರಸಿದ್ಧ ಸ್ಥಾನವಾಗಿದ್ದದ್ದು ನಿರ್ವಿವಾದವು. ಮತ್ತು ಅಲ್ಲಿ ಅನೇಕ ಜೈನ ರಾಜರು ಆಳಿ ಜೈನ ಸಂಸ್ಕೃತಿಯನ್ನು ಅತ್ಯಂತ ಹೆಚ್ಚಳಕ್ಕೆ ತಂದರು. ಜೈನ ಮಹಾ ಕವಿಯಾದ ಪಂಪನು ಈ ಪುಲಗೆರೆಯಲ್ಲಿಯೇ ಪ್ರಸಿದ್ಧಿಯನ್ನು ಹೊಂದಿದನು. ಈ ಸ್ಥಿತಿಯು ಈ ಪ್ರದೇಶದಲ್ಲಿ ೧೧-೧೨ ನೇ ಶತಮಾನಗಳ ವರೆಗೆ ಇದ್ದು ಮುಂದೆ ಇದು ಪಲ್ಲಟಿಸಿ ಅದು ವೀರಶೈ

ವರ ಸ್ಥಾನವಾದದ್ದು ತೋರಿಬರುತ್ತದೆ. ಈ ಪರಿಸ್ಥಿತಿಯುಂಟಾಗಲಿಕ್ಕೆ ಆದಯ್ಯನೇ ಕಾರಣನೆಂಬುದು ಅವನ ಈ ಚರಿತ್ರೆಯಿಂದ ತಿಳಿದುಬರುತ್ತಿದೆ.

ಆದಯ್ಯನ ವಚನಗಳಲ್ಲಿ ಅನೇಕ ಶಿವಶರಣರ ಉಲ್ಲೇಖಗಳಿರುತ್ತವೆ. ೩೯ ವ.ತ್ತು ೪೦ ನೇ ವಚನಗಳನ್ನು ನೋಡಿರಿ. ವಚನಕಾರರ ವಚನಗಳನ್ನು ನಾವು ಪರೀಕ್ಷಿಸಿದರೆ, ಅವರ ಕಾಲವನ್ನು ಕೆಲಮಟ್ಟಿಗೆ ಊಹಿಸಲು ಶಕ್ಯವಿರುತ್ತದೆ. ಆದಯ್ಯನು ಉಲ್ಲೇಖಿಸಿದ ಶಿವಶರಣರ ಹೆಸರುಗಳನ್ನು ನೋಡಿದರೆ, ಅವನು ಬಸವೇಶ್ವರನಕಿಂತಲೂ ಸ್ವಲ್ಪ ಈಚಿನವನೆಂದು ತೋರುತ್ತದೆ. ಬಸವೇಶ್ವರನ ತರುವಾಯ ದೇಶದಲ್ಲೆಲ್ಲ ಧರ್ಮಯುದ್ಧಗಳು ನಡೆದು ಒಂದು ಮಹತ್ತರ ಸಮಾಜ ಕ್ರಾಂತಿಯು ಉತ್ಪನ್ನವಾಗಿರಬಹುದೆಂದು ತೋರುತ್ತಿದೆ. ಈ ಕ್ರಾಂತಿಯ ಕಾಲದಲ್ಲಿಯೇ ಆದಯ್ಯನು ತನ್ನ ಶೌರ್ಯ ಸಾಹಸಾದಿಗಳಿಂದ ಲಕ್ಷ್ಮೇಶ್ವರ ಪ್ರಾಂತದಲ್ಲಿ ವೀರಶೈವ ಮತವನ್ನು ನೆಲೆಗೊಳಿಸಿರಬಹುದು. ಆದರೆ ಇವೆಲ್ಲವುಗಳೂ ಇತಿಹಾಸ ಸಂಶೋಧಕರಿಂದ ಇನ್ನೂ ಹೆಚ್ಚಾಗಿ ಸಂಶೋಧಿಸಲ್ಪಡುವ ವಿಷಯುಗಳಾಗಿವೆ. ಆದರೆ ಈಗ ನಾವು ವಿಷಯ ನಿರ್ದೇಶ ಮಾತ್ರ ಮಾಡಿ ಮಹಾ ಶಿವಶರಣ ಆದಯ್ಯನ ವಚನಗಳನ್ನು ವಾಚಕರ ಅವಗಾಹನೆಗಾಗಿ ಇಡುತ್ತೇವೆ.

**ವಿಜಾಪುರ** **ಫ. ಗು. ಹಳಕಟ್ಟಿ.**

ತಾ. ೧೦-೭-೩೧

---

# ಆದಯ್ಯನ ವಚನಗಳು.

## ಪರಮಾತ್ಮನ ಸ್ವರೂಪು.

೧. ಧರೆಯಾಕಾಶವಿಲ್ಲದಂದು, ಎಂಬತ್ತುನಾಲ್ಕುಲಕ್ಷ ಜೀವಜಂತುಗಳಿಲ್ಲದಂದು, ಸಚರಾಚರಂಗಳು ಪಸರಕ್ಕೆ ಬಾರದಂದು, ಇಹಪರ ಸ್ವರ್ಗನರಕಾದಿಗಳಿಲ್ಲದಂದು, ಸುರಾಳ ನಿರಾಳಂಗಳೇನೂ ಇಲ್ಲದಂದು, ಸೌರಾಷ್ಟ್ರ ಸೋಮೇಶ್ವರಾ ಆನು ನೀನು ಇಲ್ಲದಂದು, ಅಂದೇನೊ ಇಂದೇನೊ.

೨. ಆದಿ ಅನಾದಿ ಇಲ್ಲದಂದು, ನಾದಬಿಂದುಕಳೆ ಮೊಳೆದೋರದಂದು, ಶೃತಿ ಸ್ಮೃತಿಗಳು ತಲೆದೋರದಂದು, ಚತುರ್ದಶಭವಂಗಳು ರಚಿಸದಂದು, ಲಯಭೋಗಾದಿಕರಣಂಗಳಲ್ಲಿ ಲೀಯ್ಯವಾದ ತತ್ವ ಪ್ರಭಾಪಿಗಳೆಂಬ ಮೂರ್ತಿಗಳರಿವು ಕುರುಹಿಂಗೆ ಬಾರದಂದು, ತಿಥಿ ವಾರ ನಕ್ಷತ್ರ ಯೋಗ ಕರಣಂಗಳೆಂಬ ಪಂಚಲಗ್ನವಿಲ್ಲದಂದು, ಅನುಪಮುವಸಾಧ್ಯವಭೇದ್ಯ ಸೌರಾಷ್ಟ್ರ ಸೋಮೇಶ್ವರಲಿಂಗವದೆ ಕಂಡಾ.

೩. ಪಾತಾಳದಿಂ ಕೆಳಕೆ ಪಾದ, ಸುವರ್ಲೋಕದಿಂ ಮೇಲೆ ಉತ್ತುಮಾಂಗ, ಬ್ರಹ್ಮಾಂಡವೇ ಮುಕುಟ, ಗಗನವೆ ಮುಖ, ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕು ಬಾಹುಗಳು, ಮಹದಾಕಾಶವೇ ಶರೀರ, ತರುಗಳೇ ತನೂರುಹ, ಶೂನ್ಯವೆ ಕರಸ್ಥಲದ ಲಿಂಗ, ನಕ್ಷತ್ರವೇ ಪುಷ್ಪ, ನಿತ್ಯವೇ ಪೂಜೆ, ಮೇಘವೆ ಜಡೆ, ಬೆಳದಿಂಗಳೇ ವಿಭೂತಿ, ಪರ್ವತಂಗಳೆ ರುದ್ರಾಕ್ಷಿ, ಪಂಚಬ್ರಹ್ಮವೆ ಪಂಚಾಕ್ಷರ, ತತ್ವಂಗಳೆ ಜಪಮಾಲೆ, ಮೇರುವೆ ದಂಡ, ಸಮುದ್ರವೇ ಕಮಂಡಲು, ಋತುಗಳಾರಾರೆ ಷಟ್‌ಸ್ಥಲ, ಶೇಷನೆ ಕಟಿಸೂತ್ರ, ಜಗವೇ ಕಂಥೆ, ಅನಂತನೆ ಕೌಪಿನ, ತ್ರಿಗುಣ ಒಂದಾದುದೆ ಕರ್ಪುರ, ಚತುರ್ಯುಗವೆ ಗಮನ, ಮಿಂಚೆ ಅಂಗರುಚಿ, ಸಿಡಿಲೆ ಧ್ವನಿ, ವೇದಾಗಮವೇ ವಾಕ್ಯ, ಜ್ಞಾನಮುದ್ರೆಯೇ ಉಪದೇಶ, ಪೃಥ್ವಿಯೇ ಸಿಂಹಾಸನ, ದಿವಾರಾತ್ರಿಯೆ ಅರಮನೆ, ಶಿವಜ್ಞಾನವೆ ಐಶ್ವರ್ಯ, ನಿರಾ

ಳವೆ ತೃಪ್ತಿ, ಇಂತಪ್ಪ ಚೈತನ್ಯಜಂಗಮಕ್ಕೆ ನಾನು ನಮೋ ನಮೋ ಎನುತಿರ್ದೆನಯ್ಯಾ ಸೌರಾಷ್ಟ್ರ ಸೋಮೇಶ್ವರಾ.

೪. ಚಿದ್ಬ್ರಹ್ಮಾಂಡವೆಂಬ ಭಾಂಡದಲ್ಲಿ ಅನಂತ ವಿಚಿತ್ರ ಭುವನಂಗಳಯ್ಯ. "ಆಲಯಂ ಸರ್ವಭೂತಾನಾಂ" ಎಂದುದಾಗಿ, ಅನಂತಕೋಟಿ ಬ್ರಹ್ಮಾಂಡಂಗಳು ನಿಮ್ಮ ರೋಮಕೂಪದೊಳಗಡಗಿಪ್ಪವೆಂದರೆ ಬ್ರಹ್ಮ, ವಿಷ್ಣು, ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು. ಇವರೆತ್ತ ಬಲ್ಲರು ಲಿಂಗದ ನಿಜವ? ಅಪ್ರಮಾಣ ಅಗೋಚರ ಮಹಂತ ನಿಮ್ಮ ನಿಜವೊಳಗನಾರು ಬಲ್ಲರಯ್ಯ ಸೌರಾಷ್ಟ್ರ ಸೋಮೇಶ್ವರಾ?

೫. ಅಕಲ್ಪಿತ ಲಿಂಗವು ಕಲ್ಪಿತಕ್ಕೆ ತ್ರಿವಿಧ ಭೇದದಿಂದನ್ಯವಿಲ್ಲೆನಿಸಿ, ತ್ರಿಗುಣವೆಂಬ ತ್ರಿಪಾದಮಯವಾಗಿ, ತ್ರಿಪಾದದಲ್ಲಿ ಹೊಂದದೆ ತ್ರಿವಿಧಕ್ಕತೀತವಾಗಿಹುದೆಂಬುದಕ್ಕೆ ಶೃತಿ, "ತ್ರಿಪದಸ್ಯ ಮೃತಂ ಜೀವಿತ್ರಿಸಾದೋರ್ಧ್ವ ಕಲ್ಪಯೇತ್" ಎಂದುದಾಗಿ, ಸೌರಾಷ್ಟ್ರ ಸೋಮೇಶ್ವರನೆಂಬ ಲಿಂಗ ಕಲ್ಪಿತಕ್ಕತ್ತತ್ತಲೆ.

೬. ನೆಳಲ ನುಡಿಸುವೆನೆಂದು ಬಳಲುವನಂತೆ, ಆಕಾಶವನಳತಿಗೆ ತಂದಿಹೆನೆಂಬ ಪಂಡಿತನಂತೆ, ಆತ್ಮಸ್ವರೂಪವ ವರ್ಣದಿಂದ ಕಂಡಿಹೆನೆಂಬ ಯೋಗಿಯಂತೆ, ವರ್ಣಾತೀತ, ವೇದಾತೀತವೆಂಬ ಮಾತು ಹುಸಿಯಪ್ಪುದೆ? ನಿಃಕಳಂಕ ಶಾಂತಮಲ್ಲಿಕಾರ್ಜುನನೆಂಬ ಲಿಂಗದಲ್ಲಿಯೆ ಸೌರಾಷ್ಟ್ರ ಸೋಮೇಶ್ವರನೆಂಬ ಲಿಂಗದಲ್ಲಿಯೆ ಕಾಣಿಹೆ.

೭. ಬೀಜದೊಳಗಣ ವೃಕ್ಷ ಅಂಕುರ ಪಲ್ಲವ ಪತ್ರ ಕುಸುಮ ಫಲವೈದೋರದಂತೆ, ಕಾಷ್ಠದೊಳಗಡಗಿ ಉಷ್ಣದೋರದಂತೆ, ಪತಂಗನ ಕರದೊಳಗಡಗಿಪ್ಪ ಮರೀಚಿ ಪ್ರವಹಿಸದಂತೆ, ಬಿಂದುವಿನೊಳಗಡಗಿಪ್ಪ ನಾದ ದನಿದೋರದಂತೆ, ಪಿಂಡ ಬ್ರಹ್ಮಾಂಡಂಗಳ ಕೂಡಿಪ್ಪ ಸೌರಾಷ್ಟ್ರ ಸೋಮೇಶ್ವರ ಲಿಂಗವನಾರು ಭೇದಿಸಬಾರದಯ್ಯ.

೮. ಕಟ್ಟಣೆಯೊಳಗಣ ಕಾಂಸ್ಯದಂತೆ, ಅಣಿಯೊಳಗಣ ಕೇಣದಂತೆ, ಚಿನ್ನದೊಳಗಣ ಬಣ್ಣದಂತೆ, ಪಟದೊಳಗಣ ತಂತುವಿನಂತೆ, ಎನ್ನಲ್ಲಿ ಭಿನ್ನವಿಲ್ಲದೆ ಇರ್ದೆಯಲ್ಲಾ ಸೌರಾಷ್ಟ್ರ ಸೋಮೇಶ್ವರಾ.

೯. ತತ್ವ ಮೂವತ್ತಾರ ಮೀರಿ, ನಾದಬಿಂದು ಕಳಾತೀತನಾದರೇನು? ಜಗನ್ಮಯನಾದ. ಆಗಿಯೂ ಜಗದ ಸ್ಥಿತಿಗತಿ ಇಲ್ಲ. ಅದೆಂತೆಂ

ಕ್ಕರ್ಥ. ಹೀಗೆ ಕ್ರೋಧ ಉಲಿವುತ್ತಿರಲು ಸಕಲರ ಹಿಡಿದು ಬಿಡದ ಸಾಮರ್ಥ್ಯವನುಳ್ಳ ದ್ವೇಷವೆಂಬ ಭಲ್ಲೂಕ ದೂಷಣ ಭೂಷಣಗಳಿಂ ಹಾಡಿ ಗನ್ನಗತುಕಗಳಿಂ ಹರಿಸಿ ಸರ್ವಾಂಗದೊಳ್ವರ್ಧನವಾಯಿತ್ತೆಂಬು ದೀಗ, ಬಲುಹೆನಿಸಿದ ಕರಡಿ ಹಾಡಿ ಹರಿಸಿ ಬೆಳೆಯಿತ್ತೆಂಬ ಶಬ್ದಕ್ಕರ್ಥ. ಈ ಪ್ರಕಾರದಿಂ ದ್ವೇಷ ಸರ್ವಾಂಗದೊಳ್ವರ್ಧನವಾಗಲು, ಅಜ್ಞಾನ ತಮೋ ವರ್ಣವನುಳ್ಳ ಸಂಸಾರ ಕಾರಣಮಪ್ಪ ಮಾಯೆ ಎಂಬ ದ್ವೈತಿಯ ಗರ್ಭ ದೊಳ್ಜನಿಸಿದ ಜೀವನೆಂಬ ಶಿಸು ಈಡಾ ಪಿಂಗಳದೋರದ ಪ್ರಾಣವಾಯು ವಿಕಾರವಿಡಿದು, ಭ್ರಮಿಸುತ್ತಿಹುದೆಂಬುದೀಗ, ಕಾಳರಕ್ಕಸಿಯ ಮಗುವು ಚಂದ್ರಸೂರ್ಯರ ರಾಟಳದ ಹುರಿಯೊಳಗೆ ತಿರಿಗಿತ್ತೆಂಬ ಶಬ್ದಕ್ಕರ್ಥ. ಈ ಕ್ರಮದಿಂ ಜೀವನು ಚರಿಸುತ್ತಿರಲು, ಸಂಕಲ್ಪ ವಿಕಲ್ಪಂಗಳಿಂ ಭ್ರಮಿ ಸುವ ಮನೋ ಮರ್ಕಟವ ಕಾಮವೆಂಬ, ಗ್ರಹಾವರಣವಾಗಿ, ಭವ ದುಃಖನೆಂಬ ವೃಶ್ಚಿಕ ದಷ್ಟದಿಂ ವಿಷಮಗತಿಯಾಗಿ ಚರಿಸುವ ದಶವಾಯು ವಿಕಾರದೊಳು ಸಿಕ್ಕಿ ಶಿವತತ್ವದ ನಿಜವನರಿಯದೆ ಶೃತಜ್ಞಾನವೆಂಬುಪಚಕ್ಷು ವಿರ್ದು ತನ್ನ ತಾ ತಿಳಿಯದೆ, ಅಜ್ಞಾನಿ ಎನಿಸಿತ್ತೆಂಬುದೀಗ, ಕಳವಳಿ ಸುವ ಕಪಿಯ ಭೂತ ಹೊಡೆದು, ಚೇಳೂರೆ ಗಾಳಿಯೊಳು ಸಿಕ್ಕಿ ಸೌರಾಷ್ಟ್ರ ಸೋಮೇಶ್ವರನ ಕಾಣದೆ ಕಣ್ಣಡಕದ ಕಣ್ಣಿನಂತೆ ಕಣ್ಣೆನಿಸಿ ಕಣ್ಣಾಗೆಟ್ಟಿ ತ್ತೆಂಬ ಶಬ್ದಕ್ಕರ್ಥ.

೧೦೪. ಅಂಗೈಯೊಳಗಣ ಹಂಸೆ ಹಾಲನೊಲ್ಲದೆ ನೀರ ಕುಡಿಯಿತ್ತು. ನೀರು ಬಾಯಾರಿ ನೀರಡಸಿ ಅರಕೆಗೊಂಡಿತ್ತು. ಅರಗಿನ ಮಡುವು ಉರಿ ಯುಂಡು ಗರಿ ಗತವಾಯಿತ್ತು. ಕರ್ಪುರದ ಮಾಡ ಅಗ್ನಿಯನೊಳಕೊಂಡು, ಉರಿಯದು ನೋಡಾ ಸೌರಾಷ್ಟ್ರ ಸೋಮೇಶ್ವರಾ.

ಟೀಕು:—ಚಿಚ್ಛಕ್ತಿಯ ಕೃಪಾ ಹಸ್ತದೊಳಿರ್ಪ ಜೀವ ಹಂಸನು ಜ್ಞಾನೋದಯದಿಂ ಸಂಸಾರ ವಿಷಯ ರಸವನೊಲ್ಲದೆ, ಸದ್ವಿವೇಕ ಜಲವ ಸ್ವೀಕರಿಸುತ್ತಿಹುದೆಂಬುದೀಗ, ಅಂಗೈಯೊಳಗಣ ಹಂಸೆ, ಹಾಲನೊಲ್ಲದೆ ನೀರ ಕುಡಿಯಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಸದ್ವಿವೇಕ ಜಲಸ್ವರೂಪ ವಾದ ಉನ್ಮನಿ ಮನ ಶಿವತತ್ವದಲ್ಲಿ ಕೂಡಬೇಕೆಂಬ ತೃಷ್ಣಾತುರದಿಂ ಪರ ಮಾನಂದ ಜಲವ ನಿಶ್ಚೈಸಿ ಮೋಕ್ಷಾಪೇಕ್ಷೆಯ ಮುಂದುಗೊಂಡಿರ್ಪುದೆಂ ಬುದೀಗ, ನೀರು ಬಾಯಾರಿ ನೀರಡಿಸಿ ಅರಿಕೆಗೊಂಡಿತ್ತೆಂಬ ಶಬ್ದಕ್ಕರ್ಥ. ಇಂತಾಗಲು ಚಿದೋಪದೇಶದಿಂ ಮಹಾಜ್ಞಾನಾಗ್ನಿಯ ಪ್ರಭಾ ಪುಂಜವೆನಿ

ಸುವ ದಿವ್ಯ ತೇಜೋಲಿಂಗವಂಗವನವಗ್ರಹಿಸಲು, ಜೀವನ ಪ್ರಕೃತಿ ಪಂಚ ರಕ್ಕೆಗಳಳಿದವೆಂಬುದೀಗ, ಅರಗಿನ ಮಾಡ ಉರಿಯುಂಡು ಗರಿಗತ ವಾಯಿತ್ತೆಂಬ ಶಬ್ದಕ್ಕರ್ಥ. ಆ ದಿವ್ಯ ತೇಜೋಲಿಂಗಕ್ಕೆ ಆಧಾರ ಚೈತ ನ್ಯವಾದ ಮಹಾಜ್ಞಾನಾಗ್ನಿಯು ಶರಣನ ಸದ್ವಾಸನ ಸಂಬಂಧವಪ್ಪ ನಿಜಾ ನುಭಾವಾಂತರಂಗ ಒಳಕೊಂಡು, ತಾಪತ್ರಯಾಗ್ನಿಯಲ್ಲಿ ಉರಿಯದೆಂಬು ದೀಗ, ಕರ್ಪುರದ ಮಾಡ ಅಗ್ನಿಯನೊಳಕೊಂಡು, ಉರಿಯದು ನೋಡಾ ಸೌರಾಷ್ಟ್ರ ಸೋಮೇಶ್ವರ ಎಂಬ ಶಬ್ದಕ್ಕರ್ಥ.

೧೦೫. ಏಳು ನೆಲೆಯ ಕರು ಮಾಡದುಪ್ಪರಿಗೆಯೊಳಗೆ ಬಂದೆ. ಮುತ್ತಿನ ನೆಲಗಟ್ಟಿನ ಮೇಲೆ, ಭಿತ್ತಿ ಇಲ್ಲದ ರತ್ನದ ಹೊದಿಕೆಯ ಮೇಲಿಪ್ಪ ಕಳಶವ ಕಂಡವನಾರನು ಕಾಣೆ. ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲರಿಯದವರು ಜಾರಿಬಿದ್ದು ಸೂರೆಹೋದರು ಕಾಲಂಗೆ.

ಟೀಕು:— ಸಪ್ತ ಚಕ್ರಂಗಳೆಂಬುದೀಗ ಏಳು ನೆಲೆ ಎಂಬ ಶಬ್ದ ಕ್ಕರ್ಥ. ಅಂತಪ್ಪ ಸಪ್ತ ಚಕ್ರಂಗಳ ಮೇಲಿಪ್ಪ ಸಹಸ್ರ ದಳ ಪದ್ಮದಿಂ ದೊಪ್ಪುವ ಬ್ರಹ್ಮರಂಧ್ರಸ್ಥಾನವೆಂಬುದೀಗ ಏಳು ನೆಲೆಯ ಕರು ಮಾಡ ದುಪ್ಪರಿಗೆಯೊಳಗೆಂಬ ಶಬ್ದಕ್ಕರ್ಥ. ಅಂತಪ್ಪ ಬ್ರಹ್ಮರಂಧ್ರದೊಳಗೆ ಎರಡಿ ಲ್ಲದಿರ್ಪ ಮುಕ್ತಿ ಸ್ವರೂಪವಾದ ಸುಚಿತ್ತವೆಂಬ ನೆಲಗಟ್ಟಿನ ಮೇಲೆ ಎಂಬು ದೀಗ, ಬಂದೆ ಮುತ್ತಿನ ನೆಲೆಗಟ್ಟಿನ ಮೇಲೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸುಚಿತ್ತವೆಂಬ ನೆಲೆಗಟ್ಟಿನಲ್ಲಿ ತಾನೆಂಬಹಂಕಾರವಳಿವ ಪರಿಪೂರ್ಣ ಜ್ಞಾನಾಂ ಬರವೆ ಆವರಣವಾಗಿಹುದೆಂಬುದೀಗ, ಭಿತ್ತಿ ಇಲ್ಲದ ರತ್ನದ ಹೊದಿಕೆ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನಾಂಬರದಲ್ಲಿ ಪ್ರಕಾಶಿಸುತ್ತಿರ್ಪ ಜ್ಞಾನ ಸ್ವರೂಪವಾದ ನಿಷ್ಕಲ ಶಿವತತ್ವವಿಹುದೆಂಬುದೀಗ, ಮೇಲಿಪ್ಪ ಕಳಸವೆಂಬ ಶಬ್ದಕ್ಕರ್ಥ. ಅಂತಪ್ಪ ನಿಷ್ಕಲವಸ್ತುವಭಿನ್ನಜ್ಞಾನ ದೃಷ್ಟಿಯಿಂ ಕಂಡಿಹೆನೆಂಬವರಿಗಸಾಧ್ಯವೆಂಬುದೀಗ ಕಂಡವರನಾರನು ಕಾಣೆನೆಂಬ ಶಬ್ದಕ್ಕರ್ಥ. ಅಂತಪ್ಪ ನಿರಾಕಾರವಾದ ಪರಬ್ರಹ್ಮವ ಶ್ರೀಗುರುಕಾರು ಣ್ಯದಿಂ ಪ್ರತ್ಯಕ್ಷವ ಮಾಡಿಕೊಂಡು ಕರಸ್ಥಲದಲ್ಲಿ ದೃಢವಿಡಿದು, ಸುಜ್ಞಾ ನಕ್ರಿಯಿಂದಲಾಚರಿಸಿ, ಅಂಗ ಮನಪ್ರಾಣಂಗಳ ಲಿಂಗದಲ್ಲಿ ಸ್ವಸ್ಥಿರವ ಮಾಡಲರಿಯದ ಭಿನ್ನಜ್ಞಾನಿಗಳು ಲಕ್ಷವಿಟ್ಟು ಪರಬ್ರಹ್ಮವ ಸಾಧಿಸಿಹೆ ನೆಂದೊಡೆ, ಸಾಧ್ಯವಲ್ಲದೆ ಶಿವತತ್ವಕ್ಕೆ ಭಿನ್ನವಾಗಿ ಭವಕ್ಕೀಡಾಗಿ, ಯಮುನ

ಬಾಧೆಗೊಳಗಾವರೆಂಬುದೀಗ, ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲರಿಯದವರು ಜಾರಿಬಿದ್ದು ಸೂರೆ ಹೋದರು ಕಾಲಾಂಗೆ ಎಂಬ ಶಬ್ದಕ್ಕರ್ಥ.

೧೦೬. ನಟ್ಟಡವಿಯಲ್ಲಿ ಕೆಂಡದ ಮಳೆಗರೆದು, ಊರಡವಿಯುನೊಂದಾಗಿ ಸುಟ್ಟಿತ್ತು ನೋಡಾ! ಊರೈವರನಾರೈವರ ಮೂಗು ಹೋಯಿತ್ತು ನೋಡಾ! ಹೋಗದ ಊರಿನ ಬಾರದ ದಾರಿಯ ಕಂಡು ಸುಖಿಯಾದೆನಯ್ಯ ಸೌರಾಷ್ಟ್ರ ಸೋಮೇಶ್ವರಾ.

ಟೀಕು:— ಶರಣನ ಮನೋಮಧ್ಯದಲ್ಲಿ ಸುಜ್ಞಾನಾಗ್ನಿ ಪ್ರಭವಿಸಿ ಸಕಲೇಂದ್ರಿಯವೆಂಬರಣ್ಯದಲ್ಲಿ ಕರೆವುತ್ತಿಹುದೆಂಬುದೀಗ, ನಟ್ಟಡವಿಯಲ್ಲಿ ಕೆಂಡದ ಮಳೆಗರೆದು ಎಂಬ ಶಬ್ದಕ್ಕರ್ಥ. ಆ ಜ್ಞಾನಾಗ್ನಿ ದೇಹೇಂದ್ರಯಂಗಳ ಸುಟ್ಟುರುಹಿತ್ತೆಂಬುದೀಗ, ಊರಡವಿಯುನೊಂದಾಗಿ ಸುಟ್ಟಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಾಗಲಾ ದೇಹ ಸಂಬಂಧವಾದ ಪಂಚಭೂತಂಗಳ ತತ್ಸಂಬಂಧವಾದ ಸುಖವನಾರೈದನುಭವಿಸುವ ಕರಣಂಗಳ ಸರ್ವಾಭಿಮಾನಹಂಕಾರವಳಿಯಿತ್ತೆಂಬುದೀಗ, ಊರೈವರ ನಾರೈವರ ಮೂಗ ಹೋಯಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಾಗಲಾ ಶರಣನು ಆರೂ ಎಯ್ದುಬಾರದ ಮೋಕ್ಷ ಗ್ರಾಮದ ಭವಕ್ಕೆ ಬಾರದ ಸತ್ಪಥ ಮಾರ್ಗವ ಸದ್ವಿವೇಕದಿಂ ಕಂಡು, ಪರಮ ಪರಿಣಾಮಿಯಾಗಿರ್ದ ಶರಣನೆಂಬುದೀಗ, ಹೊಗದ ಊರಿನ ಬಾರದ ದಾರಿಯ ಕಂಡು, ಸುಖಿಯಾದೆನಯ್ಯ ಸೌರಾಷ್ಟ್ರ ಸೋಮೇಶ್ವರನೆಂಬ ಶಬ್ದಕ್ಕರ್ಥ.

೧೦೭. ಆಡಿನ ತತ್ತಿಯೊಳಗೊಂದು, ಹೇರಡವಿ ಇದ್ದಿತ್ತು. ಆ ಹೇರಡವಿಯೊಳಗೆ ಮೇರುವೆ ಇದ್ದಿತ್ತು. ಆ ಮೇರುವಿನ ಒಡಲಲ್ಲಿ ಚತುರ್ದಶ ಭುವನ ಚರಾಚರಂಗಳೆಲ್ಲ ಇದ್ದಿತ್ತು. ತತ್ತಿ ಒಡೆಯಿತ್ತು. ಹೇರಡವಿಯೊಳಗೆ ಅಡವಿ ಅಡಗಿತ್ತು ಸೌರಾಷ್ಟ್ರ ಸೋಮೇಶ್ವರ ಲಿಂಗ ಇಲ್ಲದಂತೆ ಇತ್ತು.

ಟೀಕು:— ರಜೋಗುಣ ಸಂಬಂಧವಾದ ಜೀವನ ಪ್ರಕೃತಿರೂಪವಾದ ತನುವಿನ ಮಧ್ಯದಲ್ಲಿ ಭವಾರಣ್ಯ ತನ್ಮಯವಾಗಿದ್ದಿತ್ತೆಂಬುದೀಗ, ಆಡಿನ ತತ್ತಿಯೊಳಗೊಂದು ಹೇರಡವಿ ಇದ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯದ ಮಧ್ಯದಲ್ಲಿ ಅಹಂಕಾರವೆಂಬ ಮೇರುವೆ ಹುಟ್ಟಿತ್ತೆಂಬುದೀಗ, ಹೇರ

ಡವಿಯೊಳಗೆ ಮೇರುವೆ ಇದ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಮಧ್ಯವಲ್ಲಿ ಹದಿನಾಲ್ಕು ಲೋಕ ಸಚರಾಚರ ಪ್ರಾಣಿಗಳೆಲ್ಲ, ಆ ಅಹಂಕಾರ ಯುಕ್ತವಾಗಿಹವೆಂಬುದೀಗ, ಆ ಮೇರುವಿನ ಒಡಲಲ್ಲಿ ಚತುರ್ದಶ ಭುವನ ಸಚರಾಚರಂಗಳೆಲ್ಲ ಇದ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಿಗಳೊಳಗೆ ಒಬ್ಬ ಜೀವಂಗೆ ಸುಜ್ಞಾನೋದಯವಾಗಲು ಸಕಲ ಪ್ರಪಂಚು ನಿವೃತ್ತಿಯ ಮಾಡಿ ಗುರೂಪಾವಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ಸರ್ವಾಂಗ ಲಿಂಗ ಸಂಬಂಧವ ಮಾಡಲು, ತನುಭಾವ ನಷ್ಟವಾಯಿತ್ತೆಂಬುದೀಗ, ತತ್ತಿ ಒಡೆಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗ ಸಂಬಂಧದಿಂ ತನು ಭಾವ ನಷ್ಟವಾದ ಶರಣಂಗೆ ಭವಾರಣ್ಯವಳಿಯಿತ್ತೆಂಬುದೀಗ, ಅಡಗಿ ಅಡಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯ ನಷ್ಟವಾದ ಶರಣನ ಸರ್ವಾಂಗವು ಚಿದ್ಘನಲಿಂಗದಲ್ಲಿ ಸಮರಸವಾಗಲು, ಶರಣ ಲಿಂಗವೆಂಬುಭಯ ಭಾವವಿಲ್ಲದೆ ಹೋಯಿತ್ತೆಂಬುದೀಗ, ಸೌರಾಷ್ಟ್ರ ಸೋಮೇಶ್ವರ ಲಿಂಗ ಇಲ್ಲದಂತೆ ಇದ್ದಿತ್ತೆಂಬ ಶಬ್ದಕ್ಕರ್ಥ.

೧೦೮. ಆಶ್ರಮಿಗಳೆದ್ದು ಅತ್ಯಾಶ್ರಮವ ತಳೆದು ತತ್ವಜ್ಞಾನ ಭರಿತನಾಗಿ ನಿಂದುದೆ ಎನ್ನಿಷ್ಟ. ಅಣು ಮಾಯಾ ಕಾರ್ಮಿಕ ಮಲತ್ರಯವನುಳಿದು ನಿರ್ಮಲಾಂಗವಾದುದೆ ಎನ್ನಿಷ್ಟ. ಅರಿವರತು ಮರಹು ನಷ್ಟವಾಗಿ ಶರಣಸ್ಥಲಕ್ಕೆ ಸಂದು ದ್ವಿಕರ್ಮ ನಷ್ಟವಾಗಿ ನಿಂದುದೆ ಎನ್ನಿಷ್ಟ. ಸತ್ಯಜ್ಞಾನಾನಂದ ಶಿವಲಿಂಗಾಂಗಿ ಸೌರಾಷ್ಟ್ರ ಸೋಮೇಶ್ವರ ಲಿಂಗವಾದುದೆ ಎನ್ನಿಷ್ಟ.

೧೦೯. ಅರಿವು ಮರಹಳಿದುದಕ್ಕೇನ ದೃಷ್ಟ? ಆವ ಭ್ರಮೆಯಳಿದುದೆ ದೃಷ್ಟ. ಭಾವಭ್ರಮೆ ಅಳಿದುದಕೇನು ದೃಷ್ಟ? ಮನ ಸಂಚಲವಳಿದುದೇ ದೃಷ್ಟ. ಮನ ಸಂಚಲವಳಿಮುದಕೇನು ದೃಷ್ಟ? ತನುವಿಕಾರವಳಿದುದೇ ದೃಷ್ಟ. ತನುವಿಕಾರವಳಿದುದಕೇನು ದೃಷ್ಟ? ಪರಮ ಸುಖವಿಂಬುಗೊಂಡುದೆ ದೃಷ್ಟ. ಪರಮ ಸುಖವಿಂಬುಗೊಂಡುದಕ್ಕೇನು ದೃಷ್ಟ? ಸೌರಾಷ್ಟ್ರ ಸೋಮೇಶ್ವರನೆಂಬ ನಿಜ ತತ್ತ್ವಾಂಗವಾದುದೆ ದೃಷ್ಟ.

೧೧೦. ಅರ್ಥೇಷಣ, ಪುತ್ರೇಷಣ, ದಾರೇಷಣವೆಂಬ ಈ ಷಣತ್ರಯವನುಳಿದು, ಅಸಿ, ಮಸಿ, ಕೃಷಿ, ವಾಣಿಜ್ಯಂಗಳೆಂಬ ವ್ಯಾಪಾರಂಗತವಾಗಿ, ಸಂಸಾರ ಸ್ಪೃಹವಳಿದು ನಿಸ್ಪೃಹನಾಗಿ ರಕ್ತ, ಅನುರಕ್ತ,

ಅತಿರಕ್ತವೆಂಬ ರಕ್ತತ್ರಯಗೆಟ್ಟು ವಿರಕ್ತನಾಗಿ, ಸಗುಣದಲ್ಲಿ ಸಲ್ಲದೆ ನಿರ್ಗುಣದಲ್ಲಿ ನಿಲ್ಲದೆ, ಸಗುಣ ನಿರ್ಗುಣಕ್ಕುಪಮಾತೀತ್ರನಾದ ಶಿವಲಿಂಗಾಂಗಿ ಸೌರಾಷ್ಟ್ರ ಸೋಮೇಶ್ವರಲಿಂಗವಾದುದೆನ್ನಿಷ್ಟ.

೧೧೧. ಖಂಡಿತವಳಿದಿಂದ್ರಿಯಂಗಳಖಂಡಿತವಾದವಯ್ಯಾ. ಖಂಡಿತವಳಿದು ತನ್ಮಾತ್ರೆಗಳಖಂಡಿತವಾದವಯ್ಯಾ. ಖಂಡಿತವಳಿದು ಭೌತಿಕಂಗಳಖಂಡಿತವಾದವಯ್ಯಾ! ಪಂಚಭೂತಮಯವಾದ ಬ್ರಹ್ಮಾಂಡ ಶರಣನಂಗದಲ್ಲಿ ಪಂಚಬ್ರಹ್ಮಮಯವಾಯಿತ್ತಾಗಿ ಇಷ್ಟಖಂಡಿತವಾಗಿ, ಸೌರಾಷ್ಟ್ರ ಸೋಮೇಶ್ವರನ ಶರಣರಿಗೆ ಹಿರಿದೊಂದು ಘನವಿಲ್ಲ.

೧೧೨. ಸೂಕ್ಷ್ಮನಾದದಿಂದತ್ತಣಾದಿ ಬಿಂದುವಿನಲ್ಲಿ ಅರಿವು ರೂಪಾದ ಖಂಡಿತ ನಿರ್ವಯಲು ಚಿತ್ಸ್ವರೂಪನ ತಾಳಿ ಮಹಾಘನ ರೂಪವಡಗಿಸಿದ ಸ್ವತಂತ್ರ ನಿಃಕಳ ನಿರಂಜನ, ಪರೆ ಪಶ್ಯಂತಿ ವೈಖರಿಗೆ ಮೂಲವಾದ ಪ್ರಭಾಶಕ್ತಿಯೊಳಗೆ ತೆರಹಿಲ್ಲದ ಬಯಲು ತಾನಾದ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಭೇದವಳಿದ ಶರಣ.

೧೧೩. ಆಕೃತಿ ನಿರಾಕೃತಿಗಳೆಂಬ ಕೃತಿಯಳಿದು ವ್ಯಾಕುಳ ನಿರಾಕುಳವಡಗಿ, ನಿಃಕರಿಸುವುದು, ಸ್ವೀಕರಿಸುವುದಲ್ಲದೆ, ಚರಾಚರನಲ್ಲದಖಿಳಾತೀತನಾಗಿ ನಿಂದ ನಿಜವು 'ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣ.

೧೧೪. ಲಿಂಗವೆ ಪ್ರಾಣವಾಗಿ, ಪ್ರಾಣವೆ ಲಿಂಗವೆಂಬ ಪ್ರಪಂಚವನರಿಯೆನಯ್ಯಾ! ಘನವು ಮನದಲ್ಲಿ ವೇಧಿಸಿ ಮನ ಲಿಂಗ ಲೀಯವಾಗಿ, ನೆನಹಿನ ಸಂಕಲ್ಪ ಕ್ರಿ ನಿಃಪತಿಯಾಗಿ ಅಂಗಲಿಂಗವೆಂಬ ಭಾವಗೆಟ್ಟು ಲಿಂಗವೆ ಸರ್ವಾಂಗ ಮುಖವಾದ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣನ ಸ್ವತಂತ್ರತೆಯ ಗತಿಯ ನೋಡಾ.

೧೧೫. ಕಲ್ಲಿನಲ್ಲಿ ಕನಕ ಒಗೆದರೆ ಕನಕ ಕಲ್ಲಿಂಗೆ ಕಿಂಕರನಪ್ಪುದೆ? ಶುಕ್ತಿಯಲ್ಲಿ ಮೌಕ್ತಿಕ ಒಗೆದರೆ ಮುತ್ತು ಶುಕ್ತಿಗೆ ಕಿಂಕರನಪ್ಪುದೆ? ಧರೆಯಲ್ಲಿ ಸುರತರು ಒಗೆದರೆ ಸುರತರು ಧರೆಗೆ ಕಿಂಕರವಪ್ಪುದೆ? ಜನನಿಯ ಉದರದಲ್ಲಿ ಘನಶರಣ ಒಗೆದರೆ ಜನನಿಜನಕಂಗೆ ಕಿಂಕರನಪ್ಪನೆ? ಸೌರಾಷ್ಟ್ರ ಸೋಮೇಶ್ವರ ನಿಮ್ಮ ಶರಣರು ಸ್ವತಂತ್ರ ಶೀಲರು ಅಗ್ರಗಣ್ಯರು

೧೧೬. ಸಾಕಾರ ನಿರಾಕಾರದೊಳಗೆ ಚಿದ್ರೂಪವಂ ತಳೆದ ಮಹಾಮಹಿಮನಿರಲು ಬೆಳುದಿಂಗಳೊಳಗಣ ಅಚ್ಚ ಪಳುಕಿನ ಪರ್ವತವ ಬೆಳು

ದಿಂಗಳೆಂದಿಪ್ಪಂತೆ, ಸ್ಫಟಿಕದ ಘಟದೊಳಗಣ ಜ್ಯೋತಿಯಂತೆ, ಸದ್ಭಾವ ಪ್ರಕಾಶಿಸಲು ಒಳಹೊರಗೆಂಬುದಿಲ್ಲ ಸೌರಾಷ್ಟ್ರ ಸೋಮೇಶ್ವರನ ಶರಣಂಗೆ.

೧೧೭. ಪ್ರತಿ ರಹಿತನಾದ ಲಿಂಗದಲ್ಲಿ, ಪ್ರತಿ ರಹಿತನಾದ ಮಹಿಮಂಗೆ ಅತಿಶಯ ಒಂದಿಲ್ಲ. ಸಂಸ್ಮೃತಿ, ವಿಸ್ಮೃತಿಗಳಿಲ್ಲ. ಸೂಕ್ಷ್ಮಾಸೂಕ್ಷ್ಮವಿಲ್ಲ. ಯೋಗ ವಿಯೋಗವಿಲ್ಲ. ಅಭೇದ್ಯ ಚಿತ್ಪ್ರಕಾಶಂಗೆ ಒಳಗು ಹೊರಗಿಲ್ಲ. ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣಂಗೆ.

೧೧೮. ವೇದಾಗಮಂಗಳ ದ್ವೈತಾದ್ವೈತದ ಬಗೆಗೆ ಸಿಲುಕುವನಲ್ಲ ಶರಣನ ತರ್ಕ್ಯನು. ಅಖಿಲಾತೀತ ಚರಾಚರಕೆ ನಿಲುವವನಲ್ಲ ಅತ್ಯತಿಷ್ಠ ದ್ದಶಾಂಗುಲನಹಂಕಾರ ವೈದದನುಪನು. ಸ್ಥಾವರ ಜಂಗಮವಲ್ಲದ ಭರಿತ ಸರ್ವಕರ್ತೃ ಸೌರಾಷ್ಟ್ರ ಸೋಮೇಶ್ವರನಲ್ಲಿ ಅವಿರಳವಾದ ಶರಣ.

೧೧೯. ಅರಿವಿನ ತರಹರದಿಂದ ಭಾವ ಸದ್ಭಾವವನೈದಿದ ಶರಣನ ಭಾವದೊಳಗೆ ಲಿಂಗದೇವ ಲಿಂಗದೊಳಗೆ, ಸದ್ಭಾವ ಭೇದವಿಲ್ಲದೆ, ಮಾರ್ಗ ಕ್ರಿ ಮೀರಿದ ಕ್ರಿಗತೀತನಾದ ಲಿಂಗೈಕ್ಯನ ಪ್ರಾಣದೊಳಗೆ ಲಿಂಗ ಲಿಂಗ ಭಾವದೊಳಗೆ ಪ್ರಾಣ, ಇಂತೀ ಶಿವಭಾವ ಜೀವವಾಗಿಪ್ಪ ಶರಣಂಗೆ ಲಿಂಗ ಮುಖವಾದ ಸತ್ಪಥವಿದೆ ಕಂಡಯ್ಯ ಸೌರಾಷ್ಟ್ರ ಸೋಮೇಶ್ವರಾ.

೧೨೦. ಚೈತನ್ಯಕ್ಕೆ ಚೈತನ್ಯನಾಗಿ, ನಿನ್ನೊಳಗೆ ಪ್ರಾಣ, ಪ್ರಾಣದೊಳಗೆ ನೀನಿಪ್ಪ ಭೇದವ ನಿಮ್ಮ ಜ್ಞಾನದಿಂದವೆ ಕಂಡು, ನೀ ನಾನೆಂಬ ಭೇದವ ಮರೆದು, ನಿಜಲಿಂಗ ಪ್ರಾಣಸಂಗ ಸುಖಿಯಾಗಿಪ್ಪ ಶರಣ ನೀನೆಯಯ್ಯ ಸೌರಾಷ್ಟ್ರ ಸೋಮೇಶ್ವರಾ.

೧೨೧. ಮನ ಮುಕ್ತನಾದ ಶರಣ ತಾನೆ ಲಿಂಗವಾಗಿ, ಪ್ರಾಣ ಮುಕ್ತನು ನೋಡಾ ಅಯ್ಯ. ಪ್ರಸಾದ ಸನ್ನಿಹಿತನಾಗಿ ಕಾಯ ಮುಕ್ತನು. ಇದಕ್ಕೆ ಶ್ಲೋಕ "ಸ್ವಲಿಂಗೆ ಪ್ರಾಣಮುಕ್ತಸ್ಯ ಮನೋ ಮುಕ್ತಸ್ಯ ಜಂಗಮಃ ಪ್ರಸಾದ ಕಾಯ ಮುಕ್ತಸ್ಯ ತ್ರಿವಿಧಂ ತತ್ವನಿಶ್ಚಯ" ಎಂದುದಾಗಿ, ಇಂತೀ ತ್ರಿವಿಧ ಮುಕ್ತನಾಗಿ ನಿರ್ಮಲ ನಿರ್ಮಾಯ ಸತ್ಯ ಜ್ಞಾನಾನಂದ ಭರಿತ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣ ಅಕಾಯ ಚರಿತ್ರನು.

೧೨೨. ಮಲ ಜಲವ ತೊಳೆಯಲುಂಟಲ್ಲದೆ, ನಿರ್ಮಲ ಜಲವ ತೊಳೆಯಲುಂಟೆ? ತವರಾಜ ಕಗ್ಗಿನವಾಗಬಲ್ಲುದೆ? ಮುತ್ತು ನೀರಾಗಬ

ಲ್ಲುದೆ? ಸಹಸ್ರ ನಯನ ಚತುರ್ಮುಖ ಅಧೋಕ್ಷಜ ರುದ್ರಪದವನತಿಗ ಳೆದು, ಭಾವ ಬ್ರಹ್ಮವಾದ ಕಾಯ ಚರಿತ್ರಂಗೆ ಪೂರ್ವ ಕ್ರಿಯೆಗಳುಂಟೆ? ತನು ಗುಣವಳಿದ ಲಿಂಗದೇಹಿ ನಿರ್ದೇಹಿ ಅಪ್ರತಿಮ ನಿತ್ಯಜ್ಯೋತಿಯೊಳಗೆ ನಿಃಪತಿಯಾದ ಸೌರಾಷ್ಟ್ರ ಸೋಮೇಶ್ವರ ಲಿಂಗದೊಳಿಪ್ಪ ಅಪ್ರತಿಮ ಶರಣ.

೧೨೩. ತಾನೆ ಶಿವನೆಂದು ಕುರುಹ ತೋರುವ ಹಾಗೆ ಮರ್ತ್ಯದಲ್ಲಿ ಸುಳಿದನಲ್ಲದೆ, ಕುರುಹುಂಟೆ ಶರಣಂಗೆ? ಮತ್ತೊಮ್ಮೆ ಅರಿವು ಮರಹುಂಟೆ? ಬಿಚ್ಚುಬೇರಿಲ್ಲ ಬೆರಸಿಹೋದಲ್ಲದೆ ದ್ವಂದ್ವ ರಹಿತ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣ.

೧೨೪. ಅಂಗದ ಕಳೆ ಲಿಂಗಸಂಗನಾಗಿ, ಅಂಗವೆಂಬ ಶಂಕೆಯ ಭಂಗವ ತೋರದು. ಲಿಂಗಾಂಗ ಸಂಗವೆಂಬ ಸಂದ ಮೀರಿ, ಪರಮ ಪ್ರಕಾಶದಿಂದ ಬೆಳಗುವ ಸ್ವಯಂ ಜ್ಯೋತಿಯ ನಿಜದಲ್ಲಿ ನಿಂದು ತನ್ಮಯನಾದ ಪರಮ ಲಿಂಗ ಕಾಯ ಸುಚರಿತ್ರ ನಿಶ್ಚಿಂತ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣ.

೧೨೫. ಅಂಗವೆಂಬಂಗನೆಯು ಆತ್ಮನೆಂಬ ಪುರುಷನನಪ್ಪಿ, ಮುಂಡೆತನವಿಲ್ಲದೆ ಇಪ್ಪ ಭೇದವ ತಿಳಿದು ನೋಡಿರಣ್ಣಾ. ಈ ಕುಂಟಣಿಯಾದ ಒಡಹುಟ್ಟ ನಪುಂಸಕನಾದ ಕಾರಣ ಲಿಂಗಸಂಗಿಯಲ್ಲದೆ ಹೋದ ಕೇಳಿರಣ್ಣಾ! ಪ್ರಾಣನು ಪುರುಷನಾದರೂ ಲಿಂಗವ ಕೂಡುವ ಭರದಿಂದ ಸತಿಯಾಗ ಬಲ್ಲ. ಶರಣ ಸತಿ ಲಿಂಗ ಪತಿ ಎಂಬುದುಂಟಾಗಿ ಶಿವಜ್ಞಾನವೆಂಬ ಸಖಿಯ ಕೈವಿಡಿದು ಸೌರಾಷ್ಟ್ರ ಸೋಮೇಶ್ವರ ಲಿಂಗವ ಕೂಡಿ ಸುಖಿಯಾದೆನು.

೧೨೬. ಎನ್ನಂಗ ಮನ ಪ್ರಾಣ ತ್ರಿವಿಧದಲ್ಲಿ ತ್ರಿವಿಧದ ಲಿಂಗ ಸನ್ನಿಹಿತವೇದರೆ ಗುರು ಸಂಬಂಧದಿಂದಾದ ಇಷ್ಟಲಿಂಗ, ಲಿಂಗ ಸಂಬಂಧದಿಂದಾದ ಪ್ರಾಣಲಿಂಗ, ಜಂಗಮ ಸಂಬಂಧದಿಂದಾದ ತೃಪ್ತಿಲಿಂಗ. ತನುವಿನ ಕೈಯ್ಯಲ್ಲಿ ಇಷ್ಟಲಿಂಗ, ಮನದ ಕೈಯ್ಯಲ್ಲಿ ಪ್ರಾಣಲಿಂಗ, ಪ್ರಾಣನ ಕೈಯ್ಯಲ್ಲಿ ತೃಪ್ತಿಲಿಂಗ. ಇಂತು ಅಂತರಂಗ ಬಹಿರಂಗಾತ್ಮ ಸಂಗದಿಂದ ತೆರಹಿಲ್ಲದಿಪ್ಪ ಗುರುಲಿಂಗಜಂಗಮ ತ್ರಿವಿಧ ಸಾರಾಯ ಸಂಪತ್ತು ಸೌರಾಷ್ಟ್ರ ಸೋಮೇಶ್ವರಾ ನೀನೊಲಿದ ಶರಣಂಗೆ.

೧೨೭. ಪೃಥ್ವಿಯ ಕೂಡಿ ನೆಲನಹನಲ್ಲ. ಅಪ್ಪುವ ಕೂಡಿ ಜಲವಹನಲ್ಲ. ಅಗ್ನಿಯ ಕೂಡಿ ಕಿಚ್ಚಹನಲ್ಲ. ವಾಯುವ ಕೂಡಿ ಗಾಳಿಯಹ

ನಲ್ಲ. ಆಕಾಶವ ಕೂಡಿ ಬಯಲಹನಲ್ಲ. ಆತ್ಮನ ಕೂಡಿ ಭವ ಕರ್ಮಿ ಯಲ್ಲ. ಲಿಂಗವ ಕೂಡಿ ಲಿಂಗವಹ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣ.

೧೨೮. ಕುಂಜರನ ಪಂಜರವೆ ಸಂಜೀವನವಾದವರೆಲ್ಲರು ಭಕ್ತ ರೆಂತಪ್ಪರಯ್ಯ? ಮುಪ್ಪುರದಲ್ಲಿ ಮುಳುಗಿದವರೆಲ್ಲರು ಯುಕ್ತರೆಂತಪ್ಪ ರಯ್ಯ? ಭೂತ ಭವಿಷ್ಯದ್ವರ್ತಮಾನಕ್ಕೆ ಸಿಲುಕಿದವರೆಲ್ಲರು ವಿರಕ್ತರೆಂ ತಪ್ಪರಯ್ಯ? ಇಂತಪ್ಪವರು ನಮ್ಮ ಸೌರಾಷ್ಟ್ರ ಸೋಮೇಶ್ವರ ಲಿಂಗಕ್ಕೆ ಸಲ್ಲದೆ ಹೋದರು.

೧೨೯. ಮಾತ ಕಲಿತು ಮಂಡೆಯ ಬೋಳಿಸಿ ವೇಷ ಭಾಷೆಗಳಿಂ ದೇಶ ಕೋಶ ಭುವನಂಗಳಂ ತೊಳಲಿ ಬಳಲಿ ನಿಂದರೇನಾಯಿತೊ? ಜಟಾಬಂಧದಿಂ ಗಡ್ಡದ ಹಿರಿಯರಪ್ಪ ಭೋ ನಾ ಎಂದು ಬಿಂದು ಪೊಸರು ಹೋಗದಿದ್ದರೇನಾಯಿತೊ? ಹೆಚ್ಚು ಕುಂದು ಬಿಚ್ಚದನ್ನಕ್ಕ ತಥ್ಯ ಮಿಥ್ಯ ರಾಗ ದ್ವೇಷ ಭಯ ಮೋಹಂಗಳುಳ್ಳನ್ನಕ್ಕ ಸೌರಾಷ್ಟ್ರ ಸೋಮೇಶ್ವರ ವೆಂತು ಸಾಧ್ಯವಪ್ಪುದಯ್ಯ.

೧೩೦. ಅಂದಿನವರು ಇಂದಿನವರೆಂಬ ಸಂದೇಹಿಗಳಿಗೆ ಸಂದೇಹ ಮುಂದುಗೊಂಡಿಪ್ಪುದು ನೋಡಾ! ಅಂದೊಂದು ಪರಿ ಇಂದೊಂದು ಪರಿಯೆ ಗುರುಲಿಂಗಜಂಗಮ? ಅಂದೊಂದು ಪರಿ ಇಂದೊಂದು ಪರಿಯೆ ಪಾದೋ ದಕ ಪ್ರಸಾದ? ಅಂದೊಂದು ಪರಿ ಇಂದೊಂದು ಪರಿಯೆ ಶರಣ ಲಿಂಗ ಸಂಬಂಧ? ಅಂದೊಂದು ಪರಿ ಇಂದೊಂದು ಪರಿಯೆ ಅರಿವು ಆಚರಣೆ? ಅಂದೊಂದು ಪರಿ ಇಂದೊಂದು ಪರಿಯೆ ಸ್ಥಲಕುಳಂಗಳು? ಅಂದೊಂದು ಪರಿ ಇಂದೊಂದು ಪರಿಯೆ ಸೌರಾಷ್ಟ್ರ ಸೋಮೇಶ್ವರ ಲಿಂಗವು?

೧೩೧. ಕೃತಯುಗ ಮೂವತ್ತುನಾಲ್ಕುಲಕ್ಷ ಐವತ್ತಾರುಸಾವಿರ ವರು ಷದಲ್ಲಿ ಕೇದಾರ ದೇವರು ಮೂಲಸ್ಥಾನ. ತ್ರೇತಾಯುಗ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರುಷದಲ್ಲಿ ಸೇತು ರಾಮೇಶ್ವರ ದೇವರು ಮೂಲಸ್ಥಾನ. ದ್ವಾಪರಯುಗ ಎಂಟು ಲಕ್ಷ ಅರುವತ್ತುನಾಲ್ಕು ಸಾವಿರ ವರುಷದಲ್ಲಿ ಸೌರಾಷ್ಟ್ರ ಸೋಮೇಶ್ವರ ದೇವರು ಮೂಲಸ್ಥಾನ. ಕಲಿ ಯುಗ ನಾಲ್ಕುಲಕ್ಷ ಮೂವತ್ತೆರಡು ಸಾವಿರ ವರುಷದಲ್ಲಿ ಶ್ರೀಗಿರಿ ಮಲ್ಲಿ ಕಾರ್ಜುನ ದೇವರು ಮೂಲಸ್ಥಾನ. ಇದು ಕಾರಣ ಕೂಡಲಚನ್ನಸಂ ಗಯ್ಯ ನಿಮ್ಮ ಸಾಕ್ಷಿಯಾಗಿ ಭಕ್ತರಿಗೆ ಜಂಗಮವೆ ಮೂಲಸ್ಥಾನವಯ್ಯಾ.

೧೩೨. ಸುಳಿದೊಡೆ ಒಡಲಿಲ್ಲ, ನಿಂದಡೆ ನೆಳಲಿಲ್ಲ, ನಡೆದಡೆ ಗಮನವಿಲ್ಲ, ನುಡಿವಡೆ ಶಬ್ದವಿಲ್ಲ, ದಗ್ಧಪಟ ನ್ಯಾಯದಂತೆ. ಉಂಡಡೆ ಉಪಾಧಿ ಇಲ್ಲ, ಉಣದಿರ್ದಡೆ ಕಾಂಕ್ಷೆ ಇಲ್ಲ, ಯಥಾ ಲಾಭ ಸಂತುಷ್ಟನಾಗಿ. ಸ್ತುತಿ ಇಲ್ಲ, ನಿಂದೆ ಇಲ್ಲ, ನೆಂಟರಿಲ್ಲ, ಹಗೆ ಇಲ್ಲ, ಅರುಹು ಇಲ್ಲ, ಮರಹು ಇಲ್ಲ, ತಾನೆಂಬ ನೆನಹಿಲ್ಲಾಗಿ. ಇದಕ್ಕೆ ಶೃತಿ "ಯತ್ಪ್ರಾಣ ಲಿಂಗಸಂಧಾನಂ ತಲ್ಲಿಂಗಂ ಪ್ರಾಣಸಂಯುಕ್ತಂ। ಪ್ರಾಣಲಿಂಗದ್ವಯೋರ್ಭೇದಂ ನ ಭೇದಂ ನ ಚ ಸಂಶಯಃ॥ ದಗ್ಧಾಂಬರಂಗ ಕರ್ಮಸ್ಯ ಇಂದ್ರಿಯಾ ಮನಸಾ ವಚಃ। ಭಾವ ಸದ್ಭಾವ ನಿರ್ವಾಣಂ ಯತ್ಪರಾತ್ಪರಲೀಯತೆ॥" ಇಂತೆಂದುದಾಗಿ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು ಲಿಂಗಪ್ರಾಣಿಗಳಾಗಿ ಒಡಲ ಮರೆಗೊಂಡು ಎಂತಿರ್ದೊಡಂ ಎಂತು ನಡೆದೊಡಂ ಅಂತೆ ಸಂದಾ.

೧೩೩. ಹರಣವಿದ್ದೂ ಹರಣವಿಲ್ಲ, ಹರಣ ಲಿಂಗದಲ್ಲಿ ನಿರಿಯಾಣವಾಯಿತ್ತಾಗಿ. ಮನವಿದ್ದೂ ಮನವಿಲ್ಲ, ಮನವು ಮಹದಲ್ಲಿ ಲೀಯವನೆಯ್ದಿತ್ತಾಗಿ. ಜೀವವಿದ್ದೂ ಜೀವವಿಲ್ಲ, ಜೀವ ಸಜ್ಜೀವವಾಯಿತ್ತಾಗಿ. ಭಾವವಿದ್ದೂ ಭಾವವಿಲ್ಲ, ಭಾವ ನಿರ್ಭಾವವಾಯಿತ್ತಾಗಿ. ಕರಣಂಗಳಿದ್ದೂ ಕರಣಂಗಳಲ್ಲ, ಕರಣಂಗಳಲ್ಲಿ ಕರಣಂಗಳಾಗಿ. ಇಂತೀ ಸರ್ವವು ಇದ್ದೂ ಸರ್ವವು ಇಲ್ಲದ ಕಾರಣ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು ಉಂಡು ಉಪವಾಸಿಗಳು ಬಳಸಿ ಬ್ರಹ್ಮಚಾರಿಗಳು.

---

# ಐಕ್ಯಸ್ಥಲ.

೧೩೪. ಗತಿಗೆಟ್ಟು ಮತಿಯ ಹಂಗ ಮರೆದು ಕಾಮಿಸಿ ಕಲ್ಪಿಸಿ ಭಾವಿಸುವ ಭಂಗ ಹಿಂಗಿ, ಭಾವ ಕಲ್ಪನೆಯ ಮೀರಿ, ಭಾವಭೇದವ ಳಿದು ನಿರ್ಭಾವ ಪದದಲ್ಲಿ ನಿಂದುದು ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ.

೧೩೫. ಕಣ್ಣು ತನ್ನ ಕಾಣಲರಿಯದಂತೆ, ಹಣ್ಣು ತನ್ನ ರುಚಿಯ ತಾನರಿಯದಂತೆ, ಲಿಂಗೈಕ್ಯ ತನ್ನೊಳಗಣ ಲಿಂಗವ ತಾನರಿಯದಂತೆ, ನಾ ಸತ್ತೆನೆಂಬ ಹೆಣವಿಲ್ಲವಾಗಿ ತನ್ನ ಮರೆದು ಲಿಂಗವ ಮರೆದ ಲಿಂಗೈಕ್ಯರು ಸೌರಾಷ್ಟ್ರ ಸೋಮೇಶ್ವರನಲ್ಲಿ ಅನುಭಾವವ ಮಾಡಲಿಲ್ಲ. ನುಡಿದು ಹೇಳ ಲಿಲ್ಲ. ನಡೆದು ತೋರಲಿಲ್ಲ.

೧೩೬. ಜ್ಞಾನ ಕಾಯಂಗೆ ಬರು ಕಾಯವಿಲ್ಲ, ಅರಿವಿನ ಮುಂದಣ ಕುರುಹು ಅರಿವನವಗ್ರಹಿಸಿ ಜ್ಞಾನ ನಿಃಪತ್ತಿಯಾಯಿತ್ತು, ಸೌರಾಷ್ಟ್ರ ಸೋಮೇ ಶ್ವರಲಿಂಗವೆಂಬ ಕುರುಹು ಮರೆದ ಕಾರಣ ನಿಃಶೂನ್ಯ ನಿರ್ಗಮನವಾ ಯಿತ್ತು.

೧೩೭. ಅಯ್ಯ ಅರಿವನರಿತು, ಅರಿವ ತಿಳಿದು, ಮರಹ ಮರೆದು, ಮರಹನಳಿದು, ಕುರುಹೆಂದು ಹೇಳಹೆಸರಿಲ್ಲದೆ, ಗುರುಲಿಂಗಜಂಗಮ ತ್ರಿವಿಧ ಒಂದಾದ ಎಡೆಯ ತೋರಿಸಿ ಬದುಕಿಸಾ ಸೌರಾಷ್ಟ್ರ ಸೋಮೇ ಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ.

೧೩೮. ಅಯ್ಯಾ ಅರಿವನರಿದು, ಮರಹು ಅರತು, ಕುರುಹಳಿದು ನಿರುಗೆ ಗಂಡು ಬೆರಗುವಡೆದು, ಹೃದಯಾಕಾಶದ ಬಟ್ಟ ಬಯಲೊ ಳಗೆ ಭರಿತವಾಗಿರ್ದ ಮಹಾ ಶರಣರ ತೋರಿ ಬದುಕಿಸಾ ಎನ್ನ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ.

೧೩೯. ಚತುರ್ದಶ ಭುವನವನಗ್ನಿ ಕೊಂಡೊಡೆ ಇದ ಕಂಡು ಬೆರಗಾದೆ. ನವ ಖಂಡ ಪೃಥ್ವಿಯನಗ್ನಿ ಕೊಂಡರೆ ಇದ ಕಂಡು ಬೆರ ಗಾದೆ. ಪಂಚಾಶತ್ ಕೋಟಿ ವಿಸ್ತೀರ್ಣವನಗ್ನಿ ಕೊಂಡರೆ ಇದ ಕಂಡು ಬೆರಗಾದೆ. ಸೌರಾಷ್ಟ್ರ ಸೋಮೇಶ್ವರ ಲಿಂಗವನಗ್ನಿ ಕೊಂಡರೆ ಇದ ಕಂಡು ಬೆರಗಾದೆ.

೧೪೦. ಅರಿವೆ ತಾನಾಗಿ ತೊಳ ತೊಳಗಿ ಬೆಳಗುತ್ತಿಪ್ಪ ಲಿಂಗೈಕ್ಯ ನಿಂದಡೆ, ಬಾವನ್ನದೊಳಗಿಪ್ಪ ಸುಗಂಧದಂತೆ, ಮಾಣಿಕ್ಯದೊಳಗಿಪ್ಪ ಸುರಂಗಿನಂತೆ, ಚಿನ್ನದೊಳಗಿಪ್ಪ ಬಣ್ಣದಂತೆ, ಭೇದವಿಲ್ಲದಚಲನಯ್ಯಾ. ಸಂಪಿಗೆಯ ಕಂಪುಂಡ ಭ್ರಮರನಂತೆ, ಸೌರಾಷ್ಟ್ರ ಸೋಮೇಶ್ವರ ಲಿಂಗದ ಪರಮಸುಖದೊಳು ಪರವಶವಾದ ಲಿಂಗೈಕ್ಯ.

೧೪೧. ಸುಜ್ಞಾನಾನುಭಾವದಿಂದ ಭವಿ ಭವವಳಿದುಳಿದ ಶೇಷನು ನಿರ್ಮಲ ನಿರ್ಮಯನಾಗಿ, ಸದ್ಗುರು ಪರಶಿವಾನುಗ್ರಹ ಪ್ರಸಾದವ ಪಡೆದು ನೆನಹಳಿದುಳಿದ ಶೇಷ ಅರಿವಿನ ಸುಖದ ಸವಿಯುಲಿ ಮೈಮರೆದ ಘನ ಪರಿಣಾಮ ನಿಜ ನಿಂದ ಶೇಷನು ಸೌರಾಷ್ಟ್ರ ಸೋಮೇಶ್ವರ ಲಿಂಗೈಕ್ಯದ ನುಪಮ ಶೇಷ ಪರತತ್ವವ ಬೆರಸಿ ನಿಂದಿತ್ತು.

೧೪೨. ಮಧ್ಯ ನಿರಾಳದಲ್ಲಿ ನಿಂದು ಊರ್ಧ್ವ ನಿರಾಳವನ್ನೈದಿದಲ್ಲಿ ಕಾಣಲಾಯಿತ್ತು ಒಂದು ಪುತ್ಥಳಿ. ಮೂರು ಬೆಳಗಿನ ಮಧ್ಯದಲ್ಲಿ ಬೇರೊಂದು ಬೆಳಗು ಮೀರಿ ತೋರುತ್ತಿದೆ. ಈ ಪುತ್ಥಳಿ ವಜ್ರದ ಮೈದೊಡಿಗೆಯ ತೊಟ್ಟು ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅವಿರಳನಾಯಿತ್ತು.

೧೪೩. ಏಕಾಕಾರ ಲೋಕಾಕಾರ ನೀನೆಯಾಗಿ ತೋರ್ಪೆಯಯ್ಯಾ ಸದ್ಭಾವಿಗಳಿಗೆ. ಏಕಾಕಾರವೆ ಹುಸಿ ಲೋಕಾಕಾರವೆ ದಿಟವಾಗಿ ತೋರ್ಪೆಯಯ್ಯಾ ಭಾವ ಭ್ರಮಿತರಿಗೆ. ಏಕಾಕಾರ ಲೋಕಾಕಾರ ಸರ್ವಾಕಾರವಾಗಿ ತೋರ್ಪೆಯಯ್ಯಾ ನಿರ್ಭಾವರಿಗೆ. ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ನಿಜದಾಕಾರವಾಗಿಪ್ಪಿರಯ್ಯಾ ಭಾವವೈಕ್ಯವಾದ ಮಹಾಂತರಿಗೆ.

೧೪೪. ನೀರ ಮೇಲೊಂದು ನೆಟ್ಟ ಕಂಭವಿದ್ದಿತ್ತು. ಆ ಕಂಭದ ತುದಿಯಲಿ ದೇಗುಲವಿದ್ದಿತ್ತು. ದೇಗುಲದ ಕೊನೆಯಲ್ಲಿ ದೇವರಿದ್ದಿತ್ತು. ದೇವರ ದೇಗುಲವ ಅರಿದ ತಲೆ ನುಂಗಿತ್ತು. ಸೌರಾಷ್ಟ್ರ ಸೋಮೇಶ್ವರಾ ಇದೇನು ಚೋದ್ಯವೊ?

೧೪೫. ಅಂಗದ ಮೇಲೆ ಸಾಕಾರವಿಡಿದು ಮಂತ್ರಾಹ್ವಾನಂಗಳಿಂದ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಲ್ಲಿ ವ್ಯಾಪಿಸಿಕೊಂಡಿಪ್ಪುದೀಗ ಇಷ್ಟಲಿಂಗ. ಆ ಇಷ್ಟಲಿಂಗಕ್ಕೆ ಆಶ್ರಯವಾಗಿ ಚತುರ್ದಶ ಇಂದ್ರಿಯಂಗಳಲ್ಲಿ ತನ್ಮುಖವಾಗಿ ಸರ್ವೇಂದ್ರಿಯಂಗಳಿಗೆ ಚೈತನ್ಯವಾಗಿ ಪ್ರಾಣದಲ್ಲಿ ಪರಿಪೂರ್ಣವಾಗಿಪ್ಪುದೀಗ ಪ್ರಾಣಲಿಂಗ. ಆ ಪ್ರಾಣಲಿಂಗಕ್ಕೆ ಆದಿಯಾಗಿ ಭಾವ

ಭ್ರಮೆಗಳು ನಷ್ಟವಾಗಿ ಅನುಭಾವದಲ್ಲಿ ಲೀನವಾಗಿ ಭಾವ ಸದ್ಭಾವ ನಿರ್ಭಾವಂಗಳಲ್ಲಿ ಭರಿತನಾಗಿ ಭಾವ ಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತಭಾವದಿಂದಿಪ್ಪುದೀಗ ಭಾವಲಿಂಗ. ಇಂತೀ ಮೂರು ಲಿಂಗದ ಮೂಲ ಆರು ಲಿಂಗದ ಅಂತ್ಯವನೊಳಕೊಂಡು ಮಾರ್ಗ ಕ್ರಿ ನಿಃಕ್ರಿಯಾಗಿ ಧ್ಯಾನ ನಷ್ಟವಾಗಿ ಮಂತ್ರ ಗೋಪ್ಯವಾಗಿ ಜ್ಞಾನ ಶೂನ್ಯವಾಗಿ, ಭಾವ ದಿಗಂಬರವಾಗಿ ಘನಕ್ಕೆ ಘನವಾದ ಪರಬ್ರಹ್ಮವು ತಾನೆ ಸೌರಾಷ್ಟ್ರ ಸೋಮೇಶ್ವರ.

೧೪೭. ಘಟಾಕಾಶ, ಮಠಾಕಾಶ, ಬಿಂದ್ವಾಕಾಶ, ಭಿನ್ನಾಕಾಶ, ನಿಜಾಕಾಶ, ಚೇತನಾತ್ಮ, ಚೈತನ್ಯವೆಂದೊಂದನರಿತಲ್ಲರಿತು ಮರೆ ಮಾಡಿ ಹುಸಿ ಎಂಬ ಪರಿಯ ನೋಡಾ. ಗರುಡಿ ಚೋರನಂತೆ ಘಟಾಕಾಶ ಘಟವಿದ್ದಲ್ಲಿದ್ದು, ಘಟವಳಿದಲ್ಲಿ ಘಟಾಕಾಶವಳಿಯದಂತೆ, ಮಠಾಕಾಶ ಮಠವಿದ್ದಲ್ಲಿದ್ದು, ಮಠ ಬಿಚ್ಚಿದಲ್ಲಿ ಮಠಾಕಾಶ ಬಿಚ್ಚದಂತೆ, ಬಿಂದ್ವಾಕಾಶ ಬಿಂದುವಿದ್ದಲ್ಲಿದ್ದು ಬಿಂದುವಳಿದಲ್ಲಿ ಬಿಂದ್ವಾಕಾಶವಳಿಯದಂತೆ, ಭಿನ್ನಾಕಾಶ ಪೃಥ್ವಿ ಇದ್ದಲ್ಲಿದ್ದು, ಪೃಥ್ವಿ ಅಳಿದಲ್ಲಿ ಭಿನ್ನಾಕಾಶವಳಿಯದಂತೆ, ಮಹದಾಕಾಶವೆ ನಿಜದಾಕಾಶ ನಿರ್ಧರ ವಾಹಂಗೆ ಇದೆ ಆತ್ಮನ ಮರ್ಮ ನೋಡಾ. ಆದಿ ಅನಾದಿ ಇಲ್ಲದಂದು, ನಾದಬಿಂದು ಕಳೆನೊಳೆದೋರದಂದು, ಇದೊಂದೆಂದರಿತು, ಉಂಟಲ್ಲವೆಂಬ ಗೆಲ್ಲಸೋಲಿನ ಮಾತಿನ ಮಾಲೆಯ ತೊಡಿಗೆಯುಳಿದಂದು ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಆನೆಂಬುದು ನೀನೆಂಬುದು ಒಂದೆ ಕಾಣಾ ಮಲ್ಲಿಕಾರ್ಜುನಾ.

೧೪೭. ಕುಂಡಲಿಯ ಮುಖದಲ್ಲಿ ಪ್ರಾಣ ನಿವಾಸಿಯಾಗಿಪ್ಪ ಪಶ್ಚಿಮ ದ್ವಾರದ ಬ್ರಹ್ಮ ವಿಷ್ಣು ರುದ್ರರ ಅಧೋನಾಳ ಮಧ್ಯನಾಳ ಊರ್ಧ್ವನಾಳವಂ ಕಳೆದು ಶೂನ್ಯಸ್ಥಾನದ ಹೂವಿನ ಪರಿಮಳದ ಚಿತ್ಪಾದಾಂಬುವಂ ಧರಿಸಿ ಮನವಂಗವಾಗಿ ಪ್ರಾಣಲಿಂಗವೆಂಬ ಸಂದು ನಷ್ಟವಾದಿರವ ಸೌರಾಷ್ಟ್ರ ಸೋಮೇಶ್ವರ ನಿಮ್ಮ ಶರಣನೆ ಬಲ್ಲ.

೧೪೮. ಸ್ಫಟಿಕದ ಘಟದೊಳಗಣ ಜ್ಯೋತಿಯಂತೆ, ಒಳ ಹೊರಗೆ ನೋಡುವರೆ ಕಾಣಬರುತ್ತಿದೆ. ನುಡಿಸುವಂತಹದಲ್ಲ, ಸಾರೆ ಇದ್ದಿಹುದು. ಮುಟ್ಟುವರೆ ಕೈಗೆ ಸಿಲುಕದು. ಶಾಸ್ತ್ರ ಸಂಬಂಧದ ಕಲಿಕೆಯೊಳಗಲ್ಲ. ವ್ಯಕ್ತಾವ್ಯಕ್ತವನೊಳಕೊಂಡು ಬಯಲ ಸಮಾಧಿಯಲ್ಲಿ ಸಿಲುಕಿತ್ತು ಸೌರಾಷ್ಟ್ರ ಸೋಮೇಶ್ವರಲಿಂಗವೆ ತಾನಾಗಿ.

೧೪೯. ಹುಟ್ಟು ಹೊಂದುಗೆಟ್ಟುದೆ ನಿರ್ವಾಣ. ಮಲ ಮಾಯಾ ಕರ್ಮಂಗಳ ಸುಳಿವುದೆ ನಿರ್ವಾಣ. ಶೋಕ ಮೋಹ ನಷ್ಟವಾದುದೆ ನಿರ್ವಾಣ. ಇಹಪರದಿಚ್ಛೆ ಹಿಂಗುವುದೆ ನಿರ್ವಾಣ. ಇಂತಪ್ಪ ನಿರ್ವಾಣ ಸದ್ಯೋನ್ಮುಕ್ತಿ ಸೌರಾಷ್ಟ್ರ ಸೋಮೇಶ್ವರಾ.

೧೫೦. ಸಕಲೇಂದ್ರಿಯಂಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತ ಸುಖಿ. ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳು ಮನಂಗೊಂಡು ಸುಳಿವಾತ ದುಃಖಿ. ಮನಸ್ಸು ಬಹಿರ್ಮುಖವಾಗಲು ಮಾಯಾ ಪ್ರಪಂಚಿ. ಮನವಂತರ್ಮುಖವಾದರೆ ಅವಿರಳ ಜ್ಞಾನಿ. ಮನವು ಮಹದಲ್ಲಿ ನಿಂದಿರಲಾತ ಮುಕ್ತನು. ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯನು.

೧೫೧. ಹೆಚ್ಚದು, ಕುಂದದು, ಮುಚ್ಚದು, ಬೆಚ್ಚದು, ಬಾರದು, ಬಕ್ಕದು, ಕಂದದು, ಕುಂದದು, ಕರಗದು, ಕೊರಗದು. ಎನ್ನ ನಿರ್ಭಾವಾರ್ಚನೆ, ಸೌರಾಷ್ಟ್ರ ಸೋಮೇಶ್ವರಲಿಂಗದೊಡಗೂಡಿ ತಾನೆನ್ನದಿದಿರೆನ್ನದೇನೂ ಎನ್ನದು.



# ಶಿವಾನುಭವ.

( ದ್ವೈಮಾಸಿಕವು )



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.



ವಿಜಾಪುರ.

ಸಂಪುಟ ೬ ಸಂಚಿಕೆ ೪

ಅಕ್ಟೋಬರ

೧೯೩೧

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೩೦ (೨) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೬] ಅಕ್ಟೋಬರ ೧೯೩೧ [ಸಂಚಿಕೆ ೪

## ಶೈವಾಗಮಗಳು.

(ಡಾ॥ ನಂದೀಮಠ ಇವರ ನಿಬಂಧದ ವಿಮರ್ಶಾತ್ಮಕ ನಿರೂಪಣೆ)

ಸಂಪಾದಕ.

---

**ಸಂಪುಟ ೬ ಸಂಚಿಕೆ ೩ ಪುಟ ೧೪೭ ರಿಂದ ಮುಂದೆ ಸಾಗಿದ್ದು.**

ಆಗಮ ಗ್ರಂಥಗಳಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ, ಮತ್ತು ಜ್ಞಾನಪಾದ ಎಂಬ ನಾಲ್ಕುವಿಧವಾಗಿ ಬೇರೆ ಬೇರೆ ನಿರೂಪಣೆಗಳಿದ್ದು ಅವುಗಳಲ್ಲಿ ಕ್ರಿಯಾಪಾದ ಮತ್ತು ಚರ್ಯಾಪಾದ ಇವುಗಳ ಸ್ವರೂಪವನ್ನು ಡಾ॥ ನಂದೀಮಠ ಇವರು ತಮ್ಮ ನಿಬಂಧದಲ್ಲಿ ವಿವರಿಸಿದ್ದನ್ನು ನಾವು ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ಸಂಕ್ಷಿಪ್ತ ರೀತಿಯಿಂದ ವಿವರಿಸಿದ್ದೇವೆ. ಅವುಗಳ ಮೇಲಿಂದ ಶೈವ ಧರ್ಮಗಳ ಆಚಾರ ಪದ್ಧತಿಗಳ ಅಂಶಗಳನ್ನು ವಾಚಕರು ಚನ್ನಾಗಿ ಅರಿಯಬಹುದಾಗಿದೆ. ಇನ್ನುಮೇಲೆ ನಾವು ಯೋಗಪಾದ ಮತ್ತು ಜ್ಞಾನಪಾದ ಇವುಗಳ ಸಂಬಂಧವಾಗಿ ಆಗಮಗ್ರಂಥಗಳಲ್ಲಿ ಬರುವ ವಿಷಯುಗಳ ಸಾರವನ್ನು ಡಾ॥ ನಂದೀಮಠ ಇವರು ವಿವರಿಸಿದ್ದು ಅದನ್ನು ವಿವೇಚಿಸಲು ನಾವು ಪ್ರಯತ್ನಿಸುವೆವು. ಈ ವಿಷಯುವಾದರೂ ಬಹು ಬೋಧಪ್ರದವಾಗಿದೆ.

### ಯೋಗಪಾದ.

ಶೈವಧರ್ಮಗಳು ಯೋಗಾಭ್ಯಾಸಕ್ಕೆ ತಮ್ಮ ಗ್ರಂಥಗಳಲ್ಲಿ ಬಹು ಮಹತ್ವದ ಸ್ಥಾನವನ್ನು ಕೊಟ್ಟಿರುವವು. ಯೋಗಾಭ್ಯಾಸವನ್ನು ಶೈವಧರ್ಮೀಯರು ಮೊದಲು ಆರಂಭಿಸಿರಬಹುದೆಂದು ಡಾ॥ ನಂದೀಮಠ

ಇವರ ಅಭಿಪ್ರಾಯು. ಯಾಕಂದರೆ ಪಾತಂಜಲಿಯು ಶೈವನಾಗಿದ್ದನೆಂದು ಪ್ರತೀತಿ ಇದ್ದು ಅವನ ಸೂತ್ರಗ್ರಂಥಗಳಲ್ಲಿ ಶೈವ ಧರ್ಮಗಳ ತತ್ವಗಳ ಉಲ್ಲೇಖಗಳಿವೆ. ಶೈವಾಗಮಶಾಸ್ತ್ರಕಾರರು ತಮ್ಮ ಗ್ರಂಥಗಳಲ್ಲಿ ಸಂಪೂರ್ಣ ಒಂದು ಭಾಗವನ್ನೇ ಈ ವಿಷಯಕ್ಕೋಸ್ಕರ ಕಾದಿಡುವದುಂಟು. ಆದರೆ ಎಲ್ಲ ಶೈವಾಗಮಗಳು ಇನ್ನೂ ನಮಗೆ ಉಪಲಬ್ಧವಿಲ್ಲದ್ದರಿಂದ ಈ ವಿಷ ಯವನ್ನು ಅವು ಹ್ಯಾಗೆ ನಿರೂಪಿಸುತ್ತವೆಂಬುದನ್ನು ಸಾದ್ಯಂತವಾಗಿ ಕಂಡು ಹಿಡಿಯಲು ಶಕ್ಯವಿಲ್ಲ. ಈಗ ಅಚ್ಚಾದ ಆಗಮ ಗ್ರಂಥಗಳಲ್ಲಿ ಸುಪ್ರ ಭೇದದಲ್ಲಿ ಮಾತ್ರ ಈ ವಿಷಯ ವಿವರಣೆಯು ಹೆಚ್ಚಾಗಿ ಬಂದಿರುತ್ತದೆ.

ಈಶಾನಶಿವನು ಮತ್ತು ನಿಜಗುಣರು ಶೈವಾಗಮ ಯೋಗಪದ್ಧತಿ ಯನ್ನು ತಮ್ಮ ಗ್ರಂಥಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದಾರೆ.

ಈಶಾನ ಶಿವನು ಪಾತಂಜಲಿಯ ಪದ್ಧತಿಯನ್ನೆ ಅನುಸರಿಸಿರುವನು. ಅವನು ಯೋಗದ ಉದ್ದೇಶವು ಮನಸ್ಸಿನ ಚಾಂಚಲ್ಯವನ್ನು ಹೋಗ ಲಾಡಿಸಿ, ಒಂದೇ ವಸ್ತುವಿನಲ್ಲಿ ಅಂದರೆ ಶಿವನಲ್ಲಿ ಏಕಾಗ್ರತೆಯನ್ನು ಹೊಂದುವದೇ ಇರುತ್ತದೆಂದು ಹೇಳಿರುತ್ತಾನೆ. ಮನುಷ್ಯನು ತನ್ನ ಮನ ಸ್ಸಿನ ಹೊಯ್ದಾಟವನ್ನು ನಿರ್ಬಂಧಿಸುವದು ಬಿಕ್ಕಟ್ಟಿನದಿದ್ದು, ಅವನು ಈ ಕಾರ್ಯವನ್ನು ಕ್ರಮ ಕ್ರಮವಾಗಿ ಬಹು ಎಚ್ಚರಿಕೆಯಿಂದ ನೆರ ವೇರಿಸತಕ್ಕದ್ದು ಇದಕ್ಕೆ ಕಡುತರವಾದ ಮನಸ್ಸಿನ ನಿರ್ಬಂಧ ಮತ್ತು ನಿಶ್ಚಯವು ಬೇಕಾಗುವದಲ್ಲದೆ, ಪರಮಾತ್ಮನಲ್ಲಿ ಶುದ್ಧವಾದ ಭಕ್ತಿಭಾ ವವೂ ಅತ್ಯವಶ್ಯವು.

ಪರಮಾತ್ಮನ ಚಿನ್ಹವನ್ನು ಏಕಾಗ್ರತೆಯಿಂದ ಧ್ಯಾನಿಸುತ್ತಿರುವಲ್ಲಿ ಈ ಭಕ್ತಿಯು ಅವನಿಗೆ ಪರಮಸುಖವನ್ನುಂಟುಮಾಡುತ್ತದೆ. ಈ ಸುಖದ ಜಾಗ್ರತಿ ಯಿಂದಲೇ ಮನಸ್ಸಿನಲ್ಲಿ ಏಕಾಗ್ರತೆಯೊದಗಿ ಇದು ಹೆಚ್ಚಿದ ಹಾಗೆಲ್ಲ ಬಾಹ್ಯ ವಸ್ತುಗಳ ಅರಿವು ಮರೆಯಾಗಹತ್ತುತ್ತದೆ. ಮತ್ತು ಮನಸ್ಸನ್ನು ವೇಧಿಸಿದ ಮಾನಸಿಕ ಇಷ್ಟ ವಸ್ತುವು ಹೆಚ್ಚೆಚ್ಚಿಗೆ ಪ್ರಕಾಶಮಾನವಾಗುತ್ತ ಹೋಗುತ್ತದೆ. ಮುಂದೆ ಮುಂದೆ ಈ ವಸ್ತುವಿನ ಅವಶ್ಯಕತೆಯು ಕೂಡ ಏನೂ ಉಳಿಯದೆ, ಮಾನಸಿಕ ಸ್ವಾತಂತ್ರ್ಯವು ಒದಗಿ ಸಮಾಧಿ ಸ್ಥಿತಿಯು ಉತ್ಪನ್ನವಾಗುವುದು.

ಈ ಸಮಾಧಿ ಸ್ಥಿತಿಯು ಉತ್ಪನ್ನವಾಗಲು ಶೈವಾಗಮಗಳು ಕೆಲವು ಕ್ರಮಗಳನ್ನು ಹೇಳುತ್ತವೆ.

ಈ ಕ್ರಮಗಳಲ್ಲಿ ಮನುಷ್ಯನ ಮಾನಸ ಶಾಸ್ತ್ರದ ತತ್ವಗಳ ಜ್ಞಾನವನ್ನು ಮಾಡುಕೊಳ್ಳುವದು ಮೊದಲನೆಯುವಿದ್ದು ಈ ವಿವರವನ್ನು ಎಲ್ಲ ಶೈವ ಧರ್ಮಗಳು ಹೇಳುವದುಂಟು. ಮನುಷ್ಯನಲ್ಲಿ ಮೂರು ನಾಡಿಗಳು ಮುಖ್ಯವಾದವುಗಳು ಮತ್ತು ಮುಖ್ಯವಲ್ಲದವು ಹತ್ತು ಇದ್ದು ಇವೇ ಅನೇಕ ಶಾಖೋಪ ಶಾಖೆಗಳಾಗಿ ಒಡೆಗಿದ ಅಶ್ವತ್ಥ ವೃಕ್ಷದ ಎಲೆಯಂತೆ ೭೨ ಸಾವಿರ ನಾಡಿಗಳಾಗಿ ಮನುಷ್ಯನ ಶರೀರದಲ್ಲಿ ಪಸರಿಸಿರುತ್ತವೆ. ಹೀಗೆ ವಿವರಣೆ ಮಾಡಿದ ಬಳಿಕ ಶರೀರದ ಬೇರೆ ಬೇರೆ ಭಾಗಗಳು, ಹತ್ತು ಮುಖ್ಯ ನಾಡಿವಾಹಕಗಳು, ಅವುಗಳ ಆಕೃತಿ ವರ್ಣ, ಸ್ಥಾನ, ಮುಂತಾದ ವಿಷಯಗಳು, ದಶವಾಯುಗಳು, ಅವುಗಳ ಕಾರ್ಯಗಳು ಇವೇ ಮೊದಲಾದವುಗಳನ್ನು ಬಹು ವಿಸ್ತಾರವಾಗಿ ಈ ಯೋಗಪಾದದಲ್ಲಿ ಈ ಆಗಮಗಳು ವಿವರಿಸುತ್ತವೆ. ಇವೆಲ್ಲವೂ ಚನ್ನಬಸವೇಶ್ವರನ ಕರಣ ಹಸಿಗೆ ಮತ್ತು ಶೈವ ಸಿದ್ಧಾಂತದ ಗ್ರಂಥಗಳು ಇವುಗಳಲ್ಲಿ ಹೇಳಿದವುಗಳನ್ನೇ ಹೋಲುತ್ತವೆ.

ಆಮೇಲೆ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ ಎಂಬ ಆರು ಚಕ್ರಗಳ ಬಹು ಸವಿಸ್ತಾರವಾದ ನಿರೂಪಣೆಗಳು ಬರುತ್ತವೆ. ಆಮೇಲೆ ಯೋಗ ಶಾಸ್ತ್ರದ ಎಂಟು ಅಂಗಗಳು ನಿರೂಪಿಸಲ್ಪಡುತ್ತವೆ. ಅವು ಹ್ಯಾಗೆಂದರೆ:—

೧. ಯಮ:— ಇದು ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಮತ್ತು ದಾನವನ್ನು ಸ್ವೀಕರಿಸದೆ ಇರೋಣ ಎಂದು ಐದು ರೀತಿಯಾಗಿದೆ.

೨. ನಿಯಮ:— ಇದು ಶುದ್ಧತೆ, ಆನಂದ, ತಪಸ್ಸು, ಅಭ್ಯಾಸ ಮತ್ತು ಧ್ಯಾನ ಎಂದು ಐದು ಬಗೆಯಾಗಿದೆ.

೩. ಆಸನ:— ಸುಪ್ರಭೇದದ ಪ್ರಕಾರ ಇವು ಆರು ಇವೆ. ಅವು ಯಾವವೆಂದರೆ— ಗೋಮುಖ, ಸ್ವಸ್ತಿಕ, ಪದ್ಮ, ಅರ್ಧಚಂದ್ರ, ವೀರ, ಮತ್ತು ಯೋಗ. ಈಶಾನ ಶಿವನು ಆಸನಗಳು ಅನೇಕವಾಗಿದ್ದು, ಅವುಗಳಲ್ಲಿ ಸ್ವಸ್ತಿಕ, ಪದ್ಮ, ಭದ್ರ, ಯೋಗ ಮತ್ತು ಗೋಮುಖ ಇವೇ ಮುಖ್ಯವಾದವುಗಳೆಂದು ಹೇಳುತ್ತಾನೆ. ನಿಜಗುಣನು ೮೪ ಆಸನಗಳನ್ನು ವಿವರಿಸುತ್ತಾನೆ.

೪. ಪ್ರಾಣಾಯಾಮಃ— ಶರೀರದ ಮಲಗಳನ್ನು ತೊಳೆಯಲು ಇದು ಸಾಧನವು. ಶ್ವಾಸ ನಿಯಮನದಿಂದ ಶರೀರವು ಶುದ್ಧತೆ ಹೊಂದು ತ್ತದೆಂದು ಯೋಗವು ಹೇಳುತ್ತದೆ. ಶೈವಾಗಮಗಳು ಈ ತತ್ವವನ್ನು ಒಪ್ಪಿ ಕೊಂಡಿವೆ. ಪ್ರಾಣಾಯಾಮವು ಪೂರಕ, ಕುಂಭಕ ಮತ್ತು ರೇಚಕ ಎಂದು ಮೂರು ವಿಧವಾಗಿದ್ದು ಇವುಗಳ ಕ್ರಮಗಳು ಆಗಮಗಳಲ್ಲಿ ಬಹು ಸವಿಸ್ತಾರವಾಗಿ ಹೇಳಲ್ಪಡುತ್ತವೆ.

೫. ಪ್ರತ್ಯಾಹಾರಃ— ಇದು ಮೂರು ಬಗೆಯಾಗಿದೆ. ಇವು ಯಾವ ವೆಂದರೆ:— (ಅ) ಕರಣೇಂದ್ರಿಯಗಳ ಒಲವುಗಳನ್ನು ತಡೆಯುವದು (ಬ) ಬಾಹ್ಯ ಪೂಜೆಯನ್ನು ಧ್ಯಾನಯುಕ್ತನಾಗಿ ಅಂತರ್ಯದಲ್ಲಿ ಒಳ ಕೊಳ್ಳುವದು. (ಕ) ಶರೀರದ ೧೮ ಭಾಗಗಳಲ್ಲಿ ಶ್ವಾಸಗತಿಯನ್ನು ಅಂಕಿ ತದಲ್ಲಿಟ್ಟುಕೊಂಡು ಅದಕ್ಕೆ ಚಾಲನ ಕೊಡುವದು ಸುಪ್ರಭೇದವು ಈ ಕಡೆಯ ವಿಧವನ್ನು ಹೇಳುತ್ತದೆ.

೬. ಧಾರಣಃ— ಈಶಾನ ಶಿವನು ಧಾರಣವೆಂದರೆ ಹಿಂದಿನ ಯೋಗದ ಐದು ಅಂಗಗಳಿಂದ ತನ್ನನ್ನು ಶುದ್ಧಮಾಡಿಕೊಂಡು ಆತ್ಮ ನಲ್ಲಿ ಒಳಸೇರುವದೇ ಇರುತ್ತದೆಂದು ಹೇಳುತ್ತಾನೆ.

೭. ಧ್ಯಾನಃ— ಇದು ಎರಡು ಬಗೆಯಾದದ್ದು ಇದೆ.

(ಅ) ನಾಲ್ಕು ಭುಜ, ಮೂರು ಕಣ್ಣುಳ್ಳ ಮೂರ್ತಿಧ್ಯಾನವು ಸಕಲ ಧ್ಯಾನವೆನಿಸಿಕೊಳ್ಳುತ್ತದೆ.

(ಬ) ಎರಡನೆಯದು ಹೃದಯ ಮಧ್ಯದಲ್ಲಿ ಇಲ್ಲವೆ ಹುಬ್ಬುಗಳ ಮಧ್ಯಸ್ಥಾನದಲ್ಲಿ ರೂಪುರಹಿತನಾದ ಮತ್ತು ಕೇವಲ ತೇಜೋಮಯ ನಾದ ಪರಮಾತ್ಮನನ್ನು ಧ್ಯಾನಿಸುವದು ಇರುತ್ತದೆ. ಇದು ನಿಷ್ಕಲ ಧ್ಯಾನವೆನಿಸಿಕೊಳ್ಳುವದು. ಇದು ಧ್ಯಾನದಲ್ಲಿ ಅತ್ಯುತ್ತಮತರದ್ದು ಇದೆ.

೮. ಸಮಾಧಿಃ— ಈ ಸ್ಥಿತಿಯಲ್ಲಿ ತಾನು ಮತ್ತು ಪರಮಾತ್ಮ ಇವರಲ್ಲಿ ಭೇದಭಾವವು ಏನೂ ಉಳಿಯುವದಿಲ್ಲ. ಇದು ಯೋಗಿಯ ಅತ್ಯಂತ ಉಚ್ಚತಮಸ್ಥಿತಿಯು. ಇದು ಅವನ ಪೂರ್ಣತೆಯು.

ಯೋಗದ ಈ ಎಂಟು ಅಂಗಗಳನ್ನು ಒಳಕೊಂಡವನಿಗೆ ೮ಬಗೆಯ ಸಿದ್ಧಿಗಳು ದೊರಕುತ್ತವೆ. ಈ ಸಿದ್ಧಿಗಳನ್ನು ನಿರಾಕರಣೆಮಾಡುವದರಿಂದ ಯೋಗಿಗೆ ಶಿವತ್ವವು ಪ್ರಾಪ್ತವಾಗುತ್ತದೆ. ಶಿವಯೋಗಿಯು ಶಿವಯೋ ಗದಲ್ಲಿ ಪ್ರವೃತ್ತಿಯನ್ನು ಹೊಂದಿದ ಹಾಗೆ ಅವನಿಗೆ ಭೇರೀನಾದ, ಶಂಖ

ನಾದ ಹೀಗೆ ನಾನಾ ಬಗೆಯ ನಾದಗಳು ಕ್ರಮವಾಗಿ ಕೇಳಬರಹತ್ತು ತ್ತವೆ.

ಈ ಯೋಗಾಭ್ಯಾಸದಲ್ಲಿ ಅತ್ಯಂತ ಪ್ರಾವೀಣ್ಯತೆಯನ್ನು ಹೊಂದಿದ ನಿಜಗುಣನು ಈ ಎಲ್ಲ ವಿಷಯಗಳನ್ನು ಸವಿಸ್ತಾರವಾಗಿ ತನ್ನ ಗ್ರಂಥ ದಲ್ಲಿ ನಿರೂಪಿಸಿರುವನು. ಅವನು ೨೮ ಯೋಗಾಚಾರ್ಯರ ಹೆಸರುಗ ಳನ್ನು ಹೇಳಿದ್ದು ಅವರಲ್ಲಿ ಲಗುಳಿ (ಲಕುಲಿ) ಮತ್ತು ನಕುಲೀಶ ಎಂಬಿ ಬ್ಬರನ್ನು ಉಲ್ಲೇಖಿಸಿದ್ದಾನೆ. ಅವನ ಯೋಗನಿರೂಪಣೆಯ ವಿಧವು ಸುಪ್ರ ಭೇದ ಮತ್ತು ಈಶಾನಶಿವ ಇವರ ವರ್ಣನೆಗಳಂತೆಯೇ ಇದೆ.

ಸುಪ್ರಭೇದವು ಯೋಗಾಭ್ಯಾಸದ ಸಿದ್ಧಿಗಳಿಗೆ ಮಹತ್ವವನ್ನು ಕೊಡದೆ ಆತ್ಮಸಂಯಮನ ಮೊದಲಾದ ಕಾರ್ಯಗಳಿಂದ ಜ್ಞಾನಸಿದ್ಧಿಯನ್ನು ಮಾಡಿ ಕೊಳ್ಳುವದಕ್ಕೆ ಹೆಚ್ಚಿಗೆ ಮಹತ್ವಕೊಟ್ಟಿರುತ್ತದೆ. ಇದಕ್ಕೆ ಜ್ಞಾನಯೋಗ ವೆನ್ನಬಹುದು.

ಈಶಾನ ಶಿವನು ಭಗವದ್ಗೀತೆಯಲ್ಲಿ ವಿವರಿಸಿದ ಯೋಗಸಂಬಂ ಧದ ಅನೇಕ ಶ್ಲೋಕಗಳನ್ನು ಉದಹರಿಸಿರುವನು. ಆದರೆ ಯೋಗಾ ಭ್ಯಾಸಿಗಳು ಹ್ಯಾಗೆ ಯೋಗದಿಂದಲೇ ಮೋಕ್ಷವೆಂದು ಭಾವಿಸುತ್ತಾರೋ ಹಾಗೆ ಆಗಮಶಾಸ್ತ್ರಕಾರರು ಭಾವಿಸದೆ, ಅದೊಂದು ಮೋಕ್ಷಕ್ಕೆ ಸಾಧನೆ ಎಂದು ಮಾತ್ರ ಬಗೆದಿರುತ್ತಾರೆ. ಈ ರೀತಿಯಾಗಿಯೇ ಅವರು ಯೋಗ ಪಾದವನ್ನು ನಿರೂಪಿಸುವದುಂಟು.

ಡಾ. ನಂದೀಮಠ ಇವರು ಮಾಡಿದ ಮೇಲ್ಕಂಡ ವಿವರಣೆಗಳ ಮೇಲಿಂದ ಆಗಮ ಶಾಸ್ತ್ರಕಾರರು ಯೋಗಾಭ್ಯಾಸದ ವಿಷಯವಾಗಿ ಯಾವ ಅಭಿಪ್ರಾಯವುಳ್ಳವರಿರುವರೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಅವರು ಇದರ ಅಭ್ಯಾಸಕ್ಕೆ ಬಹಳ ಮಹತ್ವ ಕೊಟ್ಟಿರುವರು. ಆದರೆ ಅವರು ತಮ್ಮ ವಿಧಿವಿಧಾನಗಳಿಗೋಸ್ಕರ ಅದರ ತತ್ವಗಳು ಎಷ್ಟು ಆವಶ್ಯಕವೋ ಅಷ್ಟನ್ನೇ ಮಾತ್ರ ಅವರು ಸ್ವೀಕರಿಸಿದ್ದು ತೋರಿಬರುತ್ತದೆ. ಅಂದರೆ ಅವುಗಳ ಸಾರವನ್ನು ಮಾತ್ರ ಗ್ರಹಿಸಿರುವರು. ಆದರೆ ಇದರಲ್ಲಿ ವೀರ ಶೈವ ಷಟ್‍ಸ್ಥಲ ಮತ್ತು ಆಗಮ ಶಾಸ್ತ್ರ ಇವುಗಳಲ್ಲಿ ಪರಸ್ಪರ ಭೇದಗ ಳಿದ್ದ ಹಾಗೆ ಕಂಡುಬ.ುತ್ತವೆ. ವೀರಶೈವ ಷಟ್‍ಸ್ಥಲಾನುಸಾರ ಯೋಗಾ ಭ್ಯಾಸದಲ್ಲಿ ಒಂದು ವಿಶಿಷ್ಟತ್ವವದೆ. ಇದು ಲಿಂಗಸಾಧನೆಗೋಸ್ಕರ ಉಪಯೋಗ ಮಾಡಿಕೊಳ್ಳುವ ರೀತಿಯಲ್ಲಿ ಇದೆ. ಈ ಲಿಂಗ ಸಾಧ

೪. ಪ್ರಾಣಾಯಾಮಃ— ಶರೀರದ ಮಲಗಳನ್ನು ತೊಳೆಯುಲು ಇದು ಸಾಧನವು. ಶ್ವಾಸ ನಿಯಮನದಿಂದ ಶರೀರವು ಶುದ್ಧತೆ ಹೊಂದು ತ್ತದೆಂದು ಯೋಗವು ಹೇಳುತ್ತದೆ ಶೈವಾಗಮಗಳು ಈ ತತ್ವವನ್ನು ಒಪ್ಪಿ ಕೊಂಡಿವೆ. ಪ್ರಾಣಾಯಾಮವು ಪೂರಕ, ಕುಂಭಕ ಮತ್ತು ರೇಚಕ ಎಂದು ಮೂರು ವಿಧವಾಗಿದ್ದು ಇವುಗಳ ಕ್ರಮಗಳು ಆಗಮಗಳಲ್ಲಿ ಬಹು ಸವಿಸ್ತಾರವಾಗಿ ಹೇಳಲ್ಪಡುತ್ತವೆ.

೫. ಪ್ರತ್ಯಾಹಾರಃ— ಇದು ಮೂರು ಬಗೆಯಾಗಿದೆ. ಇವು ಯಾವ ವೆಂದರೆಃ— (ಅ) ಕರಣೇಂದ್ರಿಯಗಳ ಒಲವುಗಳನ್ನು ತಡೆಯುವದು (ಬ) ಬಾಹ್ಯ ಪೂಜೆಯನ್ನು ಧ್ಯಾನಯುಕ್ತನಾಗಿ ಅಂತರ್ಯದಲ್ಲಿ ಒಳ ಕೊಳ್ಳುವದು. (ಕ) ಶರೀರದ ೧೮ ಭಾಗಗಳಲ್ಲಿ ಶ್ವಾಸಗತಿಯನ್ನು ಅಂಕಿ ತದಲ್ಲಿಟ್ಟುಕೊಂಡು ಅದಕ್ಕೆ ಚಾಲನ ಕೊಡುವದು ಸುಪ್ರಭೇದವು ಈ ಕಡೆಯ ವಿಧವನ್ನು ಹೇಳುತ್ತದೆ.

೬. ಧಾರಣಃ— ಈಶಾನ ಶಿವನು ಧಾರಣವೆಂದರೆ ಹಿಂದಿನ ಯೋಗದ ಐದು ಅಂಗಗಳಿಂದ ತನ್ನನ್ನು ಶುದ್ಧಮಾಡಿಕೊಂಡು ಆತ್ಮ ನಲ್ಲಿ ಒಳಸೇರುವದೇ ಇರುತ್ತದೆಂದು ಹೇಳುತ್ತಾನೆ.

೭. ಧ್ಯಾನಃ— ಇದು ಎರಡು ಬಗೆಯಾದದ್ದು ಇದೆ.

(ಅ) ನಾಲ್ಕು ಭುಜ, ಮೂರು ಕಣ್ಣುಳ್ಳ ಮೂರ್ತಿಧ್ಯಾನವು ಸಕಲ ಧ್ಯಾನವೆನಿಸಿಕೊಳ್ಳುತ್ತದೆ.

(ಬ) ಎರಡನೆಯದು ಹೃದಯ ಮಧ್ಯದಲ್ಲಿ ಇಲ್ಲವೆ ಹುಬ್ಬುಗಳ ಮಧ್ಯಸ್ಥಾನದಲ್ಲಿ ರೂಪುರಹಿತನಾದ ಮತ್ತು ಕೇವಲ ತೇಜೋಮಯ ನಾದ ಪರಮಾತ್ಮನನ್ನು ಧ್ಯಾನಿಸುವದು ಇರುತ್ತದೆ. ಇದು ನಿಷ್ಕಲ ಧ್ಯಾನವೆನಿಸಿಕೊಳ್ಳುವದು. ಇದು ಧ್ಯಾನದಲ್ಲಿ ಅತ್ಯುತ್ತಮತರದ್ದು ಇದೆ.

೮. ಸಮಾಧಿಃ— ಈ ಸ್ಥಿತಿಯಲ್ಲಿ ತಾನು ಮತ್ತು ಪರಮಾತ್ಮ ಇವರಲ್ಲಿ ಭೇದಭಾವವು ಏನೂ ಉಳಿಯುವದಿಲ್ಲ. ಇದು ಯೋಗಿಯ ಅತ್ಯಂತ ಉಚ್ಚತಮಸ್ಥಿತಿಯು. ಇದು ಅವನ ಪೂರ್ಣತೆಯು.

ಯೋಗದ ಈ ಎಂಟು ಅಂಗಗಳನ್ನು ಒಳಕೊಂಡವನಿಗೆ ೮ಬಗೆಯ ಸಿದ್ಧಿಗಳು ದೊರಕುತ್ತವೆ. ಈ ಸಿದ್ಧಿಗಳನ್ನು ನಿರಾಕರಣೆಮಾಡುವದರಿಂದ ಯೋಗಿಗೆ ಶಿವತ್ವವು ಪ್ರಾಪ್ತವಾಗುತ್ತದೆ. ಶಿವಯೋಗಿಯು ಶಿವಯೋ ಗದಲ್ಲಿ ಪ್ರವೃತ್ತಿಯನ್ನು ಹೊಂದಿದ ಹಾಗೆ ಅವನಿಗೆ ಭೇರೀನಾದ, ಶಂಖ

ನಾದ ಹೀಗೆ ನಾನಾ ಬಗೆಯ ನಾದಗಳು ಕ್ರಮವಾಗಿ ಕೇಳಬರಹತ್ತುತ್ತವೆ.

ಈ ಯೋಗಾಭ್ಯಾಸದಲ್ಲಿ ಅತ್ಯಂತ ಪ್ರಾವೀಣ್ಯತೆಯನ್ನು ಹೊಂದಿದ ನಿಜಗುಣನು ಈ ಎಲ್ಲ ವಿಷಯಗಳನ್ನು ಸವಿಸ್ತಾರವಾಗಿ ತನ್ನ ಗ್ರಂಥದಲ್ಲಿ ನಿರೂಪಿಸಿರುವನು. ಅವನು ೨೮ ಯೋಗಾಚಾರ್ಯರ ಹೆಸರುಗಳನ್ನು ಹೇಳಿದ್ದು ಅವರಲ್ಲಿ ಲಗುಳಿ (ಲಕುಲಿ) ಮತ್ತು ನಕುಲೀಶ ಎಂಬಿಬ್ಬರನ್ನು ಉಲ್ಲೇಖಿಸಿದ್ದಾನೆ. ಅವನ ಯೋಗನಿರೂಪಣೆಯ ವಿಧವು ಸುಪ್ರಭೇದ ಮತ್ತು ಈಶಾನಶಿವ ಇವರ ವರ್ಣನೆಗಳಂತೆಯೇ ಇದೆ.

ಸುಪ್ರಭೇದವು ಯೋಗಾಭ್ಯಾಸದ ಸಿದ್ಧಿಗಳಿಗೆ ಮಹತ್ವವನ್ನು ಕೊಡದೆ ಆತ್ಮಸಂಯಮನ ಮೊದಲಾದ ಕಾರ್ಯಗಳಿಂದ ಜ್ಞಾನಸಿದ್ಧಿಯನ್ನು ಮಾಡಿಕೊಳ್ಳುವದಕ್ಕೆ ಹೆಚ್ಚಿಗೆ ಮಹತ್ವಕೊಟ್ಟಿರುತ್ತದೆ. ಇದಕ್ಕೆ ಜ್ಞಾನಯೋಗವೆನ್ನಬಹುದು.

ಈಶಾನ ಶಿವನು ಭಗವದ್ಗೀತೆಯಲ್ಲಿ ವಿವರಿಸಿದ ಯೋಗಸಂಬಂಧದ ಅನೇಕ ಶ್ಲೋಕಗಳನ್ನು ಉದಹರಿಸಿರುವನು. ಆದರೆ ಯೋಗಾಭ್ಯಾಸಿಗಳು ಹ್ಯಾಗೆ ಯೋಗದಿಂದಲೇ ಮೋಕ್ಷವೆಂದು ಭಾವಿಸುತ್ತಾರೋ ಹಾಗೆ ಆಗಮಶಾಸ್ತ್ರಕಾರರು ಭಾವಿಸದೆ, ಅದೊಂದು ಮೋಕ್ಷಕ್ಕೆ ಸಾಧನೆ ಎಂದು ಮಾತ್ರ ಬಗೆದಿರುತ್ತಾರೆ. ಈ ರೀತಿಯಾಗಿಯೇ ಅವರು ಯೋಗಪಾದವನ್ನು ನಿರೂಪಿಸುವದುಂಟು.

ಡಾ. ನಂದೀಮಠ ಇವರು ಮಾಡಿದ ಮೇಲ್ಕಂಡ ವಿವರಣೆಗಳ ಮೇಲಿಂದ ಆಗಮ ಶಾಸ್ತ್ರಕಾರರು ಯೋಗಾಭ್ಯಾಸದ ವಿಷಯವಾಗಿ ಯಾವ ಅಭಿಪ್ರಾಯವುಳ್ಳವರಿರುವರೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಅವರು ಇದರ ಅಭ್ಯಾಸಕ್ಕೆ ಬಹಳ ಮಹತ್ವ ಕೊಟ್ಟಿರುವರು. ಆದರೆ ಅವರು ತಮ್ಮ ವಿಧಿವಿಧಾನಗಳಿಗೋಸ್ಕರ ಅದರ ತತ್ವಗಳು ಎಷ್ಟು ಆವಶ್ಯಕವೋ ಅಷ್ಟನ್ನೇ ಮಾತ್ರ ಅವರು ಸ್ವೀಕರಿಸಿದ್ದು ತೋರಿಬರುತ್ತದೆ. ಅಂದರೆ ಅವುಗಳ ಸಾರವನ್ನು ಮಾತ್ರ ಗ್ರಹಿಸಿರುವರು. ಆದರೆ ಇದರಲ್ಲಿ ವೀರಶೈವ ಷಟ್‌ಸ್ಥಲ ಮತ್ತು ಆಗಮ ಶಾಸ್ತ್ರ ಇವುಗಳಲ್ಲಿ ಪರಸ್ಪರ ಭೇದಗಳಿದ್ದ ಹಾಗೆ ಕಂಡುಬರುತ್ತವೆ. ವೀರಶೈವ ಷಟ್‌ಸ್ಥಲಾನುಸಾರ ಯೋಗಾಭ್ಯಾಸದಲ್ಲಿ ಒಂದು ವಿಶಿಷ್ಟತ್ವವದೆ. ಇದು ಲಿಂಗಸಾಧನೆಗೋಸ್ಕರ ಉಪಯೋಗ ಮಾಡಿಕೊಳ್ಳುವ ರೀತಿಯಲ್ಲಿ ಇದೆ. ಈ ಲಿಂಗ ಸಾಧ

ನೆಯು ಆರು ಚಕ್ರಗಳಿಗನುಸಾರವಾಗಿ ಆರು ಮೆಟ್ಟಲುಗಳಿಂದ ಒದಗುತ್ತದೆಂದು ಷಟ್‌ಸ್ಥಲ ಶಾಸ್ತ್ರಕಾರರ ಮತವಿದೆ. ಈ ಮೆಟ್ಟಲುಗಳು ಯಾವವೆಂದರೆ:— ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮತ್ತು ಮಹಾಲಿಂಗವೆಂದಿರುವವು. ಇವುಗಳು ಮನುಷ್ಯನ ದೇಹದಲ್ಲಿ ಹ್ಯಾಗೆ ಹ್ಯಾಗೆ ಪ್ರಕಟವಾಗುತ್ತವೆಂಬದರ ಬಗ್ಗೆ ಸವಿಸ್ತಾರ ನಿರೂಪಣೆಯನ್ನು ವಚನಕಾರರೂ ಇತರ ವೀರಶೈವ ಸಿದ್ಧಾಂತಕಾರರೂ ತಮ್ಮ ಗ್ರಂಥಗಳಲ್ಲಿ ಸವಿಸ್ತಾರವಾಗಿ ನಿರೂಪಿಸಿರುವರು. ಆದರೆ ಈ ವಿಧದ ಪ್ರತಿಪಾದನೆಗಳು ಡಾ. ನಂದೀಮಠ ಇವರು ನೋಡಿದ ಆಗಮಗ್ರಂಥಗಳಲ್ಲಿ ಇದ್ದುದು ಕಂಡುಬರುವದಿಲ್ಲ. ಆದ್ದರಿಂದ ಷಟ್‌ಸ್ಥಲವು ಅವುಗಳಲ್ಲಿ ಇಲ್ಲವೆಂತಲೇ ನಾವು ಅನ್ನಬೇಕಾಗುತ್ತದೆ. ಆದರೂ ಈ ವಿಷಯಗಳು ಕೈ. ವಾ. ರಾವಬಹಾದ್ದೂರ ಮಲ್ಲಪ್ಪ ಅಣ್ಣಾ ವಾರದ ಇವರು ಪ್ರಕಟಿಸಿದ ಸೂಕ್ಷ್ಮಾಗಮ ಮತ್ತು ಪಾರಮೇಶ್ವರಾಗಮ ಈ ಗ್ರಂಥಗಳಲ್ಲಿ ಹೇರಳವಾಗಿ ಬರುತ್ತವೆ. ಆದರೆ ಈ ಗ್ರಂಥಗಳ ಒಳಗಿನ ಸ್ವರೂಪನ್ನು ನೋಡಿದರೆ ಆಗಮಗಳಲ್ಲಿ ಇರತಕ್ಕ ಚಿನ್ಹಗಳು ಅವುಗಳಲ್ಲಿ ಇಲ್ಲ. ಆಗಮಗಳಲ್ಲಿ ಇರತಕ್ಕ ನಾಲ್ಕು ಪಾದಗಳು ಅವುಗಳಲ್ಲಿ ಇರುವುದಿಲ್ಲ. ಮತ್ತು ಅವು ತೀರ ಸಣ್ಣ ಗ್ರಂಥಗಳಾಗಿವೆ. ಆದ್ದರಿಂದ ಅವು ನಿಜವಾದ ಸೂಕ್ಷ್ಮಾಗಮ ಪಾರಮೇಶ್ವರಾಗಮಗಳು ಹೌದೋ ಅಲ್ಲವೋ ಎಂಬದರ ಬಗ್ಗೆ ಸಂಶಯವು ಉತ್ಪನ್ನವಾಗುತ್ತಿದೆ. ಆದ್ದರಿಂದ ಈ ಗ್ರಂಥಗಳ ಪ್ರತಿಗಳನ್ನು ಬೇರೆ ಪ್ರಾಂತಗಳಲ್ಲಿ ಹುಡುಕುವದು ಆವಶ್ಯಕ. ಆದರೆ ಷಟ್‌ಸ್ಥಲದ ತತ್ವಗಳಿಗೂ ಆಗಮ ಗ್ರಂಥಗಳಲ್ಲಿಯ ತತ್ವಗಳಿಗೂ ಅತ್ಯಂತ ಸಾಮ್ಯತೆ ಇರುವದು ನಿರ್ವಿವಾದವು. ಆದ್ದರಿಂದ ಷಟ್‌ಸ್ಥಲ ಶಾಸ್ತ್ರವು ಆಗಮ ಶಾಸ್ತ್ರದೊಳಗಿಂದ ಹೊರಹೊರಟ ಒಂದು ಮಾರ್ಗವೆಂತಲೇ ನಾವು ಅನ್ನಬೇಕಾಗುತ್ತದೆ. ಆದರೆ ಆ ಮಾರ್ಗವು ಯಾವಾಗ್ಗೆ ಮತ್ತು ಹ್ಯಾಗೆ ಹೊರಟಿತು ಎಂಬುದನ್ನು ಕುರಿತು ನಿಶ್ಚಿತ ಆಧಾರಗಳು ನಮಗೆ ಇನ್ನೂ ದೊರೆದಿರುವದಿಲ್ಲ. ಇವುಗಳನ್ನು ಶೋಧಿಸುವದು ಅತ್ಯಾವಶ್ಯಕವು.



# "ಕಣ್ಣೀರಿಡುವ ಕಲ್ಯಾಣ"

(ಲೇಖಕರು— ಕೀರ್ತನಕೇಸರಿ, ಕವಿರತ್ನ, ಶಿವಕೀರ್ತನಕವಿರಾಜ, ಕೀರ್ತನ ವಿಚಕ್ಷಣ ಬಿ. ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆಮಠ ತುಮಕೂರು)

"ಕಾಲಪುರುಷಂಗೆ ಗುಣಮಣವಿಲ್ಲಂಗಡ!" ಎಂದು ಮುದ್ದಣನು ಹೇಳಿದ ಮಾತು ಅಕ್ಷರಶಃ ಸತ್ಯವಾದುದು. ಎಂತಹ ಮಹೋನ್ನತವಾದುದಾದರೂ ಕಾಲನ ಕರಾಳ ದೃಷ್ಟಿಗೆ ಸಿಕ್ಕಿದರೆ ನುಚ್ಚುನೂರಾಗುವದರಲ್ಲಿ ಸಂಶಯವೇನು? ಎಂತೆಂತಹ ಮಹಾ ಮಹಾ ಸಾಮ್ರಾಜ್ಯಗಳು ನಿರ್ನಾಮವಾಗಲಿಲ್ಲ! ಎಂತೆಂತಹ ಜಲ ರಾಶಿಗಳು ಬತ್ತಿ ಬಯಲಾಗಲಿಲ್ಲ! ಎಂತೆಂತಹ ದಿವ್ಯಜ್ಯೋತಿಗಳು ಆತನ ಗರ್ಭದಲ್ಲಿ ಅಡಗಿಹೋಗಲಿಲ್ಲ! ಆವನ ಈ ಬಗೆಯಾದ ಪ್ರಭಂಜನಶಕ್ತಿಯನ್ನು ಕಂಡೇ ಪ್ರಾಚೀನರು "ಕಾಲಾಯ ತಸ್ಮೈ ನಮಃ" ಎಂದು ಕೈಜೋಡಿಸಿದುದು.

ಮಹಾನುಭಾವನಾದ ಬಸವರಾಜನು ನಮಗೆ ಸ್ಮರಣೀಯನಾದ ಒಬ್ಬ ವಿಭೂತಿಯು. ತನ್ನ ಧವಳಕೀರ್ತಿಯಿಂದ ಕರ್ಣಾಟಕವನ್ನು ಬೆಳಗಿದವನು. ವೀರಶೈವವನ್ನು ಉದ್ಧರಿಸಿದವನು. ಈ ಮಹಾತ್ಮನ ಪುರಾಣವನ್ನು ಓದಿದಂದಿನಿಂದ ನನಗೆ ಈತನ ಜೀವನಕ್ಕೆ ಸಂಬಂಧಪಟ್ಟ ಸ್ಥಳಗಳನ್ನು ನೋಡಬೇಕೆಂಬ ಬಯಕೆ ಬಹಳವಾಯಿತು.

ವಿಜಾಪುರ ಜಿಲ್ಲೆಯಲ್ಲಿರುವ 'ಬಾಗೆವಾಡಿ' ಯನ್ನೂ 'ಕಪ್ಪಡಿಯ ಸಂಗಮ' ವನ್ನೂ ನೋಡಿಬಂದೆನು. ಇವೆರಡೂ ಬಸವನ ಜನ್ಮ ಮತ್ತು ಗುರುಕುಲವಾಸಕ್ಕೆ ಸಂಬಂಧಪಟ್ಟ ಸ್ಥಳಗಳು. ಬಸವನು ತನ್ನ ಲೋಕಸೇವೆಯನ್ನು ಪ್ರಾರಂಭಿಸಿ ಪ್ರಸಿದ್ಧನಾದ "ಕಲ್ಯಾಣ" ವನ್ನೂ ನೋಡಲು ಮನದಂದು ಹೊರಟೆನು. ನೋಡಿದುದೂ ಆಯಿತು. ಹಾಗೆ ನೋಡಿಬಂದುದರ ಫಲವೇ ಈ ಲೇಖನ.

ಸುಪ್ರಸಿದ್ಧವಾದ ಕಲ್ಯಾಣಪಟ್ಟವು ಈಗ ನಿಜಾಂ ಕರ್ಣಾಟಕದಲ್ಲಿ ಕಲ್‌ಬುರ್ಗಿಗೆ ಸುಮಾರು ಅರುವತ್ತು ಮೈಲ ದೂರದಲ್ಲಿದೆ. ಕಲ್ಬುರ್ಗಿಯಿಂದ ಕಲ್ಯಾಣಕ್ಕೆ ನೇರವಾಗಿ ಮೋಟಾರುಗಾಡಿಗಳು ಹೋಗಿಬರುತ್ತವೆ. ಪ್ರಯಾಣಿಕರಿಗೆ ಇದರಿಂದ ಸೌಲಭ್ಯವು ಬಹಳವಾಗಿರುತ್ತದೆ.

ಭೀಮಕವಿಯ ಬಸವಪುರಾಣದಲ್ಲಿ ಷಡಕ್ಷರಿಯ ವೃಷಭೇಂದ್ರ ವಿಜಯದಲ್ಲಿ, ಶಂಕರಕವಿಯ ಬಸವೇಶವಿಜಯದಲ್ಲಿ, ಪಾಲ್ಕುರಿಗೆ ಸೋಮನ

ಬಸವಪುರಾಣದಲ್ಲಿ, ಅಭಿನವವ್ಯಾಸನ ಬಸವಪುರಾಣದಲ್ಲಿ, ಹರಿಹರನ ರಘಟಾಕಾವ್ಯದಲ್ಲಿ ವಿರೂಪಾಕ್ಷಪಂಡಿತನ ಚನ್ನಬಸವಪುರಾಣದಲ್ಲಿ, ಹಾಗೂ ಸಿಂಗಿರಾಜನ ಮಲಬಸವರಾಜ ಚರಿತೆಯಲ್ಲಿ ಕಲ್ಯಾಣಪಟ್ಟಣದ ವರ್ಣನೆಯನ್ನು ಓದಿದವರು ಥಟ್ಟನೆ ಈಗಿನ ಕಲ್ಯಾಣಕ್ಕೆ ಬಂದರೆ ಅದನ್ನು ಆ ಮಹಾಕವಿಗಳಿಂದ ವರ್ಣಿತವಾದ ಕಲ್ಯಾಣನಗರವೆಂದು ನಂಬಲಾರರು. ಅದಕ್ಕೆ ಆ ಮಹಾನಗರದ ಇಂದಿನ ದೈನ್ಯಾವಸ್ಥೆಯೇ ಕಾರಣ.

ಕಲ್ಯಾಣವು ಈಗ ಕಾವ್ಯಗಳಲ್ಲಿದ್ದಷ್ಟು ಈಗ ಕಾಂತಿಯುಕ್ತವಾಗಿಲ್ಲ. ಅದರ ಸಂಪತ್ತು ಬಸವೇಶ್ವರನ ಹಿಂದೆಯೇ ಹೋಗಿ ಸಂಗಮದಲ್ಲಿ ಸೇರಿ ಹೋಯಿತು. ಈ ಪಟ್ಟಣದ ವೈಭವವು ತ್ರಿಭುವನಮಲ್ಲ ವಿಕ್ರಮನ ಕಾಲದಲ್ಲಿ, ಬಿಜ್ಜಳ ಭೂಪಾಲನ ಕಾಲದಲ್ಲಿ, ಬಸವೇಶನಕಾಲದಲ್ಲಿ, ಶಿವಶರಣರ ಪದ ಪಾಂಸುವು ತನ್ನನ್ನು ಪವಿತ್ರ ಮಾಡಿದ ಕಾಲದಲ್ಲಿ, ಇಂದು ಕಲ್ಯಾಣವು ಪತಿವಿರಹಿತ ಪದ್ಮಿನಿಯಂತೆ ಕಂದಿ ಕುಂದಿ ಬಾಡಿ ಬಸವಳಿದು ಕಣ್ಣೀರಿಡುತ್ತ ತನ್ನನ್ನು ನೋಡಲು ಬಂದ ಪ್ರೇಕ್ಷರಿಗೂ ಕಣ್ಣಿನಲ್ಲಿ ನೀರನ್ನೊರಿಸುತ್ತಿರುವುದು.

ವಿಜ್ಞಾನೇಶ್ವರ ಬಿಲ್ಹಣರು ವರ್ಣಿಸಿದ ರಾಜವೀಥಿಗಳೂ ದಿವ್ಯಸಾಧನಗಳೂ ಉಪವನಗಳೂ ರಾಜಭವನಗಳೂ ಇಂದು ಅಲ್ಲಿಂದ ಮಾಯವಾಗಿ ಹೋಗಿವೆ. ಆ ವರ್ಣನೆಯುಲ್ಲಾ ನಮಗಿಂದು ಶುದ್ಧ ಸ್ವಪ್ನವಾಗಿ ಕಾಣುತ್ತದೆ. "ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣತಲ್ಪಂ ಪುರಂ" ಎಂಬ ವಿಜ್ಞಾನೇಶ್ವರ ಕವಿಯ ಮಾತನ್ನು ಇಂದು ನಂಬುವರಾರು?

ಕಲ್ಯಾಣವು ಈಗ ಒಂದು ಹಳ್ಳಿಯಾಗಿದೆ ಸುಮಾರು ಏಳೆಂಟು ಸಾವಿರ ಜನರು ವಾಸಿಸುತ್ತಾರೆ. ಓರ್ವ ತುರುಷ್ಕ ನವಾಬನ ವಶದಲ್ಲಿದೆ. ಅವನಿಗೆ ಅದು ಜಹಗೀರಾಗಿದೆ. ಶರಣರ ಶಾಪದಿಂದ ಅದು "ಕಟುಗರಕೇರಿ" ಯಾಗಿದೆ. ಗಲ್ಯಾಣವು ಕಟಗಕೇರಿಯಾಗಲಿ" ಎಂದೇಕೆ ಶರಣರು ಶಪಿಸಿದರೋ ತಿಳಿಯದು.

ಕಲ್ಯಾಣದಲ್ಲಿ ಸಾವಿರಾರು ವೀರಶೈವರಿರುವರು. ಏನೂ ಪ್ರಯೋಜನವಿಲ್ಲ. ಅವರಲ್ಲಿ ವಿದ್ಯೆ, ಆಚಾರ, ವಿಚಾರ, ಸ್ವಾಭಿಮಾನಗಳು ತಲೆದೋರುವದಿಲ್ಲ. ಅವರನ್ನು ಕಗ್ಗತ್ತಲೆಯು ಕವಿದು ಬಿಟ್ಟಿದೆ. ಯಾವ ಪಟ್ಟಣಕ್ಕೆ ಏನು ಗತಿ ನೋಡಿ? ಇನೆಲ್ಲ ಕಾಲಪ್ರಭಾವ.

ಕಲ್ಯಾಣವನ್ನು ನೋಡಬೇಕೆಂದು ಕನ್ನಡ ನಾಡಿನ ಪ್ರೇಮದಿಂದಲೋ ಬಸವೇಶ್ವರನಲ್ಲಿರುವ ಭಕ್ತಿಯಿಂದಲೋ ಧಾವಿಸಿ ಬಂದವರಿಗೆ ಇಲ್ಲಿ ಅಂತಹ ಅದ್ಭುತ ದೃಶ್ಯಗಳಾವುವೂ ಕಾಣಲಾರವು ಅವೆಲ್ಲವನ್ನೂ ಕಲ್ಯಾಣವನ್ನು ಹಾಳುಗೆಡವಿದ ತುರುಷ್ಕ ರಾಹುವು ನುಂಗಿ ನೀರು ಕುಡಿದುಬಿಟ್ಟಿವೆ. ಎಲ್ಲೋ ಅಲ್ಪ ಸ್ವಲ್ಪ ಅವಶೇಷಗಳನ್ನು ಮಾತ್ರ ನೋಡಬಹುದು. ಅವುಗಳನ್ನು ಮುಂದೆ ವಿವರಿಸಿದೆ.

೧. ಹತ್ತಾರು ಲಕ್ಷ ಜನರಿಂದ ಭರಿತವಾಗಿದ್ದ ಕರ್ನಾಟಕದ ಈ ಮಹಾ ರಾಜಧಾನಿಯು ಇಂದು ಸಣ್ಣ ಹಳ್ಳಿಯಾಗಿದೆ ಎಕ್ಕ ಭಾಗ ವೆಲ್ಲ ಕಾಡುಬೆಳೆದು ಹೋಗಿದೆ ಸಣ್ಣಪುಟ್ಟ ಅವಶೇಷಗಳು ಅಲ್ಲಲ್ಲಿ ಕಾಣುತ್ತಿವೆ.

೨. ತ್ರಿಪುರಾಂತಕನ ಕೆರೆಃ—ಶಿವಶರಣರ ಸ್ನಾನಪಾನಗಳಿಂದ ಪುನೀತವಾದ ಈ ಕೆರೆಯು ನಾವು ಕಲ್ಯಾಣಕ್ಕೆ ಹೋಗುವ ದಾರಿಯಲ್ಲಿಯೇ ಇದೆ. ನೀರು ಬಹಳ ಕೆಂಪಾಗಿ ಅಂದರೆ ಕಾವಿಯ ವರ್ಣವಾಗಿದೆ.

೩. ತ್ರಿಪುರಾಂತಕನ ಪುರಃ— ಕೆರೆಯ ಮೇಲ್ಗಡೆ ಈ ಹೆಸರಿನ ಹಳ್ಳಿಯಿದೆ. ಇಲ್ಲಿದ್ದ ತ್ರಿಪುರಾಂತಕನ ಗುಡಿ ಮೊದಲಾದವು ಸುಚಿಹ್ನ್ಯಾಗಿ ಹೋಗಿವೆ.

೪. ಪತ್ರೆ ವನಃ—ಕೆರೆಯ ಮೇಲ್ಭಾಗದಲ್ಲಿ ನೂರಾರು ಬಿಲ್ವ ಪತ್ರೆಯ ಮರಗಳಿವೆ. ಇಲ್ಲಿಗೆ ಬಂದರೆ ಶಿವಶರಣರ ಶಿವಪೂಜಾ ವೈಭವವು ನೆನಪಿಗೆ ಬರುತ್ತದೆ.

೫. ಘನಲಿಂಗಿ ರುದ್ರಮುನಿ ಗವಿಃ — ಕಲ್ಯಾಣದಲ್ಲಿ ಶಿವಶರಣರು ಶಿವಪೂಜೆಗಾಗಿ ಏರ್ಪಡಿಸಿಕೊಂಡಿದ್ದ ಗವಿಗಳೂ, ನೆಲಮನೆಗಳೂ ಹೇರಳವಾಗಿವೆ. ಎಂಟುನೂರು ವರ್ಷಗಳಾದರೂ ನೂರಾರು ಗವಿಗಳನ್ನು ಈಗಲೂ ನೋಡಬಹುದು. ಘನಲಿಂಗ ರುದ್ರಮುನಿಯ ಗವಿಯು ಒಂದು ದರ್ಶನೀಯವಾದ ದೃಶ್ಯವಾಗಿದೆ. ರುದ್ರಮುನಿಯೆಂಬ ಶಿವಯೋಗಿಯು ಇದ್ದ ಸ್ಥಳ.

ಪ್ರಭುದೇವರ ಗದ್ದಿಗೆಃ — ಇದೊಂದು ವಿರಕ್ತಮಠ. ಇಲ್ಲಿ ಒಬ್ಬ ನಿರಂಜನ ಸ್ವಾಮಿಗಳಿದ್ದಾರೆ. ನಾನು ಹೋಗಿದ್ದಾಗ ಅವರು ಮೌನವ್ರತಧಾರಿಗಳಾಗಿದ್ದರು. ಸ್ವಾಮಿಗಳು ಮೈಸೂರು ಸೀಮೆಯ ವರೆಂದು ತಿಳಿಯಿತು.

ಈ ಮಠದಲ್ಲಿರುವ ಗದ್ದಿಗೆಯ ಮೇಲೆಯೇ ಶ್ರೀ ಪ್ರಭುದೇವನು ಕಲ್ಯಾಣಕ್ಕೆ ಬಂದಾಗ ಕುಳಿತು ಬಸವಾದಿಗಳಿಂದ ಪೂಜೆಗೊಂಡುದು. ಇದುವೇ ಶೂನ್ಯಪೀಠದ ಮೂಲಗದ್ದುಗೆ. ಈಗಲೂ ಮಠವು ಚೆನ್ನಾಗಿದೆ. ಈ ಮಠದ ಜೀರ್ಣೋದ್ಧಾರಕಕ್ಕಾಗಿ ಕೀರ್ತಿಶೇಷರಾದ ಶ್ರೀಮನ್ನಿರಂಜನ ಹಾನಗಲ್ಲ ಕುಮಾರಸ್ವಾಮಿಗಳು ಬಹಳ ಶ್ರಮಪಟ್ಟಿದ್ದಾರೆ.

ಮಡಿವಾಳೇಶ್ವರನ ಗುಡಿ:— ಶರಣಗೋಷ್ಠಿಯಲ್ಲಿ ಪ್ರಸಿದ್ಧನಾದ ಮಡಿವಳ ಮಾಚಿದೇವನು ಶಿವಶರಣರ ಬಟ್ಟೆಗಳನ್ನು ಒಗೆಯುತ್ತಿದ್ದ ಸ್ಥಳ. ಇಲ್ಲಿ ಒಂದು ಸಣ್ಣ ಮಡುವಿದೆ. ಅದರಲ್ಲಿ ಈಗಲೂ ನೀರಿದೆ. ಮಧ್ಯೆ ಒಂದು ಸಣ್ಣ ದೇವಾಲಯವಿದೆ. ಅದರಲ್ಲೊಂದು ಶಿವಲಿಂಗವಿದೆ. ಇಲ್ಲಿ ಮಡಿವಳ ತಂದೆಯಿದ್ದ ಸ್ಥಳವೆಂದು ಹೇಳುತ್ತಾರೆ.

ಅಕ್ಕ ನಾಗಮ್ಮನ ಗವಿ:— ಕಲ್ಯಾಣದಲ್ಲಿ ಅತ್ಯಂತ ಪ್ರೇಕ್ಷಣೀಯವಾದ ಗವಿ ಇದೇ. ಜನವಸತಿ ಇಲ್ಲವಾದುದರಿಂದ ಗವಿಯು ಒಳಹೋಗಲಿಕ್ಕೆ ದಿಗಿಲಾಗುತ್ತದೆ. ನಾನೇನೋ ಒಳಗೆಲ್ಲಾ ಸಂಚರಿಸಿ ಬಂದೆ. ಗವಿಯ ಮೇಲ್ಭಾಗದಲ್ಲಿ ದೇವಾಲಯದಂತಹ ಕಟ್ಟಡವೂ ಇದೆ. ಈ ಗವಿಯನ್ನು ನೋಡಿದ ಕೂಡಲೇ ಪರಮ ವಿರಕ್ತಳಾದ ಮಹದೇವಿಯಕ್ಕನ ಅಗಾಧವಾದ ವೈರಾಗ್ಯವು ನಮ್ಮ ಕಣ್ಣ ಮುಂದೆ ಬಂದು ನಿಂತಂತಾಗುತ್ತದೆ. ಗವಿಯು ದರ್ಶನೀಯವಾಗಿದೆ.

ಪಂಚಸೂತ್ರದ ಗವಿ:— ಪತ್ರೆ ವನದಲ್ಲಿದೆ. ಐದು ಲಿಂಗಗಳಿವೆ. ಇದರೊಳಗಿಂದ ಒಂದು ಸುರಂಗ ಮಾರ್ಗವಿದೆಯಂತೆ.

ನುಲಿ ಚಂದಯ್ಯನ ಗವಿ:— ಇದು ಅಷ್ಟೇನೂ ದೊಡ್ಡದಲ್ಲವಾದರೂ ತ್ರಿಪುರಾಂತಕನ ಕೆರೆಯ ಬದಿಯಲ್ಲಿಯೇ ಇದೆ.

ಬಿಜ್ಜಳನ ಅರಮನೆ:— ಎಲ್ಲವೂ ನಿರ್ನಾಮವಾಗಿದೆ. ಅರಮನೆಯಿದ್ದ ಹಾಳುಭೂಮಿಯನ್ನು ಜನರು ತೋರಿಸುತ್ತಾರೆ. ಅರಮನೆಯ ಸುತ್ತಲೂ ಕೋಟೆಯಿದ್ದ ಸ್ಥಳದ ಗುರುತು ಕಾಣುತ್ತದೆ. ಕಂದಕದ ಗುರುತೂ ಇದೆ. ಈ ಪ್ರದೇಶದಲ್ಲೆಲ್ಲಾ ಗಿಡಗಳು ಬೆಳೆದು ಹೋಗಿವೆ.

ಬಸವೇಶ್ವರನ ಅರಮನೆ:— ಅರಮನೆಯಿದ್ದ ದಿಣ್ಣೆಯನ್ನು ಮಾತ್ರ ತೋರಿಸುತ್ತಾರೆ. ನೆಲದಲ್ಲಿ ಗವಿಗಳು ಕಾಣಿಸುತ್ತವೆ. ಮತ್ತಾವ ಗುರುತೂ ಇಲ್ಲ.

ಶಿವಾನುಭವ ಮಂಟಪಃ — ತ್ರಿಪುರಾಂತಕನ ಕೆರೆಯ ಮೇಲೆ ಎತ್ತರವಾದ ಪ್ರದೇಶದಲ್ಲಿದ್ದಿತು. ಅದೂ ಈಗ ನಿರ್ನಾಮವಾಗಿದೆ. ಅಲ್ಲಿಯ ಕಲ್ಲು ಕಂಭಗಳನ್ನೆಲ್ಲಾ ಕಿತ್ತು ಮುಸಲರು ಪೀರ್‌ಪಾಚ್ಛನ ದರ್ಗ ಕಟ್ಟಿದ್ದಾರೆ. ಆ ದರ್ಗಾದಲ್ಲಿ ಹಿಂದೂ ಶಿಲ್ಪಕಲೆಯ ಗುರುತುಳ್ಳ ಕಲ್ಲು ಕಂಭಗಳೂ ಬೋದಿಗೆಗಳೂ ಬಹಳವಾಗಿವೆ. ಅವು ಶಿವಾನುಭವ ಮಂಟಪದವುಗಳೇ ಎಂದು ಜನರು ಹೇಳುತ್ತಾರೆ.

ಎರಡೆಂಭತ್ತು ಕೋಟಿ ವಚನ ಶಾಸ್ತ್ರಗಳ ತತ್ವಾರ್ಥವು ಎಲ್ಲಿ ಚರ್ಚಿಸಲ್ಪಡುತ್ತಿತ್ತೋ ಯಾವ ಮಂಟಪದ ಮಹಿಮೆಯನ್ನು ಕೇಳಿ ಅಸೇತು ಹಿಮಾಚಲ ಪರ್ಯಂತರವಾಗಿ ಶಿವಶರಣರು ಕಲ್ಯಾಣಕ್ಕೆ ಧಾವಿಸಿಬರುತ್ತಿದ್ದರೋ ಯಾವ ಮಹಾ ಮಂಟಪದಲ್ಲಿ ಬಸವ, ಚನ್ನಬಸವ, ಅಲ್ಲಮ, ಸಿದ್ಧರಾಮ, ಮಡಿವಾಳದೇವ, ಅಕ್ಕಮಹದೇವಿ, ಬಿಜ್ಜಮಹದೇವಿ, ನೀಲಾಂಬಿಕೆ ಮೊದಲಾದ ಶರಣ ಶರಣೆಯರು ಅನುಭವ ರಸಾಯನವನ್ನುಂಡು ನಲಿದಾಡುತ್ತಿದ್ದರೋ ಅಂತಹ ಲೋಕವಿಖ್ಯಾತವಾದ "ಶಿವಾನುಭವ ಮಂಟಪ" ವು ಪೀರ್‌ಪಾಚ್ಛಾನ ದರ್ಗದಲ್ಲಿ ಸಮಾವೇಶವಾಗುವದೆಂದು ನಂಬಿದ್ದವರಾರು?

ಪರುಷಗಟ್ಟೀ—ಇದು ಬಸವೇಶ್ವರನು ಶಿವಶರಣರಿಗೆ ದಕ್ಷಿಣೆ ಕೊಡಲು ಕುಳಿತುಕೊಳ್ಳುತ್ತಿದ್ದ ಪವಿತ್ರವಾದ ವೇದಿಕೆ. ಈಗ ಇದರ ಒಂದು ಮೂಲೆಯಲ್ಲಿ ಮಸೀದೆ ಕಟ್ಟಿದ್ದಾರೆ. ಮಿಕ್ಕೆಡೆಯಲ್ಲಿ ಕಟಿಗರ ಕಟ್ಟಿ ಕಟ್ಟಿದ್ದಾರೆ. ಪ್ರತಿದಿನವೂ ಇಲ್ಲಿ ಮೂವತ್ತು ನಾಲ್ವತ್ತು ಗೋವುಗಳ ವಧೆಯಾಗುತ್ತಿದೆಯಂತೆ!!! ಇಲ್ಲಿ ಮಾಂಸದ ವ್ಯಾಪಾರ ಮಾಡಿದರೆ ಕಟಿಗರಿಗೆ ಬಹಳ ಲಾಭವಾಗುತ್ತದೆಯಂತೆ. ವರ್ಷ ೧ ಕ್ಕೆ ಈ ಸ್ಥಳದ ಬಾಡಿಗೆಗಾಗಿ ಸರಕಾರಕ್ಕೆ ೨೫೦ ರೂಪಾಯಿಗಳನ್ನು ಕೊಡುತ್ತಾರಂತೆ. ಈ ಸ್ಥಳವನ್ನು ನೋಡಿದ ಕೂಡಲೇ ಪ್ರತಿಯೊಬ್ಬ ಹಿಂದುವಿಗೂ ಹೃದಯವು ದುಃಖಾಶ್ಚರ್ಯಗಳಿಂದ ಭರಿತವಾಗದಿರದು. ಎಂತಹ ಪವಿತ್ರ ಸ್ಥಳಕ್ಕೆ ಏನು ದುರ್ಗತಿ ಹಾಯ್ ಹಾಯ್.

ಹಿರಿಯ ಮಠಃ— ಇದು ರೇಮುನಾರಾಧ್ಯನೆಂಬ ಮಹಾಯೋಗಿಯು ಇದ್ದ ಮಠ. ತನ್ನ ಶಿವಪೂಜಾಪ್ರಭಾವದಿಂದ ಸರ್ಪದಷ್ಟನಾದ ರಾಜನನ್ನು ಈ ಮಹಾತ್ಮನು ಬದುಕಿಸಿದ ಹಾಗೆ ಒಂದು ಕಥೆಯು

ಬಸವಪುರಾಣದಲ್ಲಿ ರಾರಾಜಿಸುತ್ತದೆ. ಮಠವು ಈಗ ಬಹಳ ಜೀರ್ಣ ವಾಗಿದೆ. ರೇಣುಕಶಾಖೆಗೇ ಮಠ ಸೇರಿದೆ.

ಬಸವೇಶ್ವರ ಮಠಃ— ಕಲ್ಯಾಣದಲ್ಲಿ ಜೀವ ಹಿಡಿದಿರುವ ಮಠಗಳಲ್ಲಿ ಇದೊಂದು. ಇಲ್ಲೊಂದು ಶಿಲಾಲಿಪಿಯಿದೆ. ಇದನ್ನು ಬಸವೇಶ್ವರ ಸ್ಥಾಪಿಸಿದ್ದೆಂದು ಹೇಳುವರು.

ಸೋಮೇಶ್ವರ ಗುಡಿಃ— ಇದೊಂದು ಸಣ್ಣನಾದ ಶಿವದೇವಾಲಯ. ಊರಿನ ಮಧ್ಯದಲ್ಲಿದೆ.

ಪೀರನ ದರ್ಗಃ— ಕಲ್ಯಾಣವನ್ನು ಮುಸಲರು ವಶಪಡಿಸಿಕೊಂಡ ಮೇಲೆ ಅಲ್ಲಿದ್ದ ಜೈನ ಶೈವ ಕಟ್ಟಡಗಳನ್ನೆಲ್ಲಾ ಪುಡಿಮಾಡಿ ಈ ದರ್ಗ ವನ್ನು ಕಟ್ಟಿದ್ದಾರೆ. ಇಲ್ಲಿ ಒಂದು ಮಸೀದೆಯೂ ಕೆಲವು ಗೋರಿಗಳೂ ಇವೆ. ಪೀರ್‌ಸಾಚ್ಛನೆಂಬ ಮುಸಲ್ಮಾನ ಸಾಧುವು ಇಲ್ಲಿ ಸ್ವಲ್ಪ ದಿನವಿದ್ದನಂತೆ. ಇದು ಮುಸಲ್ಮಾನರ ಹೇಳಿಕೆ. ಸದ್ಯಕ್ಕೆ ಕಲ್ಯಾಣದಲ್ಲಿ ಇದೊಂದು ಸ್ಥಳಮಾತ್ರ ದರ್ಶನೀಯವಾಗಿದೆ. ಆದರೆ ಇಲ್ಲಿಗೆ ಹೋದ ಯಾವ ಹಿಂದುವಿನ ಹೊಟ್ಟೆಯೂ ಉರಿಯದಿರುವುದಿಲ್ಲ.

ನವಾಬನ ಅರಮನೆಃ— ಊರಿನ ಕಟ್ಟಕಡೆಯಲ್ಲಿ ಒಂದು ಕೋಟೆಯೂ ಅದರೊಳಗೊಂದು ಮಹಲೂ ಇವೆ. ಇವರಲ್ಲಿಯೇ ಜಹಗೀರುದಾರನಾದ ನವಾಬನಿರುತ್ತಾನೆ. ಮಹಲಿನ ಸುತ್ತಣಕೋಟೆಯನ್ನು ಬಿಜ್ಜಳನ ಅರಮನೆ ಕೋಟೆ ಬಸವೇಶ್ವರನ ಅರಮನೆ ಮೊದಲಾದವುಗಳನ್ನು ಕಿತ್ತು ಮುಸಲರು ಹೊಸದಾಗಿ ಕಟ್ಟಿದ್ದಾರೆ. ಈ ಕೋಟೆಯ ಗೋಡೆಯ ಮೇಲೆ ಹಿಂದೂ ವಿಗ್ರಹಗಳನ್ನೂ ಹಿಂದೂ ಶಿಲ್ಪದ ಗುರುತುಗಳನ್ನೂ ಈಗಲೂ ಕಾಣಬಹುದು.

ಮೇಲೆ ಹೇಳಿದವುಗಳೇ ಅಲ್ಲದೆ ಆ ವಿಶಾಲವಾದ ಹಾಳು ಪಟ್ಟಣದಲ್ಲಿ ಇನ್ನೂ ನೂರಾರು ನೆಲಮನೆಗಳೂ ಗವಿಗಳೂ ಕಾಣಸುತ್ತವೆ. ಇವನ್ನೆಲ್ಲ ನೋಡಿದರೆ ಯಾವ ಸ್ವಾಭಿಮಾನಿಯೂ ಕಣ್ಣೀರಿಡದಿರನು.

ಕಲ್ಯಾಣದ ಕನ್ನಡಃ— ಈ ಪ್ರಾಚೀನ ರಾಜಧಾನಿಯಿಂದಲೇ ಪೂರ್ವದಲ್ಲಿ ನವೀನಶೈಲಿಯ ವೀರಶೈವ ವಚನ ರಚನೆಯು ಹೊರಟುದು. ತ್ರಿಭುವನ ವಿಕ್ರಮಾದಿಗಳ ಆಸ್ಥಾನದಲ್ಲಿ ಕನ್ನಡವು ರಾಜಭಾಷೆಯಾಗಿ ಬಾಳಿ ಗೌರವವನ್ನು ಹೊಂದಿದುದು. ಅಂತಹ ಸ್ಥಳದಲ್ಲಿ ಈಗ ಕನ್ನಡವು

ಕುಲಗೆಟ್ಟು ಹೋಗಿದೆ. ಅಲ್ಲಿನ ಜನರಾಡುವ ಕನ್ನಡದಲ್ಲಿಯ ಅನಂತ ಶಬ್ದಗಳು ಮೈಸೂರಿನವರಾದ ನಮಗೆ ತಿಳಿಯದಂತಾಗಿವೆ. ಇಲ್ಲಿನ ಶಾಲೆಗಳಲ್ಲಿ ಉರ್ದು, ಮರಾಠಿಗಳ ಹೊರತು ಕನ್ನಡವನ್ನು ಹೇಳಿಕೊಡುವದಿಲ್ಲ. ಕನ್ನಡ ಓದಬಲ್ಲವರು ಈ ಊರಿನಲ್ಲಿರುವರೋ ಇಲ್ಲವೋ ನನಗೆ ಸಂಶಯವಾಗಿದೆ. ಭಾಷಾ ದೃಷ್ಟಿಯಿಂದಲೂ, ಜನರ ನಾಗರಿಕತೆ ವಿದ್ಯಾದಿಗಳ ದೃಷ್ಟಿಯಿಂದಲೂ ಈ ಭಾಗವು ಬಹಳ ಹಿಂದೆಬಿದ್ದು ಹೋಗಿದೆ.

ಕಲ್ಯಾಣದಿಂದ ಹಿಂದುರಿಗಿ ಹುಮನಾಬಾದಿಗೆ ಬರುವಾಗ ಎಡಭಾಗದಲ್ಲಿ ಶಿವಶರಣನಾದ ಮೋಳಿಗಯ್ಯನ ಗವಿ ಸಿಕ್ಕುತ್ತದೆ. ಇಲ್ಲಿ ವಿಶಾಲವಾದ ಒಂದು ನೆಲದೊಳಗಣ ದೇವಾಲಯವೂ ಶಿವಲಿಂಗವೂ ಇವೆ. ದೇವಾಲಯವು ನೋಡಲಿಕ್ಕೆ ರಮ್ಯವಾಗಿದೆ. ದೇವಾಲಯದ ಮೇಲ್ಭಾಗದಲ್ಲಿ ಒಂದು ಆಲದ ಮರವಿದೆ. ಇದು ಆ ಶಿವಶರಣನು ಹಾಕಿದ ಮರವೆಂದು ಹೇಳುತ್ತಾರೆ.

ವಾಚಕ ಮಹಾಶಯ, ಇದುವರೆಗಿನ ಕಲ್ಯಾಣದ ವಾರ್ತೆಯನ್ನು ಓದಿ ತಾವು ಕಣ್ಣೀರಿಡಬಹುದು. ಜಗದ ಬಾಳುವೆಯೇ ಈ ಬಗೆಯದು. ಇಂತಹ ದೃಶ್ಯವನ್ನು ನಾವು ಹಂಪೆಯ ಹಾಳು ಪಟ್ಟಣ. (ವಿಜಯನಗರ) ಹಳೆಯ ಬೀಡು (ದ್ವಾರಸಮುದ್ರ) ಮೊದಲಾದ ಸ್ಥಳಗಳಲ್ಲಿ ಕಾಣಬಹುದು. ಯಾವ ಸ್ವಾಭಿಮಾನಿಯಾದ ಕನ್ನಡಿಗನು ತಾನೆ ಒಂದು ಬಾರಿಯಾದರೂ ಈ ಪ್ರಾಚೀನ ರಾಜಧಾನಿಯನ್ನು ಕಣ್ಣಾರೆ ನೋಡಿ ಕಣ್ಣೀರು ಸುರಿಸದಿರನು ?

ಕಂದ॥ ಕಸವಂ ಕಸವರವಾಗಿಸಿ ।
ಕಸವರವಂ ಕಸಕೆ ಸಾಟಿಯೆನ್ನಿಸಿ ಜಗದೊಳ್ ॥
ಅಸಮಬಲನಾಗಿ ಮೆರೆಯುವ ।
ಪಶುಪತಿ ನಿಭರೂಪ ಕಾಲಪುರುಷನೆ ನಮಿಪೆಂ ॥೧॥
ಬಸವಾದಿ ಶರಣಗಣದಿಂ ।
ರಸೆಯೊಳ್ ಜಸವಾಂತ ಪರಮಕಲ್ಯಾಣಪುರಂ ॥
ಬಸವಳಿದಬ್ಜಿನಿ ಯಂದದೆ ।
ವಸುಮತಿಯೊಳ್ ಕಾಂತಿಹೀನಮಾದುದದೇಕೈ? ।೨॥
ಶರಣರ ಶಾಪದ ಫಲದಿಂ ।
ದಿರದಾದುದು "ಕಟಗಕೇರಿ" ಯೆಂಬರ್ ಕೆಲಬರ್ ।

ತುರುಗಳವಧಿಸುತಲಿರುತಿಹ ।
ತುರುಕರಿಗಾ ಶರಣರೇಕೆ ಶಾಪವ ಕೊಡರೈ ॥೩॥
ಸಜ್ಜನ ವಿರೋಧವೆಸಗಿದ ।
ಬಿಜ್ಜಳನಂ ಮುನಿದು ಶಪಿಸಿ ಪೋದಾ ಶರಣರ್ ॥
ಸಜ್ಜನಕೆ ವಂದ್ಯವಾದುದ ।
ನುಜ್ಜೀವಿಸೆ ಶಾಪವೀಯದೇತಕೆ ಬಿಡುವರ್ ॥೪॥
ಅನುಭವ ಮಂಟಪವೆಲ್ಲೈ ।
ಅನುಭವ ರಸಮುಂಡುನಲಿವಾ ನಿರ್ಮಳರೆಲ್ಲೈ ॥
ಅನುಪಮ ವೈಭವವೆಲ್ಲೈ ।
ನಿನಗೀ ಪರಿ ಕೋಪವೇಕೆ ಕಲ್ಯಾಣದೊಳಂ ॥೫॥

---

## ಸ್ತೋತ್ರ- ಸಂಗ್ರಹ.

(ಪರಿಶೋಧಕ:—. ಮಾಪುರೀಶ.)

ಅವತರಣಿಕೆ:— ಈ ಮೊದಲು ಶಿವಾನುಭವದ ಮಾಹೆ- ಜೂನ ೧೯೩೧ ಸಂಚಿಕೆಯಲ್ಲಿ ಕೆಲವು ಪದ್ಯಗಳನ್ನು ಪ್ರಸಿದ್ಧಿಸಿದ್ದೆನು. ಅವು ಭಾಷಾಭಿಮಾನಿಗಳಿಂದ ಪರಿಗಣಿಸಲ್ಪಟ್ಟವು. ಮುಂದಿನ ಪದ್ಯಗಳಾದರೂ ಬಹು ಮನೋಹರವಾಗಿವೆ. ಇವೆಲ್ಲ ನನ್ನ ಜನಕರಾದ ಕೈ. ವಾ. ಚನ್ನವೀರ ಶಾಸ್ತ್ರಿಗಳವರು ಪುರಾಣಮಠ ಹೆ. ಮಾಸ್ತರ ಗರ್ಲಸ್ಕೂಲ ನಂ. ೧ ಹುಬ್ಬಳ್ಳಿ ಇವರ ಸಂಗ್ರಹದಲ್ಲಿದ್ದವು. ಇವು ಯಾವ ಕವಿಯಿಂದ ರಚಿಸಲ್ಪಟ್ಟವು, ಯಾವ ಗ್ರಂಥದೊಳಗಿನವು ತಿಳದಿಲ್ಲ. ಈ ಸಂಗತಿಯು ಪರಿಶೋಧಿಸಲ್ಪಡತಕ್ಕವಾಗಿವೆ.

ನನ್ನ ಜನಕರು ಸ್ವತಃ ಕವಿಗಳಾಗಿದ್ದರು. ಅವರು ರಚಿಸಿದ ಪದ ಪದ್ಯ ವೃತ್ತಗಳನ್ನು ಬಹು ಜನರು ಹುಬ್ಬಳ್ಳಿಯಲ್ಲಿ ಹಾಡುತ್ತಿರುವರು. ಕರ್ನಾಟಕದಲ್ಲಿ ಶಕುಂತಲಾ ನಾಟಕವನ್ನು ರಂಗಭೂಮಿಯ ಮೇಲೆ ತಂದವರು ಇವರೇ ಮೊದಲನೆಯವರು. ಅದರಲ್ಲಿ ಇವರ ಕವಿತ್ವದ

ಜಾಣ್ಮೆಯು ಚನ್ನಾಗಿ ತೋರಿಸಲ್ಪಟ್ಟಿದೆ. ಈ ಗ್ರಂಥವನ್ನು ಸ್ವಲ್ಪ ದಿವಸಗಳಲ್ಲಿ ಮುದ್ರಿಸಿ ಪ್ರಸಿದ್ಧವಾಡಬೇಕೆಂಬ ವಿಚಾರ ಮಾಡಿರುತ್ತದೆ.

ಇದರಲ್ಲಿಯ ಕಡೆಯ ಪದ್ಯವು ಬಹು ಅರ್ಥಸ್ವಾರಸ್ಯವುಳ್ಳದ್ದಾಗಿದೆ. ವಾಚಕರು ಮರೆಯದೆ ಗಮನಿಸಬೇಕೆಂದು ವಿನಂತಿಯದೆ.

ವಾರ್ಧಿಕಃ— ರತ್ನಕರ ಮುಖರತ್ನ ನವರತ್ನ ನೇತ್ರಶಶಿ ।
ರತ್ನ ಶಿರಶಿರ ಪಾಣಿ ರತ್ನ ಧರಧರ ಹಾರ ।
ರತ್ನ ಕರಿರತ್ನ ಭುವನಕ್ಕೆಸೋಮನೆನಿಪ ರತ್ನಾದ್ರಿವಾಸ ಧೀಶಾ॥
ರತ್ನರವಿ ಷಡುಯುಗವಗೆಬಿಡದ ರತ್ನಾಂಕಿತನ ।
ರತ್ನದೊಡಗೂಡಿ ಜನಿಸಿದ ರಮಣಿ ರಮಣ ನುತ ।
ರತ್ನ ಬಾಣದೆಸೆಗಳಧಿಪತಿಗಳಿಗೆ ಕರ್ತರತ್ನಪುರಹರನೆಸಲಹೂ ॥೬॥

ಟಿಪ್ಪಣಿಃ— ರತ್ನ = ಮೂರು, ಕರ = ಎರಡು, ಮುಖ = (ಪಂಚ) ವದನ, ನವ = ಒಂಭತ್ತು, ನೇತ್ರ = (ಪಂಚದಶ) ನಯನ, ಶಶಿ = ಒಂದು, ಶಿರ = (ನಾಲ್ಕು) ತಲೆ, ಪಾಣಿ = (ಬ್ರಹ್ಮನ ಮಸ್ತಕ) ಹಸ್ತ, ರತ್ನ = ರನ್ನ, ಧರ = ಧರಿಸು, ಹಾರ = (ಕರ್ಕೋಟಕಸರ್ಪದ) ಮಾಲೆ, ಕರಿ = ಎಂಟು ಭುವನ = (ಚತುರ್ದಶ) ಭೂಮಿ, ಸೋಮ = ಚಂದ್ರ, ಅದ್ರಿ = (ರೋಹಣ) ಪರ್ವತ.

ವಾರ್ಧಿಕಃ— ಕಮಲೇಂದ್ರ ನೇತ್ರಯುತ ಚರಣನಂ ಸ್ಫುರಣನಂ ।
ಕಮಲಭವ ಕಂಶಕಲ ಪಾತ್ರನಂ ಪಾತ್ರನಂ ।
ಕಮಲಶರ ದರ್ಪಾಪಹಾರನಂ ಶೂರನಂ ಪರಮಪಾವನ ನಿತ್ಯ್ರನಂ ॥
ವಿಮಲಗಿರಿಚಾಪ ಗುಹತಾತನಂ ಖ್ಯಾತನಂ ।
ಸುಮನೋನದೀ ಜಟಾಧಾರನಂ ತಾರನಂ ।
ಮಮ ರುಚಿರ ಹೃತ್ಕಮಲ ಮಿತ್ರನಂ ಮಿತ್ರನಂ ನಂಜೇಶನಂ ಭಜಿಸುವೆ ॥೭॥

ಟಿಪ್ಪಣಿಃ – ಕಮಲೇಂದ್ರ = ಲಕ್ಷ್ಮೀಕಾಂತ (ನಾರಾಯಣ), ಸ್ಫುರಣ= ಪ್ರಕಾಶ, ಕಮಲ+ಭವ = ಬ್ರಹ್ಮ, ಕಂ = ಮಸ್ತಕ, ಶಕಲ = ಅರ್ಧ, ಪಾತ್ರ = ಯೋಗ್ಯ (ಕರಕೆ), ಕಮಲಶರ = ಮನ್ಮಥ, ಚಾಪ = ಬಿಲ್ಲು,

ಗುಹ = ಷಣ್ಮುಖ, ಸುಮನೋನದಿ = ದೇವಗಂಗೆ, ರುಚಿರ = ನಿರ್ಮಲ, ಮಿತ್ರ = ಸಖ (ಸೂರ್ಯಸಮಾನ), ರವಿ = ಹನ್ನೆರಡು, ಷಡು = ಆರು, ಯುಗ = (ಇಪ್ಪತ್ತೊಂದು) ಯುಗಗಳು, ಅಂಕಿತ = ಕುರುಹು, ರಮಣಿ = ಲಕ್ಷ್ಮೀದೇವಿ, ರಮಣ = ನಾರಾಯಣ. ಬಾಣ = ಐದು, ದೆಸೆ = (ಎಂಟು) ದಿಕ್ಕು, ಪುರ = (ಮೂರು) ಪಟ್ಟಣ.

ವಾರ್ಧಿಕ:— ಹರಿಯೇರಿ ಹರಿಬರಲು ಹರಿಹರಿಯನೆಕಂಡು ।
ಹರಿಯೊಳು ಹರಿ ತಾನು ಹರಿಹರಿದಾಡುತಿರೆ ।
ಹರಿಯು ಬಾಯನ ತುತ್ತ ಹರಿಹರಿದು ಹರಿ ತಿನಲು ಹರಿಯನೇ
ರಿದ ಹರಿಯು ॥
ಹರಿಯು ಹಾಸಿಕೆಯ ಮೇಲೆ ಹರುಷದಿಂ ಕುಳಿತಿರ್ಪ ।
ಹರಿಯ ತನುಜನನುರುಹಿ ಹರಿಶಿರವನರಿದಣುಗ ।
ಹರಿರಿಪು ಮೋರೆಯುವನ ವರವಾಹನನ ವೈರಿಯು ಕಣ್ಣಿನವ
ಬಂದಿರ್ದನಕ್ಕ ॥೮॥

ಟಿಪ್ಪಣಿ:—ಹರಿ = ಮೇಘ (ಮೋಡ), ನವಿಲು, ಸರೋವರ, ಮಾರುತ ಕುಣಿ, ಸಿಖಿ, ಬಾಯ = ಕವಿಳಿಕರದೊಳಗಣ, ತುತ್ತ=(ಸರ್ಪರೂಪ) ಆಹಾರ, ಹರಿಹರಿದು = ಕಿತ್ತು ಕಿತ್ತು, ಹರಿ = ಶಕುಂತೀಶ್ವರ, ಗರುಡ, ದಾಮೋದರ, ಸರ್ಪ, ತನುಜ = (ಮನ್ಮಥನೆಂಬ) ಮಗ ಅರಿ = ಖಂಡಿಸು, ಅಣುಗ= (ಪರಮೇಶ್ವರನ) ಮಗ, ಹರಿ = ಸಿಂಹ, ರಿಪು = ವೈರಿ (ಗಜ), ಮೋರೆ = (ಗಜ) ಮುಖ, ವಾಹನ = ಮೂಷಕ, ವೈರಿ = (ಮೂಷಕ ವೈರಿ) ಬೆಕ್ಕು.

ವಾರ್ಧಿಕ:— ಶಿವ ಸುರಭಿಯೊಳಗೊಂದು ಶಿವನಿರಲು ಶಿವ ಕಂಡು ।
ಶಿವನೇರಿ ಶಿವ ಬಳಲಿ ಶಿವನಿಳಿದು ಶಿವಬಂದು ।
ಶಿವತಟದೊಳಂ ಪೊಕ್ಕು ಶಿವಶಿವನ ಕಾಂಬುತಿರೆ ಶಿವ ಮುಟ್ಟಿ
ಶಿವ ಸಾಯಲು ॥
ಶಿವಸತಿಯ ಪತಿಯು ಶಿವಕುಜಕೊಯ್ದು ಶಿವಯೆನಲು ।
ಶಿವಕೇಳಿ ಶಿವಬಂದು ಶಿವಗೆ ಪ್ರಾಣವಕೊಟ್ಟ ।
ಶಿವನುಳುಹಿ ಶಿವಪೋದ ಶಿವಸುಖದೊಳಿರುತಿರ್ದ ಶಿವಬಸವ
ಭೂಪಕೇಳು ॥೯॥

ಟಿಪ್ಪಣಿ:— ಶಿವ = ನಿರ್ಮಲ ಉದಕ ಜಂಬುಕ ಮೊರಡಿ, ಬಳಲಿ = ಕಷ್ಟಪಟ್ಟು, ಶಿವ = ನರಿ (ಜಂಬುಕ), ತಟ = ಕೆರೆ, ಶಿವ = ನೀರು,

ಶಿವಮುಟ್ಟೆ = ಸರ್ಪದಷ್ಟನಾಗಿ, ಶಿವಸತಿ = ಹೆಣ್ಣಾನರಿ, ಶಿವಕುಜ = ನ್ಯಗ್ರೋಧವೃಕ್ಷ, ಶಿವ = ಹರ, (ಮಂಗಲಸ್ವರೂಪ), ಉಳುಹಿ = ಬದುಕಿಸಿ.

ವಾರ್ಧಿಕಃ— ದಂಡಧರ ಹೃನ್ನ್ಯಾಸಂಡಧರ ಚಂದ್ರಪಾ ।
ತಾರ್ಕಂಡಾಗ್ನಿ ನೇತ್ರಶಿವ ಖಂಡಶಶಿಮುಕುಟಫಣಿ ।
ಕುಂಡಲಶಿರೋನಿಕರ ಮಂಡನಮಹಾದೇವ ಪುಂಡರೀಕಾಜಿನಧರಾ ॥
ಪುಂಡರಿಕ ಜನವಂದ್ಯ ಪುಂಡರೀಕಾಕ್ಷಪದ ।
ಪುಂಡರಿಕ ಸುವರ್ನ ಶುಂಡಾಲಮುಖ ಜನಕ ।
ಮಂಡನ ಮುನೀಶ ಹೃತ್ಪುಂಡರಿಕ ನಿವಾಸ ಚಂಡಿಕಾನಾಥ ಶರಣಾ ॥೧೦॥

ಟಿಪ್ಪಣಿಃ— ದಂಡ = ದೊಣ್ಣೆ, (ದೊಡ್ಡಬಡಿಗೆ), ದಂಡಧರ = ಯಮ ಹೃತ್+ನ್ಯಾಸ = ಹೃದಯವನ್ನು ತುಳಿದಂಥ, ಅಂಡ = ಬ್ರಹ್ಮಾಂಡ, ಚಂದ್ರ= ಸೋಮ, ಮಾರ್ತಾಂಡ = ಸೂರ್ಯ, ಫಣಿ = ಸರ್ಪ, ನಿಕರ = ಸಮೂಹ ಮಂಡನ = ಅಲಂಕಾರ, ಪುಂಡರೀಕ = ವ್ಯಾಘ್ರಾಸುರ, ಅಜಿನ = ಚರ್ಮ ಪುಂಡರಿಕಜನ = ಬ್ರಹ್ಮ, ಪುಂಡರಿಕ = ಕಮಲ, ಅಕ್ಷ = ಕಣ್ಣು, (ನಾರಾಯಣ), ಶುಂಡಾಲ = ಸೊಂಡಿ, ಮುಖ = ಮೋರೆ, (ಆನೆಯಮುಖ ವಿಘ್ನೇಶ್ವರ), ಮಂಡನ = ಪೂಜ್ಯ, ಹೃತ್ಪುಂಡರಿಕ = ಹೃದಯಕಮಲ, ಚಂಡಿಕಾ = ಪಾರ್ವತಿ.

ವಾರ್ಧಿಕಃ— ಕುವಲಯಪರಾಜಿತಂಕಂಜಾತರಂಜಿತಂ ।
ತವೆತಾರೆ ಕಾಲಾಂಕೃತಂ ನಾಡೆಸಂತತಂ ।
ರವಿಯಂತೆ ಪುರದಂತೆ ವನದಂತೆ ದಿವದಂತೆ ಶಿವನಂತೆ ದನುಜರಂತೆ ॥
ವಿವಿಧಾನು ಮಿಷಭಂಗವರ್ಧನಂ ಶೃತಿಯುತಂ ।
ವಿವರಿಸಲ್ಕಂಜನೋದ್ಭಾಸಿತಂಬಕಸರಸಿ ।
ನವಗಾನ ವಿಪ್ರಕುಲಗಿರಿ ವರುಣದೆಸೆಯಂತೆ ಗಿರಿಜೆ ಯಂಬಕ ಮೆಸೆದವು ॥೧೧॥

ಸೂಚನೆಃ— ಈ ಪದ್ಯದಲ್ಲಿ ಪಾರ್ವತಾದೇವಿಯ ಕಣ್ಣುಗಳ ವಿಷಯವಾಗಿ ಹೇಳಲ್ಪಟ್ಟಿದೆ. ಬಹು ಉಪಮಾನಗಳಿದ್ದು ಅವುಗಳಿಗೆ ಅನುಸ

ರಿಸಿಯೇ ವಿವರಣೆಯು ಕೊಡಲ್ಪಟ್ಟಿದೆ. ಕರ್ನಾಟಕ ಭಾಷೆಯಲ್ಲಿ ಇಂಥ ಅರ್ಥಾಲಂಕಾರ ಪದ್ಯಗಳು ವಿರಳ. ಬಹು ಕ್ಲಿಷ್ಟವಾಗಿದೆ. ಅದ್ದರಿಂದ ಪೂರ್ವಾರ್ಧ ಉತ್ತರಾರ್ಧ ಎಂಬ ಭಾಗಗಳ ಸರಿಯಾಗಿ ಅನ್ವಯ ಟಿಪ್ಪಣಿಗಳನ್ನು ಕೊಟ್ಟಿದೆ.

## ಪೂರ್ವಾರ್ಧ.

ಅನ್ವಯಃ— ಕುವಲಯ ಪರಾಜಿತಂ, ಕಂಜಾತರಂಜಿತಂ, ತನೆ ತಾರಕಾಲಂಕೃತಂ, ನಾಡೆಸಂತತಂ, ಗಿರಿಜೆಯಂಬಕವು, ರವಿಯಂತೆ, ಪುರದಂತೆ, ವನದಂತೆ, ವಿವದಂತೆ, ಶಿವನಂತೆ, ದನುಜರಂತೆ, ಎಸೆದವು.

ರವಿಯ ಪರವಾಗಿಃ — ಕುವಲಯ = ನೈದಿಲೆಯ ಪುಷ್ಪವನ್ನು, ಪರ= ಶ್ರೇಷ್ಠವಾಗಿ, ಜಿತ = ಗೆಲ್ಲಲ್ಪಟ್ಟವನಾದಂಥ, ನಾಡೆ = ಲೇಸಾಗಿ, ಸಂತತಂ = ನಿರಂತರವಾಗಿ, ಕಂ = ಉದಕದಲ್ಲಿ, ಜಾತ = ಹುಟ್ಟಿದ ಕಮಲಗಳಿಂದ, ರಂಜಿತಂ = ಒಪ್ಪುವಂಥ, ತನೆ = ಚನ್ನಾಗಿ, ತಾರಕ = ಧ್ರುವನಕ್ಷತ್ರದಿಂದ, ಅಲಂಕೃತಂ = ಪ್ರತಾಪಲಂಕಾರವುಳ್ಳಂಥ, ರವಿಯಂತೆ = ಸೂರ್ಯನ ಹಾಗೆ, ನಾಡೆ = ಲೇಸಾಗಿ, ಸಂತತಂ = ಯಾವಾಗಲು (ನಿರಂತರವಾಗಿ), ಗಿರಿಜೆಯ = ಪಾರ್ವತೀದೇವಿಯ, ಅಂಬಕವು = ಕಣ್ಣುಗಳು, ಎಸೆದವು = ಶೋಭಿಸಿದವು.

ಪುರದಪರವಾಗಿಃ— ಕು = ಭೂಮಿಯ, ವಲಯ = ಸಮೂಹವನ್ನು, ಪರ = ಶ್ರೇಷ್ಠವಾಗಿ, ಜಿತಂ = ಗೆದ್ದಂಥ, ಕಂ = ಕಮಲದಲ್ಲಿ ಜಾತ=ಹುಟ್ಟಲ್ಪಟ್ಟ ಬ್ರಹ್ಮನಿಂದ, ರಂಜಿತಂ = ನಿರ್ಮಿಸಲ್ಪಟ್ಟಂಥ, ತನೆ = ಚನ್ನಾಗಿ. ತಾರಕ = ಬೆಳ್ಳಿಯಿಂದ, ಅಲಂಕೃತಂ = ಶ್ರಿಂಗರಿಸಲ್ಪಟ್ಟಂಥ, ನಾಡೆ = ಲೇಸಾಗಿ, ಸಂತತಂ = ನಿರಂತರವಾಗಿ, ಪುರದಂತೆ = ಮುಪ್ಪುರಗಳ ಹಾಗೆ, ಗಿರಿಜೆಯಂಬಕವೆಸೆದವು.

ವನದ ಪರವಾಗಿಃ — ಕುವಲಯಪ = ಪೃಥ್ವಿಗಳಿಂದ, ರಾಜಿತಂ = ಪ್ರತಿಪಾಲಿಸಲ್ಪಟ್ಟಂಥ, ಕಂ = ಭೂಮಿಯಲ್ಲಿ, ಜಾತ = ಹುಟ್ಟಲ್ಪಟ್ಟ ವೃಕ್ಷಗಳಿಂದ, ರಂಜಿತಂ = ಒಪ್ಪಲ್ಪಟ್ಟಂಥ, ತನೆ = ಚನ್ನಾಗಿ, ತಾರಕ = ವುಡಹುಲಿ ಸಿಂಹಗಳಿಂದ, ಅಲಂಕೃತಂ = ಶ್ರಿಂಗರಿಸಲ್ಪಟ್ಟಂಥ, ವನದಂತೆ = ಉದ್ಯಾನದ ಹಾಗೆ ನಾಡೆಸಂತತಂ ಗಿರಿಜೆಯಂಬಕ ವೆಸೆದವು.

ವನದ (ಉದಕದ) ಪರವಾಗಿಃ-- ಕುವಲಯ,ಪ = ಭೂವಲಯುವನ್ನು ಸುತ್ತಿಹತನದಿಂದ, ರಾಜಿತಂ = ಶ್ರೇಷ್ಠವಾಗಿ ಒಪ್ಪಲ್ಪಟ್ಟಂಥ, ಕಂ = ನೀರಿನ, ಜಾತ = ಸಮೂಹದಿಂದ, ರಂಜಿತಂ = ಶೋಭಿಸುವಂಥ, ತವೆ = ಚನ್ನಾಗಿ, ತಾರ = ಮುತ್ತು (ಮೀನ, ಹಡಗ,) ಗಳಿಂದ, ಅಲಂಕೃತಂ = ಅಲಂಕರಿಸಲ್ಪಟ್ಟಂಥಾ, ವನದಂತೆ = ಶರಧಿಯ ಹಾಗೆ, ಗಿರಿಜೆಯುಂ, ಬಕ ಮೆಸೆದವು.

ದಿವದಪರವಾಗಿಃ— ಕುವಲಯ = ಪಕ್ಷಿಗಳ, ಪ = ಪತಿಗಳಿಂದ, ರಾಜಿತಂ = ಶೋಭಿಸುವಂಥ, ಕಂ = ಅಗ್ನಿಯಲ್ಲಿ, ಜಾತ = ಹುಟ್ಟಿದ ಹವಿಸ್ಸಿನಿಂದ, ರಂಜಿತಂ = ಶೋಭಿಸುವಂಥ, ತವೆ = ಚನ್ನಾಗಿ, ತಾರಕಾ = ತಾರಕಾಯೆಂಬ ಏಳು ಕೋಟಿ ನಕ್ಷತ್ರಗಳ ಒಡೆಯನಿಂದ, ಅಲಂಕೃತಂ = ಶೋಭಿಸಲ್ಪಟ್ಟಂಥ, ನಾಡೆ = ಚನ್ನಾಗಿ, ಸಂತತಂ = ನಿರಂತರವಾಗಿ ದಿವದಂತೆ = ಗಿರಿಜೆಯುಂಬಕಮೆಸೆದವು.

ಶಿವನಪರವಾಗಿಃ-- ಕುವಲಯ = ಭೂವಲಯುದಲ್ಲಿ, ಪರಾಜಿತಂ = ಶ್ರೇಷ್ಠವಾಗಿ ಬೆಳಗಲ್ಪಟ್ಟಂಥ. ಕಂ= ಪ್ರಾಣವಾಯುವಿನಿಂದ, ಜಾತ = ಹುಟ್ಟಿ, ರಂಜಿತಂ = ಒಪ್ಪುವಂಥ, ತವೆ = ಚನ್ನಾಗಿ, ತಾರಕ = ನಕ್ಷತ್ರಮಾಲೆಯಿಂದ, ಅಲಂಕೃತಂ = ಅಲಂಕರಿಸಲ್ಪಟ್ಟಂಥ, ಶಿವನಂತೆ = ಪರಮೇಶ್ವರನ ಹಾಗೆ, ನಾಡೆಸಂತತಂ ಗಿರಿಜೆಯುಂ ಬಕಮೆಸೆದವು.

ದನುಜರಪರನಾಗಿಃ-- ಕುವಲಯ = ಭೂವಲಯದಲ್ಲಿರುವ, ಪ = ಚಂದ್ರನ, ಆರ = ಪೀಡೆಯಿಂದ, ಜಿತಂ = ಗೆದ್ದಂಥ, ಕಂ = ಬ್ರಹ್ಮನಿಂದ, ಜಾತ = ಹುಟ್ಟಿ, ರಂಜಿತಂ = ಒಪ್ಪುವಂಥ, ಕಂಜಾತ = ಮೋಡದಹಾಗೆ, ರಂಜಿತಂ = ಕಾಯಕಾಂತಿಯಿಂದ ಶೋಭಿಸುವಂಥ, ತವೆ = ಚನ್ನಾಗಿ, ತಾರಕಾ = ತಾರಕಾಸುರವಂಶಕ್ಕೆ, ಅಲಂಕೃತಂ = ಕೀರ್ತಿಪ್ರತಾಪಭೂಷಣರಾದಂಥ, ದನುಜರಂತೆ = ರಾಕ್ಷಸರಹಾಗೆ ನಾಡೆಸಂತತಂ ಗಿರಿಜೆಯುಂಬಕಮೆಸೆದವು.

ಅನ್ವಯಃ — ರವಿ, ಕುವಲಯು, ಪರಾ, ಜಿತಂ, ಅಂತೆ, ಗಿರಿಜೆಯುಂಬಕ, ತವೆ, ಕುವಲಯುಪರಾ, ಜಿತಂ, ಸಂತತ, ಮೆಸೆದವು.

ಟಿಪ್ಪಣೆಃ— ರವಿ = ಸೂರ್ಯನು, ಕುವಲಯು = ನೈದಿಲೆಯನ್ನು, ಪರಾ = ಶ್ರೇಷ್ಠವಾಗಿ, ಜಿತಂ = ಗೆದ್ದಂಥವನಾಗಿರುವನು, ಅಂತೆ = ಹಾಗೆ,

ಗಿರಿಜೆಯಂ, ಬಕಂ ತವೆ = ಲೇಸಾಗಿ, ಕುವಲಯ = ನೈದಿಲೆಯ, ಪರಾ = ಶ್ರೇಷ್ಟವಾಗಿ, ಜಿತಂ = ಗೆಲ್ಲಲ್ಪಟ್ಟವಾಗಿ ಸಂತತವೆಸೆದವು.

ಅನ್ವಯಃ— ಪುರ, ನಾಡೆ, ಕುವಲಯ, ಪ, ರಾಜಿತಂ, ಅಂತೆ, ಗಿರಿಜೆಯಂಬಕವಂ, ಕುವಲಯ, ಪರಾ, ಜಿತಂ, ತವೆಸಂತತಂ, ಎಸೆದವು.

ಟಿಪ್ಪಣೀಃ — ಪುರ = ಪಟ್ಟಣವು, ನಾಡೆ = ಚನ್ನಾಗಿ, ಕುವಲಯ = ಭೂಮಿಯ, ಪ = ರಾಜರಿಂದ, ರಾಜಿತಂ = ಶೋಭಿಸುವಂಥಾದ್ದು, ಅಂತೆ= ಹಾಗೆ, ಗಿರಿಜೆಯ = ಪಾರ್ವತಿಯ, ಅಂಬಕಂ = ನಯನವು, ಕು = ಭೂಮಿಯ, ವಲಯ = ಮಂಡಲವನ್ನು, ಪರಾ = ಶ್ರೇಷ್ಠವಾಗಿ, ಜಿತಂ = ಗೆಲ್ಲಲ್ಪಟ್ಟದ್ದಾಗಿ, ತವೆ = ಲೇಸಾಗಿ, ಸಂತತಂ = ನಿರಂತರವು ಎಸೆದವು.

ಅನ್ವಯಃ— ವನ, ನಾಡೆ, ಕಂಜಾತ, ರಂಜಿತಂ, ಸಂತತಂ, ಗಿರಿಜೆಯಂಬಕಂ, ತವೆ, ಕಂ, ಜಾತ, ರಂಜಿತಂ, ಎಸೆದವು.

ಟಿಪ್ಪಣೀಃ— ವನ = ಉದ್ಯಾನವು, ನಾಡೆ = ಚನ್ನಾಗಿ, ಕಂಜಾತ = ವೃಕ್ಷಗಳ ಸಮೂಹದಿಂದ, ರಂಜಿತಂ = ಶೋಭಿಸಲ್ಪಟ್ಟದ್ದಾಗಿರುವದು, ಅಂತೆ = ಹಾಗೆ, ಗಿರಿಜೆಯಂಬಕಂ, ತವೆ = ಲೇಸಾಗಿ, ಕಂ = ಕರುಣರಸದ, ಜಾತ = ಸಮೂಹದಿಂದ, ರಂಜಿತಂ ಶೋಭಿಸಲ್ಪಟ್ಟವಾಗಿ, ಸಂತತವೆಸೆದವು.

ಅನ್ವಯಃ— ದಿವ, ನಾಡೆ, ಕಂಜಾತ, ರಂಜಿತಂ, ಅಂತೆ, ಗಿರಿಜೆಯಂಬಕಂ, ತವೆ, ಕಂ, ಜಾತ, ರಂಜಿತಂ, ಸಂತತವೆಸೆದವು.

ಟಿಪ್ಪಣೀಃ— ದಿವ = ಆಕಾಶವು, ನಾಡೆ = ಚನ್ನಾಗಿ, ಕಂಜಾತ = ಚಂದ್ರನಿಂದ, ರಂಜಿತಂ = ಒಪ್ಪಲ್ಪಟ್ಟದ್ದಾಗಿರುವದು, ಅಂತೆ = ಹಾಗೆ, ಗಿರಿಜೆಯಂಬಕಂ, ತವೆ = ಲೇಸಾಗಿ, ಕಂ = ಕಮಲಗಳ, ಜಾತ = ಸಮೂಹದಿಂದ, ರಂಜಿತಂ = ಶೋಭಿಸಲ್ಪಟ್ಟವಾಗಿ, ಸಂತತವೆಸೆದವು.

ಅನ್ವಯಃ— ಶಿವಂ, ನಾಡೆ, ತಾರಕಾ, ಅಲಂಕೃತಂ, ಅಂತೆ, ಗಿರಿಜೆಯಂಬಕಂ, ತವೆ, ತಾರಕ, ಅಲಂಕೃತಂ, ಸಂತತವೆಸೆದವು.

ಟಿಪ್ಪಣೀ:— ಶಿವಂ = ಪರಮೇಶ್ವರನು, ನಾಡೆ = ಚನ್ನಾಗಿ, ತಾರಕಾ= ನಕ್ಷತ್ರಗಳಿಂದ, ಅಲಂಕೃತಂ = ಅಲಂಕರಿಸಲ್ಪಟ್ಟವನಾಗಿರುವನು, ಅಂತೆ =

ಹಾಗೆ, ಗಿರಿಜೆಯುಂಬಕಂ, ತವೆ = ಲೇಸಾಗಿ, ತಾರಕ = ಬೊಂಬೆಗಳಿಂದ, ಅಲಂಕೃತಂ = ಶ್ರಿಂಗರಿಸಲ್ಪಟ್ಟವಾಗಿ ಸಂತತವೆಸೆದವು.

ಅನ್ವಯಃ— ದನುಜರು, ನಾಡೆ, ತಾರಕಾ, ಅಲಂಕೃತಂ, ಅಂತೆ, ಗಿರಿಜೆಯುಂಬಕಂ, ತವೆ, ತಾರಕ, ಅಲಂಕೃತಂ, ಸಂತತವೆಸೆದವು.

ಟಿಪ್ಪಣಿಃ— ದನುಜರು = ರಾಕ್ಷಸರು, ನಾಡೆ = ಚನ್ನಾಗಿ, ತಾರಕ = ಶಾಮವರ್ಣದಿಂದ, ಅಲಂಕೃತಂ = ಅಲಂಕರಿಸಿಕೊಳ್ಳಲ್ಪಟ್ಟಿರುವರು, ಅಂತೆ ಹಾಗೆ = ಗಿರಿಜೆಯುಂಬಕಂ, ತವೆ = ಲೇಸಾಗಿ, ತಾರಕ = ಕರೇಗುಡ್ಡಿಗಳಿಂದ ಅಲಂಕೃತಂ = ಶ್ರಿಂಗರಿಸಲ್ಪಟ್ಟವಾಗಿ, ಸಂತತವೆಸೆದವು.

## ಉತ್ತರಾರ್ಧ.

ಅನ್ವಯಃ— ಅಂಜನ, ಉದ್ಭಾಸಿತಂ, ಬಕ, ಸರಸಿ, ವಿವಿಧ, ಅನುಮಿಷ, ಭಂಗ, ವರ್ಧನಂ, ವಿವರಿಸಲ್ಕೆ, ಶೃತಿಯುತಂ, ಗಿರಿಜೆಯುಂಬಕವೆಸೆದವು.

ಟಿಪ್ಪಣಿಃ— ಅಂಜನ=ಉದಕದಿಂದ, ಉದ್ಭಾಸಿತಂ = ಶೋಭಿಸಲ್ಪಟ್ಟ ಬಕಸರಸಿ, ವಿವಿಧ = ಹಲವುಪ್ರಕಾರವಾದ, ಅನುಮಿಷ = ಮೀನಗಳಿಗೆ, ಭಂಗ = ತೆರೆಯನ್ನು, ವರ್ಧನಂ = ಹೆಚ್ಚಿಸಲ್ಪಟ್ಟಂಥಾ, ವಿವರಿಸಲ್ಕೆ = ವಿಚಾರಿಸಲಿಕ್ಕೆ, ಶೃತಿಯುತಂ = ಶೃತಿಯೆಂಬ ಧಡದೊಡನೆ ಕೂಡಲ್ಪಟ್ಟಂಥಾ, ಗಿರಿಜೆಯುಂಬಕವೆಸೆದವು.

ಅನ್ವಯಃ— ಅಂಜನಾ, ಉದ್ಭಾಸಿತಂ, ನವ, ಗಾನ, ವಿವಿಧ, ಅನುಮಿಷ, ಭಂಗ, ವರ್ಧನಂ, ವಿವರಿಸಲ್ಕೆ ಶೃತಿಯುತಂ, ಗಿರಿಜಯುಂಬಕವೆಸೆದವು.

ಟಿಪ್ಪಣಿಃ— ಅಂಜನಾ = ಸಪ್ತಸ್ವರಗಳಿಂದ, ಉದ್ಭಾಸಿತಂ=ಹೆಚ್ಚಾಗಿ ಪ್ರಕಾಶಿಸಲ್ಪಟ್ಟ, ನವ = ನೂತನವಾದ, ಗಾನ = ಗೀತೆಗಳು, ವಿವಿಧ = ಹಲವು ತರನಾದ, ಅನುಮಿಷ = ಉನ್ಮೇಶಂಗಳ, ಭಂಗ = ಎಡೆಯಾಟವನ್ನು, ವರ್ಧನಂ = ಹೆಚ್ಚಿಸಲ್ಪಟ್ಟಂಥಾ, ವಿವರಿಸಲ್ = ತಿಳಿಯಲಾಗಿ, ಶೃತಿ = ಬಿರಡಿಯೊಡನೆ, ಯುತಂ = ಕೂಡಲ್ಪಟ್ಟಂಥಾ, ಗಿರಿಜೆಯುಂಬಕವೆಸೆದವು.

ಅನ್ವಯಃ— ಅಂಜನ, ಉದ್ಭಾಸಿತಂ, ವಿಪ್ರ, ವಿವಿಧ, ಅನುಮಿಷ, ಅಭಂಗ, ವರ್ಧನಂ, ವಿವರಿಸಲ್ಕೆ, ಶ್ರುತಿ, ಯುತಂ, ಗಿರಿಜೆಯುಂಬಕವೆಸೆದವು.

ಟಿಪ್ಪಣೆಃ— ಅಂಜನ ಷಟ್ಕ್ರಮದೊಡನೆ, ಉದ್ಭಾಸಿತಂ = ಹೆಚ್ಚಾಗಿ ಶೋಭಿಸಲ್ಪಟ್ಟಂಥ, ವಿಪ್ರ = ಬ್ರಾಹ್ಮಣನು, ವಿವಿಧ = ಅನೇಕತರನಾದ, ಅನುವಿಃಷ = ದೇವತೆಗಳಿಗೆ, ಅಭಂಗ = ಪೂಜೆಯನ್ನು, ವರ್ಧನಂ = ಹೆಚ್ಚಿಸಲ್ಪಟ್ಟಂಥಾ, ವಿವರಿಸಲ್ಕೆ = ಪರಾಂಬರಿಸಲಿಕ್ಕೆ, ಶೃತಿ = ವೇದದೊಡನೆ, ಯುತಂ = ಕೂಡಲ್ಪಟ್ಟಂಥಾ ಗಿರಿಜೆಯಂಬಕವೆಸೆದವು.

ಅನ್ವಯಃ— ಅಂಜನ, ಉದ್ಭಾಸಿತಂ, ವರುಣ, ವಿವಿಧ, ಅನುವಿಷ, ಭಂಗ, ವರ್ಧನಂ, ವಿವರಿಸಲ್ಕೆ, ಶೃತಿ, ಯುತಂ, ಗಿರಿಜೆಯಂಬಕ ವೆಸೆದವು.

ಟಿಪ್ಪಣೆಃ— ಅಂಜನ = ಗರ್ವದಿಂದ, ಉದ್ಭಾಸಿತಂ = ಹೆಚ್ಚಾಗಿ ಶೋಭಿಸಲ್ಪಟ್ಟ, ವರುಣ = ಶರಧಿಪನು, ವಿವಿಧ = ಹಲವುತರನಾದ, ಅನುವಿಷ = ಮೀನಗಳ, ಭಂಗ = ..!......... ವರ್ಧನಂ = ಹೆಚ್ಚಿಸಲ್ಪಟ್ಟಂಥ, ವಿವರಿಸಲ್ಕೆ = ವಿಚಾರ ಮಾಡಲಾಗಿ, ಶೃತಿ = ಶೃತಿಗಾಲದೊಡನೆ, ಯುತಂ= ಕೂಡಲ್ಪಟ್ಟಂಥ ಗಿರಿಜೆಯಂಬಕವೆಸೆದವು.

ಅನ್ವಯಃ— ಅಂಜನ, ಉದ್ಭಾಸಿತಂ, ದೆಸೆ, ವಿವಿಧ, ಅನುವಿಸ, ಭಂಗ, ವರ್ಧನಂ, ವಿವರಿಸಲ್ಕೆ, ಶೃತಿಯುತಂ, ಅಂತೆ, ಗಿರಿಜೆಯಂಬಕ ವೆಸೆದವು.

ಟಿಪ್ಪಣೆಃ— ಅಂಜನ = ವ್ಯಾಪಕತ್ವದಿಂದ, ಉದ್ಭಾಸಿತಂ = ಹೆಚ್ಚಾಗಿ ಶೋಭಿಸಲ್ಪಟ್ಟ, ದೆಸೆ = ದಿಕ್ಕುಗಳು, ವಿವಿಧ = ಹಲವುಪ್ರಕಾರವಾದ, ಅನುವಿಷ = ರೆಪ್ಪೆಗಳಿಗೆ, ಭಂಗ = ಹಳಚುವ ತನುವನು, ವರ್ಧನಂ = ಹೆಚ್ಚಿಸಲ್ಪಟ್ಟಂಥ, ವಿವರಿಸಲ್ಕೆ = ವಿಚಾರವಾಡಲಾಗಿ, ಶೃತಿ = ಕಠೋರದ, ಹಂಚಿನಿಂದ, ಯುತಂ = ಕೂಡಲ್ಪಟ್ಟಂಥಾ, ಗಿರಿಜೆಯಂಬಕವೆಸೆದವು.

ಅನ್ವಯಃ— ಅಂಜನ, ಉದ್ಭಾಸಿತಂ, ವಿವಿಧ, ಅನುವಿಷ, ಭಂಗ, ವರ್ಧನಂ, ವಿವರಿಸಲ್ಕೆ, ಶೃತಿ, ಯುತಂ, ಅಂತೆ, ಗಿರಿಜೆಯಂಬಕವೆಸೆದವು.

ಟಿಪ್ಪಣೆಃ— ಅಂಜನ = ಕಾಡಿಗೆಯಿಂದ, ಉದ್ಭಾಸಿತಂ = ಹೆಚ್ಚಿಗೆ ಶೋಭಿಸುವ, ವಿವಿಧ = ಹಲವುಪ್ರಕಾರವಾದ, ಅನುವಿಷ = ರೆಪ್ಪೆಗಳ ಭಂಗ = ಹಳಚುವತನುವನ್ನು, ವರ್ಧನಂ = ಹೆಚ್ಚಿಸಲ್ಪಟ್ಟಂಥ, ವಿವರಿಸಲ್ಕೆ= ವಿಚಾರಿಸಲಿಕ್ಕೆ, ಶೃತಿ = ಆಕರ್ಣಪರ್ಯಂತರವಾಗಿ, ಯುತಂ = ಸೆಗೆಯೊಡನೆಕೂಡಲ್ಪಟ್ಟಂಥ, ಅಂತೆ ಗಿರಿಜೆಯಂಬಕವೆಸೆದವು.

ಅನ್ವಯಃ— ಬಕ, ವಿವಿಧ, ಅನುಮಿಷ, ಭಂಗ, ನಾಡೆ, ವರ್ಧನಂ, ಅಂತೆ, ಗಿರಿಜೆಯ, ಅಂಬಕಂ, ಅನುಮಿಷ, ಭಂಗ, ವರ್ಧನಂ, ತವೆ, ಸಂತತಂ, ಎಸೆದವು.

ಟಿಪ್ಪಣಿಃ— ಬಕ = ಏಕಕೊಕ್ಕರನು(ಬಕಪಕ್ಷಿಯು), ವಿವಿಧ = ನಾನಾ ಪ್ರಕಾರವಾದ, ಅನುಮಿಷ = ಮೀನಗಳಿಗೆ, ಭಂಗ = ಕೊರತೆಯನ್ನು, ನಾಡೆ = ಚನ್ನಾಗಿ, ವರ್ಧನಂ = ಹೆಚ್ಚಿಸಲ್ಪಟ್ಟಂಥಾದ್ದು, ಅಂತೆ = ಹಾಗೆ, ಗಿರಿಜೆಯಂಬಕಂ = ಪಾರ್ವತಾದೇವಿಯಃಕಣ್ಣುಗಳು, ಅನುಮಿಷ = ಮೀನ ಗಳಿಗೆ, ಭಂಗ = ಕೊರತೆಯನ್ನು, ವರ್ಧನಂ = ಹೆಚ್ಚಿಸಲ್ಪಟ್ಟವಾಗಿ, ತವೆ = ಲೇಸಾಗಿ, ಸಂತತಂ = ಯಾವಾಗಲೂ, ಎಸೆದವು = ಶೋಭಿಸಿದವು.

ಅನ್ವಯಃ— ಸರಸಿ, ನಾಡೆ, ವಿವಿದಾ, ಅನುಮಿಷ, ಭಂಗ, ವರ್ಧನಂ, ಅಂತೆ, ಗಿರಿಜೆ, ಅಂಬಕಂ, ತವೆ, ಅನುಮಿಷ, ಭಂಗ, ವರ್ಧನಂ, ತವೆ, ಸಂತತಂ, ಎಸೆದವು.

ಟಿಪ್ಪಣಿಃ— ಸರಸಿ = ಕೊಳನು, ನಾಡೆ = ಚನ್ನಾಗಿ, ವಿವಿಧ = ನಾನಾ ಪ್ರಕಾರವಾದ, !ಅನುಮಿಷ = ಮೀನಗಳಿಗೆ, ಭಂಗ = ಎಡೆಯಾಟವನ್ನು ವರ್ಧನಂ = ಹೆಚ್ಚಿಸಲ್ಪಟ್ಟದ್ದಾಗಿರುವದು, ಅಂತೆ = ಹಾಗೆ, ಗಿರಿಜೆಯಂಬ ಕಂ, ತವೆ = ಲೇಸಾಗಿ, ಅನುಮಿಷ = ರೆಪ್ಪೆಗಳ, ಭಂಗ = ಹೊಳೆಯುವ (ತನುವನ್ನು), ವರ್ಧನಂ = ಹೆಚ್ಚಿಸಲ್ಪಟ್ಟವಾಗಿ, ತವೆ=ಲೇಸಾಗಿ, ಸಂತತಂ= ನಿರಂತರವು, ಎಸೆದವು = ಶೋಭಿಸಿದವು.

ಅನ್ವಯಃ— ನವಗಾನ, ವಿವರಿಸಲ್ಕೆ, ಶೃತಿಯುತಂ, ಅಂತೆ, ಗಿರಿಜೆ, ಅಂಬಕಂ, ಶೃತಿ, ಯುತಂ, ತವೆ, ಸಂತತಂ, ಎಸೆದವು.

ಟಿಪ್ಪಣಿಃ— ನವ = ನೂತನವಾದ, ಗಾನ = ಗೀತೆಗಳನ್ನು, (ಹಾಡು ಗಳನ್ನು), ವಿವರಿಸಲ್ಕೆ = ವಿಚಾರ ಮಾಡಲಿಕ್ಕೆ, ಶೃತಿ = ಇಪ್ಪತ್ತೆರಡು ಶೃತಿ ಗಳೊಡನೆ, ಯುತಂ = ಕೂಡಲ್ಪಟ್ಟವಾಗಿರುವವು, ಅಂತೆ = ಹಾಗೆ, ಗಿರಿಜೆ ಯಂಬಕಂ, ಶೃತಿ = ದಡದೊಡನೆ, ಯುತಂ = ಕೂಡಿದವುಗಳಾಗಿ, ತವೆ = ಲೇಸಾಗಿ, ಸಂತತಂ = ನಿರಂತರವು, ಎಸೆದವು = ಶೋಭಿಸಿದವು.

ಅನ್ವಯಃ— ವಿಪ್ರ ವಿವರಿಸಲ್ಕೆ, ಶೃತಿ, ಯುತಂ, ಅಂತೆ, ಗಿರಿಜೆಯ, ಅಂಬಕಂ, ಶೃತಿ, ಯುತಂ, ತವೆ, ಸಂತತಂ, ಎಸೆದವು.

ಟಿಪ್ಪಣಿಃ— ವಿಪ್ರ = ದ್ವಿಜನು, ವಿವರಿಸಲ್ಕೆ = ವಿಚಾರಿಸಲಿಕ್ಕೆ, ಶೃತಿ = ವೇದದೊಡನೆ, ಯುತಂ = ಕೂಡಿದಂಥವನಿರುವನು, ಅಂತೆ = ಹಾಗೆ, ಗಿರಿಜೆಯಂಬಕಂ, ಶೃತಿ=ಆಕರ್ಣಪರ್ಯಂತರದಲ್ಲಿಯು. ಯುತಂ= (ಸೋಗೆ ಯೊಡನೆ) ಕೂಡಲ್ಪಟ್ಟವಾಗಿ, ತವೆ = ಲೇಸಾಗಿ ಸಂತತಂ = ನಿರಂತರವು, ಎಸೆದವು = ಶೋಭಿಸಿದವು.

ಅನ್ವಯಃ— ಕುಲಗಿರಿ, ಅಂಜನ, ಉದ್ಭಾಷಿತಂ, ಅಂತೆ, ಗಿರಿಜೆಯ, ಅಂಬಕಂ, ಅಂಜನ, ಉದ್ಭಾಷಿತಂ, ತವೆ, ಸಂತತಂ ಎಸೆದವು.

ಟಿಪ್ಪಣಿಃ— ಕುಲಗಿರಿ = ಸಪ್ತಕುಲ ಪರ್ವತಗಳಲ್ಲಿ, ಅಂಜನ = ಅಂಜನಾದ್ರಿಯು, ಉದ್ಭಾಸಿತಂ = ಹೆಚ್ಚಿಗೆ ಶೋಭಿಸಲ್ಪಟ್ಟಿರುವದು, ಅಂತೆ = ಹಾಗೆ, ಗಿರಿಜೆಯಂಬಕಂ, ಅಂಜನ = ಕಾಡಿಗೆಯಿಂದ, ಉದ್ಭಾಸಿತಂ = ಹೆಚ್ಚಿಗೆ ಶೋಭೆಯುಳ್ಳವುಗಳಾಗಿ, ತವೆ = ಲೇಸಾಗಿ, ಸಂತತಂ = ನಿರಂತರವು, ಎಸೆದವು = ಶೋಭಿಸಿದವು.

ಅನ್ವಯಃ— ವರುಣದೆಸೆ, ಅಂಜನ, ಉದ್ಭಾಸಿತಂ, ಅಂತೆ, ಗಿರಿಜೆಯ, ಅಂಬಕಂ, ಅಂಜನ, ಉದ್ಭಾಸಿತಂ, ತವೆ, ಸಂತತಂ, ಎಸೆದವು.

ಟಿಪ್ಪಣಿಃ— ವರುಣದೆಸೆ = ಪಶ್ಚಿಮ ದಿಕ್ಕು, ಅಂಜನ = ಅಂಜನ ಎಂಬ ಆನೆಯಿಂದ, ಉದ್ಭಾಸಿತಂ = ಹೆಚ್ಚಿಗೆ ಶೋಭೆಯುಳ್ಳದ್ದಾಗಿರುವದು. ಅಂತೆ = ಹಾಗೆ, ಗಿರಿಜೆಯಂಬಕಂ, ಅಂಜನ = ಕಪ್ಪಿನಿಂದ, ಉದ್ಭಾಸಿತಂ = ಹೆಚ್ಚಿನ ಶೋಭಾಯಮಾನವಾಗಿ, ತವೆ = ಲೇಸಾಗಿ, ಸಂತತಂ = ನಿರಂತರವಾಗಿ, ಎಸೆದವು = ಶೋಭಿಸಿದವು.



# ವೀರಶೈವಮತವೂ ಆಂಧ್ರವಾಙ್ಮಯವೂ.

ಲೇಖಕ:— "ಶಿವಸುತ"

## ಶ್ರೀನಾಥಕವಿ.

ಆಂಧ್ರವಾಙ್ಮಯದಲ್ಲಿ ವೀರಶೈವ ವಿಜಯಘೋಷವನ್ನು ಮಾಡಿದ ಬ್ರಾಹ್ಮಣ ಕವಿಗಳು ಅನೇಕರಿರುತ್ತಾರೆ. ಅದರಲ್ಲಿ ಆಂಧ್ರಕವಿಸಾರ್ವಭೌಮನೆನ್ನಿಸಿಕೊಂಡಿರುವ ಶ್ರೀನಾಥನೊಬ್ಬವನು. ವೃ॥ "ಮಹಿಮನ್ನಾಗನು ಶಾಸನುಂಡು ಸೃಜಿಯಿಂಪನ್ನಂಡುಲೀಂದ್ರುಂಡು। ನ್ಮಹನೀಯಸ್ಥಿತಿ ಮೂಲವೈನಿಲುವ ಶ್ರೀನಾಥುಂಡು ಪ್ರೋವನ್" ಎಂದು ಬರೆದ ರಾಮರಾಜಭೂಷಣಕವಿಯ ವಾಕ್ಯದಂತೆ ಆಂಧ್ರಭಾಷಾಯೋಷಾಮಣಿಯನ್ನು ರಕ್ಷಿಸಿ ತನ್ನ ಅಮೋಘ ಕಾವ್ಯಾಭರಣಗಳಿಂದ ಆಕೆಯನ್ನು ಸರ್ವಾಂಗಸುಂದರಳನ್ನಾಗಿ ಮಾಡಿದ ಕವಿಜನಾವಳಿಯಲ್ಲಿ ಶ್ರೀನಾಥನು ಉಚ್ಚಪೀಠವನ್ನು ಅಲಂಕರಿಸಲು ಅರ್ಹನೆಂದರೆ ಅತಿಶಯೋಕ್ತಿಯಾಗಲಾರದು. ಅಸಮಾನ ಪ್ರೌಢ ಕವಿತಾರಚನಯಲ್ಲಿಯೂ, ಅನರ್ಗಳ ಧಾರಾಶುದ್ಧಿಯಲ್ಲಿಯೂ, ನವರಸಾಲಂಕಾರಯುಕ್ತ ಸತ್ಪ್ರಬಂಧ ರಚನಾ ಸಾಮರ್ಥ್ಯದಲ್ಲಿಯೂ ಶ್ರೀನಾಥನು ಅದ್ವಿತೀಯನೆಂದು ಹೇಳಬಹುದು. ಈತನ ಸುಮಧುರ ಕಾವ್ಯಗಳನ್ನೋದುತ್ತಾ ಹೋಗುತ್ತಿರುವಲ್ಲಿ ಆ ಗಂಭೀರವೂ ಮೃದುಮಧುರವೂ ಆದ ಶೈಲಿಯೂ, ಆ ಶಬ್ದಸೌಷ್ಟವವೂ ಆ ಅನುಪಮೇಯವಾದ ವರ್ಣನಾಂಶವೂ, ನಿರರ್ಗಳ ಗಂಗಾ ಪ್ರವಾಹದಂತೆ ಹರಿಯುತ್ತಿರುವ ಆ ಕವಿತೆಯೂ ಯಾರನ್ನು ತಾನೇ ಪರವಶನನ್ನಾಗಿ ಮಾಡದೇ ಇರುವವು? ಹೆಚ್ಚು ಬೆಳಸಲೇಕೆ? ಆಂಧ್ರಕವಿ ಚಕ್ರವರ್ತಿಯಾದ ಶ್ರೀನಾಥನು ಸರ್ವವಿಧದಲ್ಲೂ ಕರ್ಣಾಟಕ ಕವಿ ಸಾರ್ವಭೌಮನಾದ ಶ್ರೀ ಷಡಕ್ಷರಿದೇವನನ್ನು ಹೋಲುವನೆಂಬುದು ಉಭಯಕವಿಕೃತ ಕಾವ್ಯಗಳನ್ನವಲೋಕಿಸಿದವರಿಗೆ ಹೊಳೆಯದೇ ಇರಲಾರದು. ಶ್ರೀನಾಥನು ಶೃಂಗಾರನೈಷಧವೆಂಬ ಪ್ರಸಿದ್ಧ ಪ್ರಬಂಧವನ್ನು ರಚಿಸಿದುದಲ್ಲದೆ ವೀರಶೈವ ಧರ್ಮಸಂಬಂಧವಾಗಿ "ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ" "ಹರವಿಲಾಸ" "ಸುಕುಮಾರ ಚರಿತ್ರೆ" "ಕಾಶೀಖಂಡ" "ಭೀಮಖಂಡ" ಮೊದಲಾದ ಗ್ರಂಥಗಳನ್ನು ಬರೆದು ಪ್ರಸಿದ್ಧನಾದನು. ಕನ್ನಡದಲ್ಲಿ ರಾಜ

ಶೇಖರವಿಲಾಸ ಶಬರಶಂಕರವಿಲಾಸ, ಜೈಮಿನೀ ಭಾರತ, ಆದಿಪಂಪ, ಅಭಿನವಪಂಪರ ಗ್ರಂಥಗಳು ಎಷ್ಟು ಪ್ರಸಿದ್ಧವಾಗಿವೆಯೋ ಅಂತೇ ಶ್ರೀನಾಥಕಾವ್ಯಗಳು ಸಹಾ ಆಂಧ್ರದೇಶದಲ್ಲಿ ಸರ್ವ ಜನಾದರಣೆಗೆ ಪಾತ್ರವಾಗಿರುವವು.

ಕವಿಚರಿತ್ರೆ:— ಶ್ರೀನಾಥನು ಯಜುಶ್ಯಾಖೇಯನಾದ ನಿಯೋಗಿ ಬ್ರಾಹ್ಮಣನು. ಆಪಸ್ತಂಭ ಸೂತ್ರನು. ಭಾರದ್ವಾಜ ಗೋತ್ರೋದ್ಭವನು. ಈತನ ವಂಶವು ಪಂಡಿತ ಸಾಂಪ್ರದಾಯವುಳ್ಳದ್ದು. ಪದ್ಮ ಪುರಾಣವನ್ನು ಪರಿವರ್ತಿಸಿದ ಕಮಲನಾಭ ಕವಿಯು ಈತನ ತಾತನೆಂದೂ ಭೀಮ ಖಂಡದಲ್ಲಿ ಹೇಳಿದೆ. ಮತ್ತು ಆಂಧ್ರ ಭಾಗವತವನ್ನು ರಚಿಸಿದ ನಂತರ ಶೈವ ದೀಕ್ಷೆಯನ್ನು ವಹಿಸಿ ವೀರಭದ್ರ ವಿಜಯವನ್ನು ಬರೆದು ಶ್ರೀ ಬಸವಾದಿ ಪ್ರಮಥರನ್ನು ಸ್ತುತಿ ಮಾಡಿರುವ ಬಮ್ಮೆರ ಪೋತನಾಮಾತ್ಯನು ಈ ಕವಿಯ ಸಂಬಂಧಿಕನೆಂದು ತಿಳಿದುಬರುತ್ತದೆ.

ಈ ಕವಿಯ ನಿವಾಸಸ್ಥಾನವು ಕೊಂಡವೀಡು ಗ್ರಾಮವು. ಶ್ರೀನಾಥನು ಆ ಕಾಲದಲ್ಲಿ ಅತ್ಯಂತ ವೈಭವೋನ್ನತ ಶಿಖರವನ್ನಲಂಕರಿಸಿದ್ದ ವಿಜಯನಗರ, ಓರಂಗಲ್ಲು, ರಾಜಮಹೇಂದ್ರಿವರ, ವೆಂಕಟಗಿರಿ ಮೊದಲಾದ ಸಂಸ್ಥಾನಗಳಲ್ಲಿ ಮನ್ನಣೆಯನ್ನು ಹೊಂದುತ್ತಿದ್ದನು.

ಈತನು ಕರ್ನಾಟಕ ರಾಜ್ಯದಲ್ಲಿ ಪ್ರವಾಸ ಮಾಡಿದ ಹಾಗೂ ಕರ್ನಾಟಕ ಭಾಷೆಯ ಪರಿಚಯವು ಸ್ವಲ್ಪಮಟ್ಟಿಗೆ ಇದ್ದಿತೆಂದೂ, ಈತನ ಗ್ರಂಥಗಳಿಂದಲೇ ವ್ಯಕ್ತವಾಗುತ್ತದೆ. ಈತನ ಬರವಣಿಗೆಯಲ್ಲಿ ಅಲ್ಲಲ್ಲಿ ಕನ್ನಡ ಪದಗಳು ಕಾಣಬರುವವು. ಮತ್ತು ಕಾಶೀ ಖಂಡದಲ್ಲಿ "ಕಾಶಿಕಾಖಂಡ ಮನು ಮಹಾಗ್ರಂಥವೇನು ತೆನಗು ಚೇಸೆದ ಕರ್ಣಾಟದೇಶ ಕಟಕ ಪದ್ಯವನ ಹೇಳಿ ಶ್ರೀನಾಥಭಟ್ಟಸು ಕವಿ" ಎಂದು ಬರೆದುಕೊಂಡಿದ್ದಾನೆ.

ಕವಿಕಾಲ ನಿರ್ಣಯವು:— ಶ್ರೀನಾಥನು ತನ್ನ ಕಾಶೀ ಖಂಡವನ್ನು ವೀರಭದ್ರ ರೆಡ್ಡಿಯೆಂಬಾತನಿಗೆ ಅಂಕಿತ ಮಾಡಿರುವನು. ಈ ವೀರಭದ್ರ ರೆಡ್ಡಿಯ ಕಾಲವು ಕ್ರಿ. ಶ. ೧೪೩೦ ಸಂವತ್ಸರ ಪ್ರಾಂತವು. ಆದ್ದರಿಂದ ಶ್ರೀನಾಥನು. ಕ್ರಿ. ಶ. ೧೩೭೫ –೮೦ ಸಂವತ್ಸರ ಪ್ರಾಂತದಲ್ಲಿ ಜನ್ಮಿಸಿರುವಂತೆ ಕಾಣುತ್ತದೆ. ಮತ್ತು "ಹರವಿಲಾಸ"ವನ್ನು ತನ್ನ ಬಾಲ್ಯ ಸ್ನೇಹಿತನಾದ ತ್ರಿಪುರಾರಿ (ತಿಪ್ಪಯ್ಯ) ನೆಂಬಾತನಿಗೆ ಅರ್ಪಿಸಿರುತ್ತಾನೆ. ಈ

ತಿಪ್ಪಯ್ಯನು ಕ್ರಿ. ಶ. ೧೩೯೫ ಸಂ॥ ವರವಿಗೆ ರಾಜ್ಯ ಪರಿಪಾಲನ ಮಾಡಿದ ಕುಮಾರ ಗಿರಿರೆಡ್ಡಿಯ ಸಮಕಾಲಿಕನು. ೧೩೭೪ ಸಂ॥ ವರಿವಿಗೆ ರಾಜ್ಯವಾಳಿದ ಪಿರೋಜಷಾನು ೧೪೦೧ ಸಂ॥ ವರಿವಿಗೆ ರಾಜ್ಯವಾಳಿದ ಹರಿಹರ ರಾಯನು ಕುಮಾರ ಗಿರಿರೆಡ್ಡಿಯ ಕಾಲದವರೆಂದು "ಹರವಿಲಾಸ" ದಿಂದ ತಿಳಿಯಲಾಗುವುದು. ಆದ ಕಾರಣ ಶ್ರೀನಾಥನು ೧೪ ನೇ ಶತಮಾನದ ಅಂತ್ಯದಲ್ಲಿಯೂ ೧೫ ನೇ ಶತಮಾನದ ಆದಿ ಭಾಗದಲ್ಲಿಯೂ ಇದ್ದ ಹಾಗೆ ಕಂಡು ಬರುತ್ತದೆ.

ಗ್ರಂಥರಚನೆಃ— ಶ್ರೀನಾಥನು ಷಡಕ್ಷರಿ ಕವಿಯಂತೆ ಬಾಲ್ಯದಲ್ಲಿಯೇ ಸಂಸ್ಕೃತ ಸಾಹಿತ್ಯಪ್ರವೀಣನಾಗಿದ್ದು ಕವಿತ್ವವನ್ನು ಹೇಳಲಾರಂಭಿಸಿನಂತೆ ಕಾಣಬರುವುದು. ಕಾಶೀ ಖಂಡದ ಪೀಠಿಕೆಯಲ್ಲಿ ತಾನು ತನ್ನ ಬಾಲ್ಯದಲ್ಲಿ "ಮರುತ್ತರಾಟ್ಚರಿತ್ರೆಯನ್ನು, ನವಯೌವನದಲ್ಲಿ ಶಾಲಿವಾಹನ ಚರಿತ್ರೆಯನ್ನು ಪೂರ್ಣ ಯೌವನದಲ್ಲಿ ಶೃಂಗಾರನೈಷಧವನ್ನು ಪ್ರೌಢ ನಿರ್ಭರವಯಃ ಪರಿಪಾಕದಲ್ಲಿ ಭೀಮಖಂಡವನ್ನು ರಚಿಸಿದ ಹಾಗೆ ಬರೆದುಕೊಂಡಿದ್ದಾನೆ. ವಾರ್ಧಿಕ್ಯ ದಶೆಯಲ್ಲಿ ಶಿವಭಕ್ತಿ ರಸಪ್ರಧಾನವಾದ "ಕಾಶಿಖಂಡ" "ಭೀಮಖಂಡ" "ಹರವಿಲಾಸ" "ಪಂಡಿತಾರಾಧ್ಯ ಚರಿತ್ರೆ" ಗಳನ್ನು "ಸುಕುಮಾರಚಾರಿತ್ರ" ವನ್ನೂ ಬರೆದಂತೆ ಕಾಣುತ್ತದೆ.

ಶ್ರೀನಾಥಕವಿಯೂ ವೀರಶೈವಧರ್ಮವೂಃ— ಶ್ರೀನಾಥನು ಮಹಾ ಶಿವ ಭಕ್ತನೆಂದು ಆತನ ಕೃತಿಗಳಿಂದ ವ್ಯಕ್ತವಾಗುವುದು. ಈತನು ಜನ್ಮತಃ ವೀರಶೈವನಲ್ಲದಿದ್ದರೂ ಈತನ ಗ್ರಂಥಗಳಲ್ಲಿ ವೀರಶೈವ ಮತದ ವಿಷಯವೂ ಶಿವಶರಣರವಿಷಯವೂ, ಅಷ್ಟಾವರಣಗಳ ಮಹಿಮೆ ಜಂಗಮ ಲಕ್ಷಣಗಳೂ, ಲಿಂಗಾರ್ಚನಾಪದ್ಧತಿ, ಜಂಗಮಾರ್ಚನಾಪದ್ಧತಿ, ಪರಮಾತ್ಮನಲೀಲೆಗಳೂ ಮೊದಲಾದ ಆನೇಕ ವಿಷಯಗಳು ವರ್ಣಿತ ವಾಗಿದ್ದು ವೀರಶೈವ ಧರ್ಮದ ಮೇಲೆ ಈತನಗಿದ್ದ ವಿಶ್ವಾಸ ಗೌರವಗಳು ಸಹಸ್ರ ಮುಖದಿಂದ ತೋರ್ಪಡಿಸುತ್ತವೆ. ಮತ್ತು ಈತನಿಗೆ ವೀರಶೈವರನೇಕರು ಪರಿಚಯಸ್ಥರಾಗಿದ್ದಂತೆ ಕಂಡು ಬರುತ್ತದೆ. ಬಸವಾದಿ ಪ್ರಮಥಗಣಂಗಳನ್ನೂ, ವೀರಶೈವ ಮತವನ್ನು ತನ್ನ "ವೀರಭದ್ರ ವಿಜಯ" ದಲ್ಲಿ ಸ್ತುತಿಸಿದ ಪೋತನಾಮಾತ್ಯನು ಈತನ ಸಮೀಪ ಬಂಧುವು. ಶ್ರೀನಾಥನ ಅಸಾಧಾರಣೋಭಯ ಪಾಂಡಿತ್ಯಕ್ಕೂ, ಕೇವಲ ಶೈವ ಭಕ್ತಿ ಶೀಲತೆಗೂ, ಸಾರ್ಥಕ ಗೋಷ್ಠಿಯುಳ್ಳ ಅವಲಂಬನವು ತಟ

ಸ್ಥವಾಗಿ ಆತನನ್ನು ಸಫಲೀಕೃತ ಮನೋರಥನನ್ನಾಗಿಯೂ ಪುನೀತ ಹೃದಯನನ್ನಾಗಿಯೂ ಮಾಡಿತೆಂಬದರಲ್ಲಿ ಅತನ ಕೃತಿಕರ್ತರೇ ಸಾಕ್ಷಿ. ಬೆಂಡಪೂಡಿ ಅನ್ನಮಂತ್ರಿಯೆಂಬೋರ್ವ ಶೈವ ಸಂಪನ್ನನು ಮಹಾ ಪಂಡಿತ ಕವಿಯಾದ ಶ್ರೀನಾಥನಿಂದ ಅನೇಕ ಪುರಾಣಗಳನ್ನವಧರಿಸಿ ತನಗೆ ವಿಶೇಷಾದರಣೀಯವಾದ ದ್ರಾಕ್ಷಾರಾಮಕ್ಷೇತ್ರ ಮಹಾತ್ಮ್ಯವನ್ನೊಳಗೊಂಡಿರುವ ಭೀಮಖಂಡವನ್ನು ಬರೆಯಿಸಿದನು. ಮತ್ತು ಕವಿಯು ತನ್ನ ಬೋಧನಾ ಪಾಟವದಿಂದ ಶೈವ ಭಕ್ತಿಯನ್ನು ಹೆಚ್ಚಿಸಲು ಕಾಶೀ ಖಂಡವನ್ನು ಆಂಧ್ರೀಕರಿಸಿದನು. ಹೀಗೆ ನಾನಾ ಪುರಾಣಗಳನ್ನು ಪಠಿಸುವದರಿಂದಲೂ, ಬೋಧಿಸುವದರಿಂದಲೂ, ವಿಶೇಷ ಜ್ಞಾನವನ್ನು ಸಂಪಾದಿಸಿಕೊಂಡು, ವಾರ್ಧಕದಲ್ಲಿ ನೈಜವಾಗಿ ಅಂಕುರಿಸಿದ ಭಕ್ತಿವಿಶೇಷದಿಂದ ಪ್ರೇರಿತನಾಗಿ ವೀರಶೈವಾಚಾರ ಶಿಷ್ಟಜನ ಪರಂಪರೆಯಾಗಿ ವಾಡಿಕೆಯಲ್ಲಿದ್ದ ಸಂಗತಿಗಳನ್ನು ತಿಳಿದವನಾಗಿ "ಹರವಿಲಾಸ" ವನ್ನು ರಚಿಸಿದನು.

ಶ್ರೀನಾಥನೂ ಸೋಮನಾಥನೂ:— ವೀರಶೈವ ಕವಿ ಶೇಖರನೂ ಮಹಾ ವಿಭೂತಿಯೂ ಆದ ಪಾಲ್ಕುರಿಕೆ ಸೋಮನಾಥನಲ್ಲಿ ವಿಶೇಷ ಪೂಜ್ಯ ಭಾವವನ್ನಿಟ್ಟದ್ದನು. ಸೋಮನಾಥನನ್ನು "ಗಾಂಭೀರ್ಯ ಬಂಧಾನು ಬಂಧ ವಿಸ್ಫುರಿತ ಮಹೋನ್ನತಿ ಸ್ತೋಮು ಸೋಮು" ಎಂದು ವಿಶೇಷಿಸಿ ಸ್ತುತಿ ಮಾಡಿರುತ್ತಾನೆ. ಬ್ರಾಹ್ಮಣನಾದ ಶ್ರೀನಾಥನಂಥ ಪ್ರೌಢ ಕವಿಲಲಾಮನು ಈ ರೀತಿ ವಿಶೇಷಿಸಿ ಹೊಗಳಿರುವಾಗ ಶ್ರೀನಾಥನ ಕವಿತಾ ಸಂಪದವು ಇಷ್ಟೇ ಎಂದು ವರ್ಣಿಸಲು ಯಾರಿಂದ ತಾನೇ ಸಾಧ್ಯವು? ಬರೀ ಹೊಗಳುವದಲ್ಲದೇ ಸೋಮನಾಥನು ಬರೆದ ದ್ವಿಪದಿ ಪಂಡಿತಾರಾಧ್ಯ ಚರಿತ್ರೆಯನ್ನು ಚಂಪೂ ಕಾವ್ಯವನ್ನಾಗಿ ಬರೆದಿರುವನು.

ಶ್ರೀನಾಥನು ಪಂಡಿತಾರಾಧ್ಯರು:— ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಚರಿತ್ರೆಯನ್ನು ಒಳ್ಳೇ ಪ್ರೌಢವಾದ ಶೈಲಿಯಲ್ಲಿ ಬರೆದು ಪಂಡಿತಾರಾಧ್ಯರ ಜಗದ್ಗುರುತ್ವವನ್ನು ಆಚಾರ್ಯತ್ವವನ್ನು ಪ್ರತಿಪಾದಿಸಿರುತ್ತಾನೆ. ಮಲ್ಲಿಕಾರ್ಜುನ ಪಂಡಿತಾರಾಧ್ಯರು ಪಂಚಾಚಾರ್ಯರ ಲ್ಲೊಬ್ಬರಲ್ಲವೆಂದು ಇತ್ತೀಚಿಗೆ ಕೆಲವರು ಗೊಂದಲವನ್ನೆಬ್ಬಿಸಿರುವರು. ಅಂಥವರು ಶ್ರೀನಾಥನ ಕೃತಿಗಳನ್ನವಲೋಕಿಸಲಿ. ಪಾರಂಪರ್ಯವಾಗಿ ಬಂದ ತತ್ವಗಳನ್ನೂ ರೂಢಿಗಳನ್ನೂ ತಲೆ ಕೆಳಗೆ ಮಾಡಲೂ ಹೇಸದಿರುವ ಇವರು ಈ ರೀತಿ ಪ್ರತಿಪಾದಿಸುವುದೇನು ಆಶ್ಚರ್ಯವಲ್ಲ. ಆದರೆ ಸತ್ಯ ತತ್ತ್ವಕ್ಕೆಂದಿಗೂ

ಸಾವಿಲ್ಲ. ಶ್ರೀ ಪಂಡಿತಾರಾಧ್ಯರ ಗುರುಪರಂಪರೆಗೆ ಸೇರಿದ ಶ್ರೀ ಶಾಂತ ಭಿಕ್ಷಾವೃತ್ತಿ ಯತೀಂದ್ರರೆಂಬುವ ಪೂಜ್ಯಪಾದರ ಅವಗಾಹನೆಗಾಗಿ ಶ್ರೀನಾಥನು ಸುಕುಮಾರ ಚಾರಿತ್ರೆವನ್ನು ಬರೆದು ಶ್ರೀ ಪಂಡಿತಾರಾಧ್ಯರ ಪೀಠದ ಮೇಲೆ ತನಗಿರುವ ಅಭಿಮಾನವನ್ನು ತೋರ್ಪಡಿಸಿರುವನು.

ಆಂಧ್ರ ವಾಙ್ಮಯದಲ್ಲಿ ಶ್ರೀನಾಥನಿಂದ ಇತ್ತೀಚಿಗೆ ಪ್ರಸಿದ್ಧರಾಗಿ ಹೋದ ಕವಿಗಳ ಪೈಕಿ ಶ್ರೀನಾಥನ ಹೆಸರನ್ನು ಎತ್ತದೇ ಇರುವ ಕವಿಯು ಇರಲಾರನು. ಕರ್ಣಾಟಕದಲ್ಲಿ ೧೭ ನೇ ಶತಮಾನದ ಆದಿ ಭಾಗದಲ್ಲಿ ಇದ್ದ ಮತ್ತು ಸೌಂದರ ವಿಳಾಸವೆಂಬ ಷಟ್ಪದಿ ಕಾವ್ಯವನ್ನು ಬರೆದ ಅಣ್ಣಾಜಿ ಎಂಬೋರ್ವ ವೀರಶೈವ ಕವಿಯು ಶ್ರೀನಾಥನನ್ನು ಕ್ಷೋಣಿಯೊಳಂ ಕವಿರಾಜ ಮುಕುಟಮಣಿ ಶ್ರೀನಾಥನೆಂಬುದಾಗಿ ಸ್ತುತಿಸಿದ್ದಾನೆ. ಕನ್ನಡ ಕವಿಚರಿತೆಕಾರರು ಅಣ್ಣಾಜಿಯು ಸ್ತುತಿಸಿದ ಶ್ರೀನಾಥ ಕವಿಯ ವಿಷಯುನಾಗಿ ಹೀಗೆ ಬರೆದಿರುತ್ತಾರೆ. "ಇವನು ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು. ಇವನ ಕಾಲವು ಸುಮಾರು ೧೫೦೦ ಆಗಿರಬಹುದೆಂದು ಊಹಿಸುತ್ತೇವೆ" ಎಂದು ಬರೆದಿರುತ್ತಾರೆ. ಶ್ರೀನಾಥನ ಕನ್ನಡ ಗ್ರಂಥಗಳಾವೂ ಸಿಕ್ಕಿಲ್ಲವಾದ ಕಾರಣ ಈ ತಪ್ಪು ಊಹೆಗೆ ಕಾರಣವಾಯಿತು. ಮತ್ತು ಆತನ ತೆನುಗು ಗ್ರಂಥಗಳ ಮೇಲಿಂದ ಶ್ರೀನಾಥನು ಕನ್ನಡದಲ್ಲಿ ಯಾವ ಗ್ರಂಥವನ್ನೂ ಬರೆದಂತೆ ಕಾಣುವುದಿಲ್ಲ. ಇನ್ನು ಶ್ರೀಶೈಲ ಪೀಠದ ಚರಿತ್ರೆಗೆ ಸಂಬಂಧಪಟ್ಟ ಸುಕುಮಾರ ಚರಿತ್ರೆಯ ಪರಿಚಯವನ್ನು ವಾಚಕರಿಗೆ ಮಾಡಿಕೊಡಲಪೇಕ್ಷಿಸುತ್ತೇನೆ. ಚಾರಿತ್ರಿಕ ದೃಷ್ಟಿಯಿಂದ ಈ ಗ್ರಂಥವು ಬಹು ಮಹತ್ವವುಳ್ಳದ್ದಾಗಿರುತ್ತದೆ.

## ಶ್ರೀನಾಥಕೃತ ಸುಕುಮಾರ ಚರಿತ್ರೆ ಅಥವಾ ಶಿವರಾತ್ರಿಯ ಮಾಹಾತ್ಮ್ಯವು.

ಪುರಾತನ ಗ್ರಂಥಪರಿಶೋಧನೆಯಲ್ಲಿ ನಮ್ಮ ಆಂಧ್ರ ಬಂಧುಗಳು ಬಹಳ ಮುಂದುವರಿದಿರುತ್ತಾರೆಂಬುದು ಅಭಿನಂದನೀಯವಾದ ಸಂಗತಿಯಾಗಿದೆ. ಅದರಲ್ಲಂತೂ ಆಂಧ್ರಪರಿಷತ್ಸಭೆಯವರ ಪ್ರಯತ್ನದ ವಿಷಯವಾಗಿ ಹೇಳತೀರದಾಗಿದೆ. ಅವರು ಈಗೀಗ ಅನೇಕ ಪ್ರಾಚೀನ ಗ್ರಂಥಗಳನ್ನು ಚನ್ನಾಗಿ ಪರಿಶೋಧಿಸಿ ಮುದ್ರಿಸುತ್ತಿದ್ದಾರೆ. ಅವುಗಳಲ್ಲಿ ಈ ಗ್ರಂಥವೊಂದಾಗಿದೆ.

ಈ ಗ್ರಂಥದ ಪ್ರತಿಯು ಅತಿ ಶಿಥಿಲವಾದ ತಾಳೆಯ ಗರಿಗಳಲ್ಲಿದೆ. ಮಧ್ಯದಲ್ಲಿ ಗರಿಗಳು ತುಂಡುತುಂಡಾಗಿ ಹೋಗಿವೆ. ಬರವಣಿಗೆಯಂತೂ ಬಹು ಪುರಾತನದ್ದಾಗಿದೆ. ದ್ವಿತೀಯಾಶ್ವಾಸದ ಕಡೆಯ ಭಾಗದಲ್ಲಿ ಆನಂದನಾಮಸಂ॥ ಶ್ರಾವಣ ಶು॥ ೧೩ ಮಂಗಳವಾರದಲ್ಲಿ ವೆಂಕನ್ನ ಕುಲಕರಣಿ ಮ॥ ಗುಡಿಮಿಟ್ಲ ಈತನು ಬರೆದಂತೆ ನಮೂದಿಯುಂಟ. ಅಂದರೆ ಬರವಣಿಗೆಯು ಇಲ್ಲಿಗೆ ಸುಮಾರು ೨೫೦ ವರ್ಷಗಳ ಹಿಂದಿನ ಕಾಲದ್ದಾಗಿದೆ. ಗ್ರಂಥವು ೪ ಆಶ್ವಾಸಗಳುಳ್ಳದ್ದಾಗಿ ಕಥೆಯು ಸಂಪೂರ್ತಿಯಾದಂತೆ ಕಾಣುತ್ತದೆ. ಆದರೆ ೫ನೇ ಆಶ್ವಾಸಾರಂಭದ ಸೂಚನೆಗಳು ಅಲ್ಲಲ್ಲಿ ಕಾಣಬರುವುದರಿಂದ ಗ್ರಂಥವು ಅಸಂಪೂರ್ತಿಯಾಗಿರುವುದೇನೋ ಎಂಬ ಶಂಕೆಯು ವಾಚಕರನ್ನು ಬಾಧಿಸುತ್ತದೆ.

## ಗ್ರಂಥಕಾಲ ನಿರ್ಣಯವು.

ಶ್ರೀನಾಥನ ಕಾಲನಿರ್ಣಯವು ಮೇಲೆ ಮಾಡಲ್ಪಟ್ಟಿದೆ. ಆದರ ಮೇಲಿಂದ ಈ ಗ್ರಂಥವು ೧೩ ನೇ ಶತಮಾನದಲ್ಲಿ ಹುಟ್ಟಿರುವುದೆಂದು ನಿರ್ಧರಿಸಬೇಕು. ಶ್ರೀನಾಥನು "ಕವಿಸಾರ್ವಭೌಮ" ಬಿರುದು ಹೊಂದಿದ ಮೇಲೂ ಹರವಿಳಾಸ, ಶೃಂಗಾರ ನೈಷಧಾದಿಗಳ ರಚಿಸಿದ ಮೇಲೂ, ಭೀಮಖಂಡವನ್ನು ರಚಿಸುವುದಕ್ಕೆ ಮುಂದೂ ಈ ಗ್ರಂಥವನ್ನು ರಚಿಸಿರಬೇಕೆಂದು ಶ್ರೀ ವೀರೇಶ ಲಿಂಗಂಪಂತುಲು ಇವರು ಸಮರ್ಪಕಾಧಾರಗಳ ಮೇಲೆ ಊಹಿಸಿರುತ್ತಾರೆ. ಇದು ಶ್ರೀನಾಥನ ಬಾಲ್ಯ ಕವಿತೆಯೆಂದು ಬೇರೆ ಕೆಲ ಪಂಡಿತರ ಅಭಿಪ್ರಾಯವು. ಇದರ ನಿರ್ಣಯವು ಆಂಧ್ರವಾಙ್ಮಯಕ್ಕೆ ಸಂಬಂಧಿಸಿರುವುದಾದ ಕಾರಣ ಪ್ರಸ್ತುತ ವಿಷಯದಲ್ಲಿ ಅಸಂಧರ್ಭವೆನಿಸುವುದು. ಆದರೆ ಶೈವಭಕ್ತಿರಸ ಪ್ರಧಾನಗಳಾದ ಹರವಿಳಾಸ ಪಂಡಿತಾರಾಧ್ಯ ಚರಿತ್ರೆ ಕಾಶೀಖಂಡ ಮುಂತಾದವುಗಳನ್ನು ಬರೆದ ಕಾಲದಲ್ಲಿಯೇ ಈ ಗ್ರಂಥವು ರಚಿಸಲ್ಪಟ್ಟಿರಬೇಕು. ಅಂದರೆ "ಪ್ರೌಢನಿರ್ಭರ ವಯಃ ಪರಿಪಾಕದಲ್ಲೇ" ಈ ಗ್ರಂಥವನ್ನು ಬರೆದಿರಲಿಕ್ಕೆಬೇಕು. ಈ ಗ್ರಂಥ ರಚನಾಕಾಲದಲ್ಲಿ ಆಂಧ್ರಮಂಡಳದಲ್ಲಿ ವೀರಶೈವ ತತ್ತ್ವಪ್ರಸಾರವು ವಿಶೇಷವಾಗಿ ನಡೆದಿದ್ದಿತೆಂದೂ, ಅದರ ವರ್ಚಸ್ಸು ಬ್ರಾಹ್ಮಣಾದಿ ಜಾತಿಗಳ ಮೇಲೆ ಸಹಾ ಇದ್ದಿತೆಂತಲೂ, ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ

ಶ್ರೀ ಬಸವಾದಿ ಪ್ರಮಥರ ತತ್ತ್ವಗಳು ಸರ್ವ ಜನಮಾನ್ಯವಾಗಿದ್ದವೆಂದೂ ಮತ್ತು ಶ್ರೀಶೈಲಪರ್ವತದ ಪೀಠಾಧಿಕಾರಿಗಳು ಒಳ್ಳೇ ವೈಭವೋನ್ನತ ದೆಶೆಯಲ್ಲಿದ್ದರೆಂದೂ ನಾವು ತಿಳಿದುಕೊಳ್ಳಬೇಕು.

## ಗ್ರಂಥಪೀಠಿಕೆಯು.

ಗ್ರಂಥಪೀಠಿಕೆಯಲ್ಲಿ ಕವಿಯು "ಯೋಗೀಂದ್ರಾಖ್ಯ" ನಾದ ಮುಮ್ಮಡಿಶಾಂತನಿಗೆ ಮಂಗಳವನ್ನೀಯುವುದಾಗಿ ಶಿವ ಪಾರ್ವತಿ ಮುಂತಾದವರನ್ನು ಸ್ತೋತ್ರಮಾಡಿರುತ್ತಾನೆ. ಆ ಮೇಲೆ ಶಿವಕವಿಗಳಾದ ಬಾಣ, ಸೋಮನಾಥ, ಶಿವಭದ್ರ, ಮಯೂರ, ಭವಭೂತಿ, ಕಾಳಿದಾಸ, ದಂಡಿ, ಮಲ್ಹಣ ಮುಂತಾದವರನ್ನು ಆಂಧ್ರಕವಿಗಳಾದ ನನ್ನಯ, ತಿಕ್ಕನ್ನ, ಶಂಭುವಾನ, ಪಾಲ್ಕುರಿಕೆ ಸೋಮಾರಾಧ್ಯ ಮುಂತಾದವರನ್ನು ಸ್ತುತಿ ಮಾಡಿರುವನು.

ಈ ರೀತಿ ಕವಿರೂಢಿಯಂತೆ ಇಷ್ಟದೇವತಾ ಪ್ರಾರ್ಥನೆ, ಗುರು ಪ್ರಶಂಸೆಯೂ, ಕವೀಶ್ವರ ಪ್ರಸ್ತುತಿಯೂ, ಕುಕವಿನಿರಾಕರಣವೂ, ಮುಗಿದ ಮೇಲೆ ಕಾವ್ಯ ಪದ್ಧತಿಯಂತೆ ಗ್ರಂಥರಚನಾ ಸಂದರ್ಭವನ್ನು ಈ ರೀತಿ ಹೇಳಿರುವನು. ಶ್ರೀಪರ್ವತ ಶ್ರೀಸ್ವಯಂಭೂ ಶ್ರೀಲಿಂಗ ಚಕ್ರವರ್ತಿ ಶ್ರೀಮನ್ಮಲ್ಲಿಕಾರ್ಜುನ ಶ್ರೀಮಹಾದೇವ ಮುಖಮಂಟಪದಲ್ಲಿ ಶ್ರೀಕಾಂತ ಭಿಕ್ಷಾವೃತ್ತಿ ಯತೀಶ್ವರರು ನಿಖಿಲಭಕ್ತ ಪ್ರಕರದೊಡನೆ ಸುಖಾಸೀನರಾಗಿದ್ದು ಶಿವಕಥಾಸತ್ಕಾಲಕ್ಷೇಪದಲ್ಲಿ ಮಗ್ನರಾಗಿದ್ದರು. ಆ ಕಾಲದಲ್ಲಿ "ಪೃಥ್ವೀ ಮಹಾ ಭಕ್ತ ಪ್ರಕರಗಳೂ, ವಿಜಯಾನಧ್ಯಕ್ಷರಾದ ಶುದ್ಧ ಕ್ಷತ್ರಿಯರೂ, ಧನಪತಿಸಮಾನ ಸಂಪದ್ಭಾಸಿತರಾದ ವೈಶ್ಯರೂ, ನಿರ್ವಕ್ರಪರಾಕ್ರಮರಾದ ವೀರಭಟರೂ ಮುಂತಾದವರು ಸಭೆಯನ್ನಲಂಕರಿಸಿದ್ದರು. ಇದಲ್ಲದೆ ಭಿಕ್ಷಾವೃತ್ತಿ ಮಹಾ ಸ್ವಾಮಿಗಳ ಪ್ರಿಯ ಶಿಷ್ಯರಾದ ಪುನ್ಯಲದ ಮುಮ್ಮಡಿ ದೇವಯ್ಯ ಶಾಂತಯಮತ್ತು ಸತ್ಕವಿ ಸಾರ್ವಭೌಮನಾದ ಶ್ರೀನಾಥ ಕವಿಯು ಸನ್ನಿಧಿಯಲ್ಲಿದ್ದರು. ಶ್ರೀನಾಥನು ಮುಮ್ಮಡಿ ಶಾಂತಯ್ಯನವರಿಗೆ ಅಂಕಿತವಾಗಿ ಒಂದು ಕಾವ್ಯವನ್ನು ಬರೆದಿರುವನೆಂದು ಶ್ರೀ ಭಿಕ್ಷಾವೃತ್ತಿ ಶ್ರೀಗಳವರು ಅಂತು ತತ್ಕಥೆಯನ್ನು ಉಪನ್ಯಸಿಸುವುದಾಗಿ ಶ್ರೀನಾಥನಿಗೆ ಆಜ್ಞಾಪಿಸಿದರು. ಆತನು "ಮಹಾ ಪ್ರಸಾದವೆಂದು" ಕಥಾಪ್ರಸಂಗವನ್ನು ಪ್ರಾರಂಭಿಸಿದನು.

ಗ್ರಂಥ ರಚನಾ ಪ್ರಸಂಗದ ವರ್ಣನೆಯಾದ ಮೇಲೆ ಕವಿಯು ಕೃತಿಪತಿಯಾದ ಮುಮ್ಮಡಿ ಶಾಂತಯ್ಯನ ವಂಶ ಚರಿತ್ರೆಯನ್ನು ವಿಸ್ತಾರವಾಗಿ ವರ್ಣಿಸಿರುತ್ತಾನೆ. ಗ್ರಂಥದ ಈ ಭಾಗದಲ್ಲಿ ಮಾತ್ರ ಅಕ್ಷರಸ್ಖಾಲಿತ್ಯ, ಪದಸ್ಖಾಲಿತ್ಯಗಳು ವಿಶೇಷವಾಗಿರುವುದು ನಮ್ಮ ದುರ್ದೈವವೇ ಸರಿ. ಮಲ್ಲಿಕಾರ್ಜುನ ಯೋಗೀಶ್ವರರನ್ನು ವರ್ಣಿಸುವಾಗ "ಶ್ರೀಮನ್ಮಲ್ಲಿಕಾರ್ಜುನ ಮಹಾದೇವ .........ಅಂಚುಗಂಡ ಮುಖ್ಯಾವರಣಾ........ ...ಮೋಷ್ಮಯೇಕೋರಾಮೇಶ್ವರ ಪಂಡಿತಾರಾಧ್ಯಾದಿ ಚಾತುರ್ವರ್ಣ್ಯಂಬುಎಂಗಲಿಗಿನವ......... ಯೆಂದು............ಬಿಂದಿಸ ಮಲ್ಲಿನಾಥಗುರುಂಡು" ಎಂಬುದೊಂದು ವಾಕ್ಯವಿರುವುದು. ಇದರಲ್ಲಿ ಸ್ಖಾಲಿತ್ಯಗಳು ವಿಶೇಷವಾಗಿರುವುದರಿಂದ ಇದರ ಪೂರ್ಣಾರ್ಥವನ್ನು ಗ್ರಹಿಸುವುದು ದುರ್ಘಟವು. "ಏಕೋರಾಮೇಶ್ವರ ಪಂಡಿತಾರಾಧ್ಯಾದಿ ಚಾತುರ್ವರ್ಗ್ಯಂಬುಲು" ಇವು ವೀರಶೈವ ಮತಸ್ಥಾಪನಾಚಾರ್ಯರಾದ ಚತುರಾಚಾರ್ಯರ ಗೋತ್ರಗಳಿಗೆ ಸೇರಿದವರು ಎಂದು ಅರ್ಥವಾಗುತ್ತದೆ. ಈ ವಾಕ್ಯವು ವಿಶೇಷಮಹತ್ವವುಳ್ಳದ್ದಾಗಿರುತ್ತದೆ. ಶ್ರೀನಾಥನೇ ಶ್ರೀಮಲ್ಲಿಕಾರ್ಜುನರನ್ನು ಏಕೋರಾಮೇಶ್ವರಾದಿ ವೀರಶೈವಾಚಾರ್ಯರ ಪರಂಪರೆಗೆ ಸೇರಿಸಿರುವಾಗ ದುರಭಿಮಾನಭೂತದಿಂದ ಹಿಡಿಯಲ್ಪಟ್ಟಿರುವ ಕೆಲ ಸ್ವಜಾತೀಯರ ಮಲ್ಲಿಕಾರ್ಜುನ ಪಂಡಿತಾರಾಧ್ಯ ನಿರಾಕರಣವಾದವು ಸೈಕತ ಲೇಖನವಲ್ಲವೇ? ಪಂಡಿತಾರಾಧ್ಯರು ತಮ್ಮ ಅಗಾಧಪಾಂಡಿತ್ಯದಿಂದಲೂ, ಮಹಿಮಾವಿಶೇಷತೆಯಿಂದಲೂ, ಜಗದ್ಗುರುಗಳಾಗಿ ಪ್ರಸಿದ್ಧರಾಗಿರುತ್ತಾರೆ. ವೀರಶೈವೇತರ ಜಾತಿಯವರಿಂದಲೂ ಸಹಾ ಪೂಜಾದಿ ಸತ್ಕಾರಗಳನ್ನು ಹೊಂದಿರುತ್ತಾರೆ. ಪರವಾದಿಗಳನ್ನು ಜಯಿಸಿ ವೀರಶೈವ ಸಿದ್ಧಾಂತವನ್ನು ಆಂಧ್ರಮಂಡಲದಲ್ಲಿ ಸರ್ವತ್ರ ಪ್ರಸಾರಗೊಳಿಸಿರುತ್ತಾರೆ. "ಶಿವತತ್ತ್ವಸಾರಾದಿ ಭವ್ಯ ಗ್ರಂಥಗಳನ್ನು ರಚಿಸಿ ಜಗದಾಚಾರ್ಯರಾಗಿ ಮೆರೆದಿರುತ್ತಾರೆ. ಶ್ರೀ ಪಾಲ್ಕುರಿಕೆ ಸೋಮನಾಥನು ಮಲ್ಲಿಕಾರ್ಜುನ ಪಂಡಿತಾರಾಧ್ಯರನ್ನು "ಶ್ರೀಮತ್‌ತ್ರಿಲೋಕ ಗುರುವು" "ಅಸಮ ಲೋಕಾರಾಧ್ಯ" "ಲೋಕೋಪಕಾರಿ" "ಶ್ರೀ ಪರ್ವತಸ್ವಾಮಿ" "ಶ್ರೀ ಶೈವಸಮಯದೇಶಿಕ ಚಕ್ರವರ್ತಿ" ಎಂಬುದಾಗಿ ಸ್ತೋತ್ರ ಮಾಡಿರುತ್ತಾನೆ.

ಶ್ರೀನಾಥನು, ಶಿವಶರಣರು:— ಶ್ರೀನಾಥನು ಕೃತಿಪತಿಯ ಗುರುವಂಶವನ್ನು ವರ್ಣಿಸುವಾಗ ತದ್ವಂಶಜರ ಲಿಂಗಾರ್ಚನಾಕ್ರಿಯಾ ಲೀಲೆ

ಯನ್ನೂ ಜಂಗಮಾರಾಧನಾಸಕ್ತತೆಯನ್ನು ಧರ್ಮಚಾತುರೀ ವೈಭವಖ್ಯಾತಿಯನ್ನೂ, ಸಕಲ ನಿರ್ಮಾಣ ವಿದ್ಯಾಪ್ರಶಸ್ತತೆಯನ್ನು, ಮಾನಿತೈಶ್ವರ ಸಂಪ್ರಾಪ್ತಿ" ಯನ್ನು ವೆಗ್ಗಳವಾಗಿ ವರ್ಣಿಸಿರುತ್ತಾನೆ. ಇದಲ್ಲದೆ ಉಪಮೆಗಾಗಿ ಪರಮಲಿಂಗಧ್ಯಾನಪಾರೀಣ ಸದ್ಬುದ್ಧಿಯಲ್ಲಿ ಶ್ರೀಮದಲ್ಲಮಾಪ್ರಭುದೇವರನ್ನೂ, ರುಚ್ಯರ್ಪಣಾ ಕ್ರಿಯಾರೂಢಿಯಲ್ಲಿ ಮಾದರ ಚೆನ್ನಯ್ಯನನ್ನೂ ಮುಂತಾದ ವೀರಶೈವ ಪ್ರಮಥರನ್ನು ಹೆಸರ್ಗೊಂಡಿರುವನು. ನಮ್ಮದು ವೈದಿಕ ಮತವು ಬಸವಾದಿಗಳ ಮತವು ಅವೈದಿಕವೆಂದು ವೇದಾದಿಗಳ ನಿಜಸ್ವರೂಪವನ್ನರಿಯದೇ ವಾದಿಸುವ ಕುತರ್ಕಿಗಳು ಶ್ರೀನಾಥನಿಂದಾದರೂ ಬುದ್ಧಿಯನ್ನು ಕಲಿತುಕೊಳ್ಳಬಾರದೇ? ಶ್ರೀನಾಥನು ವೈದಿಕನು ಕರ್ಮಕಾಂಡಿಯಾದ ಬ್ರಾಹ್ಮಣನು. ಅಂಥವನು ಸಹಾ ಕರ್ಮಕಾಂಡ ವಿರೋಧಿಗಳಾದ ವೀರಶೈವ ಪ್ರಮಥರನ್ನು ಪೂಜ್ಯಭಾವದಿಂದ ಸ್ತುತಿಸಿರುವನು. ವಿಕಸಿತ ನೀರಜಾತ ಮಕರಂದ ಮಾಧುರ್ಯವನ್ನು ದೂರದಿಂದ ಬರುವ ಭ್ರಮರಗಳು ಬಲ್ಲವಾಗಲಿ ತತ್ಸಮೀಪದಲ್ಲಿಯೇ 'ವಟ' ವಟ ಗುಟ್ಟುತ್ತಿರುವ ಕಪ್ಪೆಗಳೇನು ಬಲ್ಲವು?

ಶ್ರೀನಾಥನು ಚೆನ್ನಮಲ್ಲಿಕಾರ್ಜುನನನ್ನು ವರ್ಣಿಸುವ ಸಂದರ್ಭದಲ್ಲಿ ಉಪಯೋಗಿಸಿರುವ ವಿಶೇಷಣಗಳು ವಿಶೇಷ ಮಹತ್ತ್ವವುಳ್ಳವಾಗಿರುತ್ತವೆ. ಆ ಕಾರಣ ಆ ಪದ್ಯವನ್ನು ಇಲ್ಲಿ ಉದಹರಿಸುವೆವು.

ಸೀಸಪದ್ಯ॥ ಪಂಚಾಕ್ಷರಿ ಮಂತ್ರ ಪಾರಿಜಾತೋದ್ಭೂತ ।
ಫಲಮುವೇ ಗುರುವುನಂ ಭಾಷಣಮುಲು
ವೀರಶೈವಾಚಾರ ವಿಮಲ ಮಾರ್ಗಾನೂನ
ಶಾಶ್ವತಂಬೇ ಗುರು-ಸ್ವಾಮಿ ಮಹಿಮ ॥
ನಿಖಿಲ ದೇಶಾಧೀಶ-ನಿವಹ ಪ್ರವೆಯುಕ ।
ಪಾತ್ರಮೇ ಗುರುಮೂರ್ತಿ-ಪಾದಯುಗಳ ॥
ಶಂಕರ ಪೂಜಾ ಪ್ರಶಸ್ತದೀಕ್ಷಾ ಜ
ನ ಹಸ್ತಾಂಬು ಜಾತನಾಹ್ಲಾದಮೇ ಗುರುವು
ಮನಗ ಪಂಡಿತ ಚೆನಮಲ್ಲಿಕಾರ್ಜುನುನಕು

ಕೃತಿಪತಿಯ ವಂಶಕ್ಕೆ ಸೇರಿದವರೆಲ್ಲರೂ ವೀರವ್ರತಾಚಾರರೆಂದೂ, ವೀರಶೈವ ಸಿದ್ಧಾಂತ ಕೋವಿದರೂ, ಮತ್ತು ಬೋಧಕರೆಂದೂ, ಪರವಾದಿಗಳನ್ನು ಜಯಿಸಿ ನಿಜ ಸಿದ್ಧಾಂತವನ್ನು ಸಂಸ್ಥಾಪಿಸಿದ ಘನಯಶೋ

ದುಂದುಭಿ ನಿನದ ಗಂಭೀರರೆಂದೂ ವರ್ಣಿಸಲ್ಪಟ್ಟಿರ ವರು. ಆಂಧ್ರ ಮಂಡಲದಲ್ಲಿ ವೀರಶೈವ ಮತ ಪ್ರಸಾರಣೆಯ ನಾಟಕದಲ್ಲಿ ಇವರೇ ಸೂತ್ರಧಾರಕರಾಗಿದ್ದರೆಂದು ಕಂಠೋಕ್ತವಾಗಿ ಹೇಳಬಹುದು. ಕೃತಿಪತಿಯಾದ ಮುಮ್ಮಡಿ ಶಾಂತಯ್ಯನು "ಪರವಾದಿ ಮತ್ತೇಭ ಪಂಚಾನನನೆಂದೂ" "ವಿನುತ ಯಶನೆಂದೂ" ಮುಂತಾಗಿ ವರ್ಣಿಸಲ್ಪಟ್ಟಿರುವನು.

ಶ್ರೀನಾಥ ಕವಿಗೆ ವೀರಶೈವ ಮತಸ್ಥರಲ್ಲಿ ಅನೇಕರು ಪರಿಚಯಸ್ಥರೂ ಉದಾರಾಶ್ರಯದಾತರೂ ಆಗಿದ್ದರೆಂದೂ ಈ ಮೊದಲೇ ಬರೆದಿರುವೆನು. ಅವರಲ್ಲಿ ಮುಮ್ಮಡಿ ಶಾಂತದೇವನು ಮುಖ್ಯನಾಗಿದ್ದನು. ಆತನು ಶ್ರೀನಾಥ ಕವಿಗೆ ಸ್ಕಾಂದ ಪುರಾಣಾಂತರ್ಗತ ಈಗಿನ ಸಂಹಿತೆಯಲ್ಲಿ ಹೇಳಲ್ಪಟ್ಟಿರುವ ಉರುಲಿಂಗೋದ್ಭವ ಕಥೆಯನ್ನೂ ಶ್ರೀ ಶಿವರಾತ್ರೀ ಮಾಹಾತ್ಮ್ಯ ಕಥೆಯನ್ನೂ ಕಾವ್ಯರೂಪವಾಗಿ ವಿರಚಿಸುವುದಾಗಿ ಹೇಳಿ ಕರ್ಪೂರ ತಾಂಬೂಲಾದಿಗಳಿಂದ ಸತ್ಕರಿಸಿದಂತೆ ಪೀಠಿಕೆಯಲ್ಲಿ ಹೇಳಿಕೊಂಡಿರುವನು. ಆದಿ ಪದಗಳಲ್ಲಿ ಈ ಸುಕುಮಾರ ಚರಿತ್ರೆಯಲ್ಲಿ ಅಡಕವಾಗಿರುವವು. ಈ ಪುಣ್ಯ ಚರಿತ್ರವು ಸಕಲ ಪಾಪ ನಿರ್ಮುಕ್ತವೂ ಪರಮ ಧರ್ಮೋತ್ಕೃಷ್ಟವೂ ಆಗಿ ವಿರಾಜಿಸುವದೆಂದು ಕವಿಯು ವಿಶೇಷಿಸಿ ಬರೆದುಕೊಂಡಿರುವನು.

---

ಹಂಪೆಯ ಹರಿಹರಾಚಾರ್ಯರ

# ಪುಷ್ಪದ ರಗಳೆ.

ಕಂದ॥ ಲೀಲೆಯೊಳೋಲೈಪೆಂ ಮಧು-
ರಾಲಾಪದೆ ಪುಷ್ಪರಗಳೆಯೆಂಬೀ ಪೊಸಪೂ-
ಮಾಲೆಯ ನವಧರಿಸಗಜಾ
ಲೋಲಸುಧಾಶೀಲ ಹಂಪೆಯ ವಿರುಪಾಕ್ಷ॥

## ಲಲಿತ ರಗಳೆ.

ಶ್ರೀಸಕಲ ಸುರಮುಕುಟಸಿಕಟ ರಂಜಿತ ಚರಣ
ಭಾಸುರಾದಿತ್ಯಕೋಟಿಪ್ರಭಾ ಸಮ ಕಿರಣ॥

ಹರುಷದಿಂ ಬೇಡುವೆಂ ನಿಮ್ಮನುತ್ಸವದಿಂದೆ
ಕರುಣಿಪುದು ಹಂಪೆಯ ವಿರೂಪಾಕ್ಷ ದಯೆಯಿಂದೆ॥

ಪೊಚ್ಚ ಪೊಸ ಪೂಗಳಿಂದರ್ಚಿಸುವದಂ ದೇವ।
ಅಚ್ಚರಿಯೊಳಿತ್ತು ಕರುಣಿಸುವದಿಂದೆಲೆ ದೇವ॥

ಇಂದು ಹಂಪೆಯ ಪುರದೊಳಿಂತಿದಂ ಕೊಂಡಾಡಿ।
ಮುಂದೆ ಜಾವದೊಳೆ ಭಸಿತೋದ್ಧೂಳನವ ಮಾಡಿ॥

ಪರಿಮಳ ಪೊಸರದಂತೆ ಬಿಗಿದು ನೈಯ್ದಪ್ಪಿರ್ದ।
ಹರಿವರಿಯ ಕರಡಿಗೆಯನಾಂತುಕೊಂಡೆಸೆದಿರ್ದ॥

ನಿನ್ನ ಗೀತಂಗಳಂ ಹರುಷದಿಂ ಪಾಡುತಂ।
ನಿನ್ನ ಪದ್ಯಂಗಳಂ ಪುಳುಕಿಸುತ್ತೋದುತಂ॥

ನಿನ್ನವರ ಕೀರ್ತಿಯಂ ಕೈವಾರಿಸುತೆ ಬರುತೆ।
ನಿನ್ನವರ ಮೂರ್ತಿಯಂ ನೆನೆದು ಕರಗುತೆ ಬರುತೆ॥

ಪರಿಮಳದ ಸುಗ್ಗಿ ಸೌರಭದ ಸಂದಣಿ ಯೆನಿಪ।
ಸುರಚಿರಾಮೋದದ ರಸಾಂಭೋಧಿ ಯೆಂದೆನಿಪ॥

ಉರುವಣಿಪ ಕಂಪಿನ ಪರಮ ಸೀಮೆ ಯೆಂದೆನಿಪ।
ಸುರತರು ಸುಗಂಧದ ತವರ್ಮನೆ ಯಿದೆಂದೆನಿಪ॥

ಪೂದೋಟಮಂ ದೂರದಿಂ ಕಂಡು ಸೊಂಪೇರಿ।
ಆದ ಪರಮಾನಂದದಿಂದೊಲಿದು ನಲವೇರಿ॥

ಪುಟವೇಳುತಡ್ಡಮುಂ ತ್ರಿಗುಟಮಂ ಪರಿದಾಡಿ ।
ನಟನಂತಿರುಗ್ಗಡಿಸಿ ಕುಣಿಕುಣಿದು ಕೊಂಡಾಡಿ ॥

ಬೆಲ್ಲ ಪತ್ರಮನುತ್ತರಣಿಯನುನ್ಮತ್ತಮಂ ।
ಪಲ್ಲವಿಪ ಕಕ್ಕೆ ಬಿಳಿಯೆಕ್ಕೆಗಳ ಮೊತ್ತಮಂ

ರುದ್ರಜಟೆಯಂ ತುಂಬೆಯಂ ಕಂಚಿವಾಳಮಂ ।
ಭದ್ರಮುಖಿ ಮೊದಲಾದ ನವಪತ್ರಜಾಲಮಂ ॥

ಕಂಡು ಕಂಡಾ ಪತ್ರಗಳ್ಗೆಯ್ದೆ ಶರಣೆನುತ ।
ಕಂಡೆಂ ಫಲಂ ಪಿರಿದದಂತಿರುವ ನೀವೆನುತ ॥

ಬಗೆಯ ಪೂವಂ ಕಂಡು ಮಿಗೆ ಶರಣು ನಿಮಗೆನುತೆ ।
ಸಗುತಲ್ಲಿ ದೊಡ್ಡ ಪತ್ರಕೆ ನಮೋನ್ನಮೊಯೆನುತೆ ॥

ಬರವರಲ್ಮುಂಗುಡಿಯ ಕಂಪು ಕರದಿಂ ತೀಡೆ ।
ಹರಹರ ವಿರೂಪಾಕ್ಷ ನಿಮಗೆನುತ್ತಂ ಕೂಡೆ ॥

ಮನದಿಂದೆ ಕೈಕೊಳ್ವ ಮುನ್ನಮೀ ಗಂಧಮಂ ।
ನಿನಗೆ ಬಳಕೀವೆನುತ್ತಮ ಕುಸುಮ ವೃಂದಮಂ ॥

ಎಂದರ್ಪಿಸುತ್ತೆ ಪೂದೋಂಟಮಂ ಕೈಮಿಕ್ಕು ।
ಬಂದು ಪುಳಕಿಸುತೆ ಪರಮಾನಂದದಿಂ ಪೊಕ್ಕು ॥

ಕೂಗಾಡುತೊಲೆದಾಡುತಾಹಾ ವಿರೂಪಾಕ್ಷ ।
ಪೂಗಳಂ ನಡೆನೋಡುತಾಹಾ ವಿರೂಪಾಕ್ಷ ॥

ಎಂದೆನುತೆ ಹಿಗ್ಗಿ ಹೊಗಳುತ್ತೊಲೆದು ನಲಿವುತ್ತೆ ।
ಚಂದ ಚಂದದ ಕುಸುಮ ವೃಂದಮಂ ನೋಡುತ್ತೆ ॥

ಎನಗಿಂತು ಕರುಣಿಸಿದನೇ ಸದಾಶಿವ ಯೆನುತ ।
ಮನದೊಳಗೆ ಹರುಷದಿಂ ನಲಿನಲಿದು ನೋಡುತ್ತ ॥

ಅಳಿ ಯೆರಗದನಿಲಸಲುಗದ ರವಿಕರಂ ಪುಗದ ।
ಬೆಳೆಬೆಳೆದು ನಳನಳಿಸಿ ಮಘಮಘಿಸುತವಲರಿದು ॥

ಇರವಂತಿ ಇರೆ ಕಂಡು ನೋಡಲಮ್ಮದೆ ನಿಂದು ।
ಪರಶಿವಂಗೋಪ್ಪೈಸ ಪೂವ ನೀಡೌ ಯೆಂದು ॥

## ಪುಷ್ಪದ ರಗಳೆ.

ನನೆ ಮುಗುಳ್ ಕೊನೆಮುಗುಳ್ಬಿರಿದಿರೆ ಮುಗುಳ್ಗಳಂ ।
ತನಿಗಂಪು ತೀವಿರ್ದ ಪೊಚ್ಚ ಪೊಸ ಪೂಗಳಂ ॥

ಕೊಂಡು ಕುಕಿಲಿರಿವುತಂ ಕುಣಿವುತಂ ನಡೆತಂದು ।
ಕಂಡು ಸಂಪಿಗೆಯ ಮರನಿರ್ದೆಡೆಗೆ ಪರಿತಂದು ॥

ಏನವ್ವ ಸಂಪಿಗೆಯೆ ಶಿವನ ಸಿರಿ ಮುಡಿಗಿಂದು ।
ನೀನೀವ ಪೊಸ ಕುಸುಮಮಂ ನೀಡು ನೀಡೆಂದು ॥

ಅಳಿಮನದ ಪರಿಯೆಂದು ಬಗೆಯದಿರ್ನೀನೆನುತ ।
ತಿಳಿದು ಪೊಸಪೂಗಳಂ ನೀಡವ್ವ ನೀನೆನುತ ॥

ಆನಂದದಿಂದೆ ಶಿವಲಿಂಗಕರ್ಚಿಪೆನೆನುತೆ ।
ಏನವ್ವ ನೀಡು ಬಿರಿ ಮುಗುಳ ಸಂಪಿಗೆ ಯೆನುತೆ ॥

ಅಂತವಂ ಕೊಂಡು ಸೇವಂತಿಯಲ್ಲಿಗೆ ಬಂದು ।
ಮುಂತೆ ಕುಂಕುಮದ ತಾರಗೆಗಳಂತಿರೆ ನಿಂದು ॥

ಎಲೆಲೆ ಪರಿಮಳದ ತಣ್ಪಂಗರೆಯ ಬಾರವ್ವ ।
ಕುಲಪತಿಯ ಜಡೆಗಳ್ಗೆ ಪೂಗಳಂ ತಾರವ್ವ ॥

ದೇವಂಗೆ ದೇವರ ಶಿಖಾಮಣಿಯ ಜಡೆಮುಡಿಗೆ ।
ಸೇವಂತಿ ನಿನ್ನಯಾ ಪೂವನೀಯೌ ಎನಗೆ ॥

ಎಂದಲ್ಲಿ ಪನ್ನೀರ ಪರಿಮಳದ ಪೂಗೊಂಡು ॥
ಮುಂದೆ ತೋರುತ್ತಿರ್ಪ ಪೂಗಿಡುಗಳಂ ಕಂಡು ॥

ಇದೆ ಮಲ್ಲಿಕಾಲತೆ ವಿರೂಪಾಕ್ಷ ನಿನಗೆನುತೆ ।
ಅದೆ ಮಾಧವೀಲತೆ ವಿರೂಪಾಕ್ಷ ನಿನಗೆನುತೆ ॥

ಮಲ್ಲಿಗೆಯ ಮುಂದಕ್ಕೆ ಮಲೆಯುತಂ ನಡೆತಂದು ।
ಸಲ್ಲೀತಿ ಪೆರ್ಚೆ ಕಂಪಿನ ನಿಧಿ ಯಿರಲ್ನಿಂದು ॥

ಹಸುರಳಿದು ಬೆಳ್ಪಳಿದು ನನೆಯೇರಿ ಹೊದೆದೋರಿ ।
ಹೊಸಪರಿಯ ಬಿರಿಮುಗುಳ್ಗಳಿರೆ ಬೀಗಿ ನಲವೇರಿ ॥

ಮಲ್ಲಿಗೆಯರಳ್ಗಳಂ ಮನವಾರೆ ತಿರಿಯುತಂ ।
ಮೆಲ್ಲಮೆಲ್ಲನೆ ನೋಡುತಲ್ಲಲ್ಲಿ ಕುಣಿವುತಂ ॥

ಏನವ್ವ ಅದ್ರುಗಂಟಿ ತುಂಬಿ ತುಳುಕದ ಮುನ್ನ ।
ಆನಂದನಿಧಿ ಶಿವಂಗಳ್ಕರಿಂದಂ ನಿನ್ನ ॥

ಸುಖದ ಸದ್ಗಂಧ ಮೀಸಲನೀಯು ನೀಯೆನುತ ।
ಮುಖವೈದರಿಂಗೆ ಸಂದೊಡೆ ಬರ್ದುಂಕುವೆನೆನುತ ॥

ಪೊಸಪೂವನಲ್ಲಿ ಕೊಂಡಾಡುತಂ ನಡೆತಂದು ।
ಎಸೆವ ಜಾತಿಯು ಸಮೀಪಕ್ಕೆ ಮನಮಂ ತಂದು ॥

ಜಾತಿ ನೀನೇ ಸಕಲ ಪುಷ್ಪ ಜಾತಿಗೆ ಜಾತಿ ।
ಭೂತೇಶ್ವರನ ಜಡೆಯು ಮುಡಿಗೇರಿದೊಡೆ ಜಾತಿ ॥

ಎಂದು ಪೊಗಳುತ್ತಲ್ಲಿ ಪೊಸ ಕುಸುಮಮಂ ಕೊಂಡು
ಮುಂದೆ ಕೇತಕಿಯು ಕುಸುಮಂಗಳಂ ಕೈಕೊಂಡು ॥

ಹೊರಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ ।
ಹೆರೆ ಸೂಡಿದನ ಗುಪ್ತನಂತಿರ್ಪ ನಿನ್ನ ಪರಿ ॥

ಅಲ್ಲಿಂದಲೈತಂದು ಮುಡಿವಾಳದೊಳ್ನಿಂದು ।
ಬೇರರಿತವರ್ಗೆ ನೀನೆಲೆದೋರಲೇಕೆಂದು ॥

ಪರಿಮಳದ ಬೇರ್ಗಳಂ ಕೊಂಡು ನಲಿದಾಡುತಂ ।
ದವನವೇ ಶಿವನ ಪರಿಮಳದ ಹಬ್ಬಂ ಬಾರ ॥

ಭುವನದೊಳ್ನಿನಗೆ ಸರಿಯಿಲ್ಲ ಸೌರಭಸಾರ ।
ಅಲ್ಲಿಂದ ಬಂದು ಸುರಹೊನ್ನೆಯಲ್ಲಿಗೆ ನಿಂದು ॥

ಏನೆನ್ನ ಹೊನ್ನೆ ಸುರಹೊನ್ನೆ ಪರಿಮಳದರಿಸಿ ।
ನೀಮುನ್ನ ಪುಲಿಗೆರೆಯ ಸೋಮಯ್ಯನಂ ಬರಿಸಿ ॥

ಕೊಂಡ ಸದ್ಭಕ್ತಿ ಪರಿಯುಂಟೆ ಬಾ ನಿನಗೆನುತೆ ।
ಅಲ್ಲಿಂದ ಬಂದು ಪೊಸ ಪೂಗಳಂ ಗೈದುತ್ತೆ ॥

ಕಮಲವೇ ಹರಿಗೆ ಚಕ್ರವನಿತ್ತ ಶಿವನ ಪದ ।
ಕಮಲಕ್ಕೆ ಸಾರ್ವುದುಚಿತಂ ನಿನಗೆ ಪರಮಪದ ॥

ಮೀತೆಂದು ಹತ್ತೆ ಸಾರ್ದಂಬುಜಮನೆತ್ತುತಂ ।
ನೆಯ್ದಿಲೆಯೆ ಶಿವನಲ್ಲಿಗೈಯ್ದಲೇ ಬಗೆದಪ್ಪೆ ॥

ಒಯ್ಯೊಡೆನ್ನಂ ಲಂಚ ನೀವೆ ನೀನುಳಿದಪ್ಪೆ ।
ಚಂಗಣಿಗಿಲೇ ಬಾರ ಲಿಂಗದೊಲವೇ ಯೆನುತೆ ॥

ಸಿಂಗರಿಸಬೇಕು ಶಿವನಂಘ್ರಿಯಂಗಳನೆನುತೆ ।
ಹಿಂಗದೆ ಕೊಳಂಗಳ ಜಲಂಗಳೊಳು ಪೋಗಿರ್ದು ॥

ಮಂಗಳವೆನಿಪ್ಪ ಪೂವಂ ಕೊಂಡು ನಿಂದಿರ್ದು ।
ಪೆಸರರಿಯದೇವೆನೇ ಕಂಪುಳ್ಳ ಪೂಗಳಂ ॥

ಕಂಡರಿಯದೇವೆನೊ ಪರಿಮಳವ ಸಾಲ್ಗೆಂದು ।
ಒಂದೊಂದು ನಿರ್ಮಳ ಸ್ಥಾನವಂ ನೆರೆ ನೋಡಿ ॥

ಇಂದುಧರ ಶರಣೆನುತ ಬಾಲ ಚೂತದ ಕೆಳಗೆ ।
ಚಂದ್ರಕಾಂತದ ಶಿಲೆಯ ಮೇಲೆಯ್ದೆ ಕುಳ್ಳಿರ್ದು ॥

ಚಂದದಿಂ ಬಾಳೆಲೆಗಳಂ ಪಾಸಿ ಸುರಿದಿರ್ದು ।
ಚಂದುಳ್ಳ ಪೂಮಾಲಿಕೆಯ ಗೈದು ಸಡಗರಿಸಿ ॥

ಅಲ್ಲಿಂದ ತೆರಳ್ದು ಶಿವನರಮನೆಗೆ ಮುಂತಾಗಿ ।
ಮೆಲ್ಲನಲುಗದೆ ಪುಷ್ಪ ಪೊಂದದಿರದಂತಾಗಿ ॥

ಶಿವನ ಮನೆಗಂ ಬಂದು ಬಾಗಿಲೊಳಗಂ ನಿಂದು ।
ಶಿವನುಪ್ಪವಡಿಸುವನ್ನಂ ಬರಂ ಕಾಯ್ದಿರ್ದು ॥

ಏನೆನ್ನ ತಂದೆ ಯುಪ್ಪವಡಿಸಿರ್ದಾ ತಂದೆ ।
ಏನಯ್ಯ ತಳುವಿರ್ದನೆನುತಲಿರ್ದಾ ತಂದೆ ॥

ಅಳಿಗಳೆರಗದ ಗಂಧವಹ ನಲುಗದಲಿರ್ಗಳಂ ।
ಎಳಸಿ ತಂದೆಂ ತಂದೆ ದೇವ ಪೊಸ ಪೂಗಳಂ ॥

ಎಂದು ಬಿನ್ನೈಸುತ್ತೆ ಹತ್ತೆ ಸಾರ್ದೊಲವಿಂದೆ ।
ತಂದ ಪೊಸ ಸೇವಂತಿಯುರಲ ಪನ್ನೀರಿಂದೆ ॥

ಎಸೆಯ ಮೊಗಪ್ರಕ್ಷಾಲನಕ್ಕೆರೆದು ಹಿಗ್ಗುತಂ ।
ಪೊಸ ಪರಾಗದ ವಿಭೂತಿಯ ತಿಲಕನೀವುತಂ ॥

ಮಿಗೆ ನೇಹದಿಂ ನೋಡಿ ಮನದೊಳಗೆ ತೂಪಿರಿದು ।
ಮಘಮಘಿಪ ಕೇತಕಿಯ ನುಣ್ಣೆಸಳ್ಗಳಂ ಪಿಡಿದು ॥

ಸಿರಿಮುಡಿಯನೊಯ್ಯನೆ ಸಡಿಲ್ಚಿ ನಯದಿಂದೊರಿಸಿ ।
ಪರಿಪರಿಯ ನಿಂದ ಕೆಂಜೆಡೆಗಳನಲಂಕರಿಸಿ ॥

ಎಳೆಯ ಶಶಿಕಳೆ ನೋಯದಂತೆ ಮೆಲ್ಲನೆ ಪಿಕ್ಕಿ ।
ಹೊಳೆವ ಸುರನದಿ ತುಳ್ಕದಂತೆ ಮೆಲ್ಲಗೆ ಸಿಕ್ಕಿ ॥

ಪೊಸ ಪಡ್ಡಳಿಯ ಪರಿಮಳದ ಕತ್ತುರಿಯನಿಕ್ಕಿ ।
ಶಸಿನಿಳಿವ ಜಡೆಗಳಂ ತಣ್ಪಿನೊಳಗಂಟಿಕ್ಕಿ ॥

ಇರವಂತಿಯಂ ತಂದು ಸಿರಿಮುಡಿಯೊಳಗೆ ತುರುಬಿ ।
ಬೆರಸಿ ಯವರೆಡೆಗಡೆಗೆ ಸೇವಂತಿಗಳ ತುರುಬಿ ॥

ಮಲ್ಲಿಗೆಯ ಪರಿಮಳದ ಚಂದನವನಣ್ಪಿಕ್ಕಿ ।
ಮೊಲ್ಲೆಯ ಮುಗುಳ್ಗಳಂ ನಾಗಕುಂಡಲವಿಕ್ಕಿ ॥

ಸಾದರದಿ ಮಾಧವಿಯ ಮುದ್ರಿಕೆಯನೊಸೆದಿತ್ತು ।
ಕಮಲಂಗಳಂ ಚರಣಕಮಲದೊಳ್ ಕೈಗೊಳಿಸಿ ॥

ಕುಮುದಂಗಳಂ ಕೂಡೆ ಕೆಲದೊಳಂ ಸಿಂಗರಿಸಿ ।
ರಸಧೂಪ ಧೂಮದೊಡನೆಸೆಯಲಾರತಿ ಯೆತ್ತಿ ॥

ಸಮೆದ ದೇವಾನ್ನಮಂ ದಿವ್ಯಾನ್ನ ತತಿಗಳಂ ।
ಕ್ರಮದಿಂದಲಿತ್ತು ಕರ್ಪೂರ ವೀಟಿಕೆ ಗೊಟ್ಟು ॥

ಹೆರೆಸಾರ್ದು ಕರುಣ ಪ್ರಸಾದಮಂ ಕೈಕೊಂಡು ।
ತೆರಹಿಲ್ಲದುಗ್ಗಡದ ಶಿವಸುಖಮ ನೆಡೆಗೊಂಡು ॥

ನೇಹದಿಂ ನೋಡುತಂ ಲಲ್ಲೆಯಂ ನೀಡುತಂ ।
ದೇವ ಸುಕುಮಾರ ಶಶಿಶೇಖರ ವಿರೂಪಾಕ್ಷ ॥

ದೇವ ಪರಿಮಳ ವೃಂದ ಸೇವಿತ ವಿರೂಪಾಕ್ಷ ।
ದೇವ ಎನ್ನಾಳ್ದ ಸುಖಮೂರ್ತಿಯೆ ವಿರೂಪಾಕ್ಷ ॥

ದೇವ ಎನ್ನಯ್ಯ ಎನ್ನಾಳ್ದನೆ ವಿರೂಪಾಕ್ಷ।
ಎಂದು ಹೊಗಳುತ್ತೆ ಹೊಂಗುತ್ತೆ ಹಾಡಿ ಮೆಚ್ಚುತ್ತೆ॥
ನಿಂದು ನಲಿದಾಡಿ ಮಲೆದಾಡಿ ವೈವೆಚ್ಚುತ್ತೆ।
ಭಕ್ತಿಸುಖದಿಂದಿತರ ಸುಖವದೆಲ್ಲಿಯದೆನಿಸಿ॥

ಮುಕ್ತಿ ಸುಖದಿಂದಧಿಕ ವಿದಕೆ ಪಡಿಯಿಲ್ಲೆನಿಸಿ।
ಪರುಷವಂ ಬಿಸುಡೆಂಬ ಸುರಭಿಯಂ ತೆಗೆಯೆಂಬ॥

ಸುರತರುವನೊಲ್ಲೆನೆಂಬ ವೃತವಂ ಚೆಲ್ಲೆಂಬ
ನಿಧಿಗಳಂ ನೂಂಕು ಚಿಂತಾಮಣಿಯನಿಡುಕೆಂಬ॥

ಉರವಣಿಸ ಪರಮ ಬಕುತಿಯ ಸೊಕ್ಕು ತಲೆಗೇರಿ।
ಹರ ನಿನ್ನ ಮೂರ್ತಿ ಕರಣಂಗಳೊಳ್ಕಾಲೂರಿ॥

ಪರವಶಂ ಮೆಯ್ಯೆಕ್ಕಿ ನಿಂದಿರ್ದರುಂ ಮರೆದು।
ಹರಹರ ನಮಃಶ್ಶಿವಾಯೆಂಬ ಕಳವಳ ಪಿಡಿದು॥

ತವೆ ಗದ್ಗದವು ಮುಣ್ಮಿ ಪೊಣ್ಮಿ ಕರಗುತೆ ನಿಂದು।
ವೀವಿ-ರೂ ರೂ ಪಾಕ್ಷಕ್ಷ ವೆನುತ್ತೆ ಮರವಂದು॥

ಪೆಸರ್ಗೊಳುವ ಮೊದಲಕ್ಕರದೊಳೆ ಹರುಷಂ ಮೂಡಿ।
ಮಿಸುಗುವೆರಡನೆಯಕ್ಕರದೊಳು ಸುಖವಕ್ಕಾಡಿ॥

ಮೂರನೆಯ ವರ್ಣದೊಳ್ಕರೆದು ಪುಳಕಂ ನೆಗೆದು।
ಮೀರಿ ನಾಲ್ಕನೆಯಕ್ಕರದೊಳೆ ಮನಮುವನೊಳಿರಿಸಿ॥

ಏನೆನ್ನ ನಚ್ಚು ಶಿವಭಕ್ತಿ ಪೆರ್ಚಲ್ಕಂದು।
ಆನಂದ ರಸದೆ ನಾಲ್ಕಕ್ಕರಂ ತಾನಂದು॥

ನಾಲಗೆಯ ಮೇಲೆ ಹೊರಳುತ್ತೆ ಸಡಿಲುತ್ತ ಮಿರೆ।
ಲೀಲೆಯಿಂದಾನಂದದಾಶ್ರು ಪುಳಕಂ ನೆಗೆದು॥

ಮುತ್ತಿದರಿಷಡ್ವರ್ಗವತ್ತ ಸಾರುತ್ತ ಮಿರೆ।
ಹತ್ತಿರ್ದ ತಾಪತ್ರಯಂ ತಣ್ಣನಾಗುತಿರೆ॥

ಮನವು ನಿಮ್ಮಡಿಗೆರಗಿ ಬುದ್ಧಿಯದು ತರ್ಕೈಸಿ।
ನೆನಹು ನಿಮ್ಮೊಳು ಪುಗಲು ಚಿತ್ತವೆರಡಿಲ್ಲೆನಿಸಿ॥

ನಿನ್ನ ನಿಜವೆನ್ನ ಜೀವವನಿಂಬುಗೊಂಡಿರಲು ।
ನಿನ್ನ ರೂಪೆನ್ನ ಕಣ್ಗಳನಿಂಬುಗೊಂಡಿರಲು ॥
ನಿನ್ನ ನುತಿಯೆನ್ನ ಜಿಹ್ವೆಯುನಿಂಬುಗೊಂಡಿರಲು ।
ನಿನ್ನ ಜಪವೆನ್ನ ಕರ್ಣವನಿಂಬುಗೊಂಡಿರಲು ॥
ನಿನ್ನಂಗವೆನ್ನ ಸರ್ವಾಂಗವಂ ಪರ್ಬಿರಲು ।
ನಿನ್ನ ನೆನಹೆನ್ನೆದೆಯೊಳೊಚ್ಚತಂಗೊಂಡಿರಲು ॥
ಇಂತು ನೀವೆನ್ನನೊಚ್ಚತವಾಗಿ ಕೈಕೊಂಡು ।
ಸಂತಸದೊಳಾ ನಿನ್ನನಗಲದೆ ಮನಂಗೊಂಡು ॥
ಅರ್ಚಿಸುತ್ತಿರ್ಪುದಂ ಕರುಣಿಸುವದೆಲೆ ದೇವ।
ನಚ್ಚಿ ನಲಿದಿರ್ಪುದಂ ಕರುಣಿಸುವದೆಲೆ ದೇವ॥
ಮಚ್ಚಿ ಮರೆದಿರ್ಪುದಂ ಕರುಣಿಸುವದೆಲೆ ದೇವ ।
ದೇವ ಬೋಳಿಯರರಸ ದೇವ ಕರುಣಿಗಳರಸ ॥
ದೇವ ದಾನಿಗಳರಸ ದೇವ ಮಾನಿಗಳರಸ ।
ಹೆಂಪಿಡಿದಮರ ವೃಕ್ಷ ಹಂಪೆಯ ವಿರೂಪಾಕ್ಷ॥
ಬೇಡುವೆನಿದಂ ದೇವ ಮಾಡುವುದಿದಂ ದೇವ ।
ಶಿಶುವೆಂದು ನೋಡುವದು ಪಶುವೆಂದು ಕೂಡುವದು ॥
ವಿಷಯದಿಂ ನೊಂದಪೆಂ ಪಸಿವಿಂದ ಬೆಂದಪೆಂ ।
ಕಾಮದೊಳ್ಕಂದಿಪೆಂ ತಾಮಸದೊಳೊಂದಿದೆಂ ॥
ಮೋಹದಿಂ ಮುಗ್ಗಿದೆಂ ದೇಹದಿಂ ತಗ್ಗಿದೆಂ ।
ಏವೆಂ ಮಹಾದೇವ ಕಾವುದು ಮಹಾದೇವ ॥
ಆರನೆಂಬೆಂ ದೇವ ಆರುಂಟು ಎಲೆ ದೇವ ।
ಎನಗೆ ಹೊನ್ನುಂ ನೀನೆ ಎನಗೆ ಚನ್ನುಂ ನೀನೆ ॥
ಎನಗೆ ಕುಲವುಂ ನೀನೆ ಎನಗೆ ಬಲವುಂ ನೀನೆ ।
ಎನಗೆ ಸರ್ವಂ ನೀನೆ ಎನಗೆ ಗರ್ವಂ ನೀನೆ ॥
ಎನಗೆ ಮಾತೆಯು ನೀನೆ ಎನಗೆ ಪಿತನುಂ ನೀನೆ ।
ಭವಭವಾಂತರದೊಳಂ ನಿನ್ನನರ್ಚಿಸುತಿರ್ಪ ॥

ತವೆಚನ್ನ ಭಕ್ತಿಯಂ ಕರುಣಿ ಕರುಣಿಸು ಬೊಪ್ಪ।
ರಕ್ಷಿಸು ವಿರೂಪಾಕ್ಷ ಶಿಕ್ಷಿಸು ವಿರೂಪಾಕ್ಷ॥
ದಯೆಗೆಯ್ವಿರೂಪಾಕ್ಷ ಭಯಹರ ವಿರೂಪಾಕ್ಷ।
ಜಯ ಜಯ ವಿರೂಪಾಕ್ಷ ನಮಸ್ತೇನಮಃ॥

ಕಂದ॥ ಅಕ್ಷಮನಳಿಪಂ ವಾಯಾ।
ಪಕ್ಷನು ನಾಂ ನಿಮ್ಮನೊಲ್ದು ಪೊರ್ದಿದೆನಭವಾ॥
ರಕ್ಷಿಸು ರಕ್ಷಿಸು ರಕ್ಷಿಸು
ರಕ್ಷಿಸು ಹೋ ದೇವ ಹಂಪೆಯ ವಿರೂಪಾಕ್ಷ

---

# ವೀರಶೈವ ಮತದಲ್ಲಿ ಬಸವೇಶನ ಪ್ರಾಮುಖ್ಯತೆ ಮತದ ಪ್ರಾಚೀನತೆಯು ವಿಚಾರ.

(ಲೇಖಕ:—ಜೀರಗೆ ಬಸವಲಿಂಗಪ್ಪ ರಿಟೈರ್ಡ್ ಹೈಕೋರ್ಟ್ ಹೆಡ್ ಟ್ರಾನ್ಸ್ಲೇಟರ್,
ಅರಳೇಪೇಟೆ, ಬೆಂಗಳೂರು ಸಿಟಿ.)

---

ವೀರಶೈವ ಮತವು ಯಾವಾಗ ಆಯಿತೆಂಬ ವಿಚಾರ ಇನ್ನೂ ಯಾರಿಂದಲೂ ನಿರ್ಣಯವಾಗಲಿಲ್ಲ. ಈ ವಿಚಾರಕ್ಕೆ ಯಾರು ಪ್ರವೇಶ ಮಾಡಿದರೂ ಎಲ್ಲರೂ ಅನುಮಾನದ ಮಾತುಗಳನ್ನಾಡುತ್ತಾರೆಯೇ ಹೊರ್ತು, ನಿರ್ಣಯಿಸಿ ಹೇಳುವದಕ್ಕೆ ಯಾರ ಕೈಯಿಂದಲೂ ಆಗುವ ದಿಲ್ಲ. "ಇರಲಿಕ್ಕೆಬೇಕು," "ಊಹಿಸಲವಕಾಶವಿದೆ," "ಯಾಕಾಗಬಾರದು"— ಎಂಬ ಮೊದಲಾದ ಮಾತುಗಳಿಂದ ಉಪಸಂಹಾರಗಳನ್ನು ಮಾಡಬೇಕಾಗಿದೆ.

ವೀರಶೈವ ಮತದ ಪ್ರಾಚೀನತಾ ಶೋಧನೆಗೆ ಬಹಳವಾಗಿ ನಾವು ಶ್ರಮ ತೆಗೆದುಕೊಳ್ಳಬೇಕಾಗಿದೆ. ಇಂದಿನ ದಿನಕ್ಕೆ ನಿನ್ನೆಯ ದಿನದ ವಿಚಾರವು ಪ್ರಾಚೀನವಾಗಿಯೇ ಆಗುತ್ತದೆ. ನಮಗೆ ಎಷ್ಟು ಪ್ರಾಚೀನತ್ವವು ಸತ್ಯಾಂಶದಿಂದ ದೊರೆಕೊಳ್ಳುತ್ತದೊ ಅಷ್ಟು ಪ್ರಾಚೀನತ್ವಕ್ಕೆ ನಾವು ಸಂತುಷ್ಟ ಪಡಬೇಕಾಗುತ್ತದೆ. ಇದಕ್ಕೋಸ್ಕರ ನಾವು ಊಹೆಗಳನ್ನು ಕಟ್ಟಿದರೆ ಏನೂ ಗೊತ್ತಾಗುವದಿಲ್ಲ. ಪಾಶ್ಚಾತ್ಯ ಪಂಡಿತರು ಒಪ್ಪುವಂತಿರಬೇಕು.

ವೀರಶೈವ ಮತವೆಂಬ ವಿಯನ್ಮಂಡಳಕ್ಕೆ ಬಸವೇಶನು ದಿಶೆಗಳನ್ನು ತೋರಿಸತಕ್ಕ ಧೃವಮಂಡಲದಂತಿರುತ್ತಾನೆ. ವೀರಶೈವದ ಹಿಂದಿನ ವಿಚಾರ, ವೀರಶೈವದ ಮುಂದಿನ ವಿಚಾರಗಳನ್ನು ತಿಳಿಯುವದಕ್ಕೆ ಬಸವನನ್ನು ಮಧ್ಯಗತ ದೃಶ್ಯಾಂತ ಸ್ತಂಭವನ್ನಾಗಿ ಮಾಡಿಕೊಂಡೇ ತೀರಬೇಕು.

ವೀರಶೈವದ ಚರಿತ್ರಾಂಶಗಳೆಲ್ಲವೂ ಬಸವ ಮಹಾ ಪ್ರಭುವಿನಿಂದೀಚೆಗೇನೇ ಹೇರಳವಾಗಿ ದೃಗ್ಗೋಚರವಾಗಿ ನಡೆದು ಬಂದಿರುತ್ತವೆ. ಬಸವದೇವರಿಗಿಂತ ಮೊದಲು ಚಾರಿತ್ರ ಪ್ರಮಾಣಗಳು ಬಲವಾದವುಗಳು ಅತ್ಯಂತ ವಿರಳವಾಗಿ ಶಿಕ್ಕುತ್ತವೆ. ಇದು ನಿವಾರಿಸಲಶಕ್ಯವಾದ ಸಂಗತಿಯಾಗಿದೆ. ಬಸವ ಸ್ವಾಮಿಯು ಮತಸ್ಥಾಪಕನೆಂದು ಯೋಗಜಾಗಮವು ಅನಾದಿ ಭಕ್ತ ಪ್ರವಚನದಿಂದ ಸೂಚಿಸುತ್ತದೆ. ಹಲವು ಗ್ರಂಥ

ಗಳು ಬಸವನು ವೀರಶೈವ ಮತಸ್ಥಾಪಕನೆಂದು ಬಿಚ್ಚಿ ಹೇಳುತ್ತವೆ. ಹಿಂದಿನಿಂದಲೂ ಬಸವೇಶನೇ ವೀರಶೈವ ಮತಸ್ಥಾಪಕನೆಂದು ಜನಗಳಲ್ಲಿ ರೂಢಿ ವಾಕ್ಯವಿರುತ್ತದೆ. ಹೇಗೆಂದರೆ:—

"ಬಸವನಾ ಸಾಂಪ್ರದಾಯಕರು ನಾವು॥ ಶಶಿಧರನಾ ಶರಣರು ನಾವು॥ ಅಸಮಾಕ್ಷನಾ ಲಾಭವ ಗಳಿಸಿಕೊಂಡುಣುವಂತ ಆದಿಬಣಜಿಗರು ನಾವು" ಎಂದು ಹೇಳುವ ವಾಡಿಕೆಯಿದೆ.

ಈಗಲೂ ಬ್ರಾಹ್ಮಣ್ಯ ಭಿಕ್ಷಾರವಕ್ಕೆ ದೂರವಾಗಿರುವ ಹೈದರಾಬಾದು ಸೀಮೆಯಲ್ಲಿ ವೀರಶೈವರು ಲಗ್ನಪತ್ರಿಕೆಗಳನ್ನು ಬರೆಯಬೇಕಾದರೆ ಹೀಗೆ ಬರೆಯುತ್ತಾರೆ:—

"ಬಸವೇಶ್ವರಾಂಶೀಭೂತರಪ್ಪ ಇಂತವನ ಮಗನಿಗೆ ಇಂತವರ ಮಗಳನ್ನು ಕೊಟ್ಟು"— ಎಂದು ಬರೆಯುತ್ತಾರೆ. ಅವರನ್ನು ಕೇಳಿದರೆ ಬಸವೇಶ್ವರನು ವೀರಶೈವ ಮತಸ್ಥಾಪಕನೆಂದು ಹೇಳುತ್ತಾರೆ.

ವೀರಶೈವರು ಒಬ್ಬರಿಗೊಬ್ಬರು ಕಾಗದ ಬರೆಯಬೇಕಾದರೆ ಹೀಗೆ ಬರೆಯುವ ವಾಡಿಕೆ ಇರುತ್ತದೆ. ಹೇಗೆಂದರೆ:—

"ಶ್ರೀಮದಷ್ಟಾವರಣ ಪಂಚಾಚಾರ ಷಟ್ಸ್ಥಲ ನಿರತರಾದಂತ ಶ್ರೀಮದ್ಬಸವಾದಿ ಪ್ರಮಥ ಮಾರ್ಗಾನುವರ್ತಿಗಳಾದಂತ ಇಂತವರಿಗೆ"— ಎಂದು ಬರೆಯುತ್ತಾರೆ. ಈ ವಿಚಾರವನ್ನು ಯಾವದಾದರೂ ಕಾಗದಗಳನ್ನು ತೆಗೆದುಕೊಂಡು ನೋಡಿದರೆ ಗೊತ್ತಾಗುತ್ತದೆ.

ಈ ರೀತಿಯಾಗಿ ಕಲ್ಯಾಣದ ಬಸವ ದಂಡನಾಯಕನ ನಾಮಭಾಸ್ಕರನು ಲೋಕವನ್ನೆಲ್ಲ ಹರಡಿಕೊಂಡು ಜಗದ್ಭಾಗವನ್ನೆಲ್ಲ ಪ್ರಕಾಶಗೊಳಿಸುತ್ತಿದ್ದಾನೆ.

ಮೊದಲಿನಿಂದಲೂ ಬಸವ ಮಹಾ ಸ್ವಾಮಿಯು ವೀರಶೈವರಿಂದ ಮತಸ್ಥಾಪಕನೆಂದು ಕರೆಯಲ್ಪಟ್ಟಿರುತ್ತಾನೆ.

ಈ ಕಾಲದಲ್ಲಿ ಕೆಲವರು ಬಸವೇಶನನ್ನು ಮತಸ್ಥಾಪಕನೆಂದರೆ ಅದಕ್ಕೆ ಆಕ್ಷೇಪಗಳನ್ನು ಒಡ್ಡುತ್ತಾರೆ. ಅವರು ಹೇಳುವದೇನೆಂದರೆ—

"ಬಸವೇಶ್ವರನನ್ನು ಮತಸ್ಥಾಪಕನೆಂದರೆ, ವೀರಶೈವ ಮತವು ಅರ್ವಾಚೀನವಾಯಿತೆಂದು ಅರ್ಥವಾಗುತ್ತದೆ. ಇದು ಕುಂದಕವಲ್ಲವೆ?"— ಎಂದು ಹೇಳುತ್ತಾರೆ. ಇದು ನ್ಯಾಯವಾದ ಆಕ್ಷೇಪವೆಂದು ನಾನು ತಿಳಿ

ಯುವದಿಲ್ಲ ಹಿಂದು ಮುಂದಿನ ವಿಚಾರಕ್ಕೋಸ್ಕರ ನಾವು ಸತ್ಯಾಂಶ ವನ್ನು ಒತ್ತಟ್ಟಿಗೆ ಮಡಗಬೇಕೆ?

ಪೂರ್ವದ ಗ್ರಂಥಕಾರರು ಹೊಸದಾಗಿ ಮತ ಹುಟ್ಟಿತೆಂಬರ್ಥದಲ್ಲಿ ಬಸವೇಶನನ್ನು ಮತಸ್ಥಾಪಕನೆಂದು ಬರೆದಿರುವದಿಲ್ಲ. ಬಸವನಿಗಿಂತಲೂ ಮೊದಲು ಅತಿ ವಿರಳವಾಗಿದ್ದ ವೀರಶೈವವನ್ನು ಬಸವನು ಪ್ರಬಲಗೊಳಿಸಿ ಅದು ಲೋಕದ ಕಣ್ಣಿಗೆ ಕಾಣಿಸುವಂತೆ ಮಾಡಿದುದರಿಂದಲೂ ವೀರಶೈವದ ವಿಚಾರದಲ್ಲಿ ಕೆಲಸ ಮಾಡಿದವರಲ್ಲಿ ಬಸವನೇ ಅಗ್ರಗಣ್ಯನಾದುದರಿಂದಲೂ, ಯೋಗಜಾಗಮದಲ್ಲಿ – "ಅನಾದಿ ಭಕ್ತರೂಪೇಣ ಭಗವಾನ್ ಪರಮಶ್ಶಿವಃ ॥ ಪಂಚಾಚಾರಾಂಶ್ಚಷಡ್ಸ್ಥಲಾಣ್ಯಷ್ಟಾವರಣಾನಿಚ ॥ ಲಿಂಗಾಂಗ ಸಾಮರಸ್ಯಂಚ ಮುಕ್ತಿಮಾಹಜಗದ್ಗುರುಃ ॥" ಎಂದು ಹೇಳಿರುವದರಿಂದಲೂ, ಶಿವನು ಆಗಮಗಳನ್ನು ಹೇಳಿದಂತೆ ಬಸವಪ್ರಭುವು ಇತರ ಶಿವಶರಣರ ಜತೆಗೆ ವಚನ ಮಹಾ ಶಾಸ್ತ್ರವನ್ನು ಹೇಳಿದುದರಿಂದಲೂ, ಷಟ್ಸ್ಥಲವು ಬಸವೇಶನಿಂದಿಚೆಗೇನೇ ವಿಶ್ವದಲ್ಲಿ ಪ್ರಸರಿಸಲ್ಪಟ್ಟಿದ್ದರಿಂದಲೂ ಬಸವನೇ ವೀರಶೈವ ಮತಸ್ಥಾಪಕನೆಂದು ಕರೆಯಲ್ಪಟ್ಟಿರುತ್ತಾನೆ.

ಬಸವನಿಗಿಂತಲೂ ಮೊದಲು ವೀರಶೈವವು ಪ್ರಬೋಧಿಸಲ್ಪಟ್ಟಿತೆಂಬುದಕ್ಕೆ ಪ್ರಬಲವಾದ ಚರಿತ್ರಾಂಶಗಳು ಬಹು ವಿಧದಲ್ಲಿ ದಗ್ಗೋಚರವಾಗುವದಿಲ್ಲ.

ಬಸವನಿಗಿಂತಲೂ ಮೊದಲು ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಸಕಲೇಶ ಮಾದರಸ ಮೊದಲಾದ ಕೆಲವರು ವೀರಶೈವ ತತ್ವ ಸಂಬಂಧವಾಗಿ ಕೆಲಸ ಮಾಡಿರುವದು ಕಂಡುಬರುತ್ತದೆ.

ಬಸವನ ಕಾಲದಲ್ಲೂ ಬಸವನ ಸಹೋದ್ಯೋಗಿಗಳಾಗಿ ಶ್ರೀ ಮದಲ್ಲಮಪ್ರಭುದೇವರೂ, ಚನ್ನಬಸವಣ್ಣನವರೂ, ಸಿದ್ಧರಾಮೇಶ್ವರರೂ, ರೇವಣಸಿದ್ಧರೂ, ಮರುಳಸಿದ್ಧರೂ, ಪಂಡಿತಾರಾಧ್ಯರೂ, ಏಕೋರಾಮರೂ ಕೂಡ ಬಹಳವಾಗಿ ಕೆಲಸ ಮಾಡಿರುತ್ತಾರೆ. ಆದರೂ ಇವರುಗಳೊಳಗೆಲ್ಲ ಬಸವನು ಮಾರ್ಗದರ್ಶಕನಾದದರಿಂದ ಮತಸ್ಥಾಪಕತ್ವದ ಕೀರ್ತಿಯು ಬಸವನಿಗೆ ಬಂದಂತೆ ಕಾಣುತ್ತದೆ. ಈ ಕಾರಣದಿಂದಲೇ— ಯಾವ ವೀರಶೈವ ಗ್ರಂಥಗಳನ್ನು ನೋಡಿದರೂ— ಮೊದಲು ಬಸವ, ಚನ್ನಬಸವ, ಅಲ್ಲಮರ ಸ್ತುತಿ ಮಾಡಿದ ನಂತರ ರೇವಣಸಿದ್ಧ ಮೊದಲಾದವರ ಸ್ತುತಿ

ಗಳು ಬರುತ್ತವೆ. ಕೆಲವು ಗ್ರಂಥಗಳಲ್ಲಿ ಬಸವ, ಚನ್ನಬಸವ, ಅಲ್ಲಮರ ಹೊರತಾಗಿ ಇತರರ ಸ್ತುತಿಯೇ ಇರುವದಿಲ್ಲ.

ಈ ವಿಚಾರವನ್ನು ನಾನು ಬಸವನೊಬ್ಬನಿಗೇನೇ ಶ್ರೇಷ್ಠತ್ವವನ್ನು ಕೊಡುವದಕ್ಕೆ ಬರೆದಿರುತ್ತೇನೆಂದು ಯಾರೂ ಭಾವಿಸಕೂಡದು. ಸತ್ಯಾಂಶ ನನ್ನು ಮುಂದಿಡುವದಕ್ಕೋಸ್ಕರ ಈ ವಿಚಾರವನ್ನು ಬರೆಯಬೇಕಾಯಿತು. ಸ್ವಲ್ಪ ಹೆಚ್ಚು ಕಡಿಮೆ ಅವರವರು ಮಾಡಿದ ಕೆಲಸಗಳ ಮೇಲೆ ಗಣನೆ ಮಾಡಿ ನೋಡಿದರೆ— ದೇವರದಾಸಿಮಯ್ಯನವರು, ಶಂಕರದಾಸಿಮಯ್ಯ ನವರು, ಬಸವಣ್ಣನವರು, ಚನ್ನಬಸವಣ್ಣನವರು, ಅಲ್ಲಮ ಪ್ರಭುದೇವರು, ಮರುಳಸಿದ್ಧರು, ರೇವಣಸಿದ್ಧರು, ಏಕೋರಾಮರು, ಪಂಡಿತಾರಾಧ್ಯರು— ಇವರೆಲ್ಲರೂ ಮೇಲಿನ ಅರ್ಥದಲ್ಲಿ ವೀರಶೈವ ಮತಸ್ಥಾಪಕರೆಂದು ಹೇಳಬ ಹುದು. ಆದರೂ ಹೆಚ್ಚಿನ ಪ್ರಖ್ಯಾತಿಯು ಬಸವೇಶನಿಗೆ ಬಂದುದರಿಂದ, ಬಸವೇಶನನ್ನು ಮತಸ್ಥಾಪಕನೆಂದು ಹೇಳುವ ವಾಡಿಕೆ ಬಂದಿರುತ್ತದೆ.

ಇದು ಲೋಕವಿಧಾನ. ಇದು ತನಗೆ ತಾನೇ ಆಗುವ ಕಾರ್ಯ. ಇದಕ್ಕೆ ಈಗಳ ನಿದರ್ಶನವನ್ನು ತೆಗೆದುಕೊಳ್ಳಿರಿ. ಮಹಾತ್ಮಾ ಗಾಂಧಿ ಯವರಗಿಂತಲೂ ಮುಂಚೆ ರಾಜಕೀಯ ವಿಚಾರದಲ್ಲಿ ವೈ. ಗೋಖಲೆ, ವೈ. ತಿಲಕ, ವೈ. ದಾದಾಬಾಯಿ ನವರೋಜಿಯವರೇ ಮೊದಲಾದವರು ಕೆಲಸ ಮಾಡಿದಾಗ್ಯೂ, ಮಹಾತ್ಮಾ ಗಾಂಧಿಯವರಿಗೆ ಹೆಚ್ಚು ಕೀರ್ತಿಯು ಬಂದು ಅವರೇ ಅಗ್ರಗಣ್ಯರಾಗಿ ಎಣಿಸಲ್ಪಟ್ಟಿರುತ್ತಾರೆ.

ಈ ಮೇಲ್ಕಂಡ ಸಹಜವಾದ ಕಾರಣಗಳಿಂದ ಬಸವೇಶನನ್ನು ಮತ ಸ್ಥಾಪಕನೆಂದು ಹಿಂದಿನವರು ಹೇಳಿರುವ ಪ್ರಕಾರ ಈಗ ಹೇಳಿದರೆ— ಬಸವಸ್ವಾಮಿಗಿಂತಲೂ ಮೊದಲು ವೀರಶೈವ ಮತವಿದ್ದಿಲ್ಲವೆಂದು ಹೇಳಿದ ಹಾಗಾಗುವದಿಲ್ಲ. ದೇವರದಾಸಿಮಯ್ಯ ಮತ್ತು ಶಂಕರದಾಸಿಮಯ್ಯನವರು ಬಸವೇಶನಿಗಿಂತ ಮೊದಲಿನವರಾಗಿರುತ್ತಾರೆ. ಇದೂ ಅಲ್ಲದೆ ಬಸವೇಶನಿ ಗಿಂತಲೂ ಮೊದಲು ವೀರಶೈವವು ಇತ್ತೆಂಬುದಕ್ಕೆ ತಕ್ಕಮಟ್ಟಿನ ಚಾರಿತ್ರ ಪ್ರಮಾಣಗಳು ಶಿಕ್ಕುತ್ತವೆ. *Professor H. H. Wilson* ಸಾಹೇ ಬರು ತಮ್ಮ *Hindu Religions* ಎಂಬ ಪುಸ್ತಕದಲ್ಲಿ ಶ್ರೀ ಶಂಕರಾ ಚಾರ್ಯರ ಸನ್ನಿಧಿ ಶಿಷ್ಯ ಆನಂದಗಿರಿ ಎಂಬವರಿಂದ ರಚಿಸಲ್ಪಟ್ಟಿರುವ ಶಂಕರ ವಿಜಯವೆಂಬ ಗ್ರಂಥವು ಶಂಕರಾಚಾರ್ಯರ ಕಾಲದ್ದೆಂತಲೂ, ಅದರಲ್ಲಿ ಆರು ವಿಧ ಶೈವಗಳು ಬರೆಯಲ್ಪಟ್ಟಿರುವದರೊಳಗೆ— ಎರಡು

ತೋಳುಗಳ ಮೇಲೂ ಲಿಂಗ ಮುದ್ರೆಯನ್ನು ಹಾಕಿಕೊಂಡಿರುವ ಶೈವರೆಂಬವರೂ, ಹಣೆಯಲ್ಲಿ ತ್ರಿಶೂಲ ಮುದ್ರೆಯುಳ್ಳ ರೌದ್ರರೆಂಬವರೂ, ತೋಳುಗಳ ಮೇಲೆ ಡಮರುವನ್ನು ಧರಿಸುತ್ತಿದ್ದ ಉಗ್ರರೆಂಬವರೂ, ಹಣೆಯಲ್ಲಿ ಲಿಂಗ ಮುದ್ರೆಯನ್ನು ಹಾಕಿಕೊಳ್ಳುತ್ತಿದ್ದ ಭಕ್ತರೆಂಬವರೂ, ತಲೆಯ ಮೇಲೆ ಲಿಂಗ ವಿಗ್ರಹವನ್ನು ಹೊತ್ತುಕೊಳ್ಳುತ್ತಿರ್ದ ಜಂಗಮರೆಂಬವರೂ, ಹಣೆ, ಎದೆ, ಹೊಕ್ಕಳು, ತೋಳುಗಳ ಮೇಲೆ ಲಿಂಗ ಮುದ್ರೆಯನ್ನು ಹಾಕಿಕೊಳ್ಳುತ್ತಿದ್ದ ಪಾಶುಪತರೆಂಬವರೂ ಇದ್ದರೆಂತಲೂ, ಇದನ್ನು ಪ್ರಮಾಣವನ್ನಾಗಿ ಅಂಗೀಕರಿಸಬಹುದೆಂತಲೂ ಬರೆದಿರುತ್ತಾರೆ. ಮುದ್ರಾರೂಪ ಮತ್ತು ವಿಗ್ರಹರೂಪವಾದ ಲಿಂಗಧಾರಣವಿತ್ತೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಭಕ್ತ, ಜಂಗಮ ಎಂಬ ಹೆಸರೂ ಇದ್ದಂತೆ ಸ್ಪಷ್ಟವಾಗುತ್ತದೆ. ಇದನ್ನು ತಕ್ಕಮಟ್ಟಿನ ಚಾರಿತ್ರ ಪ್ರಮಾಣವನ್ನಾಗಿ ಅಂಗೀಕರಿಸಬಹುದಾಗಿದೆ. ಶ್ರೀ ಶಂಕರಾಚಾರ್ಯರಿದ್ದದ್ದು ಕ್ರಿ ಶ. ೮೦೦ ರಲ್ಲೆಂದು ಪಂಡಿತರು ಗಣಿಸಿರುತ್ತಾರೆ. ಆದದರಿಂದ ಶಂಕರಾಚಾರ್ಯರ ಕಾಲದಲ್ಲಿ ಲಿಂಗ ಧಾರಣ ಪದ್ಧತಿ ಇತ್ತೆಂದು ಹೇಳಬಹುದಾಗಿದೆ.

ಕ್ರಿ. ಶ. ೫೦೦ ರಲ್ಲಿ ಬರೆಯಲ್ಪಟ್ಟ ಒಂದು ಶಿಲಾಶಾಸನದಲ್ಲಿ ವಾಕಟಕ ರಾಜಪುತ್ರನು ತನ್ನ ಹೆಗಲ ಮೇಲೆ ಲಿಂಗವನ್ನು ಧಾರಣಮಾಡಿ ಶಂಭುವನ್ನು ಪ್ರೀತಿ ಮಾಡಿದನೆಂದು ಹೇಳಿರುವದಾಗಿ ಶಿವಾನುಭವದಿಂದ ತಿಳಿದು ಬರುತ್ತದೆ. ಇದು ಯೋಗ್ಯವಾದ ಚಾರಿತ್ರ ಪ್ರಮಾಣವಾಗಿ ಹೇಳಬಹುದಾಗಿದೆ.

ಈ ಚಾರಿತ್ರ ವಿಚಾರಗಳನ್ನು ನೋಡಿದರೆ ಕ್ರಿ. ಶ. ಐದನೇ ಶತಮಾನದಿಂದಲೂ ಲಿಂಗವನ್ನು ದೇಹದ ಮೇಲೆ ಧರಿಸುವ ಅಥವ ಲಿಂಗದ ಆಕಾರವನ್ನು ದೇಹದ ಬೇರೆ ಬೇರೆ ಭಾಗಗಳಲ್ಲಿ ಮುದ್ರಿಸಿಕೊಳ್ಳುವ ಸಂಪ್ರದಾಯವು ನಡೆದು ಬಂದಿದೆ ಯೆಂದು ಹೇಳಬಹುದಾಗಿದೆ.

ಆದರೆ ಈ ರೀತಿ ಲಿಂಗವನ್ನು ಧರಿಸುತ್ತಿದ್ದವರು ಪ್ರತ್ಯೇಕ ಒಂದು ಪಂಗಡದವರಾಗಿರದೆ— ಶೈವದಲ್ಲಿ ಅಡಗಿ ಶೈವರೆಂದೇ ಕರೆದುಕೊಳ್ಳುತ್ತಿದ್ದಂತೆ ಕಾಣಿಸುತ್ತದೆ.

ಈ ಲಿಂಗಧಾರಣವು ಒಂದು ಪ್ರತ್ಯೇಕ ಗುಂಪಾಗಿ ಮಾಡಲ್ಪಟ್ಟು ಅನೇಕ ಉದಾರ ತತ್ವಗಳಿಂದೊಡಗೂಡಿದ್ದು ದೇವರದಾಸಿಮಯ್ಯ, ಶಂಕರದಾಸಿಮಯ್ಯ ಬಸವಾದಿಗಳ ಕಾಲಕ್ಕೆಂದು ನನಗೆ ತೋರುತ್ತದೆ. ಈ

ಕಾರಣದಿಂದ ಬಸವ ದಂಡನಾಥನು ವೀರಶೈವಮತಸ್ಥಾಪಕನೆಂದು ಕರೆಯಲ್ಪಟ್ಟಿರುವದಾಗಿ ನನಗೆ ಕಾಣುತ್ತದೆ.

ಲಿಂಗಧಾರಣವು ಬಸವೇಶನಿಗಿಂತಲೂ ಪೂರ್ವದಿಂದಲೂ ಬಂದಿರುವಂತೆ ತೋರುವದಾದಾಗ್ಯು, ಅದರ ಲೋಕಪ್ರಕಟನೆಗೆ ಕೆಲಸಮಾಡಿದವರಲ್ಲಿ ಬಸವನಾಥನು ಮುಖ್ಯನಾದದ್ದರಿಂದ ಅವನನ್ನು ವೀರಶೈವ ಮತಸ್ಥಾಪಕನೆಂದು ಹಿಂದಿನವರು ಹೇಳಿರುತ್ತಾರೆ. ಈಗಲೂ ನಾವು ಹೇಳಬೇಕಾಗಿದೆ.

ಮೇಲ್ಕಂಡಂತೆ ಲಿಂಗಮುದ್ರೆಗಳನ್ನು ಧರಿಸುವದು, ಲಿಂಗವಿಗ್ರಹಗಳನ್ನು ಧರಿಸುವದು ಯಾರಿಂದ ನಿರ್ಮಿಸಲ್ಪಟ್ಟಿತು, ಯಾವಾಗ ನಿರ್ಮಿಸಲ್ಪಟ್ಟಿತು ಎಂಬುದು ಗೊತ್ತಾಗಿಲ್ಲ. ಅವರವರ ಇಚ್ಛಾನುಸಾರ ಧರಿಸುತ್ತಿದ್ದರೊ ಅಥವಾ ಯಾರಾದರೂ ಒಬ್ಬರು ನಿಯಾಮಕಮಾಡಿದರೊ ಹೇಳುವದಕ್ಕೆ ಬರುವದಿಲ್ಲ. ಯಾರಾದರೂ ಒಬ್ಬರಿಂದ ನಿರ್ಮಿಸಲ್ಪಟ್ಟಿದ್ದರೆ ಅದು ಒಂದು ಪ್ರತ್ಯೇಕ ಮತವಾಗಿ ಬಹು ಪ್ರಸಿದ್ಧವಾಗುತ್ತಿತ್ತು. ಅವರವರ ಇಚ್ಛಾನುಸಾರ ಧರಿಸಿಕೊಂಡು ಲಿಂಗಧಾರಣವು ಶೈವದಲ್ಲಡಗಿ ಬಂದುದರಿಂದ ಬಸವೇಶನ ಕಾಲದವರೆಗೂ ವಿಶ್ವದೃಷ್ಟಿಗೆ ಬೀಳಲಿಲ್ಲ. ಶ್ರೀ ಬಸವೇಶನು ಹಿಂದೆ ಅಗೋಚರವಾಗಿಯೂ, ಅತಿ ವಿರಳವಾಗಿಯೂ ನಡೆದು ಬಂದ ಲಿಂಗಧಾರಣವನ್ನು ಉಪಯೋಗಿಸಿ ಧರ್ಮ ಸುಧಾರಣ ಮತ್ತು ಸಮಾಜ ಸುಧಾರಣ ಕಾರ್ಯವನ್ನು ಮಾಡಿ ಒಂದು ದೊಡ್ಡ ಸಮಾಜವನ್ನೇ ನಿರ್ಮಾಣಮಾಡಿರುತ್ತಾನೆಂಬುವರಲ್ಲಿ ಸಂದೇಹ ಕಾಣುವದಿಲ್ಲ.

ಈ ಅರ್ಥದಲ್ಲಿ ಬಸವ ಮಹಾಪ್ರಭುವು ವೀರಶೈವ ಮತಸ್ಥಾಪಕನಾಗಿರುತ್ತಾನೆ. ಈ ಅರ್ಥದಿಂದಲೇ ಪೂರ್ವ ಪಂಡಿತರು ಬಸವನಿಗೆ ಪ್ರಾಮುಖ್ಯತೆಯನ್ನು ಕೊಟ್ಟು ಅವನನ್ನು ಮತಸ್ಥಾಪಕನೆಂದು ಬರೆದಿರುತ್ತಾರೆ. ಶಿವತತ್ವ ರತ್ನಾಕರದಲ್ಲಿ ಹೀಗೆ ಬರೆದಿರುತ್ತದೆಃ—

"ಧರ್ಮಪ್ರವೃತ್ತಿಂ ಶಿಥಿಲಾಂ ವಿಲೋಕ್ಯ ಚಸನುಂತತಃ ॥
ಅವತೀರ್ಯದಯಾವಶ್ಯೋ ಭಗವಾನ್ ಬಸವೇಶ್ವರಃ ॥
ಧರ್ಮ ಸಂಸ್ಥಾಪಯಾ ಮಾಸ ಸರ್ವಮೇವ ಧರಾತಲೇ ॥
ವೀರಶೈವಮತಂಸ್ಥಾಪ್ಯ ಪ್ರಕಾಶನಮಥಾಕರೂತ್" ॥

ಎಂದು ಬರೆದಿರುತ್ತದೆ.

ಬಸವೇಶನ ಜತೆಗೆ ಚನ್ನಬಸವಣ್ಣನವರು, ಅಲ್ಲಮದೇವರು, ರೇವಣಸಿದ್ಧರು, ಮರುಳಸಿದ್ಧರು, ಏಕೋರಾಮರು, ಪಂಡಿತಾರಾಧ್ಯರು ಕೆಲಸ

ಮಾಡಿದರೆಂಬುದಕ್ಕೆ ವೆ॥ *E. P. Rice* ಸಾಹೇಬರು ತಮ್ಮ *Kannada Literature* ಎಂಬ ಗ್ರಂಥದಲ್ಲಿ ಹೀಗೆ ಬರೆದಿರುತ್ತಾರೆ.

"As the Chief credit of Lingayet Revival has been universally attributed to BASAVA, it may be well to state briefly the evidence which shows that he was only one of a number of persons to whom it was due (I) Several of his personal associates are expressly named. The chief of these was CHENNA BASAVA. (II) Revana, Marula Siddha, Panditaradhya, Ekorami tande and Viswaradhya × ×."

ವೀರಶೈವ ಧರ್ಮಪ್ರಸರಣ ಕಾರ್ಯದಲ್ಲಿ ಬಸವೇಶನು ಅಗ್ರಗಣ್ಯನಾಗಿ ಹೆಸರುಪಡೆದಿದ್ದಾಗ್ಯು, ಮೇಲ್ಕಂಡ ಚನ್ನಬಸವ, ಅಲ್ಲಮಪ್ರಭು, ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯರೆಂಬವರು ಮಹತ್ತರವಾಗಿ ಕೆಲಸಮಾಡಿರುತ್ತಾರಾಗಿ ಅವರನ್ನೂ ತತ್ಕಾರ್ಯದಲ್ಲಿ ಭಾಗಿಗಳನ್ನಾಗಿ ಗಣಿಸಿ ಶ್ರೀ ಬಸವಜಯಂತಿಯನ್ನು ಮಾಡುವಂತೆ ಇನ್ನು ಮುಂದೆ ಅಲ್ಲಮಪ್ರಭುದೇವರ ಜಯಂತಿ, ಚನ್ನಬಸವಣ್ಣನವರ ಜಯಂತಿ ರೇವಣಸಿದ್ಧರಜಯಂತಿ, ಮರುಳಸಿದ್ಧರಜಯಂತಿ, ಪಂಡಿತಾರಾಧ್ಯರಜಯಂತಿ, ಏಕೋರಾಮರ ಜಯಂತಿಗಳನ್ನು ಮಾಡಬೇಕು.

ಬಸವಣ್ಣನವರು ಮೊದಲಾದವರು ಷಟ್ಸ್ಥಲಬೋಧಕಗಳಾದ ಅಪ್ರತಿಮ ವಚನಗಳನ್ನು ಬರೆದಿರುವಂತೆ ಪಂಡಿತಾರಾಧ್ಯರು ವಚನವನ್ನು ಬರೆದಿರುವಂತೆ ಪ್ರಾಕ್ತನವಿಮರ್ಶನ ವಿಚಕ್ಷಣ ಮ॥ ರಾ॥ ನರಸಿಂಹಾಚಾರ್ಯರವರ ಕವಿಚರಿತ್ರೆಯಿಂದ ತಿಳಿಯಬರುತ್ತದೆ. ಹಾಗೆಯೇ ರೇವಣಸಿದ್ಧರೂ, ಮರುಳಸಿದ್ಧರೂ, ಏಕೋರಾಮರೂ ವಚನಗಳನ್ನು ಬರೆದಿರುವದು ಶಿಕ್ಕಬಹುದು. ಅವುಗಳು ಶಿಕ್ಕರೆ ಅನೇಕ ವಿಷಯಗಳು ಗೊತ್ತಾಗುತ್ತವೆ.

ವೀರಶೈವ ಮತವೆಂಬ ಮಹಾ ಪುರುಷನಿಗೆ ಶಿವಾಗಮಗಳೂ, ಬಸವಾದಿ ಪ್ರಮಥರ ವಚನಗಳೂ, ಸ್ವತಂತ್ರ ಗ್ರಂಥಗಳೂ ಅಸ್ಥಿ, ಚರ್ಮ, ಮಾಂಸ ಖಂಡಗಳಂತಿರುತ್ತವೆ. ಇವು ನಷ್ಟವಾದರೆ ವೀರಶೈವವೆಂಬ ಮಹಾ ಪುರುಷನೇ ಅಳಿಯುತ್ತಾನೆ.

ಶ್ರೀಯುತ ಹಳಕಟ್ಟಿಯವರು ಬಸವಾದಿ ಪ್ರಮಥರ ವಚನಗಳನ್ನೂ ಸ್ವತಂತ್ರ ಗ್ರಂಥಗಳನ್ನೂ ಹೊರದೆಗೆದು ಮುದ್ರಣಮಾಡಿಸುತ್ತಿರುವದು ವೀರಶೈವಕ್ಕೆ ಮಹದುಪಕಾರವಾಗುತ್ತಲಿವೆ. ಪರಶಿವನು ಈ ಮಹಾತ್ಮರಿಗೆ ಸರ್ವ ವಿಧದಲ್ಲೂ ಜಯವನ್ನುಂಟುಮಾಡಲೆಂದು ಹಾರೈಸುತ್ತೇನೆ.

---

# ವೀರಶೈವ ಮತದ ಬಗ್ಗೆ ಪುರಾತನ ಉಲ್ಲೇಖಗಳು.

(ಲೇಖಕರು:— ವೇ॥ ಶ್ರೀ ಪಂಚಾಕ್ಷರ ಶಾಸ್ತ್ರಿಗಳು ಹಿರೇಮಠ ಶಿರೋಳ
ಜಿ. ಧಾರವಾಡ.)

—※—

ವೀರಶೈವರಿಗೆ ಮುಖ್ಯ ಧರ್ಮವಾದ ಲಿಂಗಧಾರಣದ ಉಲ್ಲೇಖವು ವೇದಾಗಮೋಪನಿಷತ್ತುಗಳಲ್ಲಿ ಬಂದಿದ್ದು ಅವುಗಳ ಕೆಲವು ಉದಾಹರಣೆಗಳನ್ನು ನಾನು ಕೆಳಗೆ ಕೊಡಲು ಪ್ರಯತ್ನಿಸಿದ್ದೇನೆ. ಈ ಉದಾಹರಣೆಗಳನ್ನು ಅನೇಕ ವೀರಶೈವ ಗ್ರಂಥಕಾರರೂ ಸ್ವೀಕರಿಸಿರುವರು.

ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ

(ಋಗ್ವೇದದಲ್ಲಿ ೯ನೇ ಮಂಡಲ ೨ನೇ ಸೂಕ್ತ ೧ನೇ ಋಕ್ಕು)

ಅರ್ಥಃ—ಹೇ! ಬ್ರಹ್ಮಣಸ್ಪತೆ ಬ್ರಹ್ಮಣಃ ಲಿಂಗರೂಪನಾದ ಬ್ರಹ್ಮಕ್ಕೆ ಪತಿ ಅಧಿಷ್ಠಾತೃವಾಗಿರತಕ್ಕವನೇ ತೇ- ನಿನ್ನ ತತ್ ಆ ಬ್ರಹ್ಮಪದ ವಾಚ್ಯವಾದ ಲಿಂಗರೂಪ ಶರೀರವು ಪವಿತ್ರಂ- ಶುಚ್ಯಾ ಶುಚಿ ಕಾಲಗಳಲ್ಲಿಯೂ ಧರಿಸುವದಕ್ಕೆ ಯೋಗ್ಯವಾದುದು. ವಿತತಂ- ಇಷ್ಟಪ್ರಾಣಾದಿ ಭೇದದಿಂದಾಗಲಿ ಭಕ್ತ ಶರೀರ ಭೇದದಿಂದಾಗಲಿ ಬಹು ಪ್ರಕಾರವಾದುದು. ಪ್ರಭುಃ— ನಿಗ್ರಹಾನುಗ್ರಹ ಸಮರ್ಥ ನಾದ ನೀನು ವಿಶ್ವತಃ ಸಮಸ್ತಗಳಾದ ಗಾತ್ರಾಣಿ— ಭಕ್ತ ಶರೀರಗಳನ್ನು ಪರ್ಯೇಷಿ=ವ್ಯಾಪಿಸಿಕೊಂಡಿರುತ್ತಿ. ಹೀಗೆ ಋಕ್ಕಿನ ಅರ್ಥವನ್ನು ಪುರಾತನ ವೀರಶೈವ ಗ್ರಂಥಕಾರರು ಮಾಡಿರುವರು.

ಇದನ್ನೇ ಆಧಾರವಾಗಿಟ್ಟುಕೊಂಡು ಲಿಂಗಪುರಾಣದಲ್ಲಿಯೂ ಇದನ್ನು ಚನ್ನಾಗಿ ಕಾಣಬಹುದು. ಈ ಲಿಂಗಪುರಾಣವು ಲಿಂಗಸನಾತನತ್ವವನ್ನು ಪ್ರಸಿದ್ಧಗೊಳಿಸುವದರಲ್ಲಿ ಮೇಲಾಗಿದೆ. ಈ ಪುರಾಣ ಪ್ರಮಾಣಗಳನ್ನು ಮುಂದೆ ನೋಡೋಣ. ಲಿಂಗದ ವಿಷಯದಲ್ಲಿ ಯಜುರ್ವೇದವು "ಯಾತೇ ರುದ್ರ ಶಿವಾ ತನೂರ ಘೋರಪಾಪ ಕಾಶಿ=ನೀ" (ಯಜುರ್ವೇದ ಶತರುದ್ರೀಯ ಪ್ರಥಮಾನುವಾಕದ ೨ ನೇ ಋಕ್ಕು) ಎಂದು ಬೋಧಿಸುವ ಅನೇಕ ಮಂತ್ರಗಳು ವೇದಗಳಲ್ಲಿ ಸಿಗುತ್ತವೆ.

ಇನ್ನು ಆಗಮಗಳ ಕಡೆಗೆ ಹೊರಳಿದರೆ ಸಾಕು. ಲಿಂಗಧಾರಣ ವಿಷಯಗಳು ಹೇರಳವಾಗಿ ಸಿಕ್ಕುವವು. ವೀರಾಗಮದಲ್ಲಿರುವ ಪ್ರಮಾ

ಣವನ್ನೇ ಮರಿತೋಂಟದಾರ್ಯರು ತಮ್ಮ ವೀರಶೈವ ಪ್ರದೀಪಿಕಾ ಗ್ರಂಥ ದಲ್ಲಿ ಲಿಂಗಲಕ್ಷಣ ನಿರೂಪಣ ಪ್ರಕರಣದಲ್ಲಿ ಸೇರಿಸಿದ್ದಾರೆ.

ಲಿಂಗಮಧ್ಯೆ ಜಗತ್ಸರ್ವಂ ತ್ರೈಲೋಕ್ಯ ಸಚರಾಚರಂ
ಲಿಂಗಬಾಹ್ಯಾತ್ಪರಂನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

ಲಿಂಗ ವಿಷಯವನ್ನೇ ಮುಖ್ಯ ಗುರಿಯಿಟ್ಟುಕೊಂಡ ಉಪನಿಷತ್ತು ಮತ್ತು ಪುರಾಣಗಳ ಪ್ರಮಾಣಗಳೂ ಇರುತ್ತವೆ.

**ಹಂಸೋಪನಿಷತ್.**

ಲಿಂಗಾಂಗ ಶೋಭಾ ಮೋಕ್ಷ ಮಾರ್ಗೈಕ ನಿಷ್ಠಾಃ ।
ಲಿಂಗಾಂಗ ಸಾಮರಸ್ಯಾಚ್ಚ ಶರೀರೆ ಲಿಂಗಧಾರಣಾತ್ ॥

**ಸಿದ್ಧಾಂತ ಶಿಖೋಪನಿಷತ್.**

ಅತ್ಯಾಶ್ರಮಿತ್ವಾತ್ ಗಣವಂಶಜಾನಾಂ ಲಿಂಗಾಂಗ ಸಂಗಿನಾಂ ತತ್ರ ಜನ್ಮಾಂತ ದೀಕ್ಷಾ । ಗಚ್ಛಂಸ್ತಿಷ್ಠನ್ನಿಮಿಷನ್ನುನ್ಮಿಷನ್ಸ್ವಪ್ನ ಜಾಗ್ರನ್ ಲಿಂಗಧಾರೀ ಶುಚಿಃಸ್ಯಾತ್ ॥೧೩॥ (ಸಿ ೧೨-೧೩ ನೇ ಶ್ಲೋಕ).

ಇನ್ನೂ ಅನೇಕ ಗ್ರಂಥಗಳು ಲಿಂಗ, ಲಿಂಗಧಾರಣಾದಿ ವಿಷಯ ವನ್ನು ಪ್ರತಿಪಾದಿಸುತ್ತವೆ. ಪುರಾಣಗಳೆಂದರೆ ನಾಸ್ತಿಕರು ಮೂಗು ಮುರಿ ಯುತ್ತಿರಬಹುದು. ಪುರಾಣಗಳು ಕೇವಲ ಹಳೆಯದಾದ ಕಥೆಗಳ ರಗ ಳೆಯ ಗಂಟಲ್ಲ. ಮಹತ್ತರವಾದ ಅರ್ಥವನ್ನು ಗರ್ಭೀಕರಿಸಿಕೊಂಡಿರುವ ವೇದಾಗಮಗಳಲ್ಲಿರುವ ಸುಲಭವಾದ ಅರ್ಥವನ್ನು ತಿಳಿಯುವದು ಸಾಧ್ಯ ವಲ್ಲವೆಂದು ಕಾಲಕ್ಕೆ ತಕ್ಕಂತೆ ಆರ್ಯ ಮಹರ್ಷಿಗಳು ವೇದಾಗಮೋಪ ನಿಷದಾರ್ಥಗಳ ಸಾರವನ್ನೇ ಅತ್ಯಂತ ಸುಲಭವಾಗಿ ಉದಾಹರಣೆಗಳೊ ಡನೆ ಪುರಾಣರೂಪವಾಗಿ ರಚಿಸಿದ್ದಾರೆ. ನಾವು ಪುರಾಣ ಪ್ರಮಾಣಗ ಳನ್ನು ಹುಡುಕಬೇಕಾದರೆ ಭಗವಾನ್ ವ್ಯಾಸ ಮಹರ್ಷಿಗಳಿಂದ ರಚಿತ ವಾದ ೧೮ ಪುರಾಣಗಳನ್ನಷ್ಟೇ ನೋಡುವದು ಮುಖ್ಯವಾದದ್ದು. ಲಿಂಗ ಪುರಾಣದಲ್ಲಿ—

"ವೇದೇಷು ಶಾಸ್ತ್ರ ಸಂಘೇಷು ಪುರಾಣೇಷ್ವಾಗಮೇಷು ಚ ।
ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣ ಮುತ್ತಮಂ ॥

ಮತ್ತು ಸ್ಕಾಂದ ಪುರಾಣದ ಶಂಕರ ಸಂಹಿತೆಯಲ್ಲಿ.

"ತದೇವ ಹಸ್ತಾಂಬುಜ ಪೀಠ ಮಧ್ಯೇ ನಿಧಾಯ ಲಿಂಗಂ ಪರಮಾತ್ಮಚಿಹ್ನಂ। ೬ ನೇ ಪರಿಚ್ಛೇದ.

ಇದೇ ವಿಷಯದಲ್ಲಿ ಸಿದ್ಧಾಂತ ಶಿಖಾಮಣಿಯು ಲಿಂಗಧಾರಣ ಸ್ಥಲ

"ಲಿಂಗಧಾರಣ ಮಾಖ್ಯಾತಂದ್ವಿಧಾ ಸರ್ವಾರ್ಥಸಾಧಕೈಃ।
ಬಾಹ್ಯ ಮಾಭ್ಯಾಂ ತರಂ ಚೇತಿ ಮುನಿಭಿರ್ಮೋಕ್ಷಕಾಂಕ್ಷಿಭಿಃ॥

ಲಿಂಗಧಾರಣವು ವ್ಯಾಸಾದಿ ಮಹರ್ಷಿಗಳಿಂದ ಕೊಂಡಾಡಲ್ಪಟ್ಟಿರುತ್ತದೆ. ಅದರ ಬಗ್ಗೆಕೆಲವು ಉಲ್ಲೇಖಗಳಿವೆ. ಕಾಶೀಖಂಡದ ೯೫ನೇ ಅದ್ಯಾಯದಲ್ಲಿ--

"ಪಾರಾಶರ್ಯಸ್ತದಾರಭ್ಯ ಶಂಭು ಭಕ್ತಿ ಪರೋಽಭವತ್।
ಲಿಂಗಂ ವ್ಯಾಸೇಶ್ವರಂ ಸ್ಥಾಪ್ಯ ಘಂಟಾಕರ್ಣ ಹ್ರದಾಗ್ರತಃ ॥೬೮॥
ವಿಭೂತಿ ಭೂಷಣೋ ನಿತ್ಯಂ ನಿತ್ಯಂ ರುದ್ರಾಕ್ಷ ಭೂಷಣಃ।
ರುದ್ರಸೂಕ್ತಪರೋ ನಿತ್ಯಂ ನಿತ್ಯಂ ಲಿಂಗಾರ್ಚಕೋಽಭವತ್॥

ಆವರು ಲಿಂಗದ ವಿಷಯದಲ್ಲಿ ಇಟ್ಟಿರುವ ಅಕೃತ್ರಿಮವಾದ ಭಕ್ತಿಯು ಅವರ್ಣನೀಯವಾದದ್ದಿರುವದು. ಅವರು ತಮ್ಮ ಹೆಸರಿನಿಂದಲೇ "ವ್ಯಾಸೇಶ್ವರ" ಯೆಂಬ ಲಿಂಗಮೂರ್ತಿಯನ್ನು ಸ್ಥಾಪಿಸಿ ಘಂಟಾಕರ್ಣ ಶಿವಾಚಾರ್ಯರಿಗೆ ಶಿಷ್ಯರಾಗಿದ್ದರು. ಇವರು ತಾವು ಧರಿಸಿದ ಲಿಂಗ ಮಹಾತ್ಮ್ಯವನ್ನು ಲಿಂಗಪುರಾಣದಲ್ಲಿ ವ್ಯಕ್ತಗೊಳಿಸಿದ್ದಾರೆ. ಲಿಂಗಪುರಾಣದಲ್ಲಿ ಉತ್ತರ ಭಾಗದ ೨೧ ನೇ ಅಧ್ಯಾಯದಲ್ಲಿ--

ವಿಷ್ಣು ಬ್ರಹ್ಮಾದಯೋದೇವಾ ಮುನಯೋ ಗೌತಮಾದಯಃ।
ಧಾರಯಂತಿ ಸದಾ ಲಿಂಗ ಮುತ್ತಮಾಂಗೇ ವಿಶೇಷತಃ ॥೯೬॥

ಹೀಗೆ ಆದೇ ಲಿಂಗ ಪುರಾಣದಲ್ಲಿ ಸ್ಪಷ್ಟವಾಗಿ ಹೇಳಿದ ಈ ಮಹರ್ಷಿಪುಂಗವರ ವಾಕ್ಯವನ್ನು ನಾವು ನೋಡಿದಾಕ್ಷಣವೇ ಸಿದ್ಧಾಂತಶಿಖಾಮಣಿಯಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿದ "ಲಕ್ಷ್ಮ್ಯಾದಿ ಶಕ್ತಯಸ್ಸರ್ವಾ ಶಿವಭಾವವಿಭಾವಿತಾಃ। ಧಾರಯಂತ್ಯಲಿಕಾಗ್ರೇಷು ಶಿವಲಿಂಗ ಮಹರ್ನಿಶಂ" ॥೫೭॥ (ಸಿದ್ಧಾಂತ ಶಿಖಾಮಣಿ ೬ ನೇ ಪರಿಚ್ಛೇದ ಲಿಂಗ ಧಾರಣ ಸ್ಥಳದಲ್ಲಿ) ಯೆಂಬ ಪ್ರಮಾಣವು ನೆನಪಿಗೆ ಬರುತ್ತದೆ. ವಿಷ್ಣು ಬ್ರಹ್ಮಾದಿ ದೇವತೆಗಳೂ ಗೌತುಮಾದಿ ಮುನಿಪುಂಗವರೂ ಅಲ್ಲದೆ ಲಕ್ಷ್ಮೀ ಮೊದಲಾದ ಯಾವತ್ತು ಶಕ್ತಿಗಳೂ ಲಿಂಗಧಾರಣವುಳ್ಳವರಾಗಿದ್ದರೆಂದು ಸಿದ್ಧವಾಗುವದು.

ಒಟ್ಟಿನ ಮೇಲೆ ವೀರಶೈವ ಮತವು ಮೊದಲು ಅಗ್ರಸ್ಥಾನವನ್ನು ಪಡೆದಿರುವದಕ್ಕೆ ಲಿಂಗ ವಿಷಯದ ಬಗ್ಗೆ ಇದ್ದ ಋಕ್ಕುಗಳ ಅಂತರಾರ್ಥ ವನ್ನು ನೋಡಿದರೆ ಈ ಮತವು ಪುರಾತನ ಕಾಲದಿಂದಲೂ ಇತ್ತೆಂದು ಊಹಿಸಲು ಅವಕಾಶವಿದೆ.

ಶ್ರೀ ಶಂಭುಲಿಂಗ ಶಿವಾಚಾರ್ಯ ವಿರಚಿತ ವೈದಿಕ ವಾಙ್ಮಯ ರಹಸ್ಯ ಎಂಬ ಗ್ರಂಥದಲ್ಲಿ ವ್ಯಾಸ, ನಾರದ, ದೂರ್ವಾಸ, ವಸಿಷ್ಠಾದಿ ಮಹ ರ್ಷಿಗಳು ಶಿವದೀಕ್ಷೆಯನ್ನು ಹೊಂದಿ ವೀರಶೈವರಾದ ವಿಷಯವು ಸ್ಪಷ್ಟೀ ಕರಿಸ್ಪಟ್ಟಿದೆ. ಅವರು ಉದಾಹರಿಸಿದ ಮಹಾಭಾರತದ ಅನುಶಾಸನ ಪರ್ವದ ೪೫ ನೇ ಅಧ್ಯಾಯದ ೭೩-೭೪ ನೇ ಶ್ಲೋಕಗಳು ಇದಕ್ಕೆ ಸಹ ಕಾರಿಯಾಗಿವೆ.

ಯಾಜ್ಞವಲ್ಕ್ಯ ಇತಿಖ್ಯಾತಃ ಋಷಿಃ ಪರಮಧಾರ್ಮಿಕಃ
ಆರಾಧ್ಯ ಸ ಮಹಾದೇವಂ ಪ್ರಾಪ್ತವಾನತುಲಂ ಯಶಃ ।೭೩॥
ವೇದವ್ಯಾಸಶ್ಚ ಯೋಗಾತ್ಮಾ ಪರಾಶರ ಸುತೋ ಮುನಿಃ
ಸೋಪಿ ಶಂಕರಮಾರಾಧ್ಯ ಪ್ರಾಪ್ತವಾನ ತುಲಂ ಯ.ಶಃ ॥
ನಾರದೇನ ತು ಭಕ್ತ್ಯಾಸೌ ಭವ ಆರಾಧಿತಃ ಪುರಾ"

ವೇದಾಗಮ ಸಮ್ಮತವಾದ ಈ ವೀರಶೈವ ಮತವನ್ನು ಸ್ಥಾಪಿಸಿದ ಆಚಾರ್ಯರ ವಿಷಯದ ಬಗ್ಗೆ ಆಗಮಗಳಲ್ಲಿ ಅನೇಕ ಪ್ರಮಾಣಗಳು ದೊರೆಯುತ್ತವೆ. ಸೃಷ್ಟಿಭೇದಗಳಲ್ಲಿ ಪ್ರಾಕೃತ, ಅಪ್ರಾಕೃತಯೆಂಬವೆರಡು. ಅಪ್ರಾಕೃತ ಸೃಷ್ಟಿಗೆ ರೇಣುಕಾದಿ ಪಂಚಾಚಾರ್ಯರು. ಪ್ರಾಕೃತಕ್ಕೆ ಬ್ರಹ್ಮನು. ಅಪ್ರಾಕೃತ ಸೃಷ್ಟಿಗೆ ಶಿವಸೃಷ್ಟಿಯೆಂದು ಅನ್ನುವರು. ಈ ಶಿವ ಸೃಷ್ಟಿಯಲ್ಲಿ ವೀರಶೈವ ಮತವು ವಿರಾಜಿಸಿರುವದು. ವೀರಶೈವ ಮತೋ ತ್ಪಾದಕರಾದ ಶ್ರೀ ಜಗದ್ಗುರು ಪಂಚಾಚಾರ್ಯರ ಉತ್ಪತ್ತಿಯ ವಿಷ ಯವನ್ನಷ್ಟು ಉಲ್ಲೇಖಿಸಿದರೆ ಅಪ್ರಸ್ತುತವಾಗಲಾರದು.

ಸುಪ್ರಬೋಧಾಗಮದಲ್ಲಿ " ಮತ್ಪಂಚ ವದನೋದ್ಭೂತಾಃ ಸರ್ವ ಏವ ಗುರೂತ್ತಮಃ । ತತ್ಸೃಷ್ಟಾನಾಂ ಚ ಸರ್ವೇಷಾಂ ತತ್ಸಾಮರ್ಥ್ಯಂ ಕಥಂ ಭವೇತ್ ॥

ಮತ್ತು ಐವರಾಚಾರ್ಯರು ಆಯಾಯ ಲಿಂಗಗಳಲ್ಲಿ ಉದ್ಭವ ರಾದ ಬಗ್ಗೆ ಸ್ವಯಂಭುವಾಗಮದಲ್ಲಿ ಪರಮ ಶಿವನು ಪಾರ್ವತಿಗೆ

" ಪ್ರವಕ್ಷ್ಯಾಮಿ ಭವಿತೃಂಶ್ಚ ಶ್ರುಣುತಜ್ಜ ನನಕ್ರಮಂ ।

**ರೇವಣಸಿದ್ಧ.**

ಶ್ರೀಮದ್ರೇವಣಸಿದ್ಧಸ್ಯ ಕೊಲ್ಲಿಪಾಕಿಪುರೋತ್ತಮೇ ।
ಸೋಮೇಶ ಲಿಂಗಾಜ್ಜನನ ಮಾವಾಸಂ ಕದಳೀಪುರೇ ॥

**ಮರುಳಸಿದ್ಧ.**

ತದ್ವನ್ಮರುಲ ಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶ ಲಿಂಗಾಜ್ಜನನಂ ಸ್ಥಾನ ಮುಜ್ಜಯಿನೀಪುರೇ ॥

**ಏಕೋರಾಮ.**

ದ್ರಾಕ್ಷಾರಾಮಾಖ್ಯ ಸುಕ್ಷೇತ್ರೇ ರಾಮನಾಥಾಖ್ಯ ಲಿಂಗತಃ
ಏಕೋರಾಮಸ್ಯ ಜನನ ಮಾವಾಸಸ್ತು ಹಿಮಾಲಯೇ ॥

**ಪಂಡಿತಾರಾಧ್ಯ.**

ಸುಧಾಕುಂಡಾಖ್ಯ ಸುಕ್ಷೇತ್ರೇ ಮಲ್ಲಿಕಾರ್ಜುನಲಿಂಗತಃ
ಜನನಂ ಪಂಡಿತಾರ್ಯಸ್ಯ ನಿವಾಸಃ ಶ್ರೀಗಿರಿಕಾ ಶಿವೇ ॥

**ವಿಶ್ವಾರಾಧ್ಯ.**

ಕಾಶ್ಯಾಂ ವಿಶ್ವೇಶಲಿಂಗಾಚ್ಚ ವಿಶ್ವಾರಾಧ್ಯಸ್ಯ ಸಂಭವಃ ॥
ಸ್ಥಾನಂ ಶ್ರೀ ಕಾಶಿಕಾ ಕ್ಷೇತ್ರೇ ಶೃಣು ಪಾರ್ವತೀ ಸಾದರಂ ॥
ಏತೇಯುಗ ಚತುಷ್ಕೇತು ಪಂಚಾರಾಧ್ಯಯಥಾವಿಧಿ ।
ಮಮಲಿಂಗ ಮುಖೋದ್ಭೂತಾ ಲೋಕ ವಿಶ್ರುತ ಕೀರ್ತಯಃ ॥

ಈ ರೀತಿಯಾಗಿ ಜಗನ್ಮಾತೆಯಾದ ಪಾರ್ವತಿಗೆ ಬೋಧಿಸಿದ ಪರಶಿವನ ಆಗಮವಾಣಿಯು ಪಂಚಾಚಾರ್ಯರ ಉತ್ಪತ್ತಿಯನ್ನು ಸೊಗಸಾಗಿ ಬಣ್ಣಿಸಿರುವದು.

ಇವೇ ಪ್ರಮಾಣಗಳನ್ನು ವೀರಶೈವ ಸದಾಚಾರ ಸಂಗ್ರಹ ಮೊದಲಾದ ಗ್ರಂಥಕಾರರು ಈ ಮೊದಲೇ ಪ್ರಸಿದ್ಧಪಡಿಸಿರುವದರಿಂದ ನಂಬಲರ್ಹವಾಗಿವೆ. ಇದಕ್ಕಾಗಿ ಪ್ರಾಚೀನ ಸಿದ್ಧಾಂತ ಗ್ರಂಥಗಳಾದ ದಿವ್ಯಾಗಮಗಳೂ, ಉಪನಿಷತ್ತುಗಳೂ, ವ್ಯಾಸಕೃತ ಪುರಾಣಗಳೂ, ಶಂಕರ ಸಂಹಿತೆ, ನೀಲಕಂಠವಿಜಯ, ಸಿದ್ಧಾಂತಶಿಖಾಮಣಿ ಇವೇ ಮೊದಲಾದ ಉದ್ಗ್ರಂಥಗಳಲ್ಲಿರುವ ವೀರಶೈವ ಮತದ ಬಗ್ಗೆ ಇರುವ ಪುರಾತನ ಕಣಗಳನ್ನು ನಿಷ್ಪಕ್ಷಪಾತ ಹೃದಯವುಳ್ಳ ಪಂಡಿತರು ಶೋಧಿಸಿ ಮತೋನ್ನತಿಯ ಮಹಾಕಾರ್ಯವನ್ನು ಕೈಕೊಂಡರೆ ಮಹತ್ವದ ಶೋಧವು ಆಗುವದರಲ್ಲಿ ಸಂದೇಹವಿಲ್ಲ.

---

# ಬಸವನ ಭಕ್ತಿಯು ಬೆಳಕು.

(ಲೇಖಕರು:—ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ಶ್ರೀ ಸಿದ್ಧೇಶ್ವರ ಹೈಸ್ಕೂಲ್ ವಿ.)

ಶ್ರೀ ಬಸವೇಶ್ವರನು ಗತಿಸಿ ಹೋಗಿ ೮೦೦ ವರ್ಷಗಳಾದವು. ಆದಾಗ್ಯೂ ಆತನ ಶುಭನಾಮವು ಇನ್ನೂ ಅಚ್ಚಳಿಯದೆ ಹಾಗೆಯೇ ಉಳಿದಿರುತ್ತದೆ. ಬಸವನ ಭಕ್ತರಂತೂ ಆತನನ್ನು ತಮ್ಮ ತಲೆಯ ಮೇಲೆ ಹೊತ್ತು ಕೊಂಡು ಕುಣಿದಾಡಬಹುದು. ಆದರೆ ಬಸವನ ವಿರೋಧಿಗಳು ಸಹ ಆತನನ್ನು ನಿಂದಿಸಿ ಅವನ ಕೀರ್ತಿಪ್ರಭೆಯನ್ನು ಬೆಳಗಿದರು. 'ಬೈದವರೆನ್ನ ಬಂಧುಗಳೆಂಬೆ' ಎಂಬ ಬಸವನ ನುಡಿಯೇ ಆತನ ದಿವ್ಯ ತೇಜಸ್ಸಿನ ದ್ಯೋತಕವಾಗಿರುತ್ತದೆ. 'ಬಸವಾ ಬಸವಾ' ಎಂಬ ಹೆಸರು ಬಹು ಕಾಲದಿಂದ ಜನರಲ್ಲಿ ಪ್ರಚಲಿತವಾಗಿರುವದರಿಂದ ಅದನ್ನು ತಪ್ಪಿಸಬೇಕೆಂಬ ಪ್ರಯತ್ನಿಸುವವರೂ ಕೂಡ ಅಪ್ಪಿ ತಪ್ಪಿ ಆಕಳಿಸುವಾಗ, ನಿದ್ರೆಯಿಂದೆಚ್ಚತ್ತಾಗ ಬಸವಾ ಎಂದು ಥಕ್ಕನೆ ನುಡಿದುಬಿಡುವರು. ಬಸವನ ಭಕ್ತಿಯ ಬೆಳಕು ಹಿಂದಕ್ಕೂ ಬೆಳಗುತ್ತಿತ್ತು; ಈಗ್ಯೂ ಬೆಳಗುತ್ತಿದೆ; ಇನ್ನು ಮುಂದೆಯೂ ಬೆಳಗುವದು. ಆ ಬೆಳಕಿನಲ್ಲಿಯೇ ವೀರಶೈವರ ಅಸ್ತಿತ್ವವಿದೆ. ಬಸವನೆಂಬ ಭಕ್ತಿಯ ಜ್ಯೋತಿಯೊಂದಿರದಿದ್ದರೆ ವೀರಶೈವರೆಂಥ ಅಂಧಃಕಾಲದಲ್ಲಿರುತ್ತಿದ್ದರೋ ಏನೋ. ವೀರಶೈವ ಮತದಲ್ಲಿ ಅತ್ಯಂತ ಮಹಿಮಾಶಾಲಿಗಳಾದರೂ ಇದ್ದಾರೆಯೇ ಎಂಬ ಪ್ರಶ್ನೆಗೆ ಬಸವನ ಹೆಸರು ಎಲ್ಲಕ್ಕೂ ಮುಂದೆಬಂದು ನಿಲ್ಲುತ್ತದೆ.

ವೀರಶೈವ ಮತದಲ್ಲಿ ಎಷ್ಟೋ ಜನ ವೈರಾಗ್ಯ ಶಾಲಿಗಳೂ, ಮಹಾ ವಿದ್ವಾಂಸರೂ, ತತ್ವಜ್ಞಾನಿಗಳೂ, ಮಹಾ ಮಹಾ ಆಚಾರ್ಯರೂ, ಶಿವ ಶರಣರೂ ಆಗಿ ಹೋಗಿರಬಹುದು. ಅವರ ಹೆಸರನ್ನು ಬಲ್ಲವರು ಬಹು ವಿರಳ. ಆದರೆ ಬಸವನ ಹೆಸರನ್ನರಿಯದವರಾರು? ಆತನ ಹೆಸರು ಎಲ್ಲರಿಗೂ ಮನೆಮಾರಾಗಿ ಬಿಟ್ಟಿರುವದು. ಅದೇಕೆ? ಬಸವನಲ್ಲಿರುವ ಭಕ್ತಿಯ ಬೆಳಕೇ ಆತನ ಶ್ರೇಷ್ಠತೆಗೆ ಕಾರಣವಾಯಿತಲ್ಲವೇ? ಬಸವನು ತನ್ನ ಭಕ್ತಿ ಪ್ರಭಾವದಿಂದಲೇ ಎಲ್ಲ ಜನರ ಮನಸ್ಸನ್ನು ಆಕರ್ಷಿಸಿದನು. ಭಕ್ತಿ ಪ್ರಭಾವದಿಂದಲೇ ವೀರಶೈವ ಮತವನ್ನು ಪ್ರಸಾರ ಮಾಡಿದನು. ತನ್ನ ಭಕ್ತಿಯ ಬಲದಿಂದಲೇ ಆತನು ಜನರ ಭಾವನೆಗಳನ್ನು ಪ್ರದೀಪ್ತಿಗೊಳಿಸಿದನು. ಕರ್ನಾಟಕದ ಪ್ರತಿಯೊಂದು ಮೂಲೆಯಲ್ಲಿಯೂ ಸಹ

ಬಸವನ ಯಶೋದುಂದುಭಿಯು ಮೊಳಗಲಿಕ್ಕೆ ಆತನ ಅವಿರಳ ಭಕ್ತಿಯೇ ಕಾರಣವಾಯಿತು. ಬಸವನಂಥ ಭಕ್ತಿಶಾಲಿಗಳು ನಮ್ಮ ವೀರಶೈವ ಮತದಲ್ಲಿ ಹಿಂದಕ್ಕೂ ಆಗಿಲ್ಲ; ಮುಂದೆಯೂ ಆಗಲಿಕ್ಕಿಲ್ಲ.

ಜಗತ್ತು ವಿಶೇಷತಃ ಭಾವನಾ ಪ್ರಚುರವಾದುದು. ಜನಗಳ ಭಾವನೆಯನ್ನು ಪ್ರದೀಪ್ತಿಗೊಳಿಸಿದವರೇ ಜಗತ್ತಿನಲ್ಲಿ ಯಾವಾಗ್ಯೂ ಹೆಸರುವಾಸಿಯಾಗಿ ಮೆರೆಯುವರು. ಸಾಧುವರ್ಯ ಕ್ರೈಸ್ತ, ಗೌತಮ ಬುದ್ಧ, ಚೈತನ್ಯ, ಶ್ರೀ ಕೃಷ್ಣ ಮೊದಲಾದ ವಿಭೂತಿಗಳು ಭಾವನಾಪ್ರಧಾನ್ಯರಿದ್ದು ಜನಗಳ ಭಾವನಾ ಶಕ್ತಿಯನ್ನು ಹೆಚ್ಚಿಸಿದ್ದುದರಿಂದಲೇ ಅವರ ಹೆಸರುಗಳನ್ನು ಜನರು ಈಗ್ಯೂ ಕೊಂಡಾಡುತ್ತಾರೆ. ಭಕ್ತಿಯು ಭಾವನೆಯ ಕೂಸು. ಭಾವನೆಯುಳ್ಳವರಲ್ಲಿ ಭಕ್ತಿಯು ಸ್ವಾಭಾವಿಕವಾಗಿ ಉದ್ಭವಿಸುತ್ತದೆ. ಯಾರ ಹೃದಯದಲ್ಲಿ ಭಕ್ತಿಯು ಪರಾಕಾಷ್ಟವನ್ನು ಮುಟ್ಟುವದೋ ಅವರೇ ಯಾವಾಗ್ಯೂ ಪೂಜ್ಯರು. ಇದೇ ಮೇರೆಗೆ ಬಸವನು ಭಾವನಾ ಪ್ರಧಾನವಾದ ಕರ್ನಾಟಕ ದೇಶದಲ್ಲಿ ಜನ್ಮವೆತ್ತಿ ಭಕ್ತಿಯ ಅಂಕುರಗಳನ್ನು ಎಲ್ಲರ ಹೃದಯದಲ್ಲಿ ಬಿತ್ತಿ ಹೋಗಿರುವದರಿಂದ ಬಸವನ ಹೆಸರೂ ಆತನ ಬಗ್ಗೆ ಪ್ರೇಮವೂ ಎಲ್ಲರಲ್ಲಿಯೂ ಮನೆಮಾಡಿ ಬಿಟ್ಟಿರುತ್ತದೆ. ಬಸವನ ಭಕ್ತಿಯಲ್ಲಿ ಆಕರ್ಷಣ ಶಕ್ತಿಯಿದ್ದಿತು. ಬಸವನ ಭಕ್ತಿ ಪ್ರಭಾವವನ್ನು ಕೇಳಿ ಮೋಳಿಗೆಯ ಮಾರಯ್ಯನವರು ಕಾಶ್ಮೀರ ದೇಶವನ್ನು ಬಿಟ್ಟು ಬಸವನಿದ್ದೆಡೆಗೆ ಬಂದರು. ಅಕ್ಕಮಹಾದೇವಿಯು, ಉಡುತಡಿಯನ್ನು ಬಿಟ್ಟು ಕಲ್ಯಾಣವನ್ನು ಸೇರಿದಳು ಶ್ರೀ ಪ್ರಭುದೇವರು ಬನವಾಸಿಯನ್ನು ಬಿಟ್ಟು ಬಸವೇಶ್ವರನ ಸನ್ನಿಧಿಗೆ ಆಗಮಿಸಿದರು. ಇದಲ್ಲದೆ ಆ ಕಾಲಕ್ಕೆ ಹಿಂದುಸ್ಥಾನದ ಎಲ್ಲ ಭಾಗಗಳಿಂದ ಮಹಾ ಮಹಾ ವ್ಯಕ್ತಿಗಳು ಬಸವನ ಭಕ್ತಿ ಪ್ರಭಾವವನ್ನು ಕೇಳಿ ಕಲ್ಯಾಣಪಟ್ಟಣದಲ್ಲಿ ಬಂದು ವಾಸವಾಗಿದ್ದರು. ಬಸವನ ಭಕ್ತಿಗೆ ಮೆಚ್ಚಿ ಎಷ್ಟೋ ಜನ ಪರಮತಸ್ಥರು ವೀರಶೈವ ಮತವನ್ನಂಗೀಕರಿಸಿದರು. ಭಕ್ತಿಗೆ ತಲೆಬಾಗದವರಾರು? ಭಕ್ತಿಗೆ ದೂರವಾವುದು? ಸಮೀಪವಾವುದು? ಈ ಕುಲದವರೇನು? ಆ ಕುಲದವರೇನು? ಭಕ್ತಿಯು ಎಲ್ಲರನ್ನೂ ಸರಿಸಮಾನ ಸ್ಥಿತಿಗೆ ತಂದುಬಿಡುವದು. ಬಸವನು ೧೨ ನೆಯ ಶತಮಾನದಲ್ಲಿರದೆ ೨೦ ನೆಯ ಶತಮಾನದಲ್ಲಿದ್ದರೆ ಯುರೋಪ ಅಮೇರಿಕೆಗಳ ಮಹಾ ಮಹಾ ತತ್ವವೇತ್ತರನ್ನು ತನ್ನೆಡೆಗೆ ನಿಸ್ಸಂಶಯವಾಗಿ ಆಕರ್ಷಿಸುತ್ತಿದ್ದನು.

ಭಕ್ತಿಯ ಬಲದಿಂದಲೇ ಬಸವನು ಗುರುಸಂಗಮೇಶನ ಘನಕೃಪೆಗೆ ಪಾತ್ರನಾದನು. ಭಕ್ತಿಯಿಂದಲೇ ಜಗತ್ತಿನಲ್ಲಿ ಬೆಳಕಿಗೆ ಬಂದನು. ಭಕ್ತಿಯ ಆವೇಶದಿಂದಲೇ ಗಂಭೀರವಾದ ವಾಗ್ಝರಿಯು ಆತನ ಹೃತ್ಪಟಲದಿಂದ ಅಸ್ಖಲಿತವಾಗಿ ಹೊರಚಿಮ್ಮಿತು. ಭಕ್ತಿಯ ಸಹಾಯದಿಂದಲೇ ಆತನು ಅಘಟಿತ ಘಟನಾಕಾರ್ಯಗಳನ್ನು ಮಾಡಿದನು. ಭಕ್ತಿಪ್ರಭಾವದಿಂದಲೇ ಪಂಚಪರುಷದ ಕಣಿಯೆಂದೂ ಸಿದ್ಧಪುರುಷನೆಂದೂ ಅನಿಸಿಕೊಂಡನು. ಬಸವನ ಪವಿತ್ರ ನಾಮವು ಎಲ್ಲರ ಬಾಯೊಳಾಡಲಿಕ್ಕೂ, ಬಸವನ ಹೆಸರನ್ನು ಜನರು ತಮ್ಮ ಹಸುಗೂಸುಗಳಿಗಿಟ್ಟು ಕರೆಯುವದಕ್ಕೂ, ಬಸವನ ನಾಮಸ್ಮರಣೆಯಿಂದ ಆತ್ಮೋದ್ಧಾರಮಾಡಿಕೊಳ್ಳಲಿಕ್ಕೂ ಆತನಲ್ಲಿರುವ ಭಕ್ತಿಯೇ ಕಾರಣವಾಯಿತು. ಬಸವನ ಭಕ್ತಿಸುಧೆಯನ್ನು ಶಿವಶರಣರೆಲ್ಲರೂ ಬಿಕ್ಷೆ ಬೇಡಬೇಕಾದರೆ ಆತನ ಭಕ್ತಿಯು ಸಾಮಾನ್ಯವಾದುದೇ? ಮೂರ್ತಿಮಂತ ಭಕ್ತಿಯಾದ ಬಸವನನ್ನು ನೆನೆನೆನೆದೇ ಎಷ್ಟೋ ಸ್ವಾಮಿಗಳೂ ಶಿವಯೋಗಿಗಳೂ ಉದ್ಧಾರವಾದರು, ಆಗುತ್ತಲಿದ್ದಾರೆ. ಜನರ ಕುಲಗೋತ್ರಗಳಿಗೆ ಮಹತ್ವ ಕೊಡದೆ ಸದಾಚಾರ ಸದ್ಗುಣಗಳಿಗೆ ಮಹತ್ವ ಕೊಟ್ಟು ಮಾರ್ಗದರ್ಶಿಯಾದ ಶ್ರೇಯಸ್ಸು ಆತನ ಭಕ್ತಿಗೆ ಸಲ್ಲುತ್ತದೆ. ಬಸವನು ಭಕ್ತಿಯ ಬಲದಿಂದ ಸಿದ್ಧಪುರುಷನಾಗಿ ಮಹತ್ಕಾರ್ಯಗಳನ್ನು ಮಾಡಿದನು. ಅದರಂತೆಯೇ ಭಕ್ತಿಹೀನರಾದ ಸಾಮಾನ್ಯರೂ ಮಾಡಲಾರಂಭಿಸಿದರೆ ಜನರ ಅಪಹಾಸ್ಯಕ್ಕೂ ನಿಂದೆಗೂ ಗುರಿಯಾಗುತ್ತಾರೆ. ಭಕ್ತಿರಸವೇ ಹೆಪ್ಪುಗಟ್ಟಿ ಬಸವನೆಂಬ ನಾಮವನ್ನು ಧರಿಸಿ ಯಾವಾಗಲೂ ಬೆಳಗುತ್ತಿರುವದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಶ್ರೀ ಸಂಗಮೇಶ್ವರನು ಬಸವೇಶ್ವರನಿಗೆ ಲಿಂಗಧಾರಣ ಮಾಡಿದಾಗ ಆತನಲ್ಲಿ ಭಕ್ತಿಯ ಬೀಜಾರೋಪಣೆಯಾಯಿತು. ೮ ನೆಯ ವರ್ಷ ಮುಂಜವಿಯ ಕಾಲಕ್ಕೆ ಅದು ಮೊಳೆತು ಸಸಿಯಾಯಿತು. ಮುಂದೆ ಶಿವಶರಣರೊಡಗೂಡಿ ಮತಪ್ರಸಾರ ಮಾಡುವಾಗ ಅದು ಪಲ್ಲಟಿಸಿ ಪೆರ್ಮರವಾಗಿದ್ದಿತು. ಅನಂತರ ಆತನ ಭಕ್ತಿದ್ರುಮವು ಪರಿಪಕ್ವವಾದ ವಚನಗಳೆಂಬ ಫಲಗಳನ್ನು ಸುರಿಸಿ ಸಕಲರಿಗೂ ತೃಪ್ತಿಬಡಿಸಿತು. ಕಲ್ಯಾಣಪಟ್ಟಣದಲ್ಲಿ ೧ ಲಕ್ಷ ೯೬ ಸಾವಿರ ಗಣಂಗಳು ಪ್ರತಿನಿತ್ಯ ಈ ಭಕ್ತಿಯ ರಸವನ್ನು ಪಾನಮಾಡುತ್ತಿದ್ದರು. ಬಸವನೆಂಬ ಭಕ್ತಿಯ ಕಣಿಯಲ್ಲಿ

ಸದಾಚಾರ ಸದ್ಗುಣಗಳೆಂಬ ಅಮೌಲ್ಯ ರತ್ನಗಳು ಬೇಕಾದಷ್ಟು ಅಡಗಿದ್ದವು; ಬಸವನೆಂಬ ಭಕ್ತಿರತ್ನಾಕರನು ತನ್ನೊಡಲಲ್ಲಿ ಕ್ರಿಯಾಜ್ಞಾನಗಳೆಂಬ ಮುತ್ತು ಹವಳಗಳನ್ನಿಟ್ಟುಕೊಂಡಿದ್ದನು. ಬಸವನೆಂಬ ಭಕ್ತಿಕೇಸರಿಯು ತನ್ನ ದೇಹವೆಂಬ ಕಾನನದೊಳಗಿನ ಕಾಮ ಕ್ರೋಧಾದಿ ಅರಿಷಡ್ವರ್ಗವೆಂಬ ಮೃಗಗಳನ್ನು ಧ್ವಂಸಮಾಡಿಬಿಟ್ಟಿದ್ದನು. ಇಂಥ ಭಕ್ತಿಯು ಆಳವಟ್ಟಿದ್ದರಿಂದಲೇ ಬಸವನು ಬೇಡಿದವರಿಗೆ ಇಲ್ಲವೆಂದು ಎಂದೂ ಹೇಳುತ್ತಿರಲಿಲ್ಲ, ಆದುದರಿಂದಲೇ ಬಸವನನ್ನು ಕವಿಗಳು ಭಾಗ್ಯದ ನಿಧಿಯೆಂದೂ ಪರುಷದ ಕಣಿಯೆಂದೂ, ಚಿಂತಾಮಣಿಯೆಂದೂ, ಕಲ್ಪತರುವೆಂದೂ ಬಹು ಪ್ರೇಮದಿಂದ ಕರೆದಿರುವರು. ಭಕ್ತಿಗೆಂದಾದರೂ ಬಡತನವುಂಟೇ?

ಸಂಗಮನಾಥನನ್ನು ಕಂಡರೆ ಅಥವಾ ಸ್ಮರಣೆಗೆ ತಂದರೆ ಬಸವೇಶನ ಶರೀರವು ಪುಲಕಿತವಾಗುತ್ತಿತ್ತು. ಆನಂದಾಶ್ರುಗಳು ಉಕ್ಕುಕ್ಕಿ ಹೊರಚಲ್ಲುತ್ತಿದ್ದವು. ಆತನ ಮುಖವು ಅರಳಿದ ತಾವರೆಯಂತೆ ಪ್ರಫುಲ್ಲತೆಯಿಂದ ವಿರಾಜಿಸುತ್ತಿದ್ದಿತು. ಹೃತ್ಪಟಲವು ಭಕ್ತಿಪ್ರಕಾಶದಿಂದ ಲಕಲಕ ಹೊಳೆಯುತ್ತಿದ್ದಿತು. ಆತನ ರಕ್ತನಾಳಗಳಲ್ಲಿ ಭಕ್ತಿಯ ಝರಿಯು ಸೊಗಸಾಗಿ ಹರಿದಾಡುತ್ತಿದ್ದಿತು. ನಡೆವಾಗ ನುಡಿವಾಗ ಮಲಗುವಾಗ ಏಳುವಾಗ ಯಾವಾಗಲೂ ಕೂಡಲ ಸಂಗನ ಮೃದು ಮಧುರ ನಾಮವು ಆತನ ಬಾಯೊಳಗಾಡುತ್ತಿದ್ದಿತು.

ಹಸುಗೂಸು ಹೆತ್ತಾಯಿಯನ್ನು ಕಂಡಕೂಡಲೆ ಅವ್ವಾ ಎಂದು ಕರೆಯುತ್ತ ಧಾವಿಸುವಂತೆ ಬಸವನು ಸಂಗಮೇಶನೆಡೆಗೆ ಧಾವಿಸುವನು. ಆಕಳಕರುವು ತಾಯಿಯ ಬಳಿಗೆ ಜಿಗಿಯುತ್ತ ಹೋಗುವಂತೆ ಬಸವನು ಸಂಗಮನಾಥನೆಂಬ ಕಾಮಧೇನುವಿನೆದುರಿಗೆ ಎಳೆಗರುವಾಗಿ ನಿಲ್ಲುವನು. ಹೆತ್ತಾಯಿಯು ತನ್ನ ಮುದ್ದು ಮಗುವನ್ನು ನೋಡಿ ಹಿಗ್ಗಿ ಹಿರಿಹೊಳೆಯಾಗಿ ಅಪ್ಪಿಕೊಂಡು ಲಟಲಟ ಮುದ್ದು ಕೊಡುವಂತೆ ತನ್ನ ಪ್ರಾಣಸ್ವರೂಪಿಯಾದ ಕೂಡಲ ಸಂಗಮದೇವನನ್ನು ಮುದ್ದಿಡುವನು. ತಂದೆಯನ್ನು ಕಂಡು ಮಗುವು ಭಯಭೀತನಾಗಿ ತನ್ನ ಆಚಾರವಿಚಾರಗಳಿಗೆ ವ್ಯತ್ಯಯ ಬಾರದಂತೆ ನಡೆದುಕೊಳ್ಳುವ ಹಾಗೆ ಬಸವನು ತಂದೆಯಾದ ಕೂಡಲ ಸಂಗನೆದುರಿಗೆ ತನ್ನಿಂದ ಯಾವ ಪಾಪವೂ ಘಟಿಸದಂತೆ ಬಹು ಜಾಗರೂಕತೆಯಿಂದ ನಡೆದುಕೊಳ್ಳುವನು. ಗುರುವು ಹೇಳಿಕೊಟ್ಟ ಪಾಠವನ್ನು ಒಳ್ಳೆ ಶಿಷ್ಯನು ದಕ್ಷತೆಯಿಂದ ಕಲಿಯುವಂತೆ ಗುರು ಸಂಗಮೇ

ಶನು ಹಾಕಿಕೊಟ್ಟ ವ್ರತನಿಯಮಗಳನ್ನು ಭಕ್ತನಾದ ಬಸವನು ಒಳ್ಳೆ ಬದ್ಧನಾಗಿ ಪಾಲಿಸುವನು. ಸಜ್ಜನನು ತನ್ನ ಪ್ರಿಯಮಿತ್ರನ ಮುಂದೆ ತನ್ನಂತರಂಗವನ್ನೆಲ್ಲ ಬಿಚ್ಚಿಟ್ಟು ಆತನ ಸಲಹೆಗೆ ಹಂಬಲಿಸುವಂತೆ ಬಸವನು ಪರಮ ಸ್ನೇಹಿತನಾದ ಕೂಡಲ ಸಂಗಯ್ಯನೆದುರಿಗೆ ತನ್ನ ಗುಟ್ಟನ್ನೂ ಬಿಚ್ಚಿಟ್ಟು ಆತನ ಸಲಹೆ ಕೇಳುವನು. ಸತಿಯು ಪತಿಯನ್ನು ಕೂಡಿ ರಮಿಸುವಂತೆ ಬಸವನು ಲಿಂಗಸ್ವರೂಪಿಯಾದ ಕೂಡಲಸಂಗನಲ್ಲಿ ತಲ್ಲೀನ ಮನಸ್ಕನಾಗಿ ಸುಖಿಸುವನು. ಕೀಟವು ಪತಂಗವನ್ನು ನೆನೆನೆನೆದು ತಾನೂ ಪತಂಗವೇ ಆದಂತೆ ಬಸವನು ಕೂಡಲಸಂಗನನ್ನೇ ಏಕಾಗ್ರತೆಯಿಂದ ನೆನೆನೆನೆದು ಕೊನೆಗೆ ತಾನೂ ಕೂಡಲ ಸಂಗನೇ ಆಗಿಹೋದನು. ಅಂತೆಯೇ ಬಸವನಿಗೆ ದ್ವಿತೀಯ ಶಂಭುವೆಂದೆನ್ನುವರು. ಬಸವನೂ, ಶಿವನೂ, ಒಂದೇ. ಬೇರೆಯಲ್ಲ. "ಬಸವಾ ಶಿವನೆ ಶಿವನೆ ಬಸವಾ" ಎಂಬ ಹಾಡಿನಲ್ಲಿ ಶಿವಬಸವರಲ್ಲಿರುವ ಅಭೇದತ್ವವು ಗೊತ್ತಾಗುತ್ತದೆ.

ಬಸವನ ಭಕ್ತಿಯೇ ಬಲಿದು ನಿಷ್ಠೆಯಾಯಿತು. ಆತನ ನಿಷ್ಠೆಯು ಏಕಾಗ್ರವಾಗಲು ಆತನಲ್ಲಿ ಪ್ರಸನ್ನತೆಯ ಕಳೆಯು ಮೂರ್ತಿಗೊಂಡಿತು. ಪ್ರಸನ್ನತೆಯಿಂದ ಆತನಲ್ಲಿ ಸ್ವಾನುಭವವು ಆಳವಟ್ಟಿತು. ಆ ಸ್ವಾನುಭವ ಸಹಾಯದಿಂದ ಆತನಿಗೆ ಲಿಂಗಾಂಗ ಸಾಮರಸ್ಯದರಿವಾಯಿತು. ಆ ಅರುವಿನ ಅನುಗ್ರಹದಿಂದಲೇ ಪರವನ್ನು ಕಂಡು ಅದರಲ್ಲಿ ಬೆರೆದುಹೋದನು. ಆದ್ದರಿಂದಲೇ ಬಸವನ ಭಕ್ತಿಯ ನಂದಾದೀಪವು ಕರ್ನಾಟಕವೆಂಬ ಪಣತಿಯಲ್ಲಿ ಈಗ್ಯೂ ಪ್ರಕಾಶಮಾನವಾಗಿ ಬೆಳಗುತ್ತಿರುವದು.

ಬಸವನು ಗತಿಸಿ ಹೋದರೂ ಆತನ ಹೆಸರೂ, ಆತನ ಬಾಯಿಯಿಂದ ಹೊರಟ ಭಕ್ತಿಯ ವಾಗ್ಝರಿಯೂ ಹಾಗೆಯೇ ಉಳಿದಿರುತ್ತವೆ. ಮಹಾಮಹಿಮನ ಆ ವಚನಗಳು ವೇದಾಗಮೋಪನಿಷತ್ತುಗಳಿಗಿಂತಲೂ ಮಿಗಿಲಾದವುಗಳು. ವಚನವಾಙ್ಮಯದಲ್ಲಿರುವಷ್ಟು ಸ್ಫೂರ್ತಿಯೂ, ಜೀವಕಳೆಯೂ ಬೇರೆ ಕಡೆಗೆ ಕಾಣುವದು ಬಹು ಅಪರೂಪ. ಬಸವನು ಯಾವ ಯಾವ ಭಾವನೆಗಳಿಂದ ಆಯಾಯ ವಚನಗಳನ್ನು ನುಡಿದಿರುವನೋ ಅಂತಂಥ ಉದಾತ್ತ ಭಾವನೆಗಳು ಆ ವಚನಗಳನ್ನು ಓದುವವರ ಮನಸ್ಸಿನಲ್ಲಿಯೂ ಉಂಟಾಗುತ್ತವೆ. ಆ ವಚನಗಳನ್ನು ನಾವು ಓದಿದರೆ ಅಥವಾ ಕೇಳಿದರೆ ನಮ್ಮಲ್ಲಿ ದಿವ್ಯಸ್ಫೂರ್ತಿಯೂ, ದೈವೀಭ

ಕ್ತಿಯೂ ಪ್ರಾದರ್ಭವಿಸುವವು. ಸಾಕ್ಷಾತ್ ಬಸವೇಶನೇ ನಮ್ಮ ಹೃದಯದೊಳಗೆ ಕುಳಿತುಕೊಂಡು ನಮಗೆ ತನ್ನ ಗಂಭೀರವಾದ ವಚನಗಳನ್ನು ಬೋಧಿಸುವಂತೆ ಭಾಸವಾಗುತ್ತದೆ. ಬಸವನ ಆಗಾಧವಾದ ಭಕ್ತಿಯ ಲೇಶಮಾತ್ರವಾದರೂ ತಮ್ಮಲ್ಲಿಳವಡಬೇಕೆಂದಪೇಕ್ಷಿಸುವವರು ಆತನ ವಚನಗಳನ್ನು ಪ್ರತಿನಿತ್ಯ ತಪ್ಪದೆ ಪಾರಾಯಣ ಮಾಡಬೇಕು.

---

# ಶ್ರೀ ಕವೀಂದ್ರ ಶಾಬಕ ಕರಿಬಸವಾರ್ಯ ಐನಿಲಯ ಜೀವನ ಚರಿತ್ರೆಯು

(ಲೇಖಕಃ— ಬಸವಪ್ಪ ಪಾಟೀಲ ಹುಡೇದ ಹಳ್ಳಿಕರ ಮು. ಚಿಂಚೋಳಿ ಪೋ ತಾಂಡೂರ ಜಿ. ಕಲಬುರ್ಗಿ.)

ಇವರು ೧೭ ನೇ ಶತಮಾನದಲ್ಲಿ ಉದಯ ಹೊಂದಿ ಪ್ರಸಿದ್ಧಿಪಡೆದ ಕವಿಗಳು. ಇವರ ಪೂರ್ವಜರು ನೈಜಾಮ ಗವ್ಹರ್ನಮೆಂಟಿಗೆ ಸೇರಿದ ಕಲಬುರ್ಗಿ ಜಿಲ್ಹೆಯ ಚಿಂಚೋಳಿ ತಾಲೂಕಿನಲ್ಲಿಯ ಐನಿಲಯ ಗ್ರಾಮವಾಸಿಗಳಾಗಿದ್ದರು. ಇವರು ಆ ಗ್ರಾಮದ ಮಠಪತಿ ಮಹೇಶ್ವರರು. ಇವರ ಮನೆತನದ ಆದಿ ಗುರುಗಳು ಶ್ರೀ ಚನ್ನವೀರಸ್ವಾಮಿ ದೇಶಿಕೇಂದ್ರ ಹಿರೇಮಠಾಧಿಕಾರಿಗಳಾದ ಚಿಟಗೋಪಾ ಗ್ರಾಮದ ನಿವಾಸಿಗಳು. ಈಗ ಈ ಮಠಾಧ್ಯಕ್ಷರು ಐಯಪ್ಪನವರೆಂಬುವವರಿರುವರು. ಈ ಕವಿಗಳ ತಾತಂದಿರ ನಾಮಧೇಯವು ರುದ್ರಸ್ವಾಮಿಗಳು. ಇವರ ಉದರದಲ್ಲಿ ಸತ್ಪುತ್ರರೂ ಸದಾಚಾರಿಗಳೂ ಆದ ನೂರೊಂದಯ್ಯನವರು ಜನಿಸಿದರು. ಇವರು ಸತ್ಕುಲ ಪ್ರಸೂತೆಯೂ ಸುಶೀಲೆಯೂ ಆದ ಗಿರಿಜಾದೇವಿಯನ್ನು ಲಗ್ನವಾದರು. ಇಂಥ ಸತಿಪತಿಯರೇ ನಮ್ಮ ಕವಿಗಳ ಜನನಿ ಜನಕರು.

ಇವರ ತಂದೆಯವರು ತಮ್ಮ ಪರಂಪರೆಯ ಉದ್ಯೋಗವಾದ ಕೃಷಿಕರ್ಮದಿಂದಲೇ ಉಪಜೀವಿಸುತ್ತಿದ್ದರು. ಈ ಕವಿಗಳ ಜನ್ಮಕಾಲವು ಇಂತಹದೇ ಎಂದು ಇನ್ನೂ ನಿರ್ಧಾರವಾಗಿ ಹೇಳ ಬರುವಷ್ಟು ಆಧಾರಗಳು ನಮಗೆ ಸಿಕ್ಕಿಲ್ಲ. ಇವರು ಬಾಲ್ಯದಲ್ಲಿ ತಮ್ಮ ಮನೆತನದ ಕೆಲಸಕ್ಕೆ

ಅನುಕೂಲವಾಗಬೇಕೆಂದು ಮನೆಯಲ್ಲಿದ್ದ ಗೋಮಹಿಷಗಳನ್ನು ಕಾಯು ವುದಕ್ಕೆ ಊರ ಪಶ್ಚಿಮಕ್ಕಿದ್ದ ತಮ್ಮ ಹೊಲಕ್ಕೆ ಹೋಗುತ್ತಿದ್ದರು. ಆ ಹೊಲದಲ್ಲಿ ಈಗಲೂ ಒಂದು ಚಿಕ್ಕ ಬಸವೇಶ್ವರ ದೇವಾಲಯವಿದೆ. ಇವರು ದನಕರುಗಳನ್ನು ಮೇಯುವದಕ್ಕೆ ಬಿಟ್ಟು ಹೊಲದಲ್ಲಿಯ ಚಿಕ್ಕ ಚಿಕ್ಕ ಕಲ್ಲು ಗಳನ್ನು ಆರಿಸಿ ತಂದು ಆ ಬಸವೇಶ್ವರನ ಮುಂದೆ ಕುಳಿತು ಆ ಕಲ್ಲುಗಳ ಮೇಲೆ ಮಸಿ ಕರಣಿಯಿಂದ ಮನಸ್ಸಿಗೆ ಬಂದಂತೆ ಬರೆದು ಒಂದರಮೇ ಲೊಂದು ಇಡುತ್ತಿದ್ದರಂತೆ. ಇವರು ಎಂದೂ ಶಾಲೆಗೆ ಹೋಗಿ ಓದು ಬರಹ ಕಲಿತವರಲ್ಲ. ಆದರೂ ಆವರಲ್ಲಿ ಕಲಿಯಬೇಕೆಂಬ ಉತ್ಕಟೇ ಚ್ಛೆಯು ಎಷ್ಟಿತ್ತೆಂಬದು ಇದರಿಂದ ಸ್ಪಷ್ಟವಾಗುವದು. ಆದರೆ ಇವರು ಹೇಗೆಯೋ ೧೮ ವರುಷದ ವರೆಗೆ ನಿರಕ್ಷರಿಗಳಾಗಿದ್ದದ್ದು ತಿಳಿಯುತ್ತದೆ.

ಈ ಪ್ರಕಾರ ಕೆಲವು ದಿವಸಗಳು ಕಳೆದು ಹೋಗುತ್ತಿರಲು ಇ ವರ ತಂದೆಯ ಶಿಷ್ಯರಾದ ಗಾರನಪಳ್ಳಿಯ ವರದಿ ಬಸವಪ್ಪನೆಂಬವರು ಅದೇ ಹೊಲದ ಮೇಲಿಂದ ಹಾಯ್ದು ಹೋಗುತ್ತಿರುವಾಗ್ಗೆ ಕಲ್ಲುಗಳ ಮೇಲೆ ಕರಿಬಸವಯ್ಯನವರ ಲೇಖನ ಕಾರ್ಯವನ್ನು ಕಂಡು ತುಂಬಾ ಕೌತಕಬಟ್ಟು ಇವರ ವಿದ್ಯಾಪೇಕ್ಷೆಯನ್ನು ಕಂಡರೆ ಇವರಿಗೆ ವಿದ್ಯೆಕಲಿಸಿ ದರೆ ಒಳ್ಳೇ ಜಾಣರಾಗುವದು ನಿಸ್ಸಂದೇಹವೆಂದು ಬಗೆದು ಕವಿಗಳ ಮಾತಾಪಿತೃಗಳಿಗೆ ಒಳ್ಳೆ ಆಗ್ರಹ ಪೂರ್ವಕವಾಗಿ ಬಿನ್ನೈಸಿದರು. ಆಗ ಆತನು ದನಕಾಯುವದು ಬಿಟ್ಟು ಶಾಲೆಗೆ ಹೋಗಹತ್ತಿದರೆ ನಮ್ಮ ಬಡ ತನದ ಸಂಸಾರ ಸಾಗುವ ಬಗೆ ಹೇಗೆ, ಎಂದು ಆಲೋಚಿಸಿ ತಂದೆ ಗಳು ಶಾಲೆಗೆ ಕಳಿಸದಾದರು. ಈ ಮಾತಿಗೆ ಬಸಪ್ಪನವರು ಖಿನ್ನರಾಗಿ ತಾವೇ ಆ ಬಾಲಕನನ್ನು ಶಾಲೆಗೆ ಕರೆದುಕೊಂಡು ಹೋಗಿ ಅಲ್ಲಿಯ ಅಯ್ಯನವರಿಗೆ ಈತನು ನಿಮ್ಮ ಕಡೆಗೆ ದಿನಾಲು ಮುಂಜಾವಿನಲ್ಲಿ ಕಲಿ ಯಲಿಕ್ಕೆ ಬರುತ್ತಾನೆ, ಹಾಗು ಹಗಲೆಲ್ಲ ಮನೆ ಕೆಲಸ ತೀರಿಸಿಕೊಂಡು ರಾತ್ರಿ ಕಾಲಕ್ಕೆ ಪುನಃ ಬರುತ್ತಾನೆ, ಹುಡುಗನು ಕುಶಾಗ್ರಬುದ್ಧಿಯುವ ನಿರುವನು, ಕಾರಣ ಚನ್ನಾಗಿ ಅಭ್ಯಾಸ ಮಾಡಿಸಿರಿ ನಿಮ್ಮ ಗುರುದಕ್ಷಿ ಣೆಯನ್ನು ನಾನು ಕೊಡುವೆನೆಂದು ತಿಳಿಸಿದರು. ಕವಿಗಳು ಈಪ್ರಕಾರ ಹಗಲೆಲ್ಲ ದುಡಿದು ಉಳಿದ ವೇಳೆಯಲ್ಲಿ ವಿದ್ಯೆಯನ್ನು ಕಲಿಯುತ್ತಿದ್ದರು. ಈ ಐನೂಲಿ ಗ್ರಾಮದ ಪೂರ್ವಕ್ಕೆ ೩ ಮೈಲು ದೂರದಲ್ಲಿ ಉಮಾಚಲ ವೆಂಬ ಬೆಟ್ಟವಿದೆ. ಈ ಪರ್ವತವು ಶ್ರೀಶೈಲದವರೆಗೂ ಹಬ್ಬಿದ ಪರ್ವತಾ

ವಳಿಯಲ್ಲಿಯದಿದ್ದು ಶ್ರೀಶೈಲಪುಚ್ಛವೆಂದೆನಿಸಿಕೊಳ್ಳುತ್ತಿದೆ. ಇದು ರಮ್ಯ ಮತ್ತು ವರ್ಣನೀಯ ಸ್ಥಳವಿದ್ದು ಇಲ್ಲಿ ಶ್ರೀಭೋಗಲಿಂಗೇಶ್ವರ ದೇವಾಲಯವಿದೆ. ಕವಿಗಳು ದನಗಳನ್ನು ಮೇಯಿಸುವ ಉದ್ದಿಶ್ಯ ಈ ಪರ್ವತಕ್ಕೆ ಹೋಗಿ ದನಗಳನ್ನು ಮೇಯಬಿಟ್ಟು ದೇವರೆದುರಿನಲ್ಲಿ ಕುಳಿತು ಭಕ್ತಿಪುರಸ್ಸರವಾಗಿ ಪ್ರಾರ್ಥಿಸುತ್ತಿದ್ದರು. ಆಗಿನ ಶಾಲೆಯಲ್ಲಿ ಇವರ ಅಭ್ಯಾಸವೆಂದರೆ ಭೂಪಾಳಿ ಸ್ತವನ ಹಾಗು ನೀತಿಯ ಶ್ಲೋಕಗಳನ್ನು ಪಠಿಸುವದೇ ಹೊರ್ತು ಮತ್ತೇನು ಇರಲಿಲ್ಲ. ಕೆಲವು ಕಾಲ ಇವರು ಭೋಗಲಿಂಗೇಶ್ವರನನ್ನು ಭಜಿಸುತ್ತಿರಲಾಗಿ ಒಂದು ದಿನ ಆ ಭಕ್ತವತ್ಸಲನು ಇವರಿಗೆ ಪ್ರತ್ಯಕ್ಷನಾಗಿ ವರವನ್ನಿತ್ತನು. ಈ ಪ್ರಸಂಗವನ್ನು ಕವಿಗಳು ತಾವೇ ತಮ್ಮ ಒಂದು ಗ್ರಂಥದ ಆರಂಭ ಶ್ಲೋಕದಲ್ಲಿ ಹೀಗೆ ವರ್ಣಿಸಿರುವರು.

ಎನ್ನ ಕಂಡು ಮರುಗಿ ಗಿರಿಜಾದೇವಿ ಗಂಗಮ್ಮ ನೋಡು ।
ಶಿವನಿಗೆ ಇವನಿಗೆ ಆಧಾರವಿಲ್ಲ ನೋಡು ಜಗದೊಳು ॥
ಇವರಿಬ್ಬರ ಮಾತು ಕೇಳುತಲಿ ಶಿವನಾಗ ಮುಂದಕ್ಕೆ ।
ಬಾ ಎಂದು ಕರೆದ ನೋಡು ಎನಗೆ ॥
ಅಂಜಬೇಡೆಂತ ಅಭಯ ಹಸ್ತ ಇಟ್ಟ ತಲೆಯ ಮೇಲೆ ।
ಘನಪ್ರೇಮದಿಂದ ಐನೂಲಿವಾಸ ಗುರುಚನ್ನವೀರೇಶ ।
ಎನಗೆ ಅಭಯಕೊಟ್ಟು ಹೋಗಲು ಎಚ್ಚರಾಯ್ತು ।
ಮನದೊಳಗೆ ಕೇಳ ಶಿವನು ಎನ್ನ ಕನಸಿನೊಳು ॥
ಬಂದು ನಿಂತಿದ್ದ ಎನ್ನ ಎದುರಿಗೆ ಆತನ ಮಹಿಮೆ ।
ಎಷ್ಟೆಂತ ಹೇಳಲೀಗ ॥

ಹೀಗೆ ಇವರು ವರ ಪಡೆದ ನಂತರ ದನ ಕಾಯುವ ಉದ್ಯೋಗವನ್ನು ಬಿಟ್ಟುಕೊಟ್ಟು ಶಾಲೆಯನ್ನು ಕೂಡ ಬಿಟ್ಟು ಕವಿತೆ ಮಾಡುವದು, ಪುರಾಣ ಪುಣ್ಯ ಕಥೆ ಕೇಳಲಿಕ್ಕೆ ಹೋಗುವದು ಮೊದಲಾದ ಸತ್ಕಾರ್ಯಗಳಲ್ಲಿಯೇ ಕಾಲಹರಣ ಮಾಡತೊಡಗಿದರು. ಇವರು ವಿದ್ಯಾರ್ಜನೆಗಾಗಿ ಗ್ರಾಮ ಬಿಟ್ಟು ಬೇರೆ ಯಾವ ಕಡೆಗೂ ಹೋಗಲಿಲ್ಲ. ಕೇವಲ ಭೋಗೇಶನ ಪ್ರಸಾದ ಪ್ರಭಾವದಿಂದಲೇ ವರಕವಿಗಳಾಗಿ ಕೀರ್ತಿ ಹೊಂದಿದರು.

ಇವರು ರಾಚಮ್ಮನವರೆಂಬ ಕನ್ನಿಕೆಯೊಡನೆ ಲಗ್ನವಾದರು. ಇವರು ತಮ್ಮ ಆಯುಷ್ಯದ ೫೦ನೇ ವಯಸ್ಸಿಗೆ ಐನಿಲಯ ಗ್ರಾಮವನ್ನು ಬಿಟ್ಟು ಚಿಂಚೋಳಿಯಲ್ಲಿ ವಾಸ ಮಾಡಹತ್ತಿದರು. ಇವರು ತಮ್ಮ ಚರಿತಾರ್ಥ ಸಾಗಿಸಲು ಪುರಾಣ, ಕೀರ್ತನ, ಕೃಷಿ ಕರ್ಮಗಳಲ್ಲದೆ ಬೇರೆ ಯಾವ ಉದ್ಯೋಗವನ್ನು ಕೈಕೊಳ್ಳಲಿಲ್ಲ. ಕವಿಗಳು, ನಿಗರ್ವಿಗಳು, ಧರ್ಮಾಭಿಮಾನಿಗಳು ಕವಿತಾನಿರ್ಮಾಣದಲ್ಲಿ ಉತ್ಕಟೇಚ್ಛುಗಳು ಅತ್ಯಂತ ಭಕ್ತಿಭಾವವುಳ್ಳವರು ಆಗಿದ್ದರೆಂಬ ಸಂಗತಿಯು ಈ ಕೆಳಗಿನ ಅವರ ಕವಿತೆ ಅವತರಣಿಕೆಗಳಿಂದು ತಿಳಿದುಬರುವದು.

ನಿಮ್ಮ ಶರಣರ ಬಿಟ್ಟ ಚರ್ಮಾವುಗೆಗಳ ಕಾಯ್ದು ।
ಮುದದಿ ಬಾಳ್ವೆನೈ ಬಸವರಾಜಾ ॥
ಭವಾಂತರದೊಳುದ್ಭವಿಪದಿರ್ದಡೆ ಮುಂದೆ ।
ಕವಿ ಎನಿಸಿ ಪುಟ್ಟಿಸೈ ಬಸರಾಜಾ । ಇತ್ಯಾದಿ

ಈ ಕವಿಗಳು ೯೦-೯೫ ವರುಷ ಜೀವಿಸಿ ಇಷ್ಟು ಕಾಲದ ವರೆಗೂ ನಿರಂತರ ಕವಿತೆಗಳನ್ನು ರಚಿಸುತ್ತಿದ್ದರು. ಅಷ್ಟರಿಂದಲೇ ಅವರು ತೃಪ್ತಿ ಹೊಂದಲಿಲ್ಲ. ಇದರಿಂದ ಅವರ ಇಚ್ಛೆಯು ಎಷ್ಟೊಂದು ಉತ್ಕಟವಿರಬಹುದು!

ಈ ಕವಿಶ್ರೇಷ್ಠರು ರಚಿಸಿದ ಕಾವ್ಯಗಳು ನಮಗೆ ತಿಳಿದ ಮಟ್ಟಿಗೆ ಕೆಳಗೆ ತೋರಿಸಿದಂತೆ ಇವೆ.

೧ ಸ್ಕಂದಪುರಾಣಾಂತರ್ಗತ ಕುಮಾರ ವಿಜಯ
೧ ರಾಜೇಶ್ವರ ಪುರಾಣ
೧ ಭೊಗಲಿಂಗ ಶತಕ
೧ ಬಸವ ರಗಳೆ
೧ ಪರಾಕುಸ್ತೋತ್ರ
೧ ಬಸವೇಶ್ವರನ ಪರಿವರ್ಧಿನಿ.
೧ ನೀತಿರತ್ನಾಕರ
೧ ಶಿವಗಣಸಂಗೀತ
೧ ಗಣರಗಳೆ
೧ ಅಷ್ಟಕ

ಇವಲ್ಲದೆ ಅನೇಕ ನೀತಿ, ಸ್ತೋತ್ರ, ತತ್ವಪದ, ಶೃಂಗಾರಪದ, ಅಸಂಖ್ಯ ಪದಗಳನ್ನು ರಚಿಸಿದ್ದಾರೆ. ಈ ಎಲ್ಲ ಕವಿತೆಗಳು ವೀರಶೈವ ಧರ್ಮಕ್ಕೆ ಒಳ್ಳೇ ಪೋಷಕ ಪುಷ್ಟಿಕರ ಹಾಗು ಪ್ರೋತ್ಸಾಹಕರವಿದ್ದು ವೀರ ಶ್ರೀಯುಕ್ತ ವಾಕ್ಯಪರಿಪ್ಲುತವಾಗಿವೆ.

ಈ ಕವಿಕೃತ ಕಾವ್ಯಗಳಲ್ಲಿ ಕುಮಾರ ವಿಜಯವೆಂಬ ಗ್ರಂಥವು ಅತ್ಯುತ್ತಮ ಹಾಗು ಉನ್ನತವಿದ್ದು ಕವಿಗಳು ತಮ್ಮ ಪಾಂಡಿತ್ಯದ ಶಕ್ತಿಯನ್ನು ಇದರಲ್ಲಿ ತುಂಬಾ ವೆಚ್ಚಮಾಡಿರುತ್ತಾರೆ. ಈ ಕವಿಗಳು ಶ್ರೀಶೈಲ ಯಾತ್ರೆಗೋಸ್ಕರ ಹೋದಾಗ ಇವರಿಗೆ ಯಾರೋ ಒಬ್ಬರು ಆಂಧ್ರ ಭಾಷೆಯ ಮೂಲ ಗ್ರಂಥವನ್ನು ಕೊಟ್ಟು ಲೋಕೋಪಕಾರಾರ್ಥವಾಗಿ ಕರ್ನಾಟಕ ಭಾಷೆಯಲ್ಲಿ ರಚಿಸಿರೆಂದು ಹೇಳಿದ್ದಕ್ಕೆ ಅದರ ಮೇಲಿಂದ ಇವರು ಪರಮಸಾಹಸಬಟ್ಟು ಈ ಗ್ರಂಥವನ್ನು ರಚಿಸಿದ್ದಾರೆ. ಇದು ೫೦೦೦ ಶ್ಲೋಕಗಳುಳ್ಳದ್ದಾಗಿದೆ. ಈ ಗ್ರಂಥದಲ್ಲಿಯೇ ಕವಿವರ್ಯರು ಸ್ವಹಸ್ತದಿಂದ ತಮ್ಮ ಮನೆತನದ ಆದ್ಯಂತ ಇತಿಹಾಸವನ್ನು ಹಾಗು ಆ ಗ್ರಂಥವು ತಮಗೆ ದೊರೆತ ಬಗ್ಗೆ ಹಾಗು ರಚಿಸಲಿಕ್ಕೆ ಮಾಡಿದ ಪ್ರಯತ್ನ ಮುಂತಾದ ಸಂಗತಿಗಳನ್ನು ಇತ್ಥಂಭೂತವಾಗಿಯೂ ವಿಸ್ತಾರವಾಗಿಯೂ ಬರೆದಿರುವರು. ಅದರಲ್ಲಿಯ ಅಗತ್ಯವೆನಿಸಿದ ಕೆಲವು ಶ್ಲೋಕಗಳನ್ನು ಈ ಕೆಳಗೆ ಅವತರಿಸಿದ್ದೇವೆ.

ಕ್ಷೀರಾಬ್ಧಿಯಾಳು ಕೃಷ್ಣರು । ಚಿಶೇಷನೊಳುವಿಷ- । ತಾರಾಧಿಪತಿಯೋಳ್ಕಳಂಕ । ಶ್ವೇತಾಂಬೋಜವಾರಿಯೋಳ್ಕಂಟಕಂ ವಜ್ರದೋಳ್ಕರ್ಕಶಂ ನಾರದನೋಳತಿ ಕೈತವಂ । ಶಾರದಾಭ್ರದೋಳ್ ಅಸ್ಥಿರತ್ವಂ ಹೇಮಾದ್ರಿಯೋಳು । ಸಾರಶೈತ್ಯಂ ನಭೋ ವಾರಣದೊಳುನ್ಮದಂ । ಸೇರಿದುದೆನುತ ಪಳಿದು ಸುಯಶಂಬ ರಾಜಿತು ಶ್ರೀಚನ್ನವಿರೇಂದ್ರನಾ ॥೩೧॥

ಆಚನ್ನವೀರಣಾರ್ಯರ ಚರಪುಂಗವನ । ಶ್ರೀಚರಣ ಸೇವಕ ಶಿಷ್ಯೋತ್ತಮ । ದಾರುಕಾಚಾರ್ಯ ಮುನಿಮತೋದ್ಧಾರಕಂ। ಧನ್ಯನಪ್ರತಿಮಾನ ಭೂ ರುದ್ರನು । ಪ್ರಾಚೀನ ಯಮಿ ಜನ ತಪಸ್ಥಾನ । ಮಹಾಘನದುಮಾಚಲದೊಳಿಸೆವೈನಿಲಯಪುರ- ನಿವಾಸ ಸ। ದಾಚಾರಸಂಪನ್ನನಾಗಿ ಮೆರೆದನು। ವಿದಿತ ವೀರ ಸಂಗಮದೇವನು ॥೩೨॥

ಆತನನುಜಾತನು ಪುನೀತನುತ್ತಮಜನವ್ರಾತ ಘನಪಾದೋದಿಸೀತಾಕರಂ ಸಮ। ದ್ಯೋತ ಶಿವಮತ ಪಾರಿಜಾತನು ಸುಜಾತನು ಶತಾನಂದಮೂರ್ತಿಎಂಬಾ। ಖ್ಯಾತಾಭಿಧಾನನಭಿನೀತನುರು ಸೀತಾದ್ರಿ । ಜಾತಾದಿನಾಥನ ಸಂಪೂತ। ಕೋಮಲಪದಾ। ಬ್ಜಾತ ಷಟ್ಪದಮಾಗಿ-ಭೂತಳದೊಳಿರ್ದಂ ಪ್ರಭೂತಕೀರ್ತಿಯೊಳಜಸ್ರಂ॥೩೩॥

ಶತಾನಂದನ ಸುಪುತ್ರನು ಚನ್ನವೀರೇಶನ ಕರಾಂಭೋಜಗೆ ಭೋರ್ಗ್ಭವಂ ನಮು। ಸ್ತಾತ್ರಶಾಭರಿತ ಯಶಂಭೂ ರುದ್ರಗಣಪದಾಂಬುರುಹ ಭ್ರಮದ್ಭೃಂಗನೂ। ಭೇಷಧರನಧ್ಯಾನ-ಪರತಂತ್ರನಖಿಳಧರ। ಣೀಶಚಯಮಾನಿತಂ ಸೂರಿಜನಮಾನಸಕು। ಶೇಷಯಾನಂದಕರ ಮಿತ್ರನಾಗಿರ್ದನು। ಕವೀಂದ್ರ ಶಾಬಿಕನೆನುತಿರೆ ॥೩೪॥

ಕೆಳಗೆ ಅನುಗ್ರಹ ಆದ ಸಂಗತಿಯನ್ನು ವರ್ಣಿಸಿದ್ದಾನೆ.

ನುತವೆಂಕಟಾಚಲಾಭ್ಯಾಗ್ರದೊಳು ಪರಿವಿರಾಜಿತ ಕಾಂತ ಕೊಡೂರು ಎಂಬ ನಗರದೊಳು। ಸುಕೃತ ಕವಿಜನ ಕೃಪಾಪಾತ್ರನುರು ಕಾಶ್ಯಪ-ಮುನೀಂದ್ರಗೋತ್ರಂ ಪವಿತ್ರಂ। ಅತುಳ ಗುಣ ನಿಧಿ ಶಂಕರಾಮಾತ್ಯ ಪುತ್ರನೂ। ರ್ಜಿತ ವಿಮಲ ಗಾತ್ರ। ಸುಜನ ಸುಮಿತಂ ಧರ್ಮಪಥನು ಬಾಲಸರಸ್ವತಿ ಎಂಬ ಕವಿನಾಯಕಂ ಪ್ರಖ್ಯಾತನಾಗಿರ್ದನು ॥

ಮಹಾಸ್ಕಾಂದದೊಳಿಹ ವಿತತಶಂಕರಸಂಹಿತೆಯೊಳಜಸ್ರಂ ಸಮಂ। ಚಿತಶಿವರಹಸ್ಯಕಾಂಡ ಪರತರಸನತ್ಕುಮಾರಾಖ್ಯಸಂಹಿತೆಗೆಬಂಧುರ ಗ್ರಂಥಗಣನೆ ಐವತ್ತೈದು ಸಾವಿರೆಂದ ವುದಿತಾರು ಸಂಹಿತೆಗಳೊಳ್ಮೆರೆವ ಶಂಕರ ಸಂಹಿತೆಯು ಬಣ್ಣಿಪೆಂ ॥

ಈ ಪ್ರಕಾರ ಕವಿವರ್ಯರು ಕವಿತಾ ರಚನಾ ಕಾರ್ಯವನ್ನು ಕೈಕೊಂಡು ತಮ್ಮ ಆಯುಷ್ಯದ (೯೫) ನೇ ವಯಸ್ಸಿಗೆ ಶಾಲಿವಾಹನ ಶಕೆ ೧೭೬೨ ಶಾರ್ವರಿ ಸಂವತ್ಸರದ ಭಾದ್ರಪದ ಬ॥ ೩ ಸೋಮವಾರ ಹಗಲು ೮ ತಾಸಿಗೆ ತಮ್ಮ ಪ್ರಾಣ ಜ್ಯೋತಿಯನ್ನು ಸ್ವಯಂಭೂ ಪ್ರಕಾಶದಲ್ಲಿ ಬೆರಸಿದರು. ಇದರ ಮೇಲಿಂದ ಅವರು ಶಕೆ ೧೬೬೩ ರಲ್ಲಿ ಜನಸಿದರೆಂದು ಕಂಡು ಬರುತ್ತದೆ. ಇವರು ಶಿವೈಕ್ಯರಾಗಿ ಇಂದಿಗೆ ಸುಮಾರು (೯೧) ವರ್ಷಗಳಾದವು. ಇವ ಸಮಾಧಿಯು ಚಿಂಚೋಳಿ ಗ್ರಾಮದ ಹಂಪೀ ಮಠದಲ್ಲಿರುವದು. ಇವರ ಉದರದಲ್ಲಿ ವೀರಬಸವಯ್ಯರೆಂಬ ಸತ್ಪುತ್ರರು ಹುಟ್ಟಿದರು. ಇವರು ಕೂಡಾ ತಮ್ಮ ತಂದೆಯ ಪಶ್ಚಾತ್ ಕವಿಗಳೆಂದೆನಿಸಿಕೊಂಡು ಕೀರ್ತಿ ವೆತ್ತರು. ಇವರು ತಮ್ಮ ಕವಿತೆಗಳ ಕೊನೆಗೆ ಮರುಳಸಿದ್ಧ ಎಂದು ಮುದ್ರಿಕೆ ಇಟ್ಟಿದ್ದಾರೆ. ಕವಿಗಳ ಕಕ್ಕಂದಿರ ಪುತ್ರರಾದ ಬಕ್ಕಪ್ಪಯ್ಯ ಎಂಬವರು ಇದೇ ಕವಿಗಳ ಕೈಯಲ್ಲಿ ಅಭ್ಯಾಸ ಮಾಡಿ ಒಳ್ಳೇ ಜಾಣ ಕವಿಗಳೆಂದೆನಿಸಿಕೊಂಡರು. ಇವರು ತಮ್ಮ ಕವಿತೆಯ ಮುದ್ರಿಕೆ

ಗುರುಲಿಂಗ ಎಂದು ಇಟ್ಟಿದ್ದಾರೆ ಈ ಬಕ್ಕಪ್ಪಯ್ಯರ ಪುತ್ರರಾದ ವೀರ ಸಂಗಯ್ಯನವರು ಕೂಡಾ ಕವಿತೆಗಳನ್ನು ರಚಿಸಿರುವರು. ಇವರ ಮುದ್ರಿಕೆ ಬಸವಲಿಂಗ ಎಂದಿರುವದು. ಸದ್ಯಕ್ಕೆ ಈ ಕವಿಗಳ ಮನೆತನದಲ್ಲಿ ವಂಶಿ ಕರಾದ ಗುರಲಿಂಗಯ್ಯನವರೆಂಬ ವೃದ್ಧರಿರುವರು. ಇವರು ಒಳ್ಳೇ ಸಚ್ಛೀ ಲರೂ ಧರ್ಮಾಭಿಮಾನಿಗಳೂ ಇದ್ದು ಮನೆತನದ ಮರ್ಯಾದೆ ಕಾಯ್ದು ಕೊಂಡು ಇದ್ದಾರೆ. ಹಾಗು ಇವರು ತಮ್ಮ ಹಿರಿಯರು ಬರೆದ ಗ್ರಂಥ ಗಳನ್ನು ತಕ್ಕ ಮಟ್ಟಿಗೆ ಕಾಪಾಡಿಕೊಂಡಿದ್ದಾರೆ.

ಈ ಕವಿ ನಿರ್ಮಿತ ಕವಿತಾ ವನದಲ್ಲಿ ಅಮೃತ ತುಲ್ಯ ಸ್ವಾದ ಕೊಡುವ ಫಲಗಳಿಂದ ಭರಿತವಾದ ಅನೇಕ ವೃಕ್ಷಗಳೂ ಸುಗಂಧ ಪರಿ ಮಳ ಯುಕ್ತಲತೆಗಳೂ ಇರುವವು. ಆದರೆ ಭೋಗ ಮಾಡಲರಿತ ಸಜ್ಜ ನರ ಅಲಕ್ಷದಿಂದಲೂ ಇವರು ಬಹುದಿವಸಗಳ ಹಿಂದೆ ಗತಿಸಿರುವದರಿಂ ದಲೂ ತಕ್ಕ ಕಾಲಕ್ಕೆ ಪೋಷಕ ಸುಜಲವು ದೊರೆಯದಿರುವುದರಿಂ ದಲೂ ಎಲ್ಲ ಲತಾ ವೃಕ್ಷಗಳು ಕಂದಿ ಕುಂದಿ ನಷ್ಟಪ್ರಾಯ ವಾಗುವ ವೇಳೆಯು ಬಂದೊದಗಿದೆ. ಈ ಕವಿತಾ ಪರಿಮಳವು ಕವಿಗಳ ಜೀವ ಮಾನದಲ್ಲಿಯೂ ಹಾಗು ಅವರ ಪಶ್ಚಾತ್ ಕೆಲಕಾಲದ ವರೆಗೂ ಈ ನಮ್ಮ ಗುಲಬುರ್ಗಾ ಪ್ರಾಂತದ ಯಾವತ್ತು ಕಡೆ ತುಂಬಿಕೊಂಡಿತು. ಆದರೆ ಈಗ ಇದು ನಾಮಶೇಷವಾಗುವ ಸಮಯ ಬಂದಿದೆ. ಹೀಗಾ ದಲ್ಲಿ ಯಾರು ಲೋಕೋಪಕಾರಕ್ಕಾಗಿಯೂ ವೀರಶೈವ ಸಮಾಜ ಕಲ್ಯಾ ಣಾರ್ಥಕ್ಕಾಗಿಯೂ ಯಾವತ್ತು ತಮ್ಮ ಆಯುಷ್ಯವನ್ನು ವೆಚ್ಚ ಮಾಡಿ ಪ್ರಯತ್ನ ಪಟ್ಟರೋ ಅಂಥವರ ಕಾರ್ಯವು ನಿರರ್ಥಕವಾದಲ್ಲಿ ಅವರ ಆತ್ಮವು ಎಷ್ಟು ದುಃಖಿತವಾಗುವದು ವಾಚಕ ಮಹಾಶಯರೇ ವಿಚಾ ರಕ್ಕೆ ತರತಕ್ಕದ್ದು.

ಈ ಕವಿತಾ ಜೀರ್ಣೋದ್ಧಾರಕಾರ್ಯವು ಕವಿತಾಭಿಮಾನಿ ವೀರ ಶೈವ ಸುಜನರ ಮೇಲೆ ಬಹಳ ಅವಲಂಬಿಸಿರುವದು.

ಯಾರಾದರು ಈ ಕಾರ್ಯವನ್ನು ಕೈಕೊಳ್ಳುತ್ತಿದ್ದಲ್ಲಿ ಅವರಿಗೆ ಈ ಕವಿಗಳ ಕೃತಗ್ರಂಥಗಳನ್ನು ಒದಗಿಸಿ ಕೊಡುವ ಕಾರ್ಯದಲ್ಲಿ ತಕ್ಕ ಮಟ್ಟಿಗೆ ಸಹಾಯ ಮಾಡಲು ಈ ಸೇವಕನು ಸಿದ್ಧನಿದ್ದಾನೆ.



# ಸತ್ಯವೂ ಸಿದ್ಧಿಯೂ.

(ಲೇಖಕ:— ಮಧುರಚನ್ನ ಹಲಸಂಗಿ)

-*-

ಓ ಪರಾತ್ಪರ ಸತ್ಯವೇ, ಬಯಲು ನಿನ್ನ ರೂಪವು. ಕಾಲ ನಿನ್ನ ಚಿತ್ರವು. ಶಕ್ತಿ ನಿನ್ನ ಮಿಸುಕು. ನಾದ ನಿನ್ನ ನುಡಿಯು. ಅಕ್ಷರವು ನಿನ್ನ ನಾಮವು. ಇದನರಿತವರೇ "ಅಮರಸ್ಯ ಪುತ್ರ" ರು. ಯ ಏತದ್ವಿದು ರಮೃತಾಸ್ತೇ ಭವಂತಿ.

ತುದಿಯಿಲ್ಲ ಮೊದಲಿಲ್ಲ ನಿನ್ನ ರೂಪಕ್ಕೆ ಕೊನೆಯಿಲ್ಲ ಕಡೆಯಿಲ್ಲ ನಿನ್ನ ರೂಪಕ್ಕೆ. "ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ". ಅಪರಂಪಾರ ಅನಂತಾ ನೀನಿಂಥ ಬಯಲ ಘನವು "ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ"

ಕಾಲಪಥದಲ್ಲಿ ಕ್ರಮಗೊಳ್ಳುವದು ಜಗವು. ಚರಾಚರವೆಲ್ಲ ಕಾಲಾಧೀನವು. ಆಗುಹೋಗೆಲ್ಲ ಕಾಲನಿಯಮಿತವು. ಅಜಾತ ಅಕ್ಷಯ ನಿಧಿ ನಿನ್ನ ಕಾಲವು. ಕಾಲಾಯ ತಸ್ಮೈನಮಃ

ನೀ ಮಿಸುಕಿದರೆ ಗಗನ ಗಟ್ಟಿಗೊಳ್ಳುವದಯ್ಯಾ. ನೀ ನೋಡಿದರೆ ಕತ್ತಲೆಗೆ ಕಣ್ಣೊಡೆವುದಯ್ಯಾ. ಅಪ್ರತಿಮ ಮಹಿಮಾ ನಿನ್ನ ಶಕ್ತಿ ಅತಿಶಯ ಅಗಾಧವು. "ಪಂಗುಂ ಲಂಘಯತೇ ಗಿರಿಂ"

ನೋಟದಲ್ಲಿ ಭಾವ, ನಿಜದಲ್ಲಿ ನಿರ್ಭಾವ, ನಿನ್ನಾಟ ನೀ ನೋಡಿ ನಲಿದಲ್ಲಿ ನಾದೋತ್ಪತ್ತಿ. ಅದು ನಿನ್ನ ಉಕ್ಕಿದ ಉದ್ಗಾರ. ನಿನ್ನ ಈ ನುಡಿ ನಮ್ಮ ಮಾತಿನ ಮೂಲ.

ಅಪಾರ ನಿಶ್ಶಬ್ದದಲ್ಲಿ ಅಗಾಧ ನಿನ್ನ ನಾಮವು ಓಗುಡುತ್ತದೆ. ಅಂತರ್ಯಾಮವು ಅಚ್ಚರಿಗೊಂಡು ಹೂಂಗುಡುತ್ತದೆ. ಇಂಥ ಮಧುರ ಮಿಲನದಲ್ಲಿ ವ್ಯಿದೋರಿತು ನಿನ್ನ ನಾಮ. "ಓಂ ಓಂ" ಇದರಾಚೆಗೆ ಶಬ್ದವಿಲ್ಲ ಶಬ್ದವಿಲ್ಲ ಓಂ. "ತದ್ವಾಚಕಃ ಪ್ರಣವಃ"

ರವೀಂದ್ರ ನಿನ್ನ ಸುಳುವು ಹಿಡಿದು ಹಾಡುವ ಹಕ್ಕಿಯಾದ. ಗಾಂಧಿ ನಿನ್ನ ಗುರುತು ಹಿಡಿದು ನ ಭೂತೋ ನ ಭವಿಷ್ಯತಿ ಬಂಟನಾದ. ಅರವಿಂದ ನಿನ್ನ ನೆಲೆಯರಿತು ತಳಸೋಸುವದಕ್ಕೆ ಒಳಸೇರಿದ.

"ನಾನೊಬ್ಬ ಕವಿಯು ಮಾತ್ರ. ಜೊತೆಗಾರರನ್ನು ಉಲ್ಲಾಸಗೊಳಿಸುತ್ತ, ಕಾಣದಿದ್ದರೂ ನೆಚ್ಚಿದ ಗುರಿಯನ್ನು ಬಣ್ಣಿಸಿ ಹಾಡುತ್ತ,

ವಿರಾಮ ಸ್ಥಲಗಳ ಸೊಗಸು ಸೊಬಗುಗಳನ್ನು ಎದೆಗೊಳಿಸುತ್ತ ಹೊರಟಿರುವ ದಾರಿಕಾರರಲ್ಲಿ ನಾನೂ ಒಬ್ಬ ಪಾಂತಸ್ಥನು. ನಾವು ದಾರಿಯ ದಣಿವು ಧೂಳಿಗಳನ್ನು ಮರೆಯದಿದ್ದರೂ ನಮ್ಮ ಯಾತ್ರೆಯ ಪೂರ್ಣತೆಗೆ ಅವುಗಳ ಅಗತ್ಯವನ್ನರಿತ ಮಾರ್ಗಸ್ಥರು ನಾವು."

—ರವೀಂದ್ರರು.

"ನನ್ನಲ್ಲಿ ಅಜ್ಞೆಯವಾದವೂ ಇತ್ತು;ನಾಸ್ತಿಕತೆಯೂ ಇತ್ತು; ಸಂಶಯವಾದವೂ ಇತ್ತು. ದೇವರಿದ್ದ ಬಗೆಗೆ ನನಗೆ ಎಷ್ಟೂ ವಿಶ್ವಾಸವಿದ್ದಿಲ್ಲ. ಅವನ ಸಾನ್ನಿಧ್ಯವು ನನಗೆ ಏನೂ ಅನಿಸಿರಲಿಲ್ಲ. ಆದರೆ ಈಚೆಗೆ ದಿನ ದಿನಕ್ಕೆ ನನ್ನ ಬುದ್ಧಿಯಲ್ಲಿ ಮತ್ತೆ ಹೃದಯದಲ್ಲಿ— ವೈಮನಗಳಲ್ಲೆಲ್ಲ ಹಿಂದು ಧರ್ಮದ ವಿವಿಧ ಸತ್ಯಗಳು ಅನುಭವಕ್ಕೆ ಬಂದವು. ಅವು ನನ್ನ ಜ್ವಲಂತ ಸ್ವಾನುಭವದ ವಿಷಯಗಳಾಗಿ ಬಿಟ್ಟವು. ವಸ್ತುಮಾತ್ರದಲ್ಲೆಲ್ಲಾ ಭೌತಿಕ ವಿಜ್ಞಾನಕ್ಕೆ ನಿಲುಕದ ಪರಮ ರಹಸ್ಯಗಳು ಒಡಮೂಡಿದವು."

—ಅರವಿಂದರು.

"ನಾನು ಅವನನ್ನು ಕಂಡೂ ಇಲ್ಲ; ಅರಿತೂ ಇಲ್ಲ. ದೇವನಲ್ಲಿ ಲೋಕಕ್ಕಿರುವ ನಂಬುಗೆಯನ್ನೇ ನನ್ನದಾಗಿ ಮಾಡಿಕೊಂಡಿರುವೆನು. ಆದರೆ ನನ್ನ ಈ ಶ್ರದ್ಧೆಯು ಅಳುಕಲಾರದ್ದು. ಆದರೂ 'ಇದು ಇನ್ನೂ ಸ್ವಾನುಭವಕ್ಕೆ ಮುಟ್ಟಲಿರುವದು. ಶ್ರದ್ಧೆಯನ್ನು ಸ್ವಾನುಭವದಂತೆ ಬಣ್ಣಿಸಿದರೆ ಸತ್ಯಕ್ಕೆ ಮೋಸ ಮಾಡಿದಂತಾಗುವದು. ದೇವನ ಮೇಲಿರುವ ನನ್ನ ಶ್ರದ್ಧೆಯೆಂಥದೆಂದು ಹೇಳುವದಕ್ಕೆ ನನಗೆ ಬಾಯಿಯಿಲ್ಲವೆಂದು ಹೇಳಿದರೆ ಹೆಚ್ಚು ಸರಿಯಾದೀತೆಂದು ನನಗೆನಿಸುವದು. ನಾನು ಬರೆಯುವಾಗ ಅಂತರಾತ್ಮನು ಹೇಗೆ ಪ್ರೇರಿಸುವನೋ ಹಾಗೆ ಬರೆಯುವೆನು. ನಾನು ಬುದ್ಧಿಪೂರ್ವಕವಾಗಿ ಮಾಡುತ್ತಲಿರುವ ವಿಚಾರಗಳನ್ನೂ ಕಾರ್ಯಗಳನ್ನೂ ಆತನೇ ಮಾಡಿಸುತ್ತಿರುವಂತೆ ನನಗಾಗ ನಿಚ್ಚಳವಾಗಿ ಅನಿಸುತ್ತಿರದಿದ್ದರೂ ನನ್ನ ಜೀವನದಲ್ಲಿ ನಾನು ಕೈಕೊಂಡ ಅತಿ ಮಹತ್ವದ ಪ್ರಸಂಗಗಳನ್ನೂ ಹಾಗೆಯೇ ಅತಿ ಕ್ಷುಲ್ಲಕ ಘಟನೆಗಳನ್ನೂ ಕೂಡ ಯೋಚಿಸಿನೋಡಿದಾಗ ಪರೀಕ್ಷಾಂತ್ಯದಲ್ಲಿ ಅವೆಲ್ಲವುಗಳೂ ಆತನಿಂದಲೇ ಪ್ರವರ್ತಿತವಾದವೆಂದು ನನಗೆನಿಸುವದಾಗಿ ಹೇಳಿದರೆ ಅನುಚಿತವಾಗದು."

ಮಹಾತ್ಮಾಜಿಯವರು

ಓ ದಿವ್ಯ ಸತ್ಯವೇ ನಿನ್ನನ್ನು ತತ್ತ್ವತಃ ಅರಿತವನೇ ಅರಿತವನು. ಅವನಿಗೆ ಅಳಿವಿಲ್ಲ. ನ ಮೇ ಭಕ್ತಃ ಪ್ರಣಶ್ಯತಿ ಎಂದು ನಿನ್ನ ಅಭಯ ವಚನ. **ಜೀಜಸ್. ಕ್ರೈಸ್ತ.**

"ಅವನನ್ನು ಬಲ್ಲೆ ಬಲ್ಲೆ. ಇಲ್ಲಿಂವರೆ ನಾನೊಬ್ಬ ಸಟೆಗಾರ" ಎಂದು ಕ್ರಿಸ್ತ ಗರ್ಜಿಸಿದ್ದೂ ದಿವ್ಯ ಸತ್ಯದ ಪ್ರಸಾದದಿಂದ. "ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ" ಇದೆ ಯೆಂದು ಮಾತ್ರ ಮನವರಿಕೆಯಾದರೆ ಅವನಿಗೆ ತತ್ತ್ವಭಾವದ ಒಲಿಮೆ ಕಟ್ಟಿಟ್ಟದೆಯೆಂದು ಶ್ರುತಿ ಸಾರುತ್ತಿದೆ.

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ

---

# ಪುಸ್ತಕ ವಿಮರ್ಶೆ.

**ಹರಿಶ್ಚಂದ್ರ ಕಾವ್ಯಸಂಗ್ರಹಃ**— ಈ ಗ್ರಂಥವು ಮೈಸೂರು ವಿಶ್ವ ವಿದ್ಯಾಲಯದ ಕನ್ನಡ ಗ್ರಂಥಮಾಲೆಯಲ್ಲಿ ಪ್ರಥಮ ಪುಸ್ತಕವಾಗಿದೆ. ಇದಕ್ಕೆ ಶ್ರೀಯುತ ಬಿ. ಎಂ. ಶ್ರೀಕಂಠಯ್ಯ ಎಂ. ಏ. ಬಿ. ಎಲ್. ರವರು ಪ್ರಧಾನ ಸಂಪಾದಕರೂ ಶ್ರೀಯುತ ಟಿ. ಎಸ್. ವೆಂಕಣ್ಣಯ್ಯ ಎಂ. ಏ. ಮತ್ತು ಏ. ಆರ್. ಕೃಷ್ಣಶಾಸ್ತ್ರಿ ಎಂ. ಏ. ಇವರು ಸಂಪಾದಕರೂ ಆಗಿ ರುವರು. ಶ್ರೀಯುತ ಎಂ. ಆರ್. ಕೃಷ್ಣಶಾಸ್ತ್ರಿಗಳು ಇದಕ್ಕೆ ೬೯ ಪುಟದ ಬಹು ವಿಸ್ತಾರವಾದ ಉಪೋದ್ಘಾತವನ್ನು ಬರೆದಿರುವರು. ಇದರಲ್ಲಿ ಕವಿಯ ವಿಷಯ, ಅವನ ಕಾಲ, ಅವನ ಗ್ರಂಥಗಳ ವಿಮರ್ಶೆ ಇವುಗಳನ್ನು ನಿರೂಪಿಸಿರುವರಲ್ಲದೆ ಹರಿಶ್ಚಂದ್ರ ಕಾವ್ಯದ ಕಥಾನಕ ವಿಷಯ, ಅದರ ಸ್ವರೂಪ, ಕವಿಯ ಶೈಲಿ ಮೊದಲಾದ ವಿಷಯಗಳ ಬಗ್ಗೆಯೂ ಬಹು ವಿಸ್ತಾರವಾಗಿ ನಿರೂಪಿಸಿರುವನು. ರಾಘವಾಂಕನು ಕನ್ನಡಿನಲ್ಲಿ ಒಬ್ಬ ಮಹಾ ಕವಿಯು. ಅವನು ಈ ಹರಿಶ್ಚಂದ್ರ ಕಾವ್ಯವಲ್ಲದೆ ಸಿದ್ಧರಾಮ ಪುರಾಣ, ಸೋಮನಾಥ ಚರಿತ್ರೆ, ವೀರೇಶ್ವರ ಚರಿತ್ರೆ, ಶರಭ ಚರಿತ್ರೆ, ಹರಿಹರ ಮಹತ್ವ ಈ ಗ್ರಂಥಗಳನ್ನು ಬರೆದಿರುವನು. ಇವುಗಳಲ್ಲಿ ಸಿದ್ಧರಾಮ ಪುರಾಣ, ಮತ್ತು ಸೋಮನಾಥ ಚರಿತ್ರೆ ಇವೆರಡಕ್ಕಿಂತಲೂ ಹರಿಶ್ಚಂದ್ರ ಕಾವ್ಯದಲ್ಲಿ ಮತಾಂಶಗಳು ವಿರಳವಾಗಿ ಮತ್ತು ಕಾವ್ಯಾಂಶ ಗಳು ಹೆಚ್ಚಾಗಿ ಬಂದಿರುತ್ತವೆ. ರಾಘವಾಂಕನ ಕಾಲವು ೧೧೬೫ ಎಂದು

ರಾ. ಬ. ಆರ್. ನರಸಿಂಹಾಚಾರ್ಯರೂ, ಮತು ಡಾ. ವೆಂಕಟ ಸುಬ್ಬ ಯ್ಯನವರು ೧೩ ನೇ ಶತಮಾನದ ಕೊನೆ ಎಂದೂ ಅಭಿಪ್ರಾಯಪಟ್ಟಿರು ತ್ತಾರೆ. ಆದರೆ ಸಿದ್ಧರಾಮ ಪುರಾಣದಲ್ಲಿ ಬಿಜ್ಜಳನು ಹತನಾದ ಬಳಿಕ ಅವನ ತಮ್ಮನಾದ ಕರ್ಣದೇವನು ತನಗೆ ಕಲ್ಯಾಣದಲ್ಲಿ ಪಟ್ಟಕಟ್ಟ ಬೇಕೆಂದು ಸಿದ್ಧರಾಮುನಿಗೆ ಹೇಳಿಕಳುಹಲು, ಅವನು ಅದಕ್ಕೆ ಒಪ್ಪಲಿ ಲ್ಲವೆಂಬ ಉಲ್ಲೇಖವಿದೆ. ಇದರ ಮೇಲಿಂದ ರಾಘವಾಂಕನು ಸುಮಾರು ೧೨೦೦ ನೇ ಇಸ್ವಿಯ ತರುವಾಯ ಇದ್ದಿರಬೇಕೆಂದು ಸ್ಥೂಲವಾಗಿ ಹೇಳ ಬಹುದೆಂದು ಸಂಪಾದಕರು ಅಭಿಪ್ರಾಯಪಟ್ಟಿರುತ್ತಾರೆ. ಇದು ಹೆಚ್ಚಿಗೆ ನ್ಯಾಸಾರ್ಹವೆಂದು ನಮಗೆ ತೋರುತ್ತದೆ.

[illegible] ಈ ಗ್ರಂಥವು ಹರಿಶ್ಚಂದ್ರ ಕಾವ್ಯದ ಸಂಗ್ರಹವಾಗಿದೆ. ಇದು ಸಂಪೂ [illegible]ಗ್ರಂಥವಲ್ಲ. ಸಂಪೂರ್ಣ ಕಾವ್ಯಗಳನ್ನು ಜನರು ಸಾಮಾನ್ಯವಾಗಿ ಓದುವ ಪದ್ಧತಿ ಕಡಿಮೆ. ಆದರೆ ಕಾವ್ಯದ ಉತ್ತಮ ಭಾಗಗಳನ್ನು ಮಾತ್ರ ಸಂಗ್ರಹಿಸಿ ಪುಸ್ತಕರೂಪವಾಗಿ ಪ್ರಕಟಿಸಿದ್ದಾದರೆ ವಿದ್ಯಾರ್ಥಿಗ ಳಿಗೂ ಜನಸಾಮಾನ್ಯಕ್ಕೂ ಅದು ಪ್ರಯೋಜನಕರವೆಂದು ತಿಳಿದು ಆ ರೀತಿಯಾಗಿ ಈ ಗ್ರಂಥವನ್ನು ಸಂಪಾದಕರು ಸಂಗ್ರಹಿಸಿರುತ್ತಾರೆ. ಆದ್ದ ರಿಂದ ಈ ಕಾವ್ಯದಲ್ಲಿಯ ಸುಂದರವಾದ ಭಾಗಗಳನ್ನು ಮಾತ್ರ ಈ ಗ್ರಂಥ ದಲ್ಲಿ ಕೂಡಿಸಿರುವದರಿಂದ ಅದಕ್ಕೆ ರಮಣೀಯತೆಯು ಉತ್ಪನ್ನವಾಗಿರು ತ್ತದೆ. ಮತ್ತು ರಾಘವಾಂಕನ ಕಾವ್ಯ ಚಾತುರ್ಯವನ್ನು ತಿಳಿಯಲಿಕ್ಕೆ ಈ ಗ್ರಂಥವು ಬಹಳ ಸಹಾಯಕಾರಿಯಾಗಿದೆ.

ಆದರೆ ರಾಘವಾಂಕನ ವಿಶಿಷ್ಟತ್ವವೆಂದರೆ ಅವನು ಹೊಸಗನ್ನಡ ದಲ್ಲಿ ಬರೆದಿರುವ ಕವಿಗಳಲ್ಲಿ ಮೊದಲನೆಯವನಾಗಿರುವನು. ಅವನು ಷಟ್ಪದಿಯನ್ನು ಮೊದಲು ಪ್ರಚಾರಕ್ಕೆ ತಂದನು. ಅವನಕಿಂತಲೂ ಪೂರ್ವದಲ್ಲಿ ವಾರ್ಧಿಕಗಳಿದ್ದವೆಂದು ನಾಗವರ್ಮ ಛಂದಸ್ಸಿನಿಂದ ತಿಳಿ ಯಬರುತ್ತದೆ. ಆದರೆ ರಾಘವಾ[illegible] ಪೂರ್ವದಲ್ಲಿ ಒಂದಾದರೂ ಷಟ್ಪ ದಿಗ್ರಂಥವು ದೊರೆಯುವದಿಲ್ಲೆಂಬದನ್ನು ನಾವು ವಿಶೇಷವಾಗಿ ಲಕ್ಷಿಸತಕ್ಕ ದ್ದಾಗಿದೆ. ಇದರಿಂದ ಪೂರ್ವ ಕಾಲದಲ್ಲಿ ಈ ಬಗೆಯ ಗ್ರಂಥಗಳು ಇರಲಿಕ್ಕಿಲ್ಲೆಂಬ ಅನುಮಾನಕ್ಕೆ ಕಾರಣವಾಗುತ್ತದೆ.

ಈ ಗ್ರಂಥವು ಸುಂದರವಾಗಿ ಅಚ್ಚಾಗಿದ್ದು ಅದರ ಬೆಲೆ ೧ ರೂಪಾಯಿ ಮಾತ್ರ ಈ ಗ್ರಂಥವನ್ನು ಅವಶ್ಯವಾಗಿ ವಾಚಕರು ಸಂಗ್ರಹಿಸತಕ್ಕದ್ದು.

**ಅರುವತ್ತುಮೂವರು ಪುರಾತನರುः—** ಈ ನೂತನ ಗ್ರಂಥ ವನ್ನು ರಾ॥ ರಾ॥ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ ಹುಬ್ಬಳ್ಳಿ

ಇವರು ಪ್ರಸಿದ್ಧಿಸಿದ್ದಾರೆ. ಇದು ಪ್ರಚಲಿತ ಭಾಷೆಯಲ್ಲಿ ಬರೆದ ಗದ್ಯ ಗ್ರಂಥವಾಗಿದೆ. ಈ ಗ್ರಂಥಕ್ಕೆ ಮುಖ್ಯ ಆಧಾರವು ಸುರಂಗ ಮಹಾಕವಿಯು ಬರೆದ ತ್ರಿಷಷ್ಟಿ ಪುರಾತನರ ಚರಿತೆಯೇ ಇರುತ್ತದೆ. ಅಲ್ಲದೆ ನಿಜಗುಣ ಶಿವಯೋಗಿಗಳ ಪುರಾತನರ ಸ್ತುತಿಪರ ಪದ್ಯಗಳನ್ನೂ ಶಿವಕವಿ ಬೊಮ್ಮರಸನ ಕೃತಿಯನ್ನೂ ಸಹ ಆಧಾರವಾಗಿಟ್ಟುಕೊಂಡು ಈ ಗ್ರಂಥವನ್ನು ಬರೆದಿರುವರು. ಪುರಾತನರೆಲ್ಲ ಬಹುತರವಾಗಿ ದ್ರಾವಿಡ ದೇಶದವರಿರುವರು. ಮತ್ತು ಆಗಮ ಧರ್ಮಾನುಯಾಯಿಗಳಾದ ಶೈವರಿರುವರು. ಆದರೂ ಇವರು ವೀರಶೈವರಿಗೆ ಪೂಜ್ಯರಾಗಿದ್ದಾರೆ. ಇವರ ಉಲ್ಲೇಖಗಳನ್ನು ಬಹುತರ ಎಲ್ಲ ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಅತ್ಯಾದರದಿಂದ ಮಾಡುವದುಂಟು. ವಚನಕಾರರೂ ಕೂಡ ಇವರನ್ನು ತಮ್ಮ ಉಕ್ತಿಗಳಲ್ಲಿ ಹೇರಳವಾಗಿ ವಿವರಿಸಿರುವರು. ಪುರಾತನರ ಚರಿತ್ರೆಗಳು ಬಹು ಹೃದಯಂಗಮವಾಗಿರುತ್ತವೆ. ಅವುಗಳಲ್ಲಿ ಶಿವಭಕ್ತಿರಸವು ಯಾವಾಗಲೂ ತುಂಬಿತುಳುಕುತ್ತದೆ. ಇಂಥವರ ಚರಿತ್ರೆಗಳನ್ನು ಯಾವತ್ತರೂ ಅರಿಯುವದು ಅವಶ್ಯವಿದೆ. ಆದ್ದರಿಂದ ಈ ಮಹಿಮರ ಚರಿತ್ರೆಗಳನ್ನು ಗ್ರಂಥಕಾರರು ಸುಲಭ ಕನ್ನಡದಲ್ಲಿ ವಿವರಿಸಿದ್ದು ಬಹಳ ಅಭಿನಂದನೀಯವಾಗಿದೆ. ಮೂಲ ಕಾವ್ಯಗ್ರಂಥಗಳನ್ನು ಓದುವವರು ಬಹಳ ವಿರಳ. ಅವುಗಳ ವಿಷಯಗಳನ್ನು ಜನಸಾಮಾನ್ಯಕ್ಕೆ ಅರಿಯಲಿಕ್ಕೆ ದುಸ್ತರವು. ಆದ್ದರಿಂದ ಗದ್ಯ ಗ್ರಂಥಗಳು ಈ ಕಾಲಕ್ಕೆ ಬಹಳ ಅವಶ್ಯವಾದವುಗಳಿರುತ್ತವೆ. ಕೆಲವು ವರ್ಷಗಳ ಹಿಂದೆ ಬಸವಪುರಾಣ ಮತ್ತು ಚನ್ನಬಸವಪುರಾಣ ಈ ಗ್ರಂಥಗಳು ಗದ್ಯದಲ್ಲಿ ಪ್ರಕಟವಾದ್ದರಿಂದ ಬಹುಜನರಿಗೆ ಅವುಗಳಲ್ಲಿಯ ವಿಷಯಗಳನ್ನು ತಿಳಿಯಲಿಕ್ಕೆ ಅಸ್ಪದವಾಯಿತು. ಅದೇ ಮೇರೆಗೆ ಈ ಗ್ರಂಥವಾದರೂ ಜನರಲ್ಲಿ ವಿಶೇಷವಾಗಿ ಪ್ರಿಯವಾಗಬಹುದೆಂದು ನಾವು ಆಶಿಸುತ್ತೇವೆ. ಕಥೆಯ ವಿಷಯಗಳು ಚಿಕ್ಕವಿರುತ್ತವೆ. ಆದ್ದರಿಂದ ಸ್ತ್ರೀಯರೂ ಬಾಲಕರೂ ಇವುಗಳನ್ನು ಓದಿ ಸುಲಭವಾಗಿ ತಿಳಿದುಕೊಳ್ಳಬಹುದು. ಗ್ರಂಥಕಾರರು ಅವುಗಳನ್ನು ಸರಳ ಮತ್ತು ಸುಲಭ ಶೈಲಿಯಲ್ಲಿ ಬರೆದಿರುವರು. ಆದರೂ ಭಾಷೆಯು ಪ್ರೌಢವಾಗಿರುತ್ತದೆ. ಗ್ರಂಥಕಾರರು ಬಹಳ ಶ್ರಮಪಟ್ಟು ಈ ಗ್ರಂಥವನ್ನು ಪ್ರಕಟಪಡಿಸಿದ್ದಕ್ಕೆ ನಾವು ಅವರನ್ನು ಬಹಳ ಶ್ಲಾಘಿಸುತ್ತೇವೆ. ಗ್ರಂಥದ ಪುಟಗಳು ೨೯೨ ಇದ್ದು, ಬೆಲೆ ೨ ರೂಪಾಯಿಮಾತ್ರವಿದೆ. ವಾಚಕರು ಈ ಗ್ರಂಥವನ್ನು ಅವಶ್ಯವಾಗಿ ಸಂಗ್ರಹಿಸತಕ್ಕದ್ದು.

---

# ಕೊಡಗಿನ ಸಂಸ್ಥಾನದ

## ರಾಜೇಂದ್ರನಾಮೆ.

→*←

† [ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿ! ಶ್ರೀ ವಿಜಯಾಭ್ಯುದಯ ಕಲಿಯುಗ ಸಂದ ವರುಷ ೪೯೫೮ ನೇ ಶಾಲಿವಾಹನ ಶಕ ಸಂದ ೧೭೭೯ ನೇ ವರ್ತಮಾನಕ್ಕೆ ಸಲುವ ನಳ ಸಂವತ್ಸರ ದಲ್ಲು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಕೊಡಗಿನ ಸಂಸ್ಥಾನದ ಶ್ರೀರತ್ನಸಿಂಹಾಸನಾರೂಢರಾಗಿ ಪೃಥ್ವಿಸಾಮ್ರಾಜ್ಯಂ ಗೆಯ್ಯುತ್ತಿದ್ದ ಭಾರದ್ವಾಜ ಗೋತ್ರದ ಆಶ್ವಲಾಯನ ಸೂತ್ರದ ಋಕ್‌ಶಾಖಾನೂಪಾಧ್ಯಾಯ ವೀರಶೈವ ಮತಸ್ಥರಾದ] ಅಪ್ಪಾಜಿ ರಾಜೇಂದ್ರರ ಪೌತ್ರರಾದ ಲಿಂಗರಾಜೇಂದ್ರ ಒಡೆಯರವರ ಪುತ್ರರಾದ ವೀರರಾಜೇಂದ್ರ [ಒಡೆಯರವ] ರು * ಕೊಡಗಿನ್ನ ಸಂಸ್ಥಾನದ ರಾಜ್ಯಾಧಿಪತ್ಯವನ್ನು ಮಾಡಿಕೊಂಡು ಇರುವಾಗ್ಗೆ, ತಮ್ಮ ಕೊಡಗಿನ ಸಂಸ್ಥಾನದ ದೊರೆಗಳ ವಂಶಾವಳಿ ಪಾರಂಪರ್ಯವಾಗಿ ಪ್ರಾರಭ್ಯದಿಂದ ನಡೆದು ಬಂದಂಥಾ ವೃತ್ತಾಂತಗಳನ್ನು ಬರೆದ [ಕಾಗದ] + ಗಳ ಜೀರ್ಣೋದ್ಧಾರಮಾಡಿ ಬರೆಸಿ, ಇತ್ತಲಾಗೆ ನಡೆದಂಥಾ ಅಭಿಪ್ರಾಯಗಳನ್ನು ಅದಕ್ಕೆ ಬರೆಸಬೇಕೆಂಬದಾಗಿ, ಪುರಾಣಸಾಧನಗಳನು ತೆಗೆಸಿ ನೋಡಿದಲ್ಲಿ, ಕಲಿ ಸಂದ ೪೭೩೪ ನೇ ಆಂಗೀರಸ ಸಂವತ್ಸರದ ಆಚೆಗೆ ನಡೆದ ವೃತ್ತಾಂತ ಬರೆದ ಸಾಧನಗಳು ನವಾಬ ಹೈದರಲ್ಲೀ ಖಾನಬಹಾದ್ದರವರು ಅವರ ಮಗ ಟೀಪೂಸುಲ್ತಾನರ ದಿವಸದಲ್ಲಿ ಸಹ ಅತಂತ್ರವಾಗಿ ಹೋದದ್ದು ಹೋಗಲಾಗಿ, ಆ ಆಂಗೀರಸ ಸಂವತ್ಸರದ ಇತ್ತಲಾಗೆ ತಮ್ಮ ತಂದೆಯವರಾದ ಲಿಂಗರಾಜೇಂದ್ರ ಒಡೆಯರ ದಿವಸ ಪರಿಯಂತರ ಆದ ವಿದ್ಯಮಾನ ಬರೆದ ಸಾಧನಗಳು ಉಳಿದು ಇದ್ದದ

---

† ಈ ಅಂಶವು ಅ. ಪ್ರತಿಯಲ್ಲಿ ಇಲ್ಲ.

* ಈ ಅಂಶವು ಅ. ಪ್ರತಿಯಲ್ಲಿ ಇಲ್ಲ.

\+ ಬ. ಶಾಸನ.

ರಿಂದ; ಅದರಲ್ಲಿ ಬರೆದು ಇದ್ದ ವಿವರ, ಮತ್ತು ತಮ್ಮ ಕಾಲದಲ್ಲಿ ನಡೆದಂಥಾ ರಾಜಕಾರ್ಯ ಕಾರಣಂಗಳ ಸಹ, ಸಮಸ್ತರು ತಿಳಿಯುವ ಬಗ್ಗೆ ನಳ ಸಂವತ್ಸರದ ಮಾಘ ಶು. ೧ ಯು. ಭಾನುವಾರ ಅಪ್ಪಣೆಕೊಟ್ಟು ಬರೆಸಿದ ಕ್ರಮವೆಂತೆಂದರೆಃ—

ಅಂಗೀರಸ ಸಂವತ್ಸರದಲ್ಲಿ ವೀರರಾಜೇಂದ್ರ ಒಡೆಯರ ಪೌತ್ರರಾದ ಅಪ್ಪಾಜಿ ರಾಜರ ಪುತ್ರರಾದ ಮುದ್ದರಾಜ ಒಡೆಯರು ಪೂರ್ವ ಆರಭ್ಯ ದೊರೆತನ ಮಾಡಿ ಬಂದಂಥ [ಜಾಗ] × ಹಾಲೇರಿ ಅರಮನೆ ಆದ್ದರಿಂದ, ಅಲ್ಲಿಯೇ ಇದ್ದುಕೊಂಡು ರಾಜ್ಯಭಾರ ಮಾಡಿಕೊಂಡು ಇದ್ದರು. ಅತಃಪ್ರಾಕು ಇವರ ವಂಶಭೂತರಲ್ಲಿ ಒಬ್ಬರು ಮೊದಲಾರಭ್ಯದಿಂದ ಪೆರಿಯಾಪಟ್ಟಣದಲ್ಲಿ ಇದ್ದು ಅಲ್ಲಿ ರಾಜ್ಯಭಾರ ಮಾಡಿಕೊಂಡು ಏಕಗೃಹಕೃತ್ಯವಾಗಿ ನಡೆಯುತ್ತಾ ಇದ್ದರು.

ಈ ಕೊಡಗಿನ ಸಂಸ್ಥಾನದ ಸಿಂಹಾಸನದ ಅಧಿಪತಿಗಳಾಗಿ ಇದ್ದ ಮುದ್ದರಾಜ ಒಡೆಯರ ಪಟ್ಟದ ಸ್ತ್ರೀ ಆದ ದೇವಮ್ಮಾಜಿಯವರ ಗರ್ಭದಲ್ಲಿ ರಾಜಶ್ರೇಷ್ಠರಾದ ಶಿರಿಬಾಯಿ ದೊಡ್ಡ ವೀರಪ್ಪ ಒಡೆಯರು ಕಲಿ ಸಂದ [೪೭೫೧] ನೇ || ಹೇವಿಳಂಬಿ ಸಂ॥ ದಲ್ಲಿ ± ಜನಿಸಿದರು. ಅವರ [ಹಿಂದೆ] ಅಪ್ಪಾಜಿರಾಜರು * ಅವರ ಬೆನ್ನು ಹಿಂದೆ ನಂದರಾಜರು ಸಹ ಜನಿಸಿದರು. ಅದರಲ್ಲಿ ಹಿರಿಯ ಕುಮಾರ ಶಿರಿಬಾಯಿ ದೊಡ್ಡ ವೀರಪ್ಪ ಒಡೆಯರಿಗೆ ಮುದ್ದಮ್ಮಾಜಿ ದೇವಮ್ಮಾಜಿ ಎಂಬ ಇಬ್ಬರು ರಾಣಿಗಳ ಮದುವೆ ಮಾಡಿ, ಮುದ್ದರಾಜರವರು ಮಡಿಕೇರಿಯೆಂಬ ಜಾಗ ಪಸಂದು ಮಾಡಿ, ಅಲ್ಲಿ ನೂತನವಾಗಿ ಕೋಟೆಯನ್ನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗೆಸಿ ತಯ್ಯಾರು ಮಾಡಿಸಿ ಕಲಿ ಸಂದ ೪೭೮೩ ನೇ ದುರ್ಮತಿ ಸಂವತ್ಸರದಲ್ಲಿ ತಮ್ಮ ಜ್ಯೇಷ್ಠಪುತ್ರರಾದ ದೊಡ್ಡ ವೀರಪ್ಪ ಒಡೆಯರಿಗೆ ರಾಜಪಟ್ಟಾಭಿಷೇಕವನ್ನು ಮಾಡಿ ರಾಜ್ಯಾಧಿಪತ್ಯವನ್ನು ಕೊಟ್ಟು, ಆ ಮೇಲೆ ಎರಡನೇ ಕುಮಾರರಾದ ಅಪ್ಪಾಜಿ ರಾಜರಿಗೆ ರಾಜಮ್ಮಣ್ಣಿಯೆಂಬವರ ವಿವಾಹವನ್ನು ಮಾಡಿ, ಅವರನ್ನು ಮುದ್ದ

---

× ಬ ಸಿಂಹಾಸನದ ಜಾಗ.

|| ಬ ೪೭೫೯.

± ಬ ನಾವು ಸ॥ ದಲ್ಲಿ.

* ಬ ಬೆನ್ನ ಹಿಂದೆ.

ರಾಜ ಒಡೆಯರು ತಮ್ಮ ಬಳಿಯ ಹಾಲೇರಿ ಅರಮನೆಯಲ್ಲು ಇಟ್ಟು ಕೊಂಡು, ಮೂರನೆ ಮಗನಾದ ನಂದರಾಜ ಅರಸುಗಳಿಗೆ ನಂಜಮ್ಮಣ್ಣಿಯೆಂಬವರ ವಿವಾಹವನ್ನು ಮಾಡಿ ಅವರಿಗೆ ಹೊರಮಲೆ ನಾಡನ್ನು ಜಹಗಿರು ಕೊಟ್ಟು ಅಲ್ಲಿ ಇಟ್ಟರು.

ಆ ಮೇಲೆ ಕಲಿಸಂದ [೪೭೮೫] * ನೇ ಕ್ಷಯ ಸಂವತ್ಸರದಲ್ಲಿ ಮುದ್ದರಾಜ ಒಡೆಯರು ಶಿವಾಧೀನವಾದರು. ದೊಡ್ಡ ವೀರಪ್ಪ ಒಡೆಯರು ಅದೇ ಮೇರೆ ರಾಜ್ಯಭಾರ ಮಾಡುತ್ತ ಇದ್ದರು. ಅವರಿಗೆ ಅಪ್ಪಾಜಿರಾಜರೆಂಬ ಕುಮಾರರು ಜನಿಸಿದರಿಂದ [ವಿವಾಹ] † ಮಾಡಿದರು. ಅದೇ ರಾಣಿಯವರ ಗರ್ಭದಲ್ಲಿ ಚಿಕ್ಕ ವೀರಪ್ಪ ಒಡೆಯರೆಂಬ ಕುಮಾರರು ಜನಿಸಿದರು. ಹಾಲೇರಿ ಅರಮನೆಯಲ್ಲು ಇದ್ದ ಅಪ್ಪಾಜಿ ರಾಜರಿಗೆ ಅಯಿದು ಮಂದಿ ಕುಮಾರರು ಜನಿಸಿದರು. ಅದರಲ್ಲಿ ಹಿರಿಯ ಕುಮಾರರಾದ ಮುದ್ದಯ್ಯ ರಾಜರಿಗೆ ನಂಜಮ್ಮಣ್ಣಿಯೆಂಬವರ ವಿವಾಹ ಮಾಡಿದರು. ಎರಡನೆ [ಲಿಂಗರಾಜ] § ರಿಗೆ ದೇವಾಂಬಿಕೆ ಅಮ್ಮನವರ ವಿವಾಹ ಮಾಡಿದರು. ಉಳಿಕೆ ಮೂರು ಮಂದಿ ಕುಮಾರರು ಕೆಲವು [ದಿನದಲ್ಲಿ ತೀರಿ] ± ಹೋದರು. ಆ ಮುದ್ದೈಯ ರಾಜರಿಗೆ ಅಪ್ಪಾಜಿ [ರಾಜರು] × ಜನಿಸಿದರು. ಲಿಂಗ [ರಾಜರಿಗೆ] || ವೀರ ರಾಜ [ಒಡೆಯರು] = ಜನಿಸಿದರು. ಹೊರಮಲೆಯಲ್ಲು ಇದ್ದ ನಂದರಾಜರಿಗೆ ಮುದ್ದರಾಜರು ಜನಿಸಿದರು. ಆ ಮುದ್ದೈಯ ಅರಸುಗಳಿಗೆ ವಿವಾಹ ಮಾಡಿದರು. ಅವರಿಗೆ ಮಲ್ಲೈಯ ರಾಜರು ಜನಿಸಿದರು.

ಈ ಮೇರೆ ಇರುತ್ತ ಇದ್ದಲ್ಲಿ, ಆವಾಗ್ಗೆ ಮೈಸೂರು ಸಂಸ್ಥಾನದಲ್ಲಿ ಚಿಕ್ಕ ದೇವರಾಜ ಒಡೆಯರು, ಇಕ್ಕೇರಿ ಸಂಸ್ಥಾನದಲ್ಲಿ ದೊಡ್ಡ ಚನ್ನಮ್ಮಾಜಿಯವರು ಸೋಮಶೇಖರನಾಯಕರ ಸಾಕಿಕೊಂಡು ದೊರೆ

---

* ಬ ೪೭೮೮.

† ಬ ಅವರಿಗೆ ವಿವಾಹ.

§ ಬ ಕುಮಾರರಾದ ಲಿಂಗರಾಜ

± ಬ ದಿವಸದ ಒಳಗಾಗಿ ಶಿವಾಧೀನವಾಗಿ

× ಬ ರಾಜರು ಎಂಬ ಕುಮಾರರು

|| ಬ ರಾಜೇಂದ್ರ ಒಡೆಯರಿಗೆ ಕಲಿಸಂದ ವರುಷ ೪೮೩೫ ನೇ ಸ್ವಭಾನು ಸಂವತ್ಸರದ ಜ್ಯೇಷ್ಠ ಬ. ೩೦. ಯು ಶುಕ್ರವಾರಘಳಿಗೆ ೪೩ ರಲ್ಲಿ

= ಬ ಒಡೆಯರು ಎಂಬ ಕುಮಾರರು

ತನ ಮಾಡುತ್ತ ಇದ್ದರು. ಸ್ವಾದೆ ಸಂಸ್ಥಾನದಲ್ಲಿ [ಸದಾಶಿವ] × ರಾಜರೂ, ಬೇಲೂರು ಸಂಸ್ಥಾನದಲ್ಲಿ ವೆಂಕಟಾದ್ರಿ ನಾಯಕರೂ, ಚೆರಕಲ ಸಂಸ್ಥಾನದಲ್ಲಿ ವೀರ [ವರ್ಮ] ‖ ರಾಜರೂ, ಈ ಮೇರೆ ತಮ್ಮತಮ್ಮ ರಾಜ್ಯಭಾರ ಮಾಡಿಕೊಂಡು ಇರುತ್ತಿದ್ದರು.

ಆವಾಗ್ಗೆ [ಮೈಸೂರ ಸರಹದ್ದಿನ] ± ಪೆರಿಯಾಪಟ್ಟಣದಸೀಮೆಯೂ ಕೊಡಗಿನ ಸೀಮೆಯೂ [ಒಂದಾಗಿ] * ನಡೆದು ಬರುತ್ತ ಇತ್ತು. ಕೊಡಗಿಗೂ ಮೈಸೂರಿಗೂ ಸೇರಿದ ಸರಹದ್ದು ಪೆರಿಯಾಪಟ್ಟಣ ತಾಲೂಕು ಕಟ್ಟೆಮಳವಾಡಿ ಸಮೀಪ ಉಮ್ಮಾರು ಕೊತಗರಹಳ್ಳಿ ಯೆಂಬಲ್ಲಿ ಕೊಡಗಿನ ನಿಶಾನಿಕಲ್ಲು ನಟ್ಟುಯಿದೆ. ಮೈಸೂರವರಿಗೂ ಕೊಡಗಿನವರಿಗೂ ಮೊದಲಾಗಿ ವಿರೋಧವಾದ ಕಾರಣಯೇನೆಂದರೆ— ಪೆರಿಯಾಪಟ್ಟಣದ ನಂಜುಂಡ ಅರಸುಗಳ ಕಡೆಯ ಕೆಲವು ಚಾಕರ ಜನರು ಪಿತೂರಿಯಿಂದಃ— "ಈಗ ನಿಮ್ಮ ಫವುಜು ಕಳುಹಿಸಿ ಕೊಟ್ಟರೆ ಈ ಕೋಟೆ ನಿಮ್ಮ ಕೈವಶ ಮಾಡಿಕೊಡುತ್ತೇವೆ"— ಯೆಂಬದಾಗಿ ಮೈಸೂರು[ದೊರೆಗಳಿಗೆ] † ಚದಿ ಸಂಧಾನ ನಡೆಸಿ ಹೇಳಿಕಳುಹಿಸಿದ್ದರಿಂದ, ಆ ಚಿಕ್ಕದೇವರಾಜ ಒಡೆಯರು ಪೆರಿಯಾಪಟ್ಟಣದ ಕೋಟೆ ಆ ಸೀಮೆ ಸಹ ಸಾಧಿಸಿ ಕೊಳ್ಳಬೇಕೆಂಬುದಾಗಿ ಫವುಜು ಜಮಾಯಿ [ಸುತ್ತ] § ಇದ್ದರು. ಇವರ ಫವುಜು ತಯ್ಯಾರು ಮಾಡಿಸುವ ಸಮಾಚಾರ ನಂಜುಂಡ ಅರಸುಗಳು ತಿಳಿದು, ಪೆರಿಯಾಪಟ್ಟಣದ ಕೋಟೆಯಲ್ಲಿ ತಮ್ಮ ಮಗನಾದ ವೀರರಾಜರ ಮಡಗಿ, ತಾವು ಫವುಜು ತೆಗೆದುಕೊಂಡು ಹೋಗುವ ಬಗ್ಗೆ ಮಡಿಕೇರಿಗೆ ಬಂದು, ಈ ಸಮಾಚಾರವನ್ನು ದೊಡ್ಡ ವೀರಪ್ಪ ಒಡೆಯರಿಗೆ ಜಾಹೀರು ಮಾಡಿದ್ದಲ್ಲಿ, ಅವರು ತಮ್ಮ ಕೊಡಗು ಮಂದಿ ಯಾವತ್ತು ಜಮಾಯಿಸುತ್ತ ಇದ್ದರು. ಅಷ್ಟರಲ್ಲಿಃ— "ಈ ಮೇರೆ ನಂಜುಂಡ ಅರಸುಗಳು ಫವುಜು ತೆಗೆದುಕೊಂಡು ಬರುವ ಬಗ್ಗೆ ಮಡಿಕೇರಿಗೆ ಹೋಗಿಯಿದ್ದಾರೆ. ಆ ಫವುಜು

---

× ಬ. ದೊಡ್ಡ ಸದಾಶಿವ

‖ ಬ ರವಿವರ್ಮ

± ಬ ಈ ಶಬ್ದಗಳು ಇಲ್ಲ.

* ಬ ಒಂದೇ ಸೀಮೆಯಾಗಿ

† ಬ ಚಿಕ್ಕ ದೇವರಾಜ ಒಡೆಯರವರ ಬಳಿಗೆ

§ ಬ ತಯಾರಾಗುತ್ತ

ತೆಗೆದುಕೊಂಡು ಇಲ್ಲಿಗೆ ಬಂದರೆ ಬಲ ಹೆಚ್ಚಾಗುತ್ತದೆ. ಆ ಬಳಿಕ ಕೋಟೆ ನಿಮಗೆ ಸಾಧ್ಯವಾಗುವದು ಪ್ರಯಾಸವಿದೆ. ಆದದರಿಂದ ಆ ಫವುಜು ಬರು ವದಕ್ಕಿಂತ ಮೊದಲೇ ನಿಮ್ಮ ಫವುಜು ಬಂದರೆ ಸುಲಭದಲ್ಲಿ [ನಿಮ್ಮ] § ಕೈವಶಮಾಡಿಕೊಡುತ್ತೇವೆ."— ಯೆಂಬದಾಗಿ ಪೆರಿಯಾಪಟ್ಟಣದಲ್ಲಿ ಇದ್ದ ಫಿತೂರಿಯವರು ಮೈಸೂರು ದೊರೆಗಳಿಗೆ ಹೇಳಿ ಕಳುಹಿಸಿದಲ್ಲಿ, ಈ ವರ್ತ ಮಾನ ಕೇಳಿದಾಕ್ಷಣ ಚಿಕ್ಕದೇವರಾಜರು ರಾತ್ರಿಹಗಲು ಫವುಜು ಕಳು ಹಿಸಿ, ಪೆರಿಯಾಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿಸಿ, ಜಗಳಮಾ [ಡು]ತ್ತ † ಇದ್ದರು. ದೊಡ್ಡ ವೀರಪ್ಪ ಒಡೆಯರು ತಮ್ಮ ಮಂದಿ ಯಾವತ್ತು ಜಮಾಯಿಸಿಕೊಂಡು ಹೋ [illegible]ಶ್ವರನ ಬೆಟ್ಟದ ಬಳಿಗೆ ತಲುಪುವಷ್ಟರಲ್ಲಿ— 'ಆ ಫಿತೂರಿಜನರ ಸಹಾಯದಿಂದ ಪೆರಿಯಾಪಟ್ಟಣದ ಕೋಟೆಯನ್ನು ಹಲ್ಲಾ ಮಾಡಿ ಮೈಸೂರವರು ತೆಗೆದುಕೊಂಡರು. ಆವಾಗ್ಗೆ ಅಲ್ಲಿ ಇದ್ದ ವೀರರಾಜ ಅರಸುಗಳು ತಮ್ಮ ಬಹುಮಾನ ಕೀರ್ತಿ(ಯ) ಮೇಲೆ ದೃಷ್ಟಿ ಮಡಗಿ ತಮ್ಮ ಕುಟುಂಬ ಮಕ್ಕಳು ಯಾವತ್ತನ್ನು ಕೊಂದು ಹಾಕಿ, ಅವರು ಅಲ್ಲಿಯೇ ಜಗಳ ಮಾಡಿ ಪ್ರಾಣಬಿಟ್ಟರು.'— ಎಂಬ ದಾಗಿ ದೊಡ್ಡ ವೀರಪ್ಪ ಒಡೆಯರಿಗೆ ವರ್ತಮಾನ ಬಂದದ್ದರಿಂದ, "ಆ ಕೋಟೆಯನ್ನು ಮಹಿಸೂರವರು ತೆಗೆದುಕೊಂಡು ತಮ್ಮ ಮಂದಿ ಠಾಣ್ಯ ಯಿಟ್ಟು ಬಲಕಾಯಿಸಿಕೊಂಡರು. ಇನ್ನು ನಾವು ಅಲ್ಲಿಗೆ ಹೋದರೆ ಫಲ ವೇನದೆ? ಇನ್ನು ಮೈಸೂರವರು ಬಡಾಯಿಸಿ ಕೊಡಗಿನ ಸೀಮೆವೊಳಗೆ ನುಗ್ಗಿ ಬಂದಾರು"— ಎಂಬದಾಗಿ ತಮ್ಮ ಮನಸ್ಸಿನಲ್ಲು ಗ್ರಹಿಸಿ, ಕೊಡ ಗಿನ ಸರಹದ್ದು ಸಿದ್ಧೇಶ್ವರನ ಬೆಟ್ಟ ಬಳಿಯ ಮುಂತಾದ ಎಲ್ಲೆಗಟ್ಟು ಬಂದ ಹಾಗೆ [ಅಲ್ಲಿ] ‖ ಬೇಕಾದಷ್ಟು ಮಂದಿಯಿಟ್ಟು ಬಂದೋ ಬಸ್ತು ಮಾಡಿಸಿ, ತಾವು ಪುನಃ ಮಡಿಕೇರಿಗೆ ಬಂದು, ಪೆರಿಯಾಪಟ್ಟ ಣದಲ್ಲಿ ನಡೆದ ವೃತ್ತಾಂತ ಯಾವತ್ತು ನಂಜುಂಡ ಅರಸುಗಳಿಗೆ ಹೇಳಿ ದ್ದಲ್ಲಿ, ಅವರು ಬಹು ಚಿಂತಾಕ್ರಾಂತರಾಗಿ ದುಃಖಪಟ್ಟುಕೊಂಡದ ರಿಂದ"— ನಿಮ್ಮ ಕುಮಾರರು ತೀರಿಹೋದಾಗ್ಲೂ ಆ ಮೈಸೂರವರು ಮಾಡಿದ್ದಕ್ಕೆ ಪ್ರತಿಜವಾಬುಕೊಡುವ ಬಗ್ಗೆ ನಿಮ್ಮ ಅಣ್ಣನ ಮಗನಾಗಿ

---

§ ಬ ಕೋಟೆ ನಿಮ್ಮ.

† ಬ ಡಿಸು

‖ ಬ ಅಲ್ಲಲ್ಲಿ

ನಾವು ಹಾಜರು ಇದ್ದೇವೆ. ಇದರ ಮೇಲೆ ನಮ್ಮ ಅರಮನೆಯಲ್ಲು ಇರುವಂತ(ಹ) ಚಿಕ್ಕವರು ದೊಡ್ಡವರು ಸಹ ತಮ್ಮ ಮಕ್ಕಳೋಪಾದಿಯಲ್ಲಿ ಇದ್ದಾರೆ. ತಾವು ಎಲ್ಲಾ ಬಗೆಯಲ್ಲು ನಿಶ್ಚಿಂತರಾಗಿ ಇರಬೇಕು"— ಯೆಂಬದಾಗಿ ಒಡಂಬಡಿಸಿದರು.

ಆವಾಗ್ಗೆ ಆ ನಂಜುಂಡ ಅರಸುಗಳು ಹೇಳಿದ ವಿವರ—"ನಮಗೆ ಮುಪ್ಪಿನಕಾಲವಾದ್ದರಿಂದ ನಮ್ಮ [ಮನೆಗೆ] † ಪೆರಿಯಾಪಟ್ಟಣದ [ಒತ್ತಿ] § ನಲ್ಲಿ ನಿಮ್ಮ ಒಡಂಬಡಿಕೆಯಿಂದ ಕೂರಿಸಿ, ನಾವು ಈ ಲೋಕದ ಆಸೆ ತೊರೆದು, ಶಿವಧ್ಯಾನ ಮಾಡಿಕೊಂಡು ಇರುತ್ತಾ ಇದ್ದೇವು. ಇಂಥಾ ಮುಪ್ಪಿನ ವೇಳೆ ನಟ್ಟ್ನೋಡಬಾರದಂಥಾ ಅವಸ್ಥೆ ಮಹಾದೇವನು ತೋರಿಸಿದ. ನಮ್ಮ ಕಯ್ಯಿಂದ ಬಿಟ್ಟು ಹೋದಂತ(ಹ) ಸೀಮೆಯನ್ನು ನೀವು ಸಾಧಿಸಿಕೊಳ್ಳಬೇಕು. ನಮ್ಮ ಆಯುಷ್ಯ ತೀರುವ ಪರಿಯಂತರ ಇರುವ ಬಗ್ಗೆ ಒಂದು ಮನೆ, ನಮ್ಮ ಮನೆದೇವರಾದ ವೀರಭದ್ರ ದೇವರಿಗೆ ಒಂದು ದೇವಸ್ಥಾನ ಸಹ ಕಟ್ಟಿಸಿ ಕೊಡಬೇಕು. ಇದಲ್ಲದೆ ನಮ್ಮ ಹೆಸರಲ್ಲಿ ಒಂದು ಲಿಂಗ ಪ್ರತಿಷ್ಠೆಮಾಡಬೇಕು ಯೆಂಬದಾಗಿ ನಮ್ಮ ಮನಸ್ಸಿನಲ್ಲು ಇದೆ. ಈ ಬಗ್ಗೆ ಕಾವೇರಿ ಹೊಳೆಕರೆಯಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿ, ಅದರಲ್ಲಿ ನಮ್ಮ ಹೆಸರಿಂದ ಲಿಂಗಪ್ರತಿಷ್ಠೆ ಮಾಡಿಸಿ, ನಮ್ಮ ಆಯುಷ್ಯ ತೀರಿದ ಮೇಲೆ ಆ ದೇವಸ್ಥಾನದ ಮುಂದೆ ನಮ್ಮ ಸಮಾಧಿ ಮಾಡಿ ಅದರ ಮೇಲೆ ಕಲ್ಲುಮಂಟಪ ಕಟ್ಟಿಸಿ ಅದರ ಒಳಗೆ ಬಸವೇಶ್ವರ ದೇವರ ಪ್ರತಿಷ್ಠೆ ಮಾಡಿಸಬೇಕು."— ಎಂಬದಾಗಿ ಹೇಳಿದ್ದರಿಂದ, ಅದೇ ಮೇರೆ ಕಾವೇರಿ ಹೊಳೆ ಬಳಿಯ ಹೊಳಸಾಲಿಯಲ್ಲಿ ಅವರಿಗೆ ಒಪ್ಪಿದ ಸ್ಥಳದಲ್ಲಿ ದೊಡ್ಡ ವೀರಪ್ಪ ಒಡೆಯರವರು ಒಂದು ಅರಮನೆಯನ್ನು ಕಟ್ಟಿಸಿ, ಅದರ ಸುತ್ತ ಕಂದಕ ಮುಂತಾಗಿ ತೆಗೆಸಿ, ಅವರನ್ನು ಅಲ್ಲಿ ಮಡಗಿ, ಅದಕ್ಕೆ ನಂಜರಾಯಪಟ್ಟಣಯೆಂಬ ಹೆಸರು ಮಡಗಿ, ಅವರ ವೈಗಾವಲಿನ ಬಗ್ಗೆ ೭೦೦ ಜನ ಕೊಡಗರ ನೇಮಿಸಿಕೊಟ್ಟು, ಅವರು ಹೇಳಿದ ಮೇರೆ ಹೇರಳ ದ್ರವ್ಯ ವೆಚ್ಚಮಾಡಿ ವೀರಭದ್ರ ದೇವಸ್ಥಾನವನ್ನು ಕಟ್ಟಿಸಿ, ಅದರಲ್ಲಿ [ದೇವರ] * ಪ್ರತಿಷ್ಠೆ

† ಬ ಮಗನಿಗೆ
§ ಬ ದವಲತ್ತಿ
* ಬ ವೀರಭದ್ರದೇವರ

ಮಾಡಿ, ಮತ್ತೊಂದು ದೇವಸ್ಥಾನವನ್ನು ಕಲ್ಲಿಂದ ಕಟ್ಟಿಸಿ, ಅದರ ಒಳಗೆ ಲಿಂಗಪ್ರತಿಷ್ಠೆ ಮಾಡಿಸಿ ಅದಕ್ಕೆ ನಂಜುಂಡೇಶ್ವರ ಯೆಂಬ ಹೆಸರು ಮಡಗಿದರು. ಆ ಬಳಿಕ ಕೆಲವು ದಿವಸದ ಮೇಲೆ ಆ ನಂಜುಂಡ ಅರಸುಗಳು ಶಿವಾಧೀನವಾದ್ದರಿಂದ, ಅವರು ಹೇಳಿದ ಮೇರೆ ದೊಡ್ಡ ವೀರಪ್ಪ ಒಡೆಯರು ಆ ದೇವಸ್ಥಾನದ ಮುಂದೆ ಸಮಾಧಿ ಮಾಡಿಸಿ, ಅದರ ಮೇಲೆ ಕಲ್ಲುಮಂಟಪವನ್ನು ಕಟ್ಟಿಸಿ, ಅದರ ಒಳಗೆ ದೊಡ್ಡದಾಗಿ ಒಂದು ಬಸವೇಶ್ವರ ದೇವರ ಪ್ರತಿಷ್ಠೆ ಮಾಡಿಸಿ, ಆ ದೇವಸ್ಥಾನದ ವೆಚ್ಚದ ಬಗ್ಗೆ ಆಚಂದ್ರಾರ್ಕ [ವುಳ್ಳ ಪರಿಯಂತರ] * ಧರ್ಮ ನಡೆಯುವ ಬಗ್ಗೆ ಕೆಲವು ಭೂಮಿಯನ್ನು ಉತ್ತಾರು ಬಿಟ್ಟುಕೊಟ್ಟರು.

ಆ ಬಳಿಕ ಕೆಲವು ಕಾಲದ ಮೇಲೆ ಕೊಡಗಿನ ಸಂಸ್ಥಾನವನ್ನು ಕಟ್ಟಿಕೊಳ್ಳಬೇಕೆಂಬುದಾಗಿ ಮೈಸೂರ ಸಂಸ್ಥಾನದಿಂದ ಭಾರಿದಂಡು ಬಂದಲ್ಲಿ, ದೊಡ್ಡ ವೀರಪ್ಪ ಒಡೆಯರವರು ತಮ್ಮ ಫವುಜು ಯಾವತ್ತು ತೆಗೆದುಕೊಂಡು ಸರಹದ್ದು ಬಂದೋಬಸ್ತು ಮಾಡಿ, ಅವರ ಸಂಗಡ ಜಗಳ ಮಾಡುವದಕ್ಕೆ ತಯಾರಾಗಿ ಇದ್ದರು. ಈ ತರುವಾಯದಲ್ಲಿ ಕೊಡಗಿನ ಸೀಮೆಗೆ ವಳಿತ್ತವಾದ ಬೆಪ್ಪುನಾಡು ನಾಯಕನ ಉತ್ತಯೆಂಬ ಕೊಡಗ ಕಾರೇಕಾರನು ಉಪ್ಪಿಗೆ ಹರಾಮನಾಗಿ ಕೋಟಿಂಗಡಿ ಅರಸನ ಬಳಿಗೆ ಓಡಿ ಹೋಗಿ ಅರಸಿಗೆ ಹೇಳಿದ ವಿವರ-- "ಮೊದಲು ಮೈಸೂರವರು ಕೊಡಗಿಗೆ ಸೇರಿದ ಪೆರಿಯಾಪಟ್ಟಣದ ಕೋಟೆಯನ್ನು ತೆಗೆದುಕೊಂಡು, ಈಗ ಕೊಡಗಿನ ಸೀಮೆಯನ್ನು ಕಟ್ಟಿಕೊಳ್ಳಬೇಕೆಂಬುದಾಗಿ ಹೇರಳ ಫವುಜು ತೆಗೆದುಕೊಂಡು ಇಲ್ಲಿಗೆ ಬಂದು ಇದ್ದಾರೆ. ಆದ್ದರಿಂದ ದೊಡ್ಡ ವೀರಪ್ಪ ಒಡೆಯರವರು ಯಾವತ್ತು ಮಂದಿಯನ್ನು ತೆಗೆದುಕೊಂಡು ಸರಹದ್ದು ಬಂದೋಬಸ್ತು ಮಾಡಿಕೊಂಡು ತಯಾರಾಗಿ ಇದ್ದಾರೆ. ಅವರ ಸೀಮೆ ಜನರೆಲ್ಲ ಗಾಬರಿಯಾಗಿ ಇದ್ದಾರೆ. ಈ ಸಮಯದಲ್ಲಿ ನೀವು ಯಾವತ್ತು ನಾಯಮಾರರನ್ನು ಕರಕೊಂಡು ಕೊಡಗಿನ ಸೀಮೆಯನ್ನು ಸಾಧಿಸುವ ಬಗ್ಗೆ ಗಟ್ಟಹತ್ತಿ ಬಂದರೆ ನಾನು ಕೆಲವು ಕೊಡಗರನ್ನು ನಿಮ್ಮ ಕುಮಕ್ಕಿಗೆ ಸಾಕಾರ ಮಾಡಿಕೊಡುತ್ತೇನೆ"— ಎಂಬುದಾಗಿ ಹೇಳಿದಲ್ಲಿ, ಆ ಮಾತನ್ನು ಆ ಕೋಟೆ ಅರಸು ನಂಬಿಕೊಂಡು, ನಾಲ್ಕು ಅಯಿದು ಸಾವಿರ ನಾಯಮಾರರನ್ನು ಕರೆದುಕೊಂಡು ಗಟ್ಟದ ಮೇಲೆ ತೋಮಾರಯೆಂಬ ಗ್ರಾಮಕ್ಕೆ ಬಂದು, ಅಲ್ಲಿ

---

* ಬ ವಾಗಿ

ಒಂದು [ಲಕ್ಕಾಟ] || ಕೋಟೆ ಹಾಕಿ, ತಮ್ಮ ಫವುಜು ಸಹ ಆ ಕೋಟೆವೊಳಗೆ ಇದ್ದುಕೊಂಡು— "ನಮ್ಮ ಕುಮುಕ್ಕಿಗೆ ಕೊಡಗರ ಕೂಡಿಸಿ ಕೊಡುತ್ತೇನೆ ಎಂದು ಹೇಳಿಯಿದ್ದೆಯಷ್ಟೆ, ಅವರು ಎಲ್ಲಿ ಇದ್ದಾರೆ?"— ಎಂತ ಆ ಕೋಟೆ ಅರಸು ಕೇಳಿದಲ್ಲಿ, ಆ ನಿಮ್ಮಕ್‌ಹಿರಾಮು ಹೇಳಿದ್ದು— 'ಆ ಜನರು ದೊಡ್ಡ ವೀರಪ್ಪ ಒಡೆಯರ ಸಂಗಡ ಮೈಸೂರ ಫವುಜಿನ ಮೇಲೆ ಜಗಳ ಮಾಡುವದಕ್ಕೆ ಹೋಗಿಯಿದ್ದಾರೆ. ಈಗ ಕರೆಸುವದಕ್ಕೆ ಸಂಗತಿ ಯಿಲ್ಲ. ಮೈಸೂರವರು ಕೊಡಗಿನ ಸೀಮೆ ಒಳಗೆ ಬಂದರೆ ಆ ಜನರೆಲ್ಲ ಚೆಲ್ಲಾಪಿಲ್ಲಿಯಾಗಿ ಸೀಮೆಗೆ ಬರುತ್ತಾರೆ. ಆವಾಗ್ಗೆ ನನಗೆ ಬೇಕಾದವರ [ಕರೆದರೆ] † ಬಂದಾರು. ಆಮೇಲೆ ಕೆಲವು ಕೊಡಗಿನ ಸೀಮೆಯನ್ನು ಸುಲಭದಿಂದ ಸಾಧಿಸಿಕೊಳ್ಳಬಹುದು"— ಎಂಬದಾಗಿ ಹೇಳಿದ ಆ ಮಾತನ್ನು ನಂಬಿಕೊಂಡು, ಆ ಕೋಟೆ ಅರಸುಗಳು ತಮ್ಮ ಮಂದಿ ಸಹ ಆ ಲಖ್ಖಡಿ ಕೋಟೆಯಲ್ಲು ಇರುತ್ತಾ ಇದ್ದಲ್ಲಿ, ಈ ಸಮಾಚಾರ ದೊಡ್ಡ ವೀರಪ್ಪ ಒಡೆಯರವರು ಕೇಳಿ ಅಪ್ಪಣೆ ಕೊಟ್ಟಿದ್ದು:— "ಈಗ ಬಂದಿರುವ ಮೈಸೂರವರ ಭಾರಿ ದಂಡನ್ನು ಮಹಾದೇವನ ಕಟಾಕ್ಷದಿಂದ ನಾವು ಜಯಿಸಿದರೆ, [ಈ] ± ನಾಯಮಾರರನ್ನು ನಿಗ್ರಹಿಸುವದು ದೊಡ್ಡ ದಲ್ಲ. ಸದ್ಯಕ್ಕೆ ೧೫೦೦ ಕೊಡಗು ಜನರು ಹೋಗಿ ಆ ತೋಮಾರದ ಲಕ್ಕಡಿ ಕೋಟೆಗೆ ಮುತ್ತಿಗೆ ಹಾಕಿ, ಆ ಕೋಟೆಅಂಗಡಿ ಅರಸು ಅವರ ಕಡೆ [ಜನರು] × ಮಲೆಯಾಳಕ್ಕೆ ಹೋಗದಂತೆ ಮಾರ್ಗ ಯಾವತ್ತು ಬಂದು ಮಾಡಿ"— ಎಂಬುದಾಗಿ ಅಪ್ಪಣೆ ಕೊಟ್ಟು ಕಳುಹಿಸಿದ್ದಲ್ಲಿ, ಆ ಕೊಡಗು ಮಂದಿಯು ಅದೇ ಮೇರೆಗೆ ಬಂದು ಆ ಲಕ್ಕಡಿ ಕೋಟೆಗೆ ಮುತ್ತಿಗೆ ಹಾಕಿಕೊಂಡು ಇದ್ದರು. ಆ ತರುವಾಯ ಮಹಿಸೂರವರು ಭಾರಿ ದಂಡು ತೆಗೆದುಕೊಂಡು ಬಾಳೆಲೆ ಮಾರ್ಗವಾಗಿ ಸೀಮೆ ಒಳನುಗ್ಗಿ ಬಂದು ಪಾಲು ಪರೆಯೆಂಬ ಮೈದಾನದಲ್ಲು ಇಳಿದುಕೊಂಡಲ್ಲಿ, ಆ ಬೆಳಿಗ್ಗೆ ಅರುಣೋದ ಯದ ಸಮಯದಲ್ಲಿ ಕೊಡಗಿನ ಮಂದಿಯು ಹೋಗಿ ಮೈಸೂರವರ ದಂಡಿನ ಮೇಲೆ ಬಿದ್ದಲ್ಲಿ, ಹೇರಳ ಲಡಾಯಿವಾಗಿ ಅವರ ಕಡೆಯ ಸುಮಾರು

---

|| ಬ ಲಕಡಿ

† ಬ ನಾನು ಕರೆದರೆ

± ಬ ಈ ನಾಲ್ಕು ಐದು ಸಾವಿರ

× ಬ ಜನರು ಸಹ

೧೫೦೦ ಜನ ಪರಿಯಂತರ ವೃತವಾಗಿ, ೭೭ ಅಂದಳದ ಸರದಾರರ ಸಹ ಕಡಿದುಹಾಕಿದರು. ಅದರಲ್ಲಿ ಕೆಲವು ಜನ ಪಲಾಯನವಾಗಿ ಚಿಕ್ಕ ದೇವರಾಜರ ಬಳಿಗೆ ಹೋದರು. ಈ ಮೇರೆ ಮೈಸೂರವರ ದಂಡನ್ನು ಮುಳುಗಿಸಿ ತಮ್ಮ ಮಂದಿ ಯಾವತ್ತು ತೆಗೆದುಕೊಂಡು ಆ ಕೋಟೆ ಅರಸುಗಳು ಇದ್ದ ಲಕ್ಕಾಡಿ ಕೋಟೆಗೆ ಬಂದು ಮುತ್ತಿಕೊಂಡು ಅದರ ಒಳಗೆಯಿದ್ದ ನಾಯಿಮಾರರ [ವೀರವರ್ಮ] × ಅರಸುಗಳ ಸಹ ಹೊಡೆದು ಹಾಕಿ ಬಿಟ್ಟರು. ಆ ಆರಭ್ಯದಿಂದ ಮಹಿಸೂರವರು ಮಲೆಯಾಳದವರು ಸಹ ಇಂತ (ಹ) ಜಗಳ ಕೊಡಗಿನ ಸೀಮೆ ಸರಹದ್ದಿನ ಒಳಗೆ ಮಾಡಲಿಲ್ಲ.

ಈಚೆಗೆ ದೊಡ್ಡ ವೀರಪ್ಪ ಒಡೆಯರವರು ೧೮ ವರುಷ ಪರಿಯಂತರ ಕೊಡಗಿನ ರಾಜ್ಯದ ಒಳಗೆ ಯಾವತ್ತು ಕಡಂಗ ಕಂದುಕ ಮುಂತಾಗಿ ತೆಗೆಸಿ ಆಳ್ವೇರಿ [ಬಕ್ಕಾ] ‖ ಬಾಗಿಲು ಮುಂತಾಗಿ ತಯ್ಯಾರು ಮಾಡಿಸಿ, ಈ ರಾಜ್ಯದಲ್ಲಿ ಇರುವ ಜಗಳದ ಅಗಳು [ಮುಂತಾಗಿ] ± ತೆಗೆಸಿ, ಕೊಡಗಿನ ರಾಜ್ಯವನ್ನು ಬಂದೋಬಸ್ತು ಮಾಡಿಕೊಂಡು ಸ್ವಸ್ಥದಲ್ಲಿ ರಾಜ್ಯ ಭಾರ ಮಾಡಿಕೊಂಡು ಇರುತ್ತ ಇದ್ದಲ್ಲಿ, ಕೆಲವು ದಿವಸದ ಮೇಲೆ ಮೈಸೂರು ಚಿಕ್ಕ ದೇವರಾಜ ಒಡೆಯರವರು ಬೇಲೂರು ವೆಂಕಟಾದ್ರಿ ನಾಯಕ (ರ) ಸೀಮೆಯನ್ನು ಸಾಧಿಸಿಕೊಳ್ಳುವ ಬಗ್ಗೆ ಫವುಜು ತೆಗೆದು ಕೊಂಡು ಹೋದರು. ಆ ಸಮಾಚಾರ ದೊಡ್ಡ ವೀರಪ್ಪ ಒಡೆಯರು ಕೇಳಿ ಅಪ್ಪಣೆ ಕೊಟ್ಟದ್ದು— "ಬೇಲೂರು ವೆಂಕಟಾದ್ರಿ ನಾಯಕನ ಸೀಮೆಯನ್ನು ಆಕ್ರಮಿಸಿಕೊಳ್ಳುವ ಬಗ್ಗೆ ಮೈಸೂರು ಚಿಕ್ಕ ದೇವರಾಜ ಒಡೆಯರವರು ಭಾರಿ ದಂಡು ಸಮೇತ ಬೇಲೂರು ಕಡೆಗೆ ಹೋಗಿಯಿದ್ದಾರೆ; ಈ ಸಮಯದಲ್ಲಿ ಕೊಡಗಿನ ಸೀಮೆ ಸರಹದ್ದಿನ ಸಮೀಪದ ಬೇಲೂರು ಸೀಮೆಯಲ್ಲಿ ಕೆಲವು ಕಟ್ಟಿಕೊಳ್ಳುವ ಬಗ್ಗೆ ನಾವು ಮಂದಿ ಕಳುಹಿಸಿ ಅದನ್ನು [ಬಂದೋಬಸ್ತು] * ಮಾಡಿಕೊಳ್ಳಬೇಕು"— ಎಂಬುದಾಗಿ ಮಾನಸೂಬ ಮಾಡಿ ಅದೇ ಮೇರೆ ಕೆಲವು ಮಂದಿಯನ್ನು ಕಳುಹಿಸಿ,

---

× ಬ ಆ ಕೋಟೆ ವೀರವರ್ಮ

‖ ಬ ಬಕ್ಕ

± ಬ ಯಾವತ್ತು

* ಬ ಸಾಧಿಸಿ ಬಂದೋಬಸ್ತು

ಕೊಡಗಿನ ಸರಹದ್ದಿಗೆ ಮುಟ್ಟಿಯಿರುವ ಬೇಲೂರು ವಳ್ಳಿತವಾದ ಏಳು ಸಾವಿರ ಸೀಮೆಯನ್ನು ತೆಗೆದುಕೊಂಡು ಕೊಡಗಿನ ಸೀಮೆಗೆ ಸೇರಿಸಿಕೊಂಡು, ಉಳಿಕೆ ಬೇಲೂರು ಸೀಮೆ ಕೋಟೆ ಸಹ ಮೈಸೂರು ಅರಸುಗಳು ಕಟ್ಟಿಕೊಂಡರು. ಆ ತದನಂತರದಲ್ಲಿ ಬೇಲೂರು ವೆಂಕಟಾದ್ರಿ ನಾಯಕರು ನಿಸ್ತರಿಸಲಾರದೆ ಓಡಿಹೋಗಿ ತಮ್ಮ ಸೀಮೆ ವಳ್ಳಿತವಾದ ಗಿಡ ಸರಹದ್ದು ಐಗೂರು ಸೀಮೆ ಬಂದೋಬಸ್ತು ಮಾಡಿಕೊಂಡು, ಕಾಲಕ್ಷೇಪ ಮಾಡಿಕೊಂಡು ಇದ್ದರು. ಈ ಮೇರೆ ಇರುತ್ತಯಿದ್ದಲ್ಲಿ, ಕೆಲವು ದಿವಸದ ಮೇಲೆ ಮೈಸೂರು ಅರಸುಗಳು—"ಬೇಲೂರು ಸಂಸ್ಥಾನ ನಾವು ಕಟ್ಟಿಕೊಂಡು ಇದ್ದೇವೆ. ಅದಕ್ಕೆ ಸೇರಿದ ಏಳು ಸಾವಿರ ಸೀಮೆ ನಮಗೆ ಸಲ್ಲತಕ್ಕಂಥಾದ್ದು ನೀವು ಹೇಗೆ ಕಟ್ಟಿಕೊಂಡಿರಿ? ಬಿಟ್ಟು ಕೊಡಿ"—ಎಂದು ದೊಡ್ಡ ವೀರಪ್ಪ ರಾಜರ ಕೇಳಿದ್ದಕ್ಕೆ ಇವರು ಜವಾಬು ಹೇಳಿದ್ದು—"ಬೇಲೂರು ಸಂಸ್ಥಾನ ಪ್ರತ್ಯೇಕ ವೆಂಕಟಾದ್ರಿ ನಾಯಕರು ಆಳಿಕೊಂಡು ಇದ್ದದ್ದೇ ಹೊರತು ಮೈಸೂರು ಸಂಸ್ಥಾನಕ್ಕೂ ಕೊಡಗಿನ ಸಂಸ್ಥಾನಕ್ಕೂ ಸೇರಿದ್ದು ಅಲ್ಲ. [ನೀವು ಬೇಲೂರವರ] † ಮೇಲೆ ಜಗಳ ಮಾಡಿ ಆ ರಾಜ್ಯ ಕಟ್ಟಿಕೊಂಡಿರಿ. ನಿಮ್ಮಂತೆ ನಾವು ಜಗಳ ಮಾಡಿ ಏಳು ಸಾವಿರ ಸೀಮೆ ಕಟ್ಟಿ ತೆಗೆದುಕೊಂಡೆವು. ಈ ಮೇರೆ ಇರುವಲ್ಲಿ, ನಾವು ಏಳು ಸಾವಿರ ಸೀಮೆ ಬಿಡಲಿಕ್ಕೆ ಇಲ್ಲ—ಎಂದು ಹೇಳಿದಲ್ಲಿ, ಆ ಮೈಸೂರವರಿಗೂ [ಇಲ್ಲಿ (ಯ) ದೊರೆಗಳಿಗೂ] ± ಜಗಳವಾಗಿ ಆ ಮೈಸೂರವರು ಸದರೀ ಸೀಮೆ ಒಳನುಗ್ಗಿ ಬಂದಲ್ಲಿ, [ಅಲ್ಲಿ] * ಒಳನುಗ್ಗುವದಕ್ಕೆ ಬಿಡದೆ ಹೊಡೆದರು. ಆವಾಗ್ಗೆ ಆವರು ಒಳನುಗ್ಗಲಾರದೆ ಅಲ್ಲಿಂದ ಬಿಟ್ಟು ಆ ಸೀಮೆಗೆ ಸೇರಿದ ಮಲ್ಲಿಪಟ್ಟಣ ಬೆಮ್ಮತ್ತಿ, [ಹೊಸನೂರು] § ಎಂಬ ಮೂರು ಗ್ರಾಮವನ್ನು ತಮ್ಮ ಕಡೆಗೆ ಮಾಡಿಕೊಂಡು, [ಅಲ್ಲಿ] × ಲಕ್ಕಾಟಿ [ಕೋಟೆ] ‖ ಕಟ್ಟಿಕೊಂಡು ಠಾಣ್ಯ ಯಿಟ್ಟು, ಮೈಸೂರವರು ಹೋದಲ್ಲಿ, ಕೊಡಗು ಜನ ಹೋಗಿ [ರೈತರ] = ನಿಲ್ಲುವದಕ್ಕೆ

† ಬ ಈಗ ಹೊಸತಾಗಿ ನೀವು ಬೇಲೂರು ನಾಯಕರ

± ಬ ವೀರಪ್ಪ ಒಡೆಯರವರಿಗೂ

* ಬ ಆ ಏಳು ಸಾವಿರ ಸೀಮೆಯಲ್ಲಿ ಗಿಡ ಸರಹದ್ದಿನ ಸೀಮೆ

§ ಬ ಹೊಸೂರು

× ಬ ಬೆಮ್ಮತ್ತಿ ಮಲ್ಲಿಪಟ್ಟಣ ಎಂಬಲ್ಲಿ

‖ ಬ ಕೋಟೆಗಳ

= ಬ ಅಲ್ಲಿ ರೈತರ

ಬಿಡದೆ ಲೂಟಿಮಾಡಿ, ಸೀಮೆ ಕೈರಾನು ಮಾಡುತ್ತ ಇದ್ದಲ್ಲಿ, ದೊಡ್ಡ ವೀರಪ್ಪ ಒಡೆಯರಿಗೆ ಚಿಕ್ಕ ದೇವರಾಜ ಒಡೆಯರು ಬರೆದು ಕಳುಹಿಸಿದ ವಿವರ— "ನಾವು ನೀವು ಜಗಳ ಮಾಡಿಕೊಂಡು ಸೀಮೆ ಹಾಳು ಮಾಡಿದ್ದುಂಟಾದರೆ ಉಭಯಸ್ತರಿಗೂ ನಷ್ಟವೇ ಸರಿ. ಈ ಬಗ್ಗೆ ನೀವು ಕಟ್ಟಿಕೊಂಡಿರುವ ಏಳು ಸಾವಿರ ಸೀಮೆ ವಳ್ಳಿತವಾದ ಕೆಲವು ಸೀಮೆ ನಾವು ಕಟ್ಟಿಕೊಂಡು ಇರುವಂಥದನ್ನು ನಿಮ್ಮ ಕಡೆಗೆ ಮಾಡಿಕೊಂಡು ಅದರಿಂದ ವಸೂಲಾದಂಥ ಹಣವನ್ನು ನಮಗೆ ಕೊಡಿ" ಯೆಂಬದಾಗಿ ನಮಗೆ ಬರೆಸಿ ಕಳುಹಿಸಿಯಿರುವದರಿಂದ, ಆ ಮಾತಿಗೆ ಒಪ್ಪಿಕೊಂಡು, ಆ ಹೋಬಳಿಗಳನ್ನು ಏಳು ಸಾವಿರ ಸೀಮೆಗೆ ಸೇರಿಸಿಕೊಂಡು, ಆ ಹೋಬಳಿಗಳಿಂದ ವಸೂಲಾದ ಹಣಗಳನ್ನು ಏಳು ಸಾವಿರ ಸೀಮೆ ಪಾರುಪತ್ಯಗಾರನು ದೊಡ್ಡ ವೀರಪ್ಪ ಒಡೆಯರವರ ಹುಕುಂ ಪ್ರಕಾರ ಕೊಡುತ ಇದ್ದನು. ಆದ್ದರಿಂದ ಆ ಏಳು ಸಾವಿರ ಸೀಮೆ(ಗೆ) ಇತ್ತೆರಿಗೆ ಸೀಮೆ ಯೆಂದು ಹೆಸರಾಯಿತು.

ಹಾಗೆ ಇರುತ್ತಯಿದ್ದಲ್ಲಿ, ಕೆಲವು ದಿವಸದ ಮೇಲೆ ಚಿಕ್ಕದೇವರಾಜ ಒಡೆಯರು ತೀರಿ ಹೋಗಿ, ದೊಡ್ಡ ಕೃಷ್ಣದೇವರಾಜ ಒಡೆಯರಿಗೆ ಪಟ್ಟವಾಯಿತು ಅದೇ ತರುವಾಯ ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರು ಚಿರಕಲ್ಲ ಸೀಮೆ ಕಟ್ಟಿಕೊಳ್ಳಬೇಕೆಂಬ ಅಪೇಕ್ಷೆಯಿಂದ ದಂಡು ಸಮೇತ ನೀಲೇಶ್ವರದ ಮಾರ್ಗವಾಗಿ ಬಂದು ಜಗಳ ಮಾಡಿ ಚಿರಕಲ್ಲ ಅರವಾಸೆ ಸೀಮೆಯನ್ನು ಸಾಧಿಸಿಕೊಂಡು ಅಲ್ಲಲ್ಲಿ ಲಕ್ಕಾಡಿ ಕೋಟೆಗಳ ಹಾಕಿಸಿ, ಠಾಣ್ಯಯಿಟ್ಟು, ಮತ್ತು ಬಾಕಿ ಸೀಮೆಯನ್ನು ಆಕ್ರಮಿಸಿಕೊಳ್ಳತಕ್ಕ ಬಗ್ಗೆ [ಲುಟಾಯಿಸಿದ್ದಲ್ಲಿ]† ಆ ಚರಕಲ್ಲ ವೀರವರ್ಮ ರಾಜರು ಜಗಳ ಮಾಡಲಾರದೆ ದೈನ್ಯೋಕ್ತಿಯಿಂದ ದೊಡ್ಡ ವೀರಪ್ಪ ಒಡೆಯರಿಗೆ ಕಾಗದ ಬರೆದು ಕಳುಹಿಸಿದ ವಿವರ— "ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರು ಭಾರಿ ದಂಡು ತೆಗೆದುಕೊಂಡು ಬಂದು ನಮ್ಮ ಅರೆವಾಸಿ ಸೀಮೆಯನ್ನು ಕಟ್ಟಿಕೊಂಡು, ಅಲ್ಲಲ್ಲಿ ಲಕ್ಕಾಡಿ ಕೋಟೆಗಳ ಹಾಕಿ ಠಾಣ್ಯ ಯಿಟ್ಟುಕೊಂಡು, ಮತ್ತು ಮುಂದೆ ಬಡಾಯಿಸಿಕೊಂಡು ಬರುತ್ತಾರೆ. ಅವರ ಸಂಗಡ ಜಗಳ ಮಾಡಿ ನಿಸ್ತರಿಸುವದಕ್ಕೆ ತೀರದು ಈ ಬಗ್ಗೆ ತಾವೂ ಅವರೂ ಸ್ವಕೀಯಸ್ಥರಾದ್ದರಿಂದ

† ಬ ಲೂಂಚಾಯಿಸಿದ್ದಲ್ಲಿ

[ಮೆಹರ್ಬಾನಗಿ] ▭ ಮಾರ್ಗದಿಂದ ಸೋಮಶೇಖರ ನಾಯಕರು ನಮ್ಮ ಶೀಮೆ ಬಿಟ್ಟುಕೊಟ್ಟು ಅವರ ದಂಡು ಸಮೇತ ಇಕ್ಕೇರಿಗೆ ಹೋಗುವಂತೆ ಉಪಕಾರ ಮಾಡಿಸಿಕೊಡಬೇಕು"—ಎಂಬದಾಗಿ ಬರೆಸಿ ಕಳುಹಿಸಿದಲ್ಲಿ, ಅದಕ್ಕೆ ಜವಾಬು ಕೊಟ್ಟದ್ದು— "ಈ ಬಗ್ಗೆ ನಮ್ಮಿಂದ ಆಗತಕ್ಕ ಪ್ರಯತ್ನ ಮಾಡಿಯೇವು. ಅದರ ಮೇಲೆ ಮಹಾದೇವನ ಅಪ್ಪಣೆಯಿದ್ದಂತೆ ಆದೀತು. ತಾವು ಖಾತರ್‌ಜಮೆ ಆಗಿ ಇರಬೇಕು"— ಎಂಬದಾಗಿ ಬರೆಸಿ ಕಳುಹಿಸಿ ಈ ವಿವರ ಸೋಮಶೇಖರ ನಾಯಕರಿಗೆ [ಬರೆಸಿ]* ಕಳುಹಿಸಿದಲ್ಲಿ, ಅವರು ಜವಾಬು ಹೇಳಿ ಕಳುಹಿಸಿದ್ದು ಏನೆಂದರೆ— "ನಾವು ಹೇರಳ ಫವುಜು ತೆಗೆದುಕೊಂಡು ಬಂದು ಚಿರಕಲ್ಲ ರಾಜರ ಸಂಗಡ ಜಗಳ ಮಾಡಿ ಅವರ ಕಡೆ ನಾಯಮಾರರನ್ನು ನಿಗ್ರಹಿಸಿ ಅವರ ಅರೆವಾಸಿ ಸೀಮೆಯನ್ನು ಆಕ್ರಮಿಸಿಕೊಂಡು ಅಲ್ಲಲ್ಲಿ ಠಾಣ್ಯ ಯಿಟ್ಟು ಮಜಭೂತು ಮಾಡಿಯಿದ್ದೇವೆ. ಈ ಲಡಾಯದಲ್ಲಿ ನಮ್ಮ ಕಡೆ ಹೇರಳ ಮಂದಿ ಸತ್ತು ಹೋಯಿತು. ಇದಲ್ಲದೆ ದಂಡಿನ ಕರ್ಚು ಬಹಳ ಮುಟ್ಟಿಯಿದೆ. ಆದ್ದರಿಂದ ನಾವು ಸಲ್ಲಾಮಾಡಿ ಅವರ ಸೀಮೆ ಬಿಟ್ಟು ಕೊಡಲಿಕ್ಕೆ ಇಲ್ಲ"— ಎಂಬದಾಗಿ ಹೇಳಿ ಕಳುಹಿಸಿದಲ್ಲಿ, ಈ ವಿವರವನ್ನು ದೊಡ್ಡ ವೀರಪ್ಪ ಒಡೆಯರು ಚಿರಕಲ್ಲ ರಾಜರಿಗೆ ಹೇಳಿ ಕಳುಹಿಸಿದಲ್ಲಿ, ಮತ್ತು ಆ ರಾಜರು ಆಣೆ ಭಾಷೆ ಹಾಕಿ ಕರಾರುನಾಮಾ ದಸ್ಕತು ಮೊಹರದಿಂದ [ಬರಹದಲ್ಲಿ] × "ಅವರ ದಂಡಿನ ಕರ್ಚಿನ ಬಗ್ಗೆ ೧೮ ಲಕ್ಷ ರೂಪಾಯಿ ನಾವು ಕೊಡುತ್ತೇವೆ. ಈ ಮಾತಿಗೆ ತಾವು ಹೊಣೆಯಾಗಿ ಕಳಿಸಿಕೊಡಬೇಕು"— ಎಂಬದಾಗಿ ಪುನಃ ಬರೆಸಿ ಕಳುಹಿಸಿದರಿಂದ, ದೊಡ್ಡ ವೀರಪ್ಪ ಒಡೆಯರು ಆ ಕರಾರು ನಾಮೆಯನ್ನು ನಂಬಿ, ಸೋಮಶೇಖರ ನಾಯಕರಿಗೆ ಶ್ರುತಪಡಿಸಿದಲ್ಲಿ, ಅವರು ಜವಾಬ ಹೇಳಿದ್ದು— "ಮಲೆಯಾಳದ ರಾಜರು ಮೋಸಗಾರರು. ಆಡಿದ ಮಾತು ಕೊಟ್ಟ ನಂಬಿ(ಕೆ)ಗೆ ಸರಿಯಾಗಿ ನಡೆಯುವವರಲ್ಲ. ಅವರ ಕರಾರುನಾಮೆ ನಂಬಿ ಈ ಹಣವಿಗೆ ನೀವು ಹೊಣೆಯಾಗಬೇಡ."— ಎಂದು ಹೇಳಿದಲ್ಲಿ, ದೊಡ್ಡ ವೀರಪ್ಪ ಒಡೆಯರು ಹೇಳಿದ್ದು— "ಚಿರಕಲ್ಲ ರಾಜರು ಈ ಹಣವಿಗೆ ಕೈಕಾಗದ ಬಹಳ ಬಗೆ ಆಣೆ ಭಾಷೆ ಹಾಕಿ

---

▭ ಬ ತಮ್ಮ ಮೆಹರ್ಬಾನಗಿ

* ಬ ಹೇಳಿ

× ಬ [ಬರೆದ್ದರಲ್ಲಿ---]

ಬರೆದು [ಇದ್ದಾರೆ] || ಈ ಬಗೆ ಹಣ ನಾವು ಏನು ಬಗೆಯಿಂದಲಾದರೂ ಬರಮಾಡಿ ತಮಗೆ ಸಂದಾಯ ಮಾಡಿಕೊಡುತ್ತೇವೆ"— ಎಂಬದಾಗಿ ಹೇಳಿದಲ್ಲಿ, ಸೋಮಶೇಖರ ನಾಯಕರವರು ಒಡಂಬಟ್ಟು, ಈ ಹಣವಿಗೆ ದೊಡ್ಡ ವೀರಪ್ಪ ಒಡೆಯರ ಕಯ್ಯಿಂದ [ಕಾಗದ] ± ಬರೆಸಿ ತೆಗೆದುಕೊಂಡು, ಆ ಚರಕಲ್ಲ ಸೀಮೆಯಲ್ಲಿ ಇಟ್ಟು ಯಿದ್ದ ಠಾಣ್ಯಯೆಬ್ಬಿಸಿಕೊಂಡು ಫವುಜಿನ ಸಂಗಡ ತಮ್ಮ ಸೀಮೆಗೆ ಹೋಗುವಾಗ್ಗೆ, ದೊಡ್ಡ ವೀರಪ್ಪ ಒಡೆಯರ ಬೇಟಿ ಆಗುವ ಬಗ್ಗೆ ಸುಬ್ರಹ್ಮಣ್ಯಕ್ಕೆ [ಹೋಗಿ] * ಅವರ ಕಂಡು ಬೇಟಿ ಆಗಿ, ಪುನಃ ಬಂದು ಕೆಲವು ಕಾರೆಕಾರರು ಹರಿಕಾರರು ಕೊಡಗು ಜನ ಮುಂತಾಗಿ ಚರಕಲ್ಲ ರಾಜರ ಬಳಿಗೆ ಹಣ ತರುವ ಬಗ್ಗೆ ಕಳುಹಿಸಿದಲ್ಲಿ, ಆ ಅರಸುಗಳು—"ಈ ಹಣ ನಾಲ್ಕು ಅಯಿದು ಗಡುಬದಲ್ಲಿ [ಕಳಿಸಿಕೊಡುತ್ತೇನೆ] †ಂಬದಾಗಿ ಹೇಳಿ, ಇಲ್ಲಿಂದ ಹೋದಂತ (ಹ) ಜನರನ್ನು ಇಟ್ಟುಕೊಂಡು, ಎರಡು ಮೂರು ಗಡಬದಲ್ಲಿ ಅರೆವಾಸಿ ಹಣ ಸಂದಾಯ ಮಾಡಿಕೊಟ್ಟು, ಬಾಕಿ ಹಣಕ್ಕೆ ವರಾತ ಮಾಡಿದಲ್ಲಿ ಹೋದಂತ (ಹ) ಜನರನ್ನು ತಳ್ಳಿಬಿಟ್ಟದರಿಂದ, ಆ ಜನರು ಬಂದು, ಆ ವಿವರ ದೊಡ್ಡ ವೀರಪ್ಪ ಒಡೆಯರಿಗೆ ಶ್ರುತಪಡಿಸಿದಲ್ಲಿ, ದಳವಾಯಿ ಭೋನಿ ಮುತ್ತಣ್ಣನನ್ನು ಈತನ ಸಂಗಡ ೫,೦೦೦ ಜನ ಕೊಡಗರ ಕೂಡಿಸಿ, ಚರಕಲ್ಲ ರಾಜರ ಬಳಿಗೆ ಕಳುಹಿಸಿದಲ್ಲಿ, ಆ ದಳವಾಯಿ ಬೋನಿ ಮುತ್ತಣ್ಣನು ಹಣಕ್ಕೆ ವರಾತ ಮಾಡಿದಲ್ಲಿ, ಆ ರಾಜರು ಇಂದು ನಾಳೆ ಕೊಡುತ್ತೇವೆಯೆಂತ ದಿನ ಹರಣ ಮಾಡಿದರಿಂದ—"ಈ ಮೇರೆ ಟಕ್ಕು ಮಾಡುವದು ಒಳ್ಳೆಯದಲ್ಲ. ಕರಾರು ಮೇರೆ ಹಣ ಕೊಡಿ"— ಯೆಂತ ಕಸ್ತು ವರಾತ ಹತ್ತಿಸಿದಲ್ಲಿ, ಇವಂದಿರನ್ನು ಹೊಡೆಯಬೇಕೆಂಬದಾಗಿ ಆ ಅರಸುಗಳು ಯೋಚಿಸಿ, ಗುಟ್ಟನಿಂದ ಅವರ ಮಂದಿಯನ್ನು ಜಮಾಯಿಸುತ್ತಾ ಇದ್ದಲ್ಲಿ, ಈ ಸಮಾಚಾರ ಕಣ್ಣೂರ [ರಾಜರು] § ಕೇಳಿ, ಕೆಲವು ಮಾಪಿಳೆಯರನ್ನು ಆ ದಳವಾಯಿ ಬಳಿಗೆ ಕಳುಹಿಸಿ,— "ಚಿರಕಲ್ಲ ರಾಜರು

|| ಬ [ಕಳುಹಿಸಿ ಇದ್ದಾರೆ]

± ಬ [ಕೈಕಾಗದ]

* ಬ ಬಂದು ಇಳಿದುಕೊಂಡು ಹೇಳಿಕಳುಹಿದಲ್ಲಿ, ದೊಡ್ಡ ವೀರಪ್ಪ ಒಡೆಯರು ಸುಬ್ರಹ್ಮಣ್ಯಕ್ಕೆ ಹೋಗಿ

† ಬ ಸಂದಾಯತ ಮಾಡಿಕೊಡುತ್ತೇವೆ

§ ಬ [ಆಲಿರಾಜರು]

ನಿಮಗೆ ಕರಾರು ಮೇರೆ ಹಣ ಕೊಡುವುದು ಇಲ್ಲ. ಅವರ ಕಡೆ ಜನ ರಿಂದ ನಿಮ್ಮ ಜನರ ಯಾವತ್ತು ಒಂದು ಉಳಿಯದೆ ಹೊಡೆಯಬೇಕು ಯೆಂತ ಯೋಚಿಸಿಯಿದ್ದಾರೆ. ನೀವು ಅಲ್ಲಿ ನಿಲ್ಲ ಬೇಡ"- ಎಂತ ತಿಳಿಸಿದ್ದರಿಂದ "ಇನ್ನು ಇಲ್ಲಿ ನಿತ್ತರೆ ಮೋಸ ಮಾಡಿಯಾರು. ಈ ಬಗ್ಗೆ ಕೊಡಗಿಗೆ ಹೋಗುವ ಬಗ್ಗೆ ಮಾರ್ಗ ಬಂದು ಮಾಡಿಯಿದ್ದಾರು. ಆದ್ದರಿಂದ ಕಣ್ಣೂ ರಿಗೆ ಹೋಗಿ ವಿಚಾರಿಸಿಕೊಂಡು ಹೋಗಬಹುದು"— ಎಂಬದಾಗಿ ದಳ ವಾಯಿ ಭೋನಿ ಮುತ್ತಣ್ಣನು ಸಂಗಡ ಯಿದ್ದ ಕೊಡಗ ಜನ ಯಾವತ್ತು ತೆಗೆದುಕೊಂಡು ರಾತಾರಾತ್ರೆಯೆ ಕಣ್ಣೂರಿಗೆ ಹೊರಟು ಹೋಗುವಲ್ಲಿ, ಚರಕಲ್ಲ ರಾಜರ ಕಡೆ ಜನ ಬಂದು ಮಾರ್ಗದಲ್ಲಿ ತಡೆದರಿಂದ, ಅವರಿಗೆ ದಕ್ಕದೆ ಜನಾನೂ ತೆಗೆದುಕೊಂಡು ರಾತ್ರೆಯೇ ಕಣ್ಣೂರಿಗೆ ತಲುಪಿದ ರಿಂದ, ಕೊಡಗಿಗೆ ಬರುವಂಥಾ ಮಾರ್ಗಕ್ಕೆಲ್ಲಾ ಮುಂದಿಯಿಟ್ಟು, ಚರಕಲ್ಲ ರಾಜರು ಮಾರ್ಗ ಕಟ್ಟಿಯಿದ್ದರು. ಈ ವರ್ತಮಾನು ಕಣ್ಣೂರು [ರಾಜರು]§ ತಿಳಿದು,— "ಈ ಮಾರ್ಗವಾಗಿ [ಹೋದದ್ದೇ] ± ಉಂಟಾದರೆ ನಿಮಗೂ ನಿಮ್ಮ ಸಂಗಡ ಇರುವ ಜನರಿಗೂ ಸಹ ಮೋಸ ಮಾಡಿಯಾರು"- ಯೆಂದು ಹೇಳಿ ಆ ದಳವಾಯಿಗೂ ಆ ೫೦೦೦ ಕೊಡಗರಿಗೂ ಪತ್ತೇಮಾರಿ ಮೇಲೆ (ಹಾಕಿಸಿ)† ಇಕ್ಕೇರಿ ವಳ್ಳಿತವಾದ ಮಂಗಳೂರು ಪೈಕಿ ಕುಂಬಳೆ ತಾಲೂ ಕಿನಲ್ಲಿ ಇಳಿಸಿ ಬಿಟ್ಟರು. ಆ ಬಳಿಕ ದಳವಾಯಿ ಮುತ್ತಣ್ಣನು ಆ ಜನರ ಕರೆದುಕೊಂಡು ತುಳುವನಾಡು ಮಾರ್ಗವಾಗಿ ಕೊಡಗಿನ ಸೀಮೆಗೆ ಬಂದನು. ಈ ಚರಕಲ್ಲ ರಾಜರಿಂದ ಕರಾರು ಮೇರೆ ಬರತಕ್ಕ ಹಣವಿನಲ್ಲಿ ಬಾಕಿ ನಿಂತು ಇದ್ದ ಅರೆವಾಸಿ ಹಣವನ್ನು ತಮ್ಮ ಕೈಯಿಂದ ಕಳುಹಿಸಿಕೊಟ್ಟರು. ಈ ಚರಕಲ್ಲ ರಾಜರು ಅರೆವಾಸಿ ಹಣ ಕೊಡದೆ ದಗಾ ಮಾಡಿದ ವಿವರವನ್ನು ಸೋಮಶೇಖರ ನಾಯಕರಿಗೆ ಬರೆಸಿ ಕಳುಹಿದಲ್ಲಿ, ಅವರು ಕೇಳಿ ದೊಡ್ಡ ವೀರಪ್ಪ ಒಡೆಯರ(ನ್ನು) ಇಕ್ಕೇರಿಗೆ ಕರೆಸಿಕೊಂಡು— "ಮಲೆಯಾಳದ ಅರ ಸುಗಳು ಮೋಸಗಾರರು ಅವರ ಮಾತು ನಂಬಬಾರದು— ಎಂಬುದಾಗಿ ಮೊದಲೇ ನಾವು ಹೇಳಿದ್ದು ಕೇಳದೆ, ಅವರ ಮಾತು ನಂಬಿಕೊಂಡು, ನಾವು ಕಟ್ಟಿಕೊಂಡು ಇದ್ದ ಸೀಮೆಯನ್ನು ಅವರಿಗೆ ಬಿಡಿಸಿಕೊಟ್ಟು, ಅವರ

---

§ ಬ [ಅಲಿರಾಜರು]

± ಬ [ನೀವು ಹೋದದ್ದೇ]

† ಬ (ಹತ್ತಿಸಿ)

ಕಡೆಯಿಂದ ಬರತಕ್ಕ ಹಣ ತಮ್ಮ ಕೈಯಿಂದ [ಕೊಟ್ಟರು.]" = ಎಂಬದಾಗಿ ಬಹಳ ನೊಂದುಕೊಂಡು, ಆವಾಗ್ಗೆ 'ನೀವು ನಮಗೆ ಸ್ವಕೀಯಸ್ಥರೇ ಹೊರತು ಬೇರೊಂದಲ್ಲ' ಎಂಬದಾಗಿ ಏಕೀಕರ ಮಾರ್ಗದಿಂದ ತುಳುವ ನಾಡು ವಳಿಕವಾದ ಮೂಡವಂಬತ್ತು ಮಾಗಣೆಯಿಂದ ಈ ಕೊಡಗಿನ ಘಟ್ಟದ ಸರಹದ್ದಿಗೆ ಮುಟ್ಟಿ ಇರುವಂತ (ಹ) ಕೆಲವು ಮಾಗಣೆಗಳಿಂದ ಕೆಲವು ಗ್ರಾಮಗಳ (ನ್ನು) ವಿಂಗಡಿಸಿ, ದೊಡ್ಡ ವೀರಪ್ಪ ಒಡೆಯರಿಗೆ ಹಾಲು ಬೆಣ್ಣೆಗೆ ಎಂಬದಾಗಿ ಅದಕ್ಕೆ,— ಅಮೃತ ಉದ್ದಿಶ್ಯವಾಗಿ ಕೊಂಟ್ಟಂತಾದ್ದು ಇದರ ಹೆಸರು ಅಮರಸುಳ್ಯ— ಎಂಬದಾಗಿ [ಸೋಮ] × ಶೇಖರನಾಯಕರು ನೂತನವಾಗಿ ಹೆಸರು [ಯಿಟ್ಟರು]. ‖ ಆ ತದನಂತರ "ಕಾವೇರಿ ಅಮ್ಮ ದೇವರ ಪೂಜೆ ಬಗ್ಗೆ ಈ ಕೊಡಗಿನ ಸೀಮೆಯಲ್ಲಿ ತೆಂಗಿನಕಾಯಿ ಫಲವಿಲ್ಲದ್ದರಿಂದ ಆ ದೇವರ ಪೂಜೆ ಬಗ್ಗೆ ಕಾಯಿ ಬೇಕಾಗುತ್ತದೆ. ಸುಳ್ಯದ ಮಾಗಣೆಯು ಆ ದೇವಸ್ಥಾನಕ್ಕೆ ಸಮೀಪವಾಗಿಯಿದೆ. ಇದನ್ನು ಕೊಡಿಸಿಕೊಡಬೇಕು. ಆ ಮಾಗಣೆಗೆ ಆದ ಕ್ರಯ [ವನ್ನು] * ಕೊಡಿಸಿ ಕೊಡುತ್ತೇವೆ." ಎಂಬದಾಗಿ ಸೋಮಶೇಖರ ನಾಯಕರ ಸಂಗಡ ಕೇಳಿದಲ್ಲಿ, ಅವರು ಒಪ್ಪಿದರಿಂದ ಕಾವೇರಿ ಅಮ್ಮನವರ ಬಂಡಾರದಿಂದ ಅದಕ್ಕೆ ಸಲುವ ಹಣ ಕೊಟ್ಟರು. ಆವಗ್ಗೆ ಸುಳ್ಯದ ಮಾಗಣೆಯನ್ನು ವಿಂಗಡಿಸಿ [ಬೆಂಗು] ಮಲೆ ಒಡ್ಡಿನಲ್ಲು ತೋರಣ ಕಟ್ಟಿಸಿ, ಕೊಡಗಿನ ಸೀಮೆಗೆ ಸೇರಿಸಿ ಕೊಟ್ಟರು. ಅಮರಸುಳ್ಯ ಸಹ ಕೊಡಗಿನ ಸಂಸ್ಥಾನಕ್ಕೆ ಸೇರಿ [ಈಗ ಸಂಸ್ಥಾನಕ್ಕೆ] † ನಡೆದು ಬರುತ್ತಯಿದೆ. ಈ ಮೇರೆ ಇರುತ್ತಯಿದ್ದಲ್ಲಿ, ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರವರು ತೀರಿ ಹೋಗಿ ಬೂದಿ ಬಸವಪ್ಪ ನಾಯಕರಿಗೆ ಪಟ್ಟವಾಯಿತು. ಇತ್ತಲಾಗಿ ದೊಡ್ಡ ವೀರಪ್ಪ ಒಡೆಯರ ಕುಮಾರರಾದ ಅಪ್ಪಾಜಿ ರಾಜರಿಗೆ ಮದುವೆ ಮಾಡಿ ಕೊಟ್ಟಂತ (ಪ) ಪಟ್ಟಸ್ತ್ರೀ ಇದ್ದಂತೆ ಒಂದು ಸಾಮಾನ್ಯ ಸ್ತ್ರೀಯನ್ನು ಇಟ್ಟುಕೊಂಡು ಆಕೆ (ಯ) ಮಾತು ಕೇಳಿ ತಮ್ಮ ರಾಣಿಗೆ ಕಿರು

---

= ಬ ಕೊಟ್ಟರಿ.

× ಬ ಅವಾಗ್ಗೆ ಸೋಮ

‖ ಬ ಇಟ್ಟುಕೊಟ್ಟರು

* ಬ ಹಣವನ್ನು

§ ಬ ಬೇಗು

† ಬ ಕೊಡಗಿನ ಕೊಡೆ ಎರಕವಾಗಿ

ಕುಳ ಮಾಡುತ್ತ ಇದ್ದಲ್ಲಿ, ಈ ಕಿರುಕುಳ ತಡೆಯಲಾರದೆ ಆ ರಾಣಿ ಯ(ವ)ರು ಸೇದುವ ಬಾವಿಗೆ ಬಿದ್ದು ಮೃತಪಟ್ಟದ್ದರಿಂದ, ಈ ವಿವರ ದೊಡ್ಡ ವೀರಪ್ಪ ಒಡೆಯರು ತಿಳಿದು, ಅಪ್ಪಾಜಿರಾಜ ಅರಸುಗಳಿಗೂ ಅವರ ಪಟ್ಟ ಸ್ತ್ರೀಯವರ ಗರ್ಭದಲ್ಲಿ ಜನಿಸಿದಂತ(ಹ) ಕುಮಾರ ಚಿಕ್ಕವೀರಪ್ಪ ಒಡೆಯ ರಿಗೂ ಸೆರೆಮನೆಯಲ್ಲಿ ಹಾಕಿಸಿದರು. ಈ ಮೇರೆ ೧೨ ವರ್ಷ ಪರ್ಯಂತರ ಸೆರೆ ಯೊಳಗೆ ಇದ್ದು, ಅದರ ಒಳಗೆ ಅಪ್ಪಾಜಿರಾಜರು ಮೃತವಾದರು. ಆ ಬಳಿಕ ಕೆಲವು ಆಪ್ತರಾದಂತ(ಹ) ಕೊಡಗರು ದೊಡ್ಡ ವೀರಪ್ಪ ಒಡೆಯರಿಗೆ ಅರಿಕೆ ಮಾಡಿಕೊಂಡ ವಿವರ—"ಅಪ್ಪಾಜಿರಾಜರು ಅಪರಾಧ ಮಾಡಿ ಸೆರೆಮನೆಯೊ ಳಗೆ ಬಿದ್ದು ಮೃತವಾದರು. ಅವರ ಕುಮಾರರು ನಿರಪರಾಧವಾಗಿ ಸೆರೆಯಲ್ಲಿ ಬಿದ್ದುಯಿದ್ದಾರೆ. ತಾವು ಆದರೆ ಮುಪ್ಪಿನವರಾದಿರಿ. ಮುಂದೆ ಈ ರಾಜ್ಯಭಾರ ಮಾಡಿಕೊಂಡು ನಮ್ಮ [ಸರ್ವ] * ರನ್ನೂ ರಕ್ಷಣ್ಯ ಮಾಡುವದಕ್ಕೆ ಕರ್ತರು ಯಾರು? ಈ ಬಗ್ಗೆ ಸೆರೆಮನೆಯೊಳಗೆಯಿರುವ ಆ ಕುಮಾರರನ್ನು ಸೆರೆಯಿಂದ ಬಿಟ್ಟು ರಕ್ಷಿಸಿ ತಮ್ಮ ದೊರೆತನದಲ್ಲಿ ನಿಲ್ಲಿಸಬೇಕು" ಎಂಬ ದಾಗಿ ಅರಿಕೆ ಮಾಡಿಕೊಂಡದ್ದರಿಂದ ದೊಡ್ಡ ವೀರಪ್ಪ ಒಡೆಯರು ಆ ಮಾತಿಗೆ ಒಡಂಬಟ್ಟು ಆ ಸೆರೆಯೊಳಗೆ ಇದ್ದ ತಮ್ಮ ಮೊಮ್ಮಗನಾದ ಚಿಕ್ಕ ವೀರಪ್ಪ ಒಡೆಯರನ್ನು ಸೆರೆಯಿಂದ ಬಿಟ್ಟು ಕಲಿಸಂದ ೪೮೩೨ನೇ ಸಾಧಾರಣ ಸಂವತ್ಸರದಲ್ಲಿ ಅವರಿಗೆ ಪಟ್ಟಾಭಿಷೇಕವನ್ನು ಮಾಡಿಸಿದರು. † [ಅವರು] ಚಿಕ್ಕಂದಿನಾರಭ್ಯ ಸೆರೆಮನೆಯೊಳಗೆ ಇದ್ದದ್ದರಿಂದ ಶರೀರ ದಲ್ಲಿ ಅದರು ವಾಯು ಸಂಭವಿಸಿಕೊಂಡುಯಿತ್ತು. ಈ ಮೇರೆ ಇರುತ್ತ ಯಿದ್ದಲ್ಲಿ ಕಲಿ ಸಂದ ೪೮೩೭ ನೇ ಆನಂದ ಸಂವತ್ಸರದಲ್ಲಿ ದೊಡ್ಡವೀ ರಪ್ಪ ಒಡೆಯರು ಶಿವಾಧೀನರಾದರು. ಇವರ ಸಂಗಡಲೇ ಇವರ ಪಟ್ಟ ದರಾಣಿಗಳಾದ ಇಬ್ಬರಮ್ಮನವರು ಸಹಗಮನ ಮಾಡಿದರು.

ಆ ತರುವಾಯದಲ್ಲಿ ಮೈಸೂರು ಸಂಸ್ಥಾನದಲ್ಲು ದೊಡ್ಡಕೃಷ್ಣರಾಜ ಒಡೆಯರು ಇಕ್ಕೇರಿ ಸಂಸ್ಥಾನದಲ್ಲಿ ಬೂದಿ ಬಸವಪ್ಪ ನಾಯಕರು ಸಹ ಆ ಆ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿಕೊಂಡುಯಿದ್ದರು. ಈ ಮೇರೆ ಇರುತ್ತ ಇರುವಲ್ಲಿ ದೊಡ್ಡ ವೀರಪ್ಪ ವಡೆಯರವರ ತಮ್ಮಂದಿರಾಗಿ

---

* ಬ ಸರ್ವೇಜನ

† ಬ ಆ ಚಿಕ್ಕ ವೀರಪ್ಪ ಒಡೆಯರವರು.

# ಸಿದ್ಧರಾಮೇಶ್ವರ ದೇವರು ನಿರೂಪಿಸಿದ

# ಷಟ್‌ಸ್ಥಲದ ವಚನಗಳು.

೧. ಹೃದಯ ಕಮಲದಲ್ಲಿ ವಾಸವಾಗಿರುವಾತನೊಬ್ಬನು, ಮನದ ಕೊನೆಯಲ್ಲಿ ಇರುವಾತನೊಬ್ಬನು, ಚಿದಾಕಾಶದಲ್ಲಿರುವಾತನೊಬ್ಬನು, ಇವರೆಲ್ಲರಲ್ಲಿ ಇರುವಾತನೊಬ್ಬನು ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನು.

೨ ಸಿದ್ಧ ಸಿದ್ಧರುಗಳೆಲ್ಲ ರಸವಾದವ ಕಲಿತು ಬಂಧನಕ್ಕೆ ಗುರಿಯಾದರು. ಅಮೃತವ ಸೇವಿಸಿದ ಸುರರೆಲ್ಲ ಪ್ರಳಯಕ್ಕೆ ಗುರಿಯಾದರು. ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನರಿದವರೆಲ್ಲ ಬಯಲಿಗೆ ಬಯಲಾದರು.

೩. ಕಲ್ಪವೃಕ್ಷ ಮರನೆನ್ನಬಹುದೇ? ಕಾಮಧೇನು ಪಶುವೆನ್ನಬಹುದೇ? ಪರುಷ ಪಾಷಾಣವೆನ್ನ ಬಹುದೇ? ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ನುಂಗಿದವರೆಲ್ಲ ಮಾನವರೆನ್ನಬಹುದೇ?

೪. ಕೆಲವರು ಲಿಂಗವ ಪೂಜಿಸಿ ಪಡೆದರು ಗತಿಯ. ಕೆಲವರು ಲಿಂಗವ ಪೂಜಿಸಿ ಪಡೆದರು ಮತಿಯ. ನಮ್ಮ ಕಪಿಲಸಿದ್ಧನ ಪೂಜಿಸಿ ಪಡೆಯಲಿಲ್ಲವನ ಜ್ಯೋತಿಯ.

೫. ಲಿಂಗವ ಪೂಜಿಸಿದವರು ಹಲಬರುಂಟು. ಅಂಗವ ಪೂಜಿಸಿದವರು ಒಬ್ಬರೂ ಇಲ್ಲ. ಕಾಮವ ತೊರೆದವರು ಹಲಬರುಂಟು. ನಿಃಕಾಮವನಳಿದವರು ಒಬ್ಬರೂ ಇಲ್ಲ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ.

೬. ಪರುಷ ಸೋಂಕಿದ ಬಳಿಕ ಕಾರ್ಬೋನ್ನದ ಕೇಡು ನೋಡಿರಯ್ಯ. ಜ್ಯೋತಿ ಸೋಂಕಿದ ಬಳಿಕ ತಮಂಧದ ಕೇಡು ನೋಡಿರಯ್ಯ. ಅಮೃತ ಸೋಂಕಿದ ಬಳಿಕ ರೋಗದ ಕೇಡು ನೋಡಿರಯ್ಯ. ನಮ್ಮ ಕಪಿಲಸಿದ್ಧಮಲ್ಲನ ಸೋಂಕಿದ ಬಳಿಕ ಭವದ ಕೇಡು ನೋಡಿರಯ್ಯ.

೭. ಕ್ರಿಯೆವಿಡಿದು ಆಚರಿಸಬೇಕಲ್ಲದೆ ಅಕ್ರಿಯದೊಡನಾಚರಿಸಲಾಗದು. ಜ್ಞಾನವಿಡಿದು ನೋಡಬೇಕಲ್ಲದೆ ದೃಷ್ಟಿವಿಡಿದು ನೋಡಬಾರದು.

ಲಿಂಗವಿಡಿದು ಪೂಜಿಸುವದಲ್ಲದೆ ಅಂಗವಿಡಿದು ಪೂಜಿಸಲಾಗದು ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ.

೮. ಜ್ಞಾನವಿಡಿದು ಆಚರಿಸಿದರಲ್ಲದೆ ಕ್ರಿಯೆವಿಡಿದು ಆಚರಿಸಲಿಲ್ಲವು. ಕ್ರಿಯೆವಿಡಿದು ಆಚರಿಸಿದರು ಜ್ಞಾನವಿಡಿದು ಆಚರಿಸಲಿಲ್ಲವು. ರೂಪುವಿಡಿದು ನಿರೀಕ್ಷಿಸುವರಲ್ಲದೆ ಅರೂಪವಿಡಿದು ನಿರೀಕ್ಷಿಸರು. ಜ್ಞಾನವಿಡಿದಾಚರಿಸಿದರು ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಚನ್ನಬಸವಣ್ಣನವರು.

೯. ಸಮದೃಷ್ಟಿಯಾಗದವನ ಭಕ್ತನೆಂತೆಂಬೆ? ವಿಷಯಗಳಳಿಯದವನ ಮಹೇಶನೆಂತೆಂಬೆ? ಶಿವಕರುಣವಿಡಿಯದನ್ನಕ್ಕ ಪ್ರಸಾದಿ ಎಂತೆಂಬೆ? ಅಂಗೇಂದ್ರಿಯಂಗಳಳಿಯದವನ ಪ್ರಾಣಲಿಂಗಿ ಎಂತೆಂಬೆ? ಸಂಕಲ್ಪ ಹರಿಯದನ್ನಕ್ಕ ಶರಣನೆಂತೆಂಬೆ? ನಮ್ಮ ಕಪಿಲಸಿದ್ಧ ಮಲ್ಲೇಶನ ಕೂಟವನರಿಯದವನ ಐಕ್ಯನೆಂತೆಂಬೆ?

೧೦. ಭಕ್ತನಾದ ಬಳಿಕ ಜಂಗಮದ ಗುಣವನರಸಲದೇಕೋ? ಮಹೇಶನಾದ ಬಳಿಕ ವಿಷಯಕ್ಕೆಳಿಸುವದದೇಕೋ? ಪ್ರಸಾದಿಯಾದ ಬಳಿಕ ಕಂಡುದಕ್ಕೆ ಕೈದುಡುಕುವದೇಕೋ? ಪ್ರಾಣಲಿಂಗಿಯಾದ ಬಳಿಕ ಪ್ರಪಂಚದ ಹಂಗೇಕೋ? ಶರಣನಾದ ಬಳಿಕ ಮೋಕ್ಷದ ಹಂಗೇಕೊ? ಐಕ್ಯನಾದ ಬಳಿಕ ನಮ್ಮ ಕಪಿಲಸಿದ್ಧ ಮಲ್ಲಯ್ಯನ ನಾಮಸ್ಮರಣೆಯದೇತಕೋ?

೧೧. ಭಕ್ತನಾದ ಬಳಿಕ ಜಂಗಮ ಮೆಚ್ಚಬೇಕು. ಜಂಗಮನಾದ ಬಳಿಕ ಭಕ್ತ ಮೆಚ್ಚಬೇಕು. ಭಕ್ತನ ಕಾಯವೇ ಜಂಗಮ ಕಾಯ. ಜಂಗಮದ ಕಾಯವೇ ಭಕ್ತನ ಕಾಯ. ಕಪಿಲಸಿದ್ಧ ಮಲ್ಲೇಶಯ್ಯನಲ್ಲಿ ಇದೇ ಉಪಾಯ.

೧೨. ಭಕ್ತನಾದ ಬಳಿಕ ಭಕ್ತಸ್ಥಲವಳವಡುವದೇ ದುರ್ಲಭ. ಮಹೇಶನಾದ ಬಳಿಕ ಮಹೇಶಸ್ಥಲವಳವಡುವದೇ ದುರ್ಲಭ. ಭಕ್ತಸ್ಥಲ ಬಸವಣ್ಣಂಗಾಯಿತ್ತು. ಮಹೇಶಸ್ಥಲ ಚನ್ನಬಸವಣ್ಣಂಗಾಯಿತ್ತು. ಮೀರಿದ ಸ್ಥಲ ನಮ್ಮ ಪ್ರಭುವಿಂಗಾಯಿತ್ತು. ಕಪಿಲಸಿದ್ಧ ಮಲ್ಲಯ್ಯ ಎನಗಿನಿತೊಂದೊರೆವ ಪರಿ.

೧೩. ಶಾಸ್ತ್ರವ ಹೇಳುವವರೊಂದು ಕೋಟಿ. ವೇದವೇದಾಂತವ ಹೇಳುವವರೊಂದು ಕೋಟಿ. ನ್ಯಾಯಾನ್ಯಾಯ ಹೇಳುವವರೊಂದು

ಕೋಟಿ. ಕಪಿಲಸಿದ್ಧನ ಮಾಯಾಕೀಲವ ಹೇಳುವವರೋರ್ವರು ಇಲ್ಲ ಎಲ್ಲಾದರೂ.

೧೪. ಶಾಸ್ತ್ರದ ರಂಜನೆ ಲೋಕಕ್ಕಲ್ಲದೆ ಲೋಕವಿರಹಿತಂಗೆಲ್ಲಿಯದೊ? ವೇದವೇದಾಂತದ ರಂಜನೆ ಮುಮುಕ್ಷುಗಳಿಗಲ್ಲದೆ ಮೋಕ್ಷರಹಿತರಿಗೆಲ್ಲಿಯದೋ? ನಮ್ಮ ಕಪಿಲಸಿದ್ಧನ ಮಾಯಾ ಕೀಲವ ತಿಳಿವರೆ ತಿಳಿಯುವವರಿಗಲ್ಲದೆ ಸಿಶ್ಯಾನ್ಯರಿಗೆಲ್ಲಿಯದೋ?

೧೫. ವೇಷವ ಧರಿಸಿ ಫಲವೇನಯ್ಯ, ವೇಷದಂತಾಚರಣೆ ಇಲ್ಲದನ್ನಕ್ಕ? ವೇದಾಂತವನೋದಿ ಫಲವೇನಯ್ಯ, ಬ್ರಹ್ಮ ತಾವಾಗದನ್ನಕ್ಕ? ನಾನು ಕೆರೆಯ ತೋಡಿ ಫಲವೇನಯ್ಯ, ಪುಣ್ಯತೀರ್ಥಗಳು ಬರದನ್ನಕ್ಕ ಕಪಿಲಸಿದ್ಧ ಮಲ್ಲಿನಾಥಾ?

೧೬. ಶೇಷನಫಣಿಯಲ್ಲಾಡುವದು ಲೇಸು ಕಂಡಯ್ಯ. ಮೃತ್ಯುವಿನ ಬಾಯೊಳಗಿರುವದು ಬಹು ಲೇಸು ಕಂಡಯ್ಯ. ನಮ್ಮ ಕಪಿಲಸಿದ್ಧ ಮಲ್ಲಿನಾಥನ ಶರಣರು ನಡೆದ ದಾರಿಯಲ್ಲಿ ನಡೆಯುವದು ಲೇಸು ಕಂಡಯ್ಯ.

೧೭. ಊರಿಗೊಂದು ಹಳ್ಳವಾದರೆ ನೀರು ಕುಡಿಯುವವರಿಗೂ ಒಂದೇ ಹಳ್ಳವೆ ಇಲ್ಲಿಲ್ಲ. ಅರಿಯುವವರಿಗೂ ಒಬ್ಬ ದೇವರಾದರೆ ಆ ಲೋಕದವರಿಗೂ ಒಬ್ಬನೇ ಇಲ್ಲಿಲ್ಲ. ನಮ್ಮ ಕಪಿಲಸಿದ್ಧ ಮಲ್ಲೇಶನಲ್ಲದೆ ಬೇರೆ ದೈವವಿಲ್ಲ.

೧೮. ಅಮೃತವೆಂದರಿದಾತನೇನ ಮರನಾಗಲಿಲ್ಲವು. ಬ್ರಹ್ಮೋಹಮಸ್ಮೀತಿ ಎಂದರಾತನೇನು ಮುಕ್ತನಾಗಲಿಲ್ಲವು. ನಮ್ಮ ಕಪಿಲಸಿದ್ಧ ಮಲ್ಲೇಶನಲ್ಲಿ ಗುಣತ್ರಯುವಳಿದನ್ನಕ್ಕ.

೧೯. ಆಗುವದನು ತಪ್ಪಿಸಿಹೆನೆಂದರೆ ತಪ್ಪಲರಿಯದು. ಆಗು ಭೋಗಂಗಳ ತಪ್ಪಿಸುವಡೆ ಸಚ್ಚಿದಾನಂದ ಶಿವಯೋಗಿಗಲ್ಲದೆ ನರರಿಗೆಲ್ಲಿಯದೊ ಕಪಿಲಸಿದ್ಧ ಮಲ್ಲಯ್ಯ?

೨೦. ಮಾಡುದುದ ಮಾಡಲು ದೈವಬಲವೆಂಬುದೀ ಲೋಕ. ಎಲೆ ಕಪಿಲಸಿದ್ಧ ಮಲ್ಲಯ್ಯ ಏಳೇಶಂಗೆ ಪ್ರಾಣವ ಕೊಟ್ಟಿದ್ದುದಾವ ಬಲ ಹೇಳಯ್ಯ? ಸೆರೆಗೊಡ್ಡಿ ಬೇಡುವೆ.

೨೧. ಸಂಚಿತಾದಿ ಕರ್ಮತ್ರಯಂಗಳು ಜೀವನಿಗಲ್ಲದೆ ಶಿವಸ್ವರೂಪನಿಗೆಲ್ಲಿಹದೊ? ಆಡುವ ಗೊಂಬೆಯನು ಆಡಿಸುವಾತಂಗಲ್ಲದೆ ಆಡುವ

ಗೊಂಬೆಯುಗೆಲ್ಲಿಹದೊ ಸ್ವತಂತ್ರತೆಯು? ಕಪಿಲಸಿದ್ಧ ಮಲ್ಲಯ್ಯ ಇದರಿರವ ಸ್ವತಂತ್ರನಿಗಲ್ಲದೆ ಅಸ್ವತಂತ್ರನಿಗೆಲ್ಲಿಹದೊ?

೨೨. ಲಿಂಗವ ಪೂಜಿಸುವವರ ಕಂಡರೆ ಎನ್ನ ಮನವು ಉಬ್ಬಿತ್ತು ನೋಡಯ್ಯ. ಜಂಗಮವ ಪೂಜಿಸುವವರ ಕಂಡರೆ ಹೋಗ ಪ್ರಾಣ ಬಂದಂತಾಯಿತ್ತಯ್ಯ. ತನ್ನ ತಾನರಿಯುವವರ ಕಂಡರೆ ಕಪಿಲಸಿದ್ಧ ಮಲ್ಲಯ್ಯನೀತನೆಂದು ನಂಬಿತ್ತು ನೋಡಯ್ಯ ಎನ್ನ ಮನ.

೨೩. ಲಿಂಗವಾದ ಬಳಿಕ ಪಂಚಸೂತ್ರಸಹವಾಗಿರಬೇಕು. ಜಂಗಮನಾದ ಬಳಿಕ ಸದ್ಗುಣ ಸಹಿತವಾಗಿರಬೇಕು. ತನ್ನ ತಾನರಿವಾತನಾದ ಬಳಿಕ ಮರೀಚಿಯ ಜಲದಂತಿರಬೇಕು ನಮ್ಮ ಕಪಿಲಸಿದ್ಧ ಮಲ್ಲೇಶನಲ್ಲಿ.

೨೪. ಲಿಂಗವ ಪೂಜಿಸುವವರನಂತರುಂಟು. ಜಂಗಮವ ಪೂಜಿಸುವವರನಂತರುಂಟು. ತನ್ನ ತಾನರಿದು ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಕೂಡುವವರೊಬ್ಬರೂ ಇಲ್ಲ.

೨೫. ತಿಳಿಯದೆ ಪೂಜಿಸಿದರಾಗುವದೇನೋ ಅಯ್ಯ? ತಿಳಿದು ತಿಳಿದು ಮಾಡಬೇಕು. ಜಂಗಮಾರ್ಚನೆಯ ತಿಳಿದು ಮಾಡಬೇಕು. ತಿಳಿಯದೆ ಮಾಡಲು ನಿನ್ನ ಸಿದ್ಧಿಗಳಿಗೆ ಸಿದ್ಧರಲ್ಲದೆ ನಿನ್ನಂಗ ದೊರೆಕೊಂಬ ಪರಿಯ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೬. ಸಕಲ ನಿಃಕಲದಲ್ಲಿ ಬ್ರಹ್ಮಾಂಡದ ತತ್ವದಲ್ಲಿ ಕರ್ಮದ ಸೊಮ್ಮಿನ ಸೀಮೆಯನತಿಗಳೆದು ಅದು ಲಿಂಗವೆಂದು ತೋರಬಲ್ಲಾತ ಗುರು. ತನುಗುಣ ಸಂಬಂಧವ ತಾನೆಂದು ತೋರಲೀಯದೆ ನಿಶ್ಚಯವ ಮಾಡಿ ತಾತ್ಪರ್ಯವ ಕಳೆಯಾಗಿರಿಸಿ ಸಕಲದಲ್ಲಿ ನಿಃಕಲದಲ್ಲಿ ರೂಪಿನಲ್ಲಿ ಅರೂಪಿನಲ್ಲಿ ಭಾವದಲ್ಲಿ ನಿರ್ಭಾವದಲ್ಲಿ ಅವೆ ಅವಾಗಿ ತೋರಬಲ್ಲಾತ ಗುರು. ಈ ಪರಿಯ ತೋರಿ ಎನ್ನ ಭವ ತಪ್ಪಿಸಿದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಪರಮ ಗುರುವು.

೨೭. ಶ್ರೀಗುರುವೆ ಭವಪಾಶದೂರನೇ, ಶ್ರೀಗುರುವೆ ಆದಿ ಅಂತ್ಯದೂರನೆ, ಶ್ರೀಗುರುವೆ ಆನಂದಮಯರೂಪನೆ, ನೀ ಗತಿ ಎಂದಾತ ಅನಾಥನೈದುವನು ಶ್ರೀಗುರು ಮಲ್ಲಿಕಾರ್ಜುನನ.

೨೮. ಶ್ರೀಗುರುವೆ ದಿವ್ಯ ಮಹಾ ಮುನಿಯೆ ಶ್ರೀಗುರುವೆ ಲೋಕ ಮೀರೇಳು ಹೆತ್ತವನೆ, ಆನಂದ ಚಿನ್ಮಯ ಮಹಾಗುರುದೇವ ಶಿಷ್ಯ ಕಾರಣ ನೀವು ಪರಮ ಶಿವಮೂರ್ತಿಯಾದಿರಯ್ಯ. ನಿತ್ಯ ಪ್ರಸಾದದಲ್ಲಿ ಮುಕ್ತನ ಮಾಡಿದ ನಿತ್ಯ ಜ್ಯೋತಿರ್ಮಯನೆ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನನೆ.

೨೯. ಗುರುವೆ ಇಹಪರ ಗುರುವೆ ಕರುಣಾಕರನೆ ಗುರುವೆ ಶುದ್ಧಾತ್ಮನೆ ನಿರ್ಮಳಾಂಗ ಗುರುವೆ ನಿನ್ನಂತೆ ಎನ್ನನು ಮಾಡಿದ ಪರಮ ಗುರುವೆ ನೀನು ಮಲ್ಲಿಕಾರ್ಜುನಾ.

೩೦. ಅನುಪಮನೆ ನಿನ್ನ ಹವಣಿಸಲಿಕ್ಕರಿದಯ್ಯ. ಘನತರವೆನಿಸುವ ಸಾಯುಜ್ಯ ಪದವ ಮೀರಿದ ಶಬ್ದ ಹಲವ ಮೀರಿದ ಬ್ರಹ್ಮವ ಗುರುಕರುಣದಿಂದೆ ಕಂಡೆ. ಪರಮ ಪದವ ಗುರುವೆ ಮದ್ಗುರುವೆ ಸದ್ಗುರುವೆ ತ್ರೈಜಗದ್ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೩೧. ಮಲತ್ರಯಂಗಳಲ್ಲಿ ಕುದಿಯಲೀಯದೆ, ಮನಸಿಜನ ಬಾಣಕ್ಕೆ ಗುರಿಯಾಗಲೀಯದೆ ಎನ್ನ ತನ್ನಂತೆ ಮಾಡಿದನಯ್ಯ. ಶ್ರೀಗುರುಪದ ನಾಲ್ಕು ಮೀರಿ ಭವಕ್ಕೆ ಹೇತುವಾಗಲೀಯದೆ ಕರುಣಿಸಿ ಮುಕ್ತನ ಮಾಡಿದೆಯಯ್ಯ. ಶ್ರೀಗುರುವೆ ಪರಮ ಗುರುವೆ ಪರಿಭವಕ್ಕೆ ಬಾರಲೀಯದಂತೆ ಎನ್ನ ನಿನ್ನವರೊಳಗೊಬ್ಬನೆಂದೆನಿಸಿದೆಯಲ್ಲಾ. ಗುರುವೆ ಪರಮಗುರುವೆ ಕಾಲನ ಕಮ್ಮಟಕ್ಕೆ ಗುರಿಯಹ ಎನ್ನನು ತೆಗೆದು ಗುರುಲಿಂಗ ಜಂಗಮ ತ್ರಯ ಲಿಂಗಕ್ಕೆ ಕಾರಣಿಕನ ಮಾಡಿದೆ ಇನ್ನು ಭವಕ್ಕೆ ಬಾರೆನು. ನಿನ್ನವರಾದಂತೆ ತಪ್ಪೆನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎನ್ನ ಮೀರಿದಪರ ಒಂದೂ ಇಲ್ಲ.

೩೨. ಸೀಮೆ ಸಾಯುಜ್ಯವ ಮೀರಿದಾತ ಗುರು. ಸೋಮ ಪ್ರಭೆಯಿಂದತ್ತತ್ತಲಾದ ಪಾವನ ಆದಿ ಅಕ್ಷರವರಿತನಾತ ಗುರುವಯ್ಯ. ನಾದ ಬಿಂದು ಕಳೆಯಾದಿಯ.ರಿದಾತನು ಆಭೇದ್ಯ ಗುರು ಬಸವಣ್ಣ ಶ್ರೀ ಮಲ್ಲಿಕಾರ್ಜುನಾ.

೩೩. ಅಯ್ಯಾ ನಿನ್ನ ಕೈಯ್ಯಲ್ಲಿ ಬೆಚ್ಚಲೊಡನೆ ಅಯ್ಯಾ ಆಯ್ಯಾ ಬ್ರಹ್ಮಾಂಡಂಗಳು ತರತಳಿಸುತ್ತವೆ. ಬ್ರಹ್ಮ ಮರೆದನು. ವಿಷ್ಣು ತಾ ಕೊರಗಿದನು. ವೇದಂಗಳು ದೆಸೆದೆಸೆಗೆ ಬಾಯಿಡಲು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮ ಕೈಶಬ್ದವನಿತುಂಟು.

೩೪. ನಾಗೇಂದ್ರನ ವಿಷವನು ಬ್ರಹ್ಮನ ಕಪಾಲವನು ಮತ್ತೊಬ್ಬರಿಗೆ ಹಿಡಿಯ ತೀರುವದೇ? ಎಲೆ ಅಯ್ಯ, ಎತ್ತಿದರೆ ಮೇಲೇಳು ಲೋಕವನುರುಹುವದು. ಇಳುಹಿದರೆ ಕೆಳಗೇಳು ಲೋಕವನುರುಹುವದು. ಇವನೆತ್ತದೆ ಇಳುಹದೆ ಹಿಡಿದು ಕೊಂಡಾಡುವ ದೇವ ನಮ್ಮ ಕಪಿಲಸಿದ್ಧ ಮಲ್ಲಿನಾಥಯ್ಯನೆ.

೩೫. ಜಟೆಯಲ್ಲಿ ನದಿಗಳು ಕೂಡಲು ನಾಂಟ್ಯವನಾಡಿದೆ ನಾಟಕ ಸೂತ್ರಕ್ಕೆ ಅನೇಕ ಮಹಾಮಹಿಮನೆ ಕೋಟಿ ದಾನವರ ಮರುಳಾಟ ವೀರನೇ ಕೋಟಿ ಗುಣಯುತ ನಮ್ಮ ಶ್ರೀ ಗುರು ಮಲ್ಲೇಶ್ವರಾ.

೩೬. ಪಾತಾಳ ವಿತ್ತಿತ್ತ ಪಾದಂಗಳತ್ತತ್ತ. ದಶಭುಜಂಗಳತ್ತತ್ತ ಬ್ರಹ್ಮಾಂಡ ವಿತ್ತಿತ್ತ. ಮಣಿ ಮುಕುಟ ವತ್ತತ್ತ ಚನ್ನಮಲ್ಲಿಕಾರ್ಜುನಯ್ಯ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಿ ಲಿಂಗವೆ.

೩೭. ಲಿಂಗೋದಕದಿಂದ ಅಂಗರಕ್ಷಂಗಳ ಮಾಡುವೆ. ಪ್ರಸಾದೋದಕದಿಂದೆ ಪ್ರಾಣದ ನೆಲೆಯನರಿವೆ. ...............ಇಂತೀ ತ್ರಿವಿಧೋದಕದಿಂದ ಶುದ್ಧನಹೆ ಸಿದ್ಧನಹೆ ಪ್ರಸಿದ್ಧನಹೆ ಕಪಿಲ ಸಿದ್ಧಮಲ್ಲಿಕಾರ್ಜುನ ನಾಥನಹೆ.

---

## ಪಾದೋದಕ ಕ್ರಮ.

೩೮. ಅಂಗ ಲಿಂಗ ಸಂಬಂಧಿಯಾದ ಬಳಿಕ ಗುರುವಿನನುಮತದಿಂದ ಸ್ವಾನುಭವ ಲಿಂಗ ಸಂಬಂಧಿಯಾದ ಬಳಿಕ ಪ್ರಾಣವಿಪ್ಪನೆಲೆಯ ನರಿದು ಆ ಲಿಂಗಮಜ್ಜನೋದಕದಿಂದ ನಿನ್ನ ಕಾಯಶುದ್ಧಿ. ಆ ಲಿಂಗ ನಿರೀಕ್ಷಣೋದಕದಿಂದ ಅವಯುವ ಶುದ್ಧಿ. ಆ ಲಿಂಗ ಪ್ರಸಾದೋದಕ ನಿನ್ನ ಪರಮ ಪದವು. ಇಂತು ಪಾದೋದಕತ್ರಯದಲ್ಲಿ ಸುಖಿಯಾಗಿ ಕಪಿಲ ಸಿದ್ಧ ಮಲ್ಲಿಕಾರ್ಜುನನ ಕೂಡಿ ನಿತ್ಯವಾಗು ಸಂದಿಲ್ಲದೆ.

೩೯. ಕಲ್ಪಿತೋದಕ ಒಂದು, ಅರ್ಪಣೋದಕ ಮೂರು. ಮತ್ತು ಅಂಗೋದಕವು ತ್ರಯವಾಗಿ ಮಿಕ್ಕ ಪ್ರಸಾದೋದಕ ಅವು ಮೂರು. ಸತ್ವ ರಜ ತಮ ವನತಿಗಳೆ ದವರಿಗಲ್ಲದೆ ಹತ್ತು ಪಾದೋದಕವ ನರಿಯಲರಿದು. ತಾನು ಚಿತ್ತ ಶುದ್ಧನಾಗಿ ಗುರು ಕರುಣದಿಂದವೆ ಹತ್ತು ಪಾದೋ

ದಕವ ಗ್ರಹಿಸುವ ಭಕ್ತರಿಗೆ ಸಂದಿಲ್ಲದಿಹೆ. ಅವರು ನೀನು ಮುತ್ತು ನೀರನು ಕೂಡಿದಾನಂದದ ಭೇದದ ಒಲು ತತ್ವಮುಸಿಯಪ್ಪನೇ ಶ್ರೀ ಗುರು ಮಲ್ಲಿಕಾರ್ಜುನಾ?

೪೦. ಮುಖಧಿಂದ ಹುಟ್ಟಿಪ್ಪ ಮೂರು ಅರ್ಪಿತೋದಕದ ಒಳಗೆ ಹುಟ್ಟಿತ್ತು. ಶುದ್ಧ ಪ್ರಸಾದೋದಕ ಸದಮಲ ಜ್ಞಾನದಂಷ್ಟ್ರಿಯಲ್ಲಿ ಹುಟ್ಟಿ ತ್ತೊಂದುದಕ. ವದನ ವೈದರದಲ್ಲಿ ಉದ್ಭವಿಸಿದವು. ತಾವು ಕರಣೇಂದ್ರಿ ಯಂಗಳ ನತಿಗಳೆದು ಹತ್ತನೆಯ ಪಾದೋದಕ ಕ್ರಮವಿಂತುಟು ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೪೧. ಲಿಂಗಾಂಗಿಗಳಿಗೆ ಪಾದೋದಕವಲ್ಲದೆ ಅಂಗಭವಿಗೆ ಪಾದೋ ದಕವೆಲ್ಲಿಹದೊ? ಶರಣರಿಗೆ ಶಿವಾನುಭವ ಗೋಷ್ಠಿಯಲ್ಲದೆ ಶರ ತಾಗಿದವನಿಗೆ ಶಿವಾನುಭವ ಗೋಷ್ಠಿ ಎಲ್ಲಿಹುದೊ? ಲಿಂಗವಿರಹಿತರಿಗೆ ಪಾದೋದಕ ಸಲ್ಲದು ಸಲ್ಲದು. ಕೊಟ್ಟವಂಗೆ ಮುಕ್ತಿಯು ಮೊದಲೆ ಇಲ್ಲವು.

೪೨. ಆದಿ ಆಧಾರವಿಲ್ಲದಂದಿನ ಪ್ರಸಾದ, ಅಗಮ್ಯ ಅಗೋಚರ ಅಪ್ರ ಮಾಣವೆಂದೆನಿಸುವ ಪ್ರಸಾದ, ಅಣೋರಣೀಯಾನ್ ಮಹತೋ ಮಹೀ ಯಾನ್ ಎಂದೆನಿಸುವ ಪ್ರಸಾದ, ನಿಜೈಕ್ಯಂ ಪ್ರಾಣ ನಿರ್ಮಲಂ ಎಂದೆನಿಸುವ ಪ್ರಸಾದವು, ಶಿವೈಕ್ಯಂ ಸುಖಸಂಬಂಧಃ ಎಂದೆನಿಸುವ ಪ್ರಸಾದ, ಪರಮಾತ್ಮ ತ್ಯಮಿ ರುದ್ರಂ ಎಂದೆನಿಸುವ ಪ್ರಸಾದ, ಇನಿತಪ್ಪ ಪರಮ ಸುಖದ ಪರಮ ಪ್ರಸಾದವು ಒಂದಾಗಿ ನಿತ್ಯ ಮುತ್ತೈದೆಯ ಭಾವದಲ್ಲಿ ಶುದ್ಧವಾಯಿ ತ್ತಯ್ಯ ಕಪಿಲಸಿದ್ಧ ಮಲ್ಲಿನಾಥಯ್ಯ.

೪೩. ಕಾಯ ಪ್ರಸಾದವೆನ್ನ ಧನ ಪ್ರಸಾದವೆನ್ನ ಭಾವ ಪ್ರಸಾದವೆನ್ನ ಸುಯಿಧಾನ ಪ್ರಸಾದವೆನ್ನ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಪ್ರಸಾದವ ಹಾಸಿ ಹೊದಿಸಿಕೊಂಡಿದ್ದೆನು.

೪೪. ಎನ್ನಕಾಯ ಪ್ರಸಾದವಾಯಿತ್ತು. ಎನ್ನ ಜೀವ ಪ್ರಸಾದ ವಾಯಿತ್ತು. ಎನ್ನ ಭಾವ ಪ್ರಸಾದವಾಯಿತ್ತು. ಎನ್ನ ಪ್ರಾಣ ಪ್ರಸಾದವಾ ಯಿತ್ತು. ಎನ್ನ ಕರಣೇಂದ್ರಿಯಂಗಳೆಲ್ಲವು ಪ್ರಸಾದಮಯವಾದವು ನೋಡಾ. ಘನಲಿಂಗ ಮೋಹದ ಚನ್ನಮಲ್ಲಿಕಾರ್ಜುನಯ್ಯ ನೀವೆನ್ನ ಕರಸ್ಥಲದ ಪ್ರಸಾದ ರೂಪಾದಿರಾಗಿ.

೪೫. ಮಡಿವಾಳಯ್ಯ ತನ್ನ ದೇಹವ ಕೊಟ್ಟು ಗಣಾಚಾರದ ಶಕ್ತಿ ಪ್ರಸಾದವ ಪಡೆದ. ಘಟ್ಟವಾಳಯ್ಯ ತನ್ನ ಮಾಯೆಯ ಕೊಟ್ಟು ಮೂಲ ಪ್ರಸಾದವ ಪಡೆದ. ಮರುಳಸಿದ್ಧಯ್ಯ ಮನವ ಕೊಟ್ಟು ಗಣ ಪ್ರಸಾದವ ಪಡೆದ. ನಾನು ಕರಣಾದಿಗಳ ಕೊಟ್ಟು ಚನ್ನಬಸವಣ್ಣನ ಪ್ರಸಾದವ ಪಡೆದು ಭವ ವಿರಹಿತನಾದೆನು ನೋಡಾ ಕಪಿಲಸಿದ್ಧ ಮಲ್ಲಿನಾಥಾ.

೪೬. ಪ್ರಸಾದ ಕಾಯನಾದ ಬಳಿಕ ರಸ ರಸಾಯನೌಷಧಿಯ ಹಂಗೇಕೊ? ಮನೋ ಇಚ್ಛೆ ಪೂರ್ಣವಾದ ಬಳಿಕ ಮಂತ್ರದ ಲಕ್ಷದ ಹಂಗೇಕೋ? ನೀನಿಲ್ಲಿಗೆ ಬಂದ ಬಳಿಕ ಪರ್ವತದ ಹಂಗೇಕಯ್ಯ ಎನಗೆ ಕಪಿಲಸಿದ್ಧ ಮಲ್ಲಿನಾಥಾ.

೪೭. ದೇವನಿಂತವನೆಂದು ನಂಬಲಾಗದಯ್ಯ. ಬಾ ಎಂದು ಹೇಳಿ ಬಯಲಾದ ದೇವನೊಳ್ಳಿದನೆ? ದೇವನಿಂತವನೆಂದು ನಂಬಲಾಗದಯ್ಯ. ತನ್ನ ಕಾರ್ಯಕ್ಕೆ ಹೆಣಗಾಡಿಸಿದ ಒಳ್ಳಿದನೆ ಕಪಿಲಸಿದ್ಧಮಲ್ಲಯ್ಯ? ನಿನ್ನ ಲೀಲೆ ತಿಳಿಯದಾರಿಂಗೆ.

೪೮. ಮಾಡಿ ಮಾಡಿ ಹೋದರು ಕೆಲಬರು. ನೋಡಿ ನೋಡಿ ಹೋದರು ಹಲಬರು. ನೀಡಿ ನೀಡಿ ಹೋದರು ಕೆಲಬರು. ನೀಡದೆ ನೋಡದೆ ಮಾಡದೆ ಹೋದವರಾರನು ಕಾಣೆ ನಿಮ್ಮ ಹೃದಯ ಕಮಲದೊಳು ಮಲ್ಲಯ್ಯ.

೪೯ ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ, ಮತ್ತಾರ ಹಿತಕ್ಕಲ್ಲ ನೋಡಯ್ಯ! ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ ಮತ್ತಾರ ಹಿತಕ್ಕಲ್ಲ ನೋಡಯ್ಯ! ತನ್ನ ಜಿಟ್ಟನ್ಯ ಹಿತವ ನೋಡಿದರೆ ಕೂಡಿಕೊಂಬ ನಮ್ಮ ಕಪಿಲಸಿದ್ಧ ಮಲ್ಲಯ್ಯನವರು.

೫೦. ಲಿಂಗವಾದ ಬಳಿಕ ಪೂಜಿಸಲಿಲ್ಲ. ಜಂಗಮವಾದ ಬಳಿಕ ನೋಡಲಿಲ್ಲ. ಪ್ರಸಾದಿಯಾದ ಬಳಿಕ ರುಚಿಸಲಿಲ್ಲ. ಇಂತೀ ತ್ರಿವಿಧ ಒಂದಾದ ಬಳಿಕ ಕಪಿಲಸಿದ್ಧ ಮಲ್ಲಯ್ಯ ಬೇರೊಂದು ತಿಳಿಯಲಿಲ್ಲ.

---

## ಐಕ್ಯಸ್ಥಲ.

೫೧. ಪೂಜಿಸ ಹೋದರೆ ಪೂಜಾ ಪದಾರ್ಥವಿಲ್ಲದಂತಾಯಿತ್ತಯ್ಯ! ನಮ್ಮ ಚನ್ನಬಸವೇಶ್ವರನ ಗುರುವಿನ ಬೋಧೆಯಿಂದ ಮಾಡಿಸ ಹೋದರೆ ಮಾಡುವ ರೂಪು ಇಲ್ಲದಂತಾಯಿತ್ತಯ್ಯ! ಅಲ್ಲಮನ ವಚನದಿಂದ ಇದ ರಿರವ ತಿಳಿಯಬೇಕೆಂದು ಹೋದರೆ ಆನು ಕಾಣೆ ಕಪಿಲಸಿದ್ಧ ಮಲ್ಲಯ್ಯ.

೫೨. ಭಾವಲಿಂಗದಿಂದ ಇಷ್ಟಲಿಂಗ ಧ್ಯಾನಿಸ ಹೋದರೆ ಇಷ್ಟ ಲಿಂಗವೆ ಭಾವಲಿಂಗವಾಯಿತ್ತು. ಭಾವಲಿಂಗದಿಂದ ತ್ರಿವಿಧವನರಿದಿಹೆ ನೆಂದರೆ ಭಾವಲಿಂಗವೆ ಮಹಾಲಿಂಗವಾಗಿ ಅಳವಡಿಸಿದನು ಎನ್ನ ಗುರು ಚನ್ನಬಸವಣ್ಣನು ಕಾಣಾ ಕಪಿಲಸಿದ್ಧ ಮಲ್ಲೇಶಾ.

---

## ಸಿದ್ಧರಾಮೇಶ್ವರ ದೇವರು ಅಕ್ಕನಾಗಯನ ಲಿಂಗಪೂಜಾ ಗ್ರಹದಲ್ಲಿ ಹೋಗಿ ಹಾಡಿದ ವಚನ.

೫೩. ಅವ್ವಾ ನೀ ನೀರೆರೆದರೆ ನಾ ನೆನೆಯೆನು. ಎರೆಯದಿದ್ದರೆ ಒಣಗನು ನೋಡವ್ವಾ. ಎರೆದು ಎರೆಯದಿದ್ದರೆ ಕೂಡಿಕೊಂಡು ಮರೆವನವ್ವಾ ಕಪಿಲ ಸಿದ್ಧ ಮಲ್ಲಯ್ಯನವ್ವಾ.

---

## ನೀಲಮ್ಮನವರ ನೋಡಿ ಹಾಡಿದ ವಚನಗಳು.

೫೪. ಅವ್ವಾ ಅವ್ವಾ ನಾನೇನೆಂಬೆನೀ ವಿಚಿತ್ರವನು? ನೀರನೆರೆಯದೆ ಅದುದು ನೋಡವ್ವಾ ವೃಕ್ಷ. ಗಾಳಿ ಇಲ್ಲದೆ ಚಲಿಸುತ್ತಿಹುದು. ಋತುವಿ ದಾಗದೆ ಫಲವಾಗುವದದು ನೋಡಿ ನಮ್ಮ ಚನ್ನಬಸವಣ್ಣ ಮೊಳಕೆಯ ಚಿವಟಿ ಒಗೆದ ನೋಡವ್ವಾ. ಅದೆ ಕಪಿಲಸಿದ್ಧ ಮಲ್ಲೇಶನ ರೂಪು ನೋಡವ್ವಾ.

೫೫. ಶಬ್ದ ನೋಡುವಡೆ ನಪುಂಸಕ. ಅದರ ಕಾರ್ಯ ನೋಡು ವಡೆ ಹರಿ ಹರ ಬ್ರಹ್ಮಾದಿಗಳನೆಲ್ಲ ಮುಂದಿಕ್ಕಿತ್ತು. ಅದರಂತೆ ಹೋದರೆ ತನ್ನನು ಬಿಡದು. ತಾ ತಿಳಿದು ಹೋದರೆ ತನ್ನ ಕಡೆ ಬರದು ನೋಡಾ ಕಪಿಲಸಿದ್ಧ ಮಲ್ಲಯ್ಯ.

೫೬. ಮನೋ ಶಬ್ದ ನಪುಂಸಕ ಎಂಬ ನ್ಯಾಯಜ್ಞನ ಮಾತೆ ಹುಸಿಯಲ್ಲ ನೋಡಯ್ಯ. ಶಬ್ದ ನಪುಂಸಕವಾಗಿ ಕಾರ್ಯ ಪುಲ್ಲಿಂಗವಾ ದರೆ ಆ ಶಬ್ದ ಪಾಣಿಗೆ ತಿಳಿಯದೆ ಹೋಯಿತ್ತಯ್ಯ ಕಪಿಲಸಿದ್ಧ ಮಲ್ಲಯ್ಯ.

೫೭. ವೇದ ವೇದಾಂತವನೋದಿದರೇನು, ಮನೋಸೂತಕವಳಿಯು ದನ್ನಕ್ಕ? ಸಿದ್ಧ ಸಿದ್ಧಾಂತವ ಶ್ರಮ ಬಟ್ಟರೇನು ಸಾಧಿಸಿ ಕೀರ್ತಿಯು ಹಡೆಯದನ್ನಕ್ಕ? ಇವೆಲ್ಲ ಹೊರಗಣ ಮಾತು. ಮಾತೊಂದೆ. ನಮ್ಮ ಕಪಿಲ ಸಿದ್ಧ ಮಲ್ಲೇಶನಲ್ಲಿ ಸದಾಚರಣ ಸನ್ಮಾರ್ಗವಯ್ಯ.

೫೮. ವೇದ ವೇದಾಂತವನೋದಿದವರೆಲ್ಲ ನಿರಂಜನರಾದರೆ ಜನ ರಾರೋ? ಈ ಲೋಕದಲ್ಲಿ ಸಿದ್ಧಾಂತವ ಸಾಧಿಸಿದವರೆಲ್ಲ ದೇವರಾದರೆ ಸುರರಾರೋ? ಸ್ವರ್ಗದಲ್ಲಿ ವೇದಾಂತ ವಳವಟ್ಟಿತ್ತು. ಪ್ರಥಮರಿಗೆ ಸಿದ್ಧಾಂ ತವಳವಟ್ಟಿತ್ತು. ಒಬ್ಬರೊಬ್ಬರಿಗೆ ಈ ಎರಡರ ಕೀಲವಳವಟ್ಟಿತ್ತು. ಎನ್ನ ಗುರು ಚನ್ನಬಸವಣ್ಣಂಗೆ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೫೯. ತಿಳಿ ನೀರೆಂಬಿ. ತಿಳಿ ನೀರೆಂಬಿ. ತಿಳಿ ನೀ ಯೆಂದು ಒಂದು ದಿನ ಅಂದಿಲ್ಲೆಲೆ ಮಾನವಾ ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದರೆ ತಳು ಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲೇಂದ್ರಾ.

೬೦. ಅಂಗಕ್ಕೆ ಭೋಗವ ಕೊಟ್ಟವರ ನೋಡಿದೆನಲ್ಲದೆ ಲಿಂಗಕ್ಕೆ ಕೊಟ್ಟವರ ನೋಡಲಿಲ್ಲವು. ಲಿಂಗಕ್ಕೆ ಷೋಡಶೋಪಚಾರಂಗಳ ಕೊಟ್ಟ ವರ ನೋಡಿದೆನಲ್ಲದೆ ಮನವ ಕೊಟ್ಟವರ ನೋಡಲಿಲ್ಲ. ಮನವ ಕೊಟ್ಟ ವರ ನೋಡಿದೆನಲ್ಲದೆ ಮನ ಲಿಂಗವಾದವರ ನೋಡಲಿಲ್ಲ ಕಪಿಲಸಿದ್ಧ ಮಲ್ಲಯ್ಯ.

೬೧. ಉಂಡು ಉಂಡು ಹೋಗುವವರ ನೋಡಿ ನೋಡಿ ನಾಚಿ ತ್ತಯ್ಯ ಎನ್ನ ಮನ. ಎಡಹಿ ಎಡಹಿ ಹೋಗುವವರ ನೋಡಿ ನಾಚಿ ತ್ತಯ್ಯ ಎನ್ನ ಮನ. ಉಣದೆ ಎಡಹದೆ ಹೋದರೆ ಅವರೆ ಬಸವಾದಿ ಪ್ರಮಥರೆಂದೆ. ಅವರೇ ನೀವೆಂದು ಭಾವಿಸುವೆನಯ್ಯ ಕಪಿಲ ಸಿದ್ಧಮ ಲ್ಲಿಕಾರ್ಜುನಾ.

೬೨. ಜಲವ ತರದೆ ಪಾಕವ ಹೊತ್ತಿಸದೆ ಪಾಕವ ಮಾಡಿ, ಉಣಬಲ್ಲರೆ ಐಕ್ಯನೆಂಬೆ. ಆರೂಢನೆಂಬೆ. ಆರು ಸ್ಥಲವ ಮೀರಿದ ಮಹಾ ಯೋಗಿ ಎಂಬೆ ಕಪಿಲಸಿದ್ಧಮಲ್ಲಿಕಾರ್ಜುನಾ.

೬೩. ನೀರ ಮೇಲೆ ನಡೆಯುವವರನಂತರುಂಟು. ಖೇಚರದಲ್ಲಿ ನಡೆಯುವವರನಂತರುಂಟು. ಕಪಿಲಸಿದ್ಧ ಮಲ್ಲಿಕಾರ್ಜುನಾ ಕಾಲಿಲ್ಲದೆ ನಡೆಯುವವರರೋರ್ವರಿಲ್ಲ.

೬೪. ಮಣಗಳಿಗೆ ಎಜ್ಜ ಹಿಡಿಯುವರಲ್ಲದೆ ಮನಕ್ಕೆ ಎಜ್ಜ ಹಿಡಿಯುವರಾರು ಇಲ್ಲ. ವ್ಯಾಧಿಗೆ ಔಷಧವ ಕೊಡುವರಲ್ಲದೆ ಮರಣಕ್ಕೆ ಔಷಧವ ಕೊಡುವರಾರು ಇಲ್ಲ. ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ಗರ್ಭದೊಳು ಪ್ರಮಥ ಚಿಂತಾಮಣಿ ಚನ್ನಬಸವಣ್ಣನಲ್ಲದೆ ಮತ್ತಾರು ಇಲ್ಲ.

೬೫. ವೇಷದಲ್ಲಿ ಭಕ್ತನಾದರೇನು? ವೇಷದಲ್ಲಿ ಮಹೇಶನಾದರೇನು? ಗುಣವಿಲ್ಲದನ್ನಕ್ಕರ ಕ್ಷೀರಕ್ಕೂ ತಕ್ರಕ್ಕೂ ಭೇದವೇನುಂಟು? ರುಚಿಯಿಂದಲ್ಲದೆ ರೂಪದಿಂದವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೬೬. ದುಷ್ಕರ್ಮಗಳ ಮಾಡುವವರನಂತರುಂಟು. ಸತ್ಕರ್ಮಗಳ ಮಾಡುವವರೊಬ್ಬರು ಇಲ್ಲ ನೋಡಯ್ಯ ದುಷ್ಕರ್ಮವೆಂದರೆ ವಿಷಯವಾಸನೆ. ಸತ್ಕರ್ಮವೆಂದರೆ ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವ ವಾಸನೆ.

೬೭. ಅರುವತ್ತೆಂಟು ಸಹಸ್ರ ವಚನಗಳ ಹಾಡಿ ಹಾಡಿ ಸೋತಿತೆನ್ನ ಮನ ನೋಡಯ್ಯ! ಹಾಡುವದೊಂದೆ ವಚನ ನೋಡುವದೊಂದೆ ವಚನ. ವಿಷಯ ಬಿಟ್ಟು ನಿರ್ವಿಷಯವಾಗುವದೊಂದೆ ವಚನ ಕಪಿಲಸಿದ್ಧ ಮಲ್ಲೇಶನಲ್ಲಿ.

೬೮. ನಿರ್ವಿಷಯನಾಗಬೇಕೆಂದು ಹೇಳುವರಲ್ಲದೆ ಆದವರನು ಒಬ್ಬರನು ಕಾಣೆ ನೋಡಯ್ಯ. ಆಗುವದೆ ಆಗುವದೆ ಮಾಯೋಂಶಿಕಂಗೆ? ಆಗುವುದು ನಿಸ್ಸಂಶಿಕಂಗಲ್ಲದೆ ಇನ್ನಾರಿಗಯ್ಯ ಕಪಿಲಸಿದ್ಧಮಲ್ಲಿನಾಥಾ?

## ಪ್ರಾಣಲಿಂಗಿ ಸ್ಥಲಕ್ಕೆ ಸೇರಿದ ವಚನಗಳು.

೬೯. ಶೃತಿ ಸ್ಮೃತಿ ಪುರಾಣಾಗಮೋಪನಿಷದ್ವಾಕ್ಯವನರಿವರಲ್ಲದೆ ಶೃತ್ಯಾತೀತ ಮೂರ್ತಿಯನರಿದವರು ಒಬ್ಬರು ಇಲ್ಲ ನೋಡಯ್ಯ. ಸರ್ವಂ ಖಲ್ವಿದಂ ಬ್ರಹ್ಮವೆಂದರಿದು ಮತ್ತೇನುನರಿಯದೆ ಹೋದೆನಯ್ಯ ನಿಮ್ಮ ಮಹಾ ಬಯಲಿಲ್ಲದ ಕಪಿಲಸಿದ್ಧ ಮಲ್ಲಿಕಾರ್ಜುನಾ.

೭೦. ಲಿಂಗಪೂಜೆಯ ಮಾಡಿ, ಲಿಂಗದ ಕರುಣ ಹಡೆದೆವೆಂದು ಹೇಳುವರಲ್ಲದೆ ನೀ ನಾ ಲಿಂಗಾಗೆಂದು ಹೇಳುವರಿಲ್ಲ ನೋಡಯ್ಯ ಲಿಂಗ ನೀನೆಂದು ಹೇಳುವರಲ್ಲದೆ ಲಿಂಗದ ಲೀಲೆ ಹೇಳುವರಿಲ್ಲ ನೋಡಯ್ಯ. ಲಿಂಗದ ಲೀಲೆ ಹೇಳುವರಲ್ಲದೆ ಲಿಂಗ ತಾವಾದವರಿಲ್ಲ ನೋಡಯ್ಯ ಲಿಂಗ ತಾವಾದವರು ಇಹರಲ್ಲದೆ ಲಿಂಗ ಶಬ್ದ ಮುಗ್ಧನಾದವರು ಒಬ್ಬರು ಇಲ್ಲ ಕಪಿಲಸಿದ್ಧಮಲ್ಲಯ್ಯ.

೭೧. ಸಿಂಹ ಮದಕರಿಯ ಮೇಲೆ ಹಾರುವದಲ್ಲದೆ, ಮದ ಮಹಿಷಿಯ ಮೇಲೆ ಹಾರುವದೆ ಅಯ್ಯ! ಪಕ್ಷಿ ಆಕಾಶದಲ್ಲಿ ಹಾರುವದಲ್ಲದೆ ಪಂಜರದಲ್ಲಿ ಹಾರದು ನೋಡಯ್ಯ! ನಮ್ಮ ಕಪಿಲಸಿದ್ಧ ಮಲ್ಲೇಶನನರಿವವರು ಜ್ಞಾನದ ಮೇಲೆ ಹಾರುವರಲ್ಲದೆ ಅಜ್ಞಾನದಲ್ಲಿ ಹಾರರು.

೭೨. ನಿತ್ಯವೆಂದರೆ ಲಿಂಗ, ಅನಿತ್ಯವೆಂದರೆ ಅಂಗ. ಮತ್ತು ನಿತ್ಯವೆಂದರೆ ಜ್ಞಾನ, ಅನಿತ್ಯವೆಂದರೆ ಅಜ್ಞಾನ. ನಿತ್ಯ ಕಾರ್ಯವು ಸತ್ಕರ್ಮ ಅನಿತ್ಯ ಕಾರ್ಯಗಳೆ ದುರ್ವಿಷಯಗಳು. ವಿಷಯಗಳೆ ನಿತ್ಯಗಳಾಗಲು ಜ್ಞಾನಿ ಎಂದು ಐಕ್ಯನೆಂದು, ಪ್ರಮಥನೆಂದು, ವೀರಶೈವನೆಂದು ಕಪಿಲಸಿದ್ಧ ಮಲ್ಲಿಕಾರ್ಜುನನೆಂದು ಬೇರೆ ಉಂಟೇನೋ ಹಾವಿನ ಹಾಳ ಕಲ್ಲಯ್ಯ.

---

## ವಿಭೂತಿ ಸ್ಥಲ.

೭೩. ಹಿತವಿದೆ. ಸಕಲ ಲೋಕದ ಜನ್ಮಕ್ಕೆ ಮತವಿದೆ. ಶೃತಿ ಪುರಾಣಾಗಮದ ಗತಿ ಇದೆ. ಭಕುತಿಯ ಬೆಳಗಿನ ಉನ್ನತಿ ಇದೆ. ಶ್ರೀ ವಿಭೂತಿಯನೊಲಿದು ಧರಿಸಿರೆ. ಭವವ ಪರಿವುದು. ದುರಿತ ಸಂಕುಳವ ನೊರಸುವುದು. ಹರನ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದಲ್ಲಿರುವದು. ನಿರುತವಿದು ನಂಬು ಮನುಜಾ. ಜನನ ಭೀತಿಯು ವಿಭೂತಿ ಮರಣ ಭಯದಿಂದ ಅಗಸ್ತ್ಯ ಕಶ್ಯಪ ಜಮದಗ್ನಿಗಳು ಧರಿಸಿದರೆಂದು ನೋಡಾ ಶ್ರೀಮಲ್ಲಿಕಾರ್ಜುನನ ಒಲಿಸುವ ವಿಭೂತಿ.

೭೪. ಒಪ್ಪುವ ಶ್ರೀ ವಿಭೂತಿಯು ನೊಸಲಲ್ಲಿ ಧರಿಸಿ ದೃಷ್ಟಿವಾರೆ ನಿಮ್ಮ ನೋಡಲೊಡನೆ ಬೆಟ್ಟದಷ್ಟು ತಪ್ಪುಳ್ಳೊಡೆಯೂ ಮುಟ್ಟಲಮ್ಮವು ನೋಡಾ. ದುರಿತನ್ಯಾಯುವ ಪರಿಹರಿಸಬಲ್ಲಡೆ ಓಂ ನಮಃ ಶಿವಾಯ ಶರಣೆಂಬುದೆ ಮಂತ್ರ. ॥ಶ್ಲೋ॥ ನಮಃಶಿವಾಯೇತಿ ಮಂತ್ರ ಯಃ ಕರೋತಿ ತ್ರಿಪುಂಡ್ರಕಂ॥ ಸಪ್ತಜನ್ಮ ಕೃತಂ ಪಾಪಂ। ತತ್‌ಕ್ಷಣಾದೇವ ನಶ್ಯತಿ॥ ಸಿಂಹದ ಮರಿಯು ಶಿಳ್ಳು ನಾಯಿ ತಿಂಬಡೆ ಭಂಗವಿನ್ನಾರದೊ ಚನ್ನಮಲ್ಲಿಕಾರ್ಜುನಾ.

೭೫. ಏಳು ಕೋಟಿ ಮಹಾಮಂತ್ರ. ಉಪಮಂತ್ರಗಳಿಗೆ ಲೆಕ್ಕವಿಲ್ಲ. ಚಿತ್ತ ವ್ಯಾಕುಳನಾಗಿ ಭ್ರಮಿಸದಿರಾ ಎಲೆ ಮನವೆ. ಶಿವಶಿವಾ ಶಿವಶಿವಾ ಶಿವಶಿವಾ ನಮೊ ನಮೊ ಶಿವಶಿವಾ ಶಿವಶಿವಾ ನ ಶರಣೆಂದರೆ ಸಾಲದೆ? ಅದೆಂತೆಂದಡೆ ಶಿವೇತಿ ಮಂಗಲಂ ನಾಮ ಯಸ್ಯ ವಾಚಿ ಪ್ರವರ್ತತೆ ಭಸ್ಮೀ ಭವಂತಿ ತಸ್ಯಾಶುರ್ಮಹಾ ಪಾತಕ ಕೋಟಯಃ ಇಂತೆಂದುದಾಗಿ ಎನಗಿದೆ ಮಂತ್ರ ಎನಗಿದೆ ತಂತ್ರ. ಎನಗಿದೆ ಗತಿ. ಮತಿ ಚೈತನ್ಯವಯ್ಯ. ಸದ್ಗುರು ಚನ್ನಮಲ್ಲಿಕಾರ್ಜುನ ತೋರಿದ ಎನಗಿದೆ ಸಹಜ ಮಂತ್ರ.

೭೬. ಎಲೆ ದೇವಾ ನೀನೊಬ್ಬನೆ ಹಲವು ರೂಪಾಗಿ ಬಂದಿಯಯ್ಯ! ಭಕ್ತಿಯಲ್ಲಿ ಬಸವಣ್ಣನಾಗಿ ಬಂದಿರಿ. ಮನದ ಮೈಲಿಗೆಯ ತೊಳೆಯುವಲ್ಲಿ ಮಡಿವಾಳನಾಗಿ ಬಂದಿರಿ. ಎನ್ನ ಭಕ್ತಿಗೆ ಸೊನ್ನಲಿಗೆಯಲ್ಲಿ ಕಪಿಲಸಿದ್ಧ ಮಲ್ಲನಾಗಿ ನಿಂದಿರಿ.

೭೭. ಭಕ್ತನಾದರೆ ಬಸವಣ್ಣನಾಗಬೇಕು. ಜಂಗಮನಾದರೆ ಪ್ರಭುವಿನಂತಾಗಬೇಕು. ಭೋಗಿಯಾದರೆ ನಮ್ಮ ಗುರು ಚನ್ನಬಸವಣ್ಣನಂತಾ

ಗಬೇಕು. ಯೋಗಿಯಾದರೆ ನನ್ನಂತಾಗಬೇಕು. ನೋಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೭೮. ಧರೆ ಇಲ್ಲದೆ ಬೆಳೆಯಬಹುದೆ ಧಾನ್ಯ? ಮಳೆ ಇಲ್ಲದೆ ನೋಡ ಬಹುದೆ ಬೆಳೆಗಳ? ಒಂದು ವಸ್ತುವಿಗಾದರೂ ದ್ವಂದ್ವವೆ ಬೇಕು. ನಮ್ಮ ಕಪಿಲಸಿದ್ಧ ಮಲ್ಲನ ನೋಡುವರೆ ಲಿಂಗಪೂಜೆ, ಜಂಗಮ ದಾಸೋಹವೆ ಬೇಕು.

೭೯. ಲಿಂಗಾಂಗ ಒಂದಾದ ಬಳಿಕ ಭಕ್ತನ ನೋಡಲಿಲ್ಲವು. ಲಿಂಗಾಂಗ ಒಂದಾದ ಬಳಿಕ ಜಂಗಮವ ನೋಡಲಿಲ್ಲವು. ಲಿಂಗಾಂಗ ಒಂದಾದ ಬಳಿಕ ಏನೆಂದರಿಯಲಿಲ್ಲವು ನೋಡಯ್ಯ. ಎಮ್ಮಯ್ಯ ಕಪಿಲಸಿದ್ಧ ಮಲ್ಲಯ್ಯ ಎಲ್ಲರಲ್ಲಿಯೂ.

೭೯. ಲಿಂಗಾಂಗ ಒಂದಾದುದಕ್ಕೆ ಇದೆ ಕುರುಹು ನೋಡಾ. ಅಂಗ ಗುಣಂಗಳ ಬಿಟ್ಟು ಲಿಂಗ ಗುಣಂಗಳಾದಡೆ, ಅದೆ ಲಿಂಗಾಂಗ ಸಾಮರಸ್ಯ. ಲಿಂಗ ಗುಣಗಳ ಬಿಟ್ಟು ಅಂಗ ಗುಣಗಳಾದಡೆ ಅದೆ ಯಮ ಲೋಕ ಸಾದೃಶ್ಯ. ಇದು ಪುಸಿಯಲ್ಲ. ಪುಸಿಯಲ್ಲ, ಪುಸಿಯಾದರೆ ನೀನೇಕೆ ಒಲಿಯಲಿಲ್ಲೆಮ್ಮಣ್ಣ ಬೊಮ್ಮಯ್ಯಂಗೆ ಕಪಿಲಸಿದ್ಧಮಲ್ಲಿಕಾರ್ಜುನಾ?

೮೧. ಭಕ್ತನಾದುದಕ್ಕೆ ಇದೆ ಚಿನ್ಹವು ನೋಡಾ! ಎಲೆ ದೇವಾ ಕೈಯ್ಯಲ್ಲಿರಲು ಮಾಂಸದ ಮುದ್ದೆ. ಬಾಯಲ್ಲಿರಲು ವಾರಾಂಗನೆಯ ತಾಂಬೂಲ. ಮನದಲ್ಲಿರಲು ಕತ್ರಿಯ ಭಾವ. ಕೊರಳಲ್ಲಿರಲು ಕೊರಳ. ಲಿಂಗ ದೇಹದಲ್ಲಿರಲು, ಲಿಂಗ ಲಾಂಛನ ಜಂಗಮವೆಂದು ನಂಬುವುದು ಕಾಣಾ ಕಪಿಲಸಿದ್ಧ ಮಲ್ಲಿನಾಥಾ.

೮೨. ಅವರವರ ಸದಾಚರಣೆ ಅವರವರಿಗೆ. ಅವರವರ ದುರಾ ಚರಣೆ ಅವರವರಿಗೆ. ಅವರವರ ಸದಾಚರಣೆ ನಮಗೇನು ಮೋಕ್ಷವ ಕೊಟ್ಟಿತ್ತೊ? ಅವರವರ ದುರಾಚರಣೆ ನಮಗೇನು ಭವದಲ್ಲಿ ತಳ್ಳಿ ಬಿಟ್ಟಿತ್ತೊ? ನಮ್ಮ ಲಕ್ಷ ಲಾಂಛನದಲ್ಲಿ, ನಿಮ್ಮ ಲಕ್ಷ ನಮ್ಮಲ್ಲಿ. ಇದು ಸಟೆ ಎಂದು ನುಡಿಯ ಬೇಡ ದೇವಾ! ಮಗನಿಗಾದ ನೋವು ತಾಯಿತಂದೆಗಳಿಗಾ ಗದೆ ಅನ್ಯರಿಗೆಲ್ಲಿಹದೋ? ಕಪಿಲಸಿದ್ಧ ಮಲ್ಲಯ್ಯ ನಮ್ಮ ನೋವೆ ನಿಮ್ಮ ನೋವು.

೮೩. ಭಕ್ತರಾದ ಬಳಿಕ ಆವರಿವರೆನ್ನದೆ ಮಾಡುವರಯ್ಯಾ ಪ್ರಸಂಗವ. ಭಕ್ತನಾದ ಬಳಿಕ ಅವರಿವರೆನ್ನದೆ ಶರಣೆಂದು ಮನ್ನಿಸುವುದಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೪. ಭಕ್ತಿಯ ಬೆಳಸಿ ಹೇಳಿದೆನಲ್ಲದೆ, ಭಕ್ತಿಯ ಮಾಡಿ ಬೆಳೆಯಲಿಲ್ಲ ನಾನು. ಭಕ್ತಿಯ ಶಕ್ತಿ ಬಸವಣ್ಣಂಗಾಯಿತ್ತು. ಜ್ಞಾನದ ಶಕ್ತಿ ಚನ್ನಬಸವಣ್ಣಂಗಾಯಿತ್ತು. ಯೋಗದ ಸಿದ್ಧಿ ಸಿದ್ಧರಾಮಂಗಾಯಿತ್ತು ನಿಮ್ಮರಮನೆಯಲ್ಲಿ ನೋಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೫. ಭಕ್ತ ಭಕ್ತನ ಕಂಡಲ್ಲಿ ಕೈಮುಗಿವುದೆ ಭಕ್ತಸ್ಥಲ. ಜಂಗಮನು ಜಂಗಮನ ಕಂಡಲ್ಲಿ ಶರಣೆಂಬುದೆ ಜಂಗಮಸ್ಥಲ. ಭಕ್ತ ಜಂಗಮರೆಂದು ಬೇರುಂಟೇ? ರಸದಂತೆ ಭಕ್ತ ರುಚಿಯಂತೆ ಜಂಗಮ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೬. ಭಕ್ತನು ಭಕ್ತಿಯಿಂದರ್ಪಣ ಮಾಡಿಸುವಡೆ ಭಕ್ತಂಗೆ ಭಕ್ತಸ್ಥಲ. ಜಂಗಮನು ಆ ಭಕ್ತನ ಭಕ್ತಿಯ ವಹಿಸಿ ಪಾದೋದಕವ ಕೊಡುವುದೆ ಆ ಜಂಗಮಕ್ಕೆ ಭಕ್ತಸ್ಥಲ. ಭಕ್ತಗಾಗಲಿ ಜಂಗಮಕ್ಕಾಗಲಿ ಭಕ್ತಿಯೇ ಬೇಕು. ಭಕ್ತಿ ಇಲ್ಲದೆ ಮೆರವವರು ಭಕ್ತರಲ್ಲ, ಜಂಗಮರಲ್ಲ ನೋಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೭. ಭಕ್ತಂಗೆ ಜಂಗಮಂಗೆ ರೂಪದಿಂದ ಭೇದವೊ? ಆಚರಣೆಯಿಂದ ಭೇದವೊ? ಅಲ್ಲಲ್ಲ. ಭಕ್ತನಾದರೂ ಮೂರರಕ್ಕೆ ಒಳಗು. ಜಂಗಮವಾದರೂ ಮೂರರಕ್ಕೆ ಹೊರಗು. ಒಳಗಾದವರಿಗೆ ಹೊರಗಾದವರ ಪಾದೋದಕವಿಲ್ಲದೆ ಒಳಗಾದವರ ಪಾದೋದಕ ಸಲ್ಲದು. ತೆಗೆದುಕೊಂಡವರಿಗೆ ನರಕ ತಪ್ಪದು. ಕೊಟ್ಟವಂಗೆಯೂ ಭವ ಹಿಂಗದು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೮. ಎಲೆ ಅಯ್ಯಾ ಅವರ ಗುಣಕ್ಕೆ ಮುನಿವೆನಲ್ಲದೆ ಆವರ ರೂಪಿಂಗೆ ಮುನಿವೆನೆ? ಇಲ್ಲಿಲ್ಲ. ಅವನು ಅನಾಚಾರದಲ್ಲಿ ಆಚರಿಸಿದರೆ ತಂದೆಯು ಸದಾಚಾರಕ್ಕೆ ತರಬೇಕೆಂದು ಆತನ ಮೇಲೆ ಮುನಿವನೆ? ಇಲ್ಲಿಲ್ಲ. ನಾನಂತಾಗಬೇಕೆಂದು ಮುನಿವೆನಲ್ಲದೆ ಜಂಗಮಕ್ಕೆ ಮುನಿವೆನೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

---

# ಭಕ್ತಸ್ಥಲ.

೮೯. ಎಲೆ ಅಯ್ಯ ಅಯ್ಯ ಎನ್ನ ಶಿರ ನಿಮ್ಮ ಚರಣವ ಮುಟ್ಟಿದ ಬಳಿಕ ಎನ್ನಲ್ಲಿ ಗುಣದೋಷವನರಸುವರೆ? ಭೃತ್ಯಾಪರಾಧ ಸ್ವಾಮಿನೋ ದಂಡ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ ತ್ರಾಹಿ ತ್ರಾಹಿ ಕಾಯಯ್ಯ.

೯೦. ನಿಮ್ಮ ನಿಜದಂತುವನಾರು ಬಲ್ಲರಯ್ಯ. ಚತುರ್ದಶ ಭುವನಂಗಳೆಲ್ಲವು ನಿಮ್ಮ ಕರಸ್ಥಲದೊಳಗಡಗಿಪ್ಪವಯ್ಯ. ನಿಮಗೆಣೆಯಪ್ಪ ದೇವರುಂಟೆ ಕಪಿಲಸಿದ್ಧಮಲ್ಲಿಕಾರ್ಜುನಾ?

೯೧. ಅನಂತಕೋಟಿ ದೇವರೆಲ್ಲರು ತಂಡತಂಡದಲ್ಲಿ ಪ್ರಣಾಮಂಗೈಯ್ಯಲು ಅವರ ಮಕುಟ ಸಂಘಟ್ಟ ರಜ ಉದುರಲಿಕ್ಕೆ ಅಲ್ಲಿ ರಜತಗಿರಿಗಳಾದವು ಕಪಿಲ ಸಿದ್ಧ ಮಲ್ಲಿಕಾರ್ಜುನದೇವಾ ನಿಮ್ಮ ಮುಂದೆ.

೯೨. ಹರಿಯೆಂಬಾತ ನಿಮ್ಮ ಚರಣವನರಿಯ. ಬ್ರಹ್ಮಯೆಂಬಾತ ನಿಮ್ಮ ಮಕುಟವನರಿಯ. ಯತಿವ್ರತಿಗಳೆಂಬವರು ನಿಮ್ಮ ಒಳಗನರಿಯರು. ಸಮಸ್ತ ದೇವರ್ಕಳು ನಿಮ್ಮ ಪ್ರಮಾಣವನರಿಯರು. ಶತ ಕೋಟಿ ಸೂರ್ಯರು ನಿಮ್ಮ ಬೆಳಗ ಕಾಣಲರಿಯರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೯೩. ನೆನಿಸುವೆ, ಮರಸುವೆ. ಎನ್ನ ಗುಣ ದೋಷ ನಿಮ್ಮದು ಕೇಳಯ್ಯ. ನಮ್ಮ ಬಿನ್ನಪವ. ನಿಮ್ಮ ನೆನೆವ ನಾನಲ್ಲ ಕಂಡಯ್ಯ. ನಿಮ್ಮಿಂದ ನಿಮ್ಮ ನೆನೆವೆನು. ಕೃಪೆ ಮಾಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೯೪. ಕೈಗಳ ಬಿಚ್ಚಿ ಬಿಸಾಟರೆ ಬಿಡೆನು. ಮೈಗಳ ಕಡಿದು ಹರಿದಡೆ ಬಿಡೆ ಬಿಡೆನು ನಿಮ್ಮ ಚರಣ. ನೀನು ಎನ್ನ ತನುವಳಿದರೆ ನಿಮ್ಮ ಜ್ಞಾನ ತನುವಿನಿಂದ ಹೊದ್ದುವೆನು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೯೫. ಸ್ತೋತ್ರವೆಂಬವು ನಿನ್ನಿಂದಲಾದವು ಕಂಡಯ್ಯ. ಮೂರ್ತಿ ಎಂಬುದು ನೀನು ನೆನೆದಡಾದುದು ಕಂಡಯ್ಯ. ಆ ಮೂರ್ತಿ ಎಂಬುದು ನಿನ್ನ ಸ್ವಭಾವವು ಕಂಡಯ್ಯ. ಎನ್ನ ಹೃತ್ಕಮಲದೊಳಗೆ ಹುಟ್ಟುವ ಸ್ಮರಣೆ ತಾನೆನ್ನ ಗತಿ ನೋಡಯ್ಯ ಕಪಿಲಸಿದ್ಧಮಲ್ಲಿನಾಥಯ್ಯ ನೀನು ಸ್ತೋತ್ರ ಪ್ರಿಯನಲ್ಲದಿದ್ದರೆ ಬಾಣ ಮಯೂರ ಹಲಾಯುಧರಿಗೆ ಒಲಿದೆ ಎಂತು ಹೇಳಯ್ಯ.

೯೬. ವೇದ ಪ್ರಿಯನಲ್ಲಯ್ಯ ನೀನು. ಅವೆಲ್ಲಕ್ಕೆ ಅಸಾಧ್ಯ ಕಂಡಯ್ಯ. ನೀನು ಭಕ್ತಿಪ್ರಿಯನೆಂದು ಮೊರೆಹೊಕ್ಕೆ ಕಾಯಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೯೬. ವೇದ ಪ್ರಿಯನಾದಡೆ ಛಿದ್ರಿಸುವಿಯಾ ಬ್ರಹ್ಮನ ಮಸ್ತಕವ? ಶಾಸ್ತ್ರ ಪ್ರಿಯನಾದಡೆ ಒಳಗುವಡುವಿಯಾ ಶಬ್ದಕ್ಕೆ? ಮುಕ್ತಿಪ್ರಿಯನಾದಡೆ ಭವಕ್ಕೆ ತರುವಿಯಾ ನನ್ನ? ಭಕ್ತಿಪ್ರಿಯನಾದಲ್ಲಿ ಒಯ್ಯಲಿಲ್ಲವೆ ಬೇಡನ ಎಲೆ ಕಪಿಲ ಸಿದ್ಧಮಲ್ಲಿಕಾರ್ಜುನಾ?

೯೭. ಎನ್ನ ಕೂಪವೆಂಬುದು ನಿಮ್ಮ ಕಣ್ಣು ನೋಡಯ್ಯ. ನಾನೇತರೊಳಗೇನು ಹೇಳಯ್ಯ? ನಿಮ್ಮ ಜ್ಞಾನದ ತೇಜದ ಮುಂದೆ ಎನ್ನರಿವು ಏತರದು ಹೇಳಯ್ಯ? ಎನ್ನ ದಿಟದ ಭಕ್ತಿ ನಿಮ್ಮ ರೂಪು ಕಂಡಯ್ಯ. ಎನ್ನ ಸಟೆಯ ಭಕ್ತಿ ನಿಮ್ಮ ರೂಪು ಕಂಡಯ್ಯ. ಎನಗೆ ಬೇರೆ ಸ್ವತಂತ್ರ ಉಂಟೆ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ?

೯೮. ಹಿರಿದು ಅಗ್ರದಿಂದೆ ನೀನೆನ್ನ ಮೇಲಕ್ಕೆ ಒಲಿಸಾ. ಹೋ, ಹೋಹೆ ಕಾಣಯ್ಯ. ಕೈಯ್ಯ ಹಿಡಿದರೆ ಅಂತು ಮುರಚುವೆ. ಉದರದ ಲಪ್ಪಿ ಹಿಡಿದಡೆಂತು ಮುರಚುವೆ? ನೀನಿಂತು ಹೋಹ ಪರಿಗಳ ನಿಲಿಸುವೆನು. ಕೇಳು ಗಡಾ. ಸೂಕ್ಷ್ಮ ತನುವಿನಲ್ಲಿ ಹಿಡಿದಡೆ ಎನ್ನ ಮುರಚುವೆ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೯೯. ಎನ್ನನಾಗಳೆ ಬಂದಿವಿಡಿದೆ ಗಡಾ ನೀನು. ನಿಮ್ಮ ಹಿಡಿವರೆ ಹಿಡಿವರು. ತನುವಿರೆ ತನು ಬೇರಾದವರು ನಿಮ್ಮ ಹಿಡಿವರೆ ಹಿಡಿವರು. ಮನವಿರೆ ಮನ ಬೇರಾದವರು ನಿಮ್ಮ ಹಿಡಿವರೆ ಹಿಡಿವರು. ಕೈ ಇರೆ ಕೈ ಬೇರಾದವರು ಈಸುಳ್ಳವರು ಮೊದಲಾಗಿ ನಿಮ್ಮ ಹಿಡಿಯಲಾರರು. ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಹಿಡಿದು ತಡೆಯಲಾನೇತರವನಲ್ಲ. ಕರುಣದಿಂದ ಬಾರಾ ಎನ್ನ ದೇವರ ದೇವಾ.

೧೦೦. ತೆರಹಿಲ್ಲದ ಘನ ತೆರಹಿಲ್ಲದ ರೂಹಿಂಗೆ ಬಂದ ಕಾರಣವೇನು ಹೇಳಾ? ಎಲೆ ಅಯ್ಯ ಭಕ್ತಿ ಕಾರಣ ಏನು ಹೇಳಾ ಇಚ್ಛೆಗೆ ಬಂದ ಬಳಿಕ ಉಪಚಾರಕ್ಕೆ ತೆರಹುಂಟೆ ಕಪಿಲಸಿದ್ಧ ಮಲ್ಲಿನಾಥ ಬಿಜಯಮಾಡಾ ಕರುಣಿಗಳರಸಾ.

೧೦೧. ಅಯ್ಯ ಕಾಯ ಲಿಂಗವೋ? ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೊ? ಪ್ರಾಣ ಲಿಂಗವೊ? ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೋ?

ಜ್ಞಾನ ಲಿಂಗವೊ? ಜ್ಞಾನದ ಮೊನೆಯಲ್ಲಿ ಬೆಳಗುವ ಲಿಂಗ ಲಿಂಗವೋ? ಲಿಂಗ ಪ್ರಾಣ ಪ್ರಾಣ ಲಿಂಗವೆಂತೆಂದರಿಯೆನು. ನಿಮ್ಮ ಕಾಯದ ಕರಸ್ಥಲದ ಸಾರಿದ ಲಿಂಗ ಪ್ರಾಣದೊಳಗೆ ವೇದ್ಯವಾದ ಪರಿಯನುಪ ದೇಶಿಸಿ ಕೃಪೆಮಾಡಾ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೦೨. ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿಯಬಲ್ಲುದೆ ಅಯ್ಯ? ಶರಣರು ಮಹಾನುಭಾವ ಗೋಷ್ಠಿಯ ಮಾಡುವಲ್ಲಿ ಸಂಗ ದೊಳಿರ್ದವರ ಅಜ್ಞಾನವಳಿದು ನಿಜವನೈದುವರಯ್ಯ. ನಿಮ್ಮ ಮಹಾನು ಭಾವದ ಸೋಂಕಿನ ಸೆರಗಿನೊಳಗಿರ್ದ ನಾನು ಪರಮ ಸುಖಿಯಾಗಿ ಮಡಿವಾಳನ ಪಾದದಲ್ಲಿ ಮನ ಮಗ್ನವಾದೆನು ಕಾಣಾ ಕಪಿಲಸಿದ್ಧಮ ಲ್ಲಿಕಾರ್ಜುನಾ.

೧೦೩. ತನು ಉಂಟೆಂಬ ಭಾವ ಮನದಲ್ಲಿಲ್ಲವಯ್ಯ. ಮನ ಉಂಟೆಂಬ ಭಾವ ಅರುವಿನಲ್ಲಿಲ್ಲವಯ್ಯ. ಅರಿವು ಉಂಟೆಂಬ ಭಾವ ನುಡಿ ಒಳಗಿಲ್ಲವಯ್ಯ. ಇಂತೀ ತನು ಮನ ಜ್ಞಾನವೆಂಬ ತ್ರಿವಿಧವು ಏಕಾ ರ್ಥವಾದ ಬಳಿಕ ಆವ ತನುವಿನ ಮೇಲೆ ಸ್ವಾಯತವ ಮಾಡುವೆ? ಎನ್ನ ಕಾಯವೆ ಬಸವಣ್ಣನು. ಎನ್ನ ಪ್ರಾಣಲಿಂಗವೆ ಪ್ರಭುದೇವರು. ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಒಳಗು ಹೊರಗೆಂಬುದಿಲ್ಲ ಕಾಣಾ ಚನ್ನ ಬಸವಣ್ಣಾ.

೧೦೪. ತನುವಿದ್ದು ತನುವಿಲ್ಲ. ಮನವಿದ್ದು ಮನವಿಲ್ಲ. ಭಾವ ವಿದ್ದು ಭಾವವೆಂಬ ಬುದ್ಧಿ ಇಲ್ಲ. ನೀನೆಂಬುದುಂಟಾಗಿ ಭೃತ್ಯಾಚಾರ ವಿಲ್ಲ. ತಾನೆಂಬುದುಂಟಾಗಿ ಅಹಂಕಾರವಿಲ್ಲ. ಕಪಿಲಸಿದ್ಧಮಲ್ಲಿನಾಥಯ್ಯ ನಲ್ಲಿ ಲಿಂಗ ಸಂಗ ನಿರ್ಲೇಪನೆಂಬುದನಿದಿರಿಂಗೆ ನುಡಿದುದ ಹೇಳಬಾ ರದು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ.

೧೦೫. ಪುಣ್ಯಪಾಪಂಗಳನರಿಯದ ಮುನ್ನ ಅನೇಕ ಭವಂಗಳಲ್ಲಿ ಬಂದು ನಿಮ್ಮ ನಿಲವನರಿಯದೆ ಕೆಟ್ಟೆನಯ್ಯ. ಇನ್ನು ನಿಮ್ಮ ಶರಣುವೊಕ್ಕೆ ನಾಗಿ ನಾ ನಿಮ್ಮನೆಂದು ಅಗಲದಂತೆ ಮಾಡಾ ಅಯ್ಯಾ. ನಿಮ್ಮ ಧರ್ಮ ನಿಮ್ಮ ಧರ್ಮ. ನಿಮ್ಮಲ್ಲಿ ಒಂದು ಬೇಡುವೆ. ಎನ್ನ ಕರ್ಮದ ಬಂಧನ ಬಿಡುವಂತೆ ಮಾಡಾ ಅಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

೧೦೬. ಎಂದಿಪ್ಪೆನಯ್ಯ ನಿಮ್ಮ ಗಣಂಗಳ ಸಮೂಹದಲ್ಲಿ? ಎಂದಿ ಪ್ಪೆನಯ್ಯ ಕೀಳಾಳಾಯ್ತು? ಎಂದಿಪ್ಪೆನಯ್ಯ ಕಿಂಕರನಾಗಿ? ಎಂದಿಪ್ಪೆ

ನಯ್ಯ ನಿಮ್ಮ ನಾಮ ಡಿಂಗರಿಗನಾಗಿ? ಎಂದಿಪ್ಪೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ?

೧೦೭. ಎಂದಿಪ್ಪೆನಯ್ಯ ಶುದ್ಧ ಸಿದ್ಧ ಪ್ರಸಿದ್ಧ ಪ್ರವೇಶಿಸಿ? ಎಂದಿಪ್ಪೆನಯ್ಯ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನನಾಗಿ? ಎಂದಿಪ್ಪೆನಯ್ಯ ತತ್ವಾತತ್ವ ತೂರ್ಯ ನೀನೆಯಾಗಿ? ಎಂದಿಪ್ಪೆನಯ್ಯ ದೀಕ್ಷಾತ್ರಯದಲ್ಲಿ ಸಂಪನ್ನನಾಗಿ? ಎಂದಿಪ್ಪೆನಯ್ಯ ಲಿಂಗತ್ರಯದಲ್ಲಿ ಪ್ರಸಾದ ಸಂಪನ್ನನಾಗಿ? ಎಂದಿಪ್ಪೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮವರ ನಡುವೆ ಓರಂತೆ?

೧೦೮. ಒಡೆಯರುಳ್ಳ ತೊತ್ತಾನು. ತಾಯಿಯುಳ್ಳ ಶಿಶುವಾನು. ಸ್ವತಂತ್ರವೇಕಯ್ಯ? ನಿನ್ನವರ ನಡುವೆ ಎನಗೆ ನಿನ್ನವರು ಒಲ್ಲದಿದ್ದ ದುಃಖವನು ಮರೆವೆ ನಾನು. ನಿನ್ನವರಾಜ್ಞೆಯ ಮೀರಿದೆನಾಯಿತ್ತಾದಡೆ ನಿನ್ನಾಣೆಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೧೦೯. ಆವಾಗಳು ನಿನ್ನವರುಗಳು ನೀನೆಂಬ ಮನವ ಅತಿ ಉನ್ನತೋನ್ನತವ ಕೊಡು ಕಂಡ್ಯಾ ಎಲೆ ಅಯ್ಯ. ನಿಮ್ಮ ಧರ್ಮವಯ್ಯ. ನಿನ್ನ ಲಾಂಛನವ ಕಂಡು ತಾತ್ಪರ್ಯವೆಂದು ನಂಬುವ ಮನಸಿಂಗೆ ಮಂಗಳವನೀಯಯ್ಯ ನಿನ್ನವರ ಸಹ ಲೋಕದಲ್ಲಿ ಅವರ ಕಿಳಿಲ ಕಾಯ್ದಿರ್ಪ ಸುಕೃತವನು ತಪ್ಪದೆ ಕೊಡು ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನಿಮ್ಮ ಧರ್ಮ.

೧೧೦. ಹಿಂದೆ ಬಯಿಸಿದೆ ಕಾಳುತನದಲ್ಲಿ. ಎನ್ನ ಮಂದವುತಿಯ ನೋಡಿರಯ್ಯ ಕೆರೆ ಬಾವಿ ಹೂದೋಟ ಚಾಕ ಛತ್ರಂಗಳ ಮಾಡಿ. ದೈವಂಗಳ ಮೇಲೆ ಕೃಪೆಯುಂಟೆಂದು ಅನ್ನದಾನಿ ಎಂಬರು. ಆನು ದಾನಿಯಲ್ಲವಯ್ಯ. ನೀ ಹೇಳಿದಂದೆ ನಾ ಮಾಡಿದೆನು. ನೀ ಬರಹೇಳಿದಲ್ಲಿ ನಾ ಬಂದೆನು. ನೀ ಇರಿಸಿದಂತೆ ಇದ್ದೇನೆ. ನೀನು ಇಚ್ಛಾಮಾತ್ರ ಮೀರಿದೆನಾಯಿತ್ತಾದಡೆ ಫಲಪದ ಜನನವ ಬಯಸಿದೆನಾದಡೆ ನಿಮ್ಮಾಣೆ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಭವಕ್ಕೆ ಬರಿಸದಿರಯ್ಯ.

೧೧೧. ಮಾಡಿಸಯ್ಯ ಎನಗೆ ನಿನ್ನವರ ಸಂಗವ ಮಾಡಿಸಯ್ಯ. ಮಾಡಿಸಯ್ಯ ಎನಗೆ. ನಿನ್ನವರ ಅನಂದವ ನೋಡಿಸಯ್ಯ. ನಿನ್ನವರ ಕೂಡ ಸಂಗವ ಮಾಡಿಸಯ್ಯ. ಎನಗೆ ಬಚ್ಚಬರಿಯ ಭಕ್ತಿಯನು ಕೊಡಿಸಯ್ಯ. ಎನಗೆ ಪಾದೋದಕ ಪ್ರಸಾದವ ನೊಚ್ಚತವ ಸಲಿಸಯ್ಯ.

ನಿಮ್ಮವರ ಕೂಡ ಸಿಕ್ಕಿ ಇರಿಸಯ್ಯಾ. ನಿನ್ನ ಪಾದ ಕೆಳಗೆ ನಿತ್ಯನಾಗಿ ಬರಿಸಯ್ಯ ಎನ್ನ ಭವಭವದಲ್ಲಿ. ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ನೀನು ಇಂತು ಕೆಡಿಸಯ್ಯ ಎನ್ನ ಭವಭವದ ಹುಟ್ಟು.

೧೧೨. ನುಡಿಯುಬಹುದು ಅದ್ವೈತವನೊಂದು ಕೋಟಿ ವೇಳೆ. ಒಮ್ಮೆ ನುಡಿಯುಬಹುದೆ ಅದ್ವೈತವನೊಂದುಕೋಟಿ ವೇಳೆ? ಒಮ್ಮೆ ನುಡಿಯುಬಹುದೆ ನಿರ್ಧಾರವಾಗಿ ಸದ್ಭಕ್ತಿ ಸದಾಚಾರವನು? ನುಡಿದಂತೆ ನಡೆವ ನಡೆದಂತೆ ನುಡಿವ ಸದ್ಭಕ್ತಿ ಸದಾಚಾರಯುಕ್ತ ಮಹಾತ್ಮರ ಪಾದವ ಹಿಡಿದು ಬದುಕಿಸಯ್ಯ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ

೧೧೩. ಇನಮಂಡಲದೊಳಗೆ ಕಿರಣವಡಗಿಪ್ಪಂತೆ, ಫಲವಹ ಬೀಜದಲ್ಲಿ ವೃಕ್ಷವಡಗಿಪ್ಪಂತೆ, ಇಂದು ಕಾಂತ ರವಿಕಾಂತದಲ್ಲಿ ಜಲಬಿಂದು ಅಗ್ನಿ ಇಪ್ಪಂತೆ, ಸಂದ ಕ್ಷೀರದಲ್ಲಿ ಹೊಂದಿ ದಧಿ ತಕ್ರ ನವನೀತ ಘೃತವಿಪ್ಪಂತೆ, ಅಂಗದ ಮೇಲೆ ಲಿಂಗ ಸಾಹಿತ್ಯವಾಗಿ ತನ್ನೊಳಗೆ ಆ ಲಿಂಗವ ಕಂಡು ಲಿಂಗದೊಳಗೆ ತನ್ನ ಕಂಡು ತನ್ನೊಳಗೆ ಸಮಸ್ತ ವಿಸ್ತಾರವನೆಲ್ಲವ ಕಂಡು ಜಂಗಮ ಮುಖ ಲಿಂಗವೆಂಬ ಭೇಧವನು ಲಿಂಗಕ್ಕೆ ಜಂಗಮವೆ ಪ್ರಾಣವಾಗಿಪ್ಪ ಭೇದವನು ಅಂಗದೊಳಗೆ ಲಿಂಗವೆ ಆಚಾರವಾಗಿ ಅಳವಟ್ಟ ವಿವರವನು ಲಿಂಗಾಂಗ ಸ್ಥಲ ಸಂಬಂಧ ಸ್ಥಳಕುಳಂಗಳ ವಿವರವಾಗಿ ಇದ್ದಿತೆಂಬುದನು ಕಂಗಳ ನೋಟಕ್ಕೆ ಗುರುವಾದ ಲಿಂಗವೆ ಅಂಗವನೊಳಕೊಂಬ ಭೇದವನು ಸಂಗನಬಸವಣ್ಣ ಚನ್ನಬಸವಣ್ಣನಿಂದೆ ಕೃಪೆ ಮಾಡಿಸಿ ಎನ್ನನುಳುಹು ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಯ್ಯ.

೧೧೪. ಬಡವ ನಿಧಾನ ಕಂಡಂತೆ ಹಾರುವ ಮಾಳವ ಕಂಡಂತೆ ಶಿಸು ತನ್ನ ತಾಯ ಕಂಡಂತೆ ವೀರ ತಾನು ಪರಸೇನೆಯ ಕಂಡಂತೆ ತಾನು ಚನ್ನಬಸವಣ್ಣನ ಪಾದ ಕಮಲವ ನೋಡಿ ಹರುಷಿತನಾದೆ. ಮಾಡಿ ಮಾಡಿಸಾ ಉಪದೇಶ. ನೋಡಿ ನೋಡಿಸಾ ಮಹಿಮೆಯ. ಇದರದ್ಭುತವೇಕೆಂದರೆ ಕೊಡಿಸಾ ಎನ್ನ ಕೈಯ್ಯಲ್ಲಿ ಇಷ್ಟಲಿಂಗವ ಪರಮ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೧೧೫. ಅಂಗಕ್ಕೆ ಲಿಂಗೋಪದೇಶ ಮನಕ್ಕೆ ಮಂತ್ರೋಪದೇಶ ಘನವೆಂದು ನಂಬಿದೆನಯ್ಯ ನಂಬಿದೆನಯ್ಯ. ಈ ಎರಡರ ಬೋಧೋದ್ಧಾರಕೆ ಚನ್ನಬಸವಣ್ಣನೆ ಘನ ಗುರು. ಘನ ಲಿಂಗ ಘನ ಜಂಗಮ

ವೆಂದು ನಂಬಿದೆನಯ್ಯ. ಇದನಲ್ಲೆಂದರೆನ್ನ ಗುಣವೆನ್ನನೆ ಸುಡಲೀಯ್ಯದೆ ಅಲ್ಲಯ್ಯ ಕಪಿಲಸಿದ್ಧಮಲ್ಲಯ್ಯ?

೧೧೬. ಎಲ್ಲ ಪ್ರಮಥರು ಲಿಂಗವ ಧರಿಸುತ್ತಿರಲಾನೇನು ಒಲ್ಲೆನೆಂಬುವದು ಕರ್ಮದ ಬಲೆಯೋ? ಮಾಯದ ಬಲೆಯೊ? ಎಲೆ ಕಪಿಲ ಸಿದ್ಧಮಲ್ಲಯ್ಯ ನಾ ಧರಿಸಿಕೊಂಬುವೆ ಲಿಂಗವ. ನೀ ಕರಿಸಿಕೊಂಬುವನಾಗು ಮತ್ತೋರ್ವನ ನಿನ್ನ ಪೂಜೆಗೆ ನಾ ನಿನ್ನವನಲ್ಲೆಲೆ ದೇವಾ.

೧೧೭. ವ್ಯಾಧಿ ಹೋಗುವ ಪರಿಯಂತರ ರಸ ರಸಾಯನದ ಹಂಗೇಕಯ್ಯ? ಕ್ಷುತ್ಪಿಪಾಸೆಯಡಗುವ ಪರಿಯಂತರ ಅನ್ನೋದಕದ ಹಂಗೇಕಯ್ಯ? ನಾ ಲಿಂಗ ಸಂಬಂಧಿಯಾಗುವ ಪರಿಯಂತರ ನಿಮ್ಮ ಹಂಗಿನವನಯ್ಯ ಎಲೆ ಕಪಿಲಸಿದ್ಧಮಲ್ಲಿನಾಥಾ.

೧೧೮. ಹಾರುವೆ ಹಾರುವೆನಯ್ಯ. ಮೂರರ ಮನೆಯ ನೋಡುವೆ ನೋಡುವೆನಯ್ಯ. ಆರರ ಮನೆಯ ಕೊಡುವೆ ಕೂಡುವೆನಯ್ಯ. ಈರಾರ ಮನೆಯ ಆಡುವೆ ಆಡುವೆನಯ್ಯ. ಕಪಿಲಸಿದ್ಧ ಮಲ್ಲಯ್ಯ, ಮತ್ತೂ ಮೂರರಲ್ಲೆ.

೧೧೯. ನದಿಯ ನೀರು ಹೋದವಯ್ಯ ಸಮುದ್ರಕ್ಕೆ. ಸಮುದ್ರದ ನೀರು ಬಾರವಯ್ಯ ನದಿಗೆ. ನಾನು ಹೋದೆನಯ್ಯ ಲಿಂಗದ ಕಡೆಗೆ. ಲಿಂಗ ಬಾರದು ನೋಡಯ್ಯ ನಿನ್ನ ಕಡೆಗೆ. ಮಗ ಮುನಿದರೆ ತಂದೆ ಮುನಿಯನು. ನಾ ಮುನಿದರೆ ನೀ ಮುನಿಯೆ ನೋಡಯ್ಯ ಕಪಿಲ ಸಿದ್ಧ ಮಲ್ಲಿನಾಥಾ.

೧೨೦. ಸ್ಥೂಲದೇಹ ತೊಳೆದರೇನು? ಸೂಕ್ಷ್ಮ ದೇಹ ಶುದ್ಧವಾದರೇನು, ಕಾರಣಾತೀತ ನಾಗದನ್ನಕ್ಕ? ಎಲೆ ಕಪಿಲ ಸಿದ್ಧ ಮಲ್ಲಿಕಾರ್ಜುನಾ ನಾ ಯೋಗಿಯಾದರೇನು ಮನ ಒಲಿದು ಚನ್ನಬಸವಣ್ಣ ಲಿಂಗವ ಕೊಡದನ್ನಕ್ಕ?

೧೨೧. ಏನೆಂಬೆ, ಏನೆಂಬೆ ಕೊಟ್ಟ ದೇವರಂದವ? ಮನದಲ್ಲಿ ಘನ ಲಿಂಗವಾಯಿತ್ತು. ಧ್ಯಾನದಲ್ಲಿ ಭಾವಲಿಂಗವಾಯಿತ್ತು. ನೇತ್ರದಲ್ಲಿ ಶಿವ ಲಿಂಗವಾಯಿತ್ತು. ಹೃದಯದಲ್ಲಿ ಮಹಾಲಿಂಗವಾಯಿತ್ತು. ಎನ್ನ ಕರ ಸ್ಥಲದಲ್ಲಿ ಇಷ್ಟಲಿಂಗವಾಗಿ ಆಳವಟ್ಟಿತ್ತು. ಎಲೆ ಕಪಿಲಸಿದ್ಧ ಮಲ್ಲಿಕಾ

ರ್ಜುನಾ ಎಲ್ಲ ಕಡೆಯಲ್ಲಿ ಪರಾತ್ಪರ ವಸ್ತುವಾಗಿ ಚನ್ನಬಸವಣ್ಣನಾಗಿ ನಾನು ಮರೆದೆನಯ್ಯ. ಎನ್ನ ನಾಮವ ನೋಡಯ್ಯ ಪ್ರಭುವೆ.

೧೨೨. ಇನ್ನಾಡುವೆ ಇನ್ನಾಡುವೆ ಮನಬಂದ ಪರಿಯಲ್ಲಿ. ಅದಕ್ಕೆ ನೀವು ಸಂದೇಹಗೊಳ್ಳದಿರಿ. ಪ್ರಮಥರಿರಾ ಸಂದೇಹವುಳ್ಳರೆ ಜಂಗಮವಲ್ಲ. ಸಂದೇಹನೆ ಲಿಂಗವಾದ ಬಳಿಕ ಇನ್ನೆಲ್ಲಿಹದಯ್ಯ ಇನ್ನೆಲ್ಲಿಹದಯ್ಯ ಸಂಕಲ್ಪ ವಿಕಲ್ಪವು ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೧೨೩. ಎರಡಳಿದು ಒಂದಳವಟ್ಟಿದೆ ಭಕ್ತಿಸ್ಥಲ. ಮೂರಳಿದು ಎರಡಳವಟ್ಟದೇ ಜಂಗಮಸ್ಥಲ. ಈ ಎರಡಳಿದು ನಿಂದುದೆ ಪ್ರಾಣಲಿಂಗಿ ಸ್ಥಲ ನೋಡಯ್ಯ ಗುರುವೆ, ಸುರತರುವೆನ್ನ ಕಾಮಧೇನುವೆ, ಕೈಲಾಸದ ಮಹಾಲಿಂಗ ಮೂರ್ತಿಯೇ, ಈ ಲೋಕದ ಜ್ಞಾನಮೂರ್ತಿಯೇ, ಕಪಿಲ ಸಿದ್ಧ ಮಲ್ಲೇಶನೇ, ಚನ್ನಬಸವಣ್ಣನೇ.

೧೨೪. ಮೂರಳಿದು ಮೂರಳವಟ್ಟದೆ ಭಕ್ತಸ್ಥಲ. ಮೂರಳಿದು ಮೂರಳವಟ್ಟದೇ ಜಂಗಮಸ್ಥಲ. ಅಳಿದು ಎಂದರೆ ಇದ್ದಮನ ಲಿಂಗಕ್ಕೆ ಕೊಟ್ಟಾಗಳೆ ಮಣ್ಣಳಿದುದು. ಇದ್ದ ಧನ ಜಂಗಮಕ್ಕೆ ಕೊಟ್ಟಾಗಳೇ ಹೊನ್ನಳಿದುದು. ಇದ್ದ ತನು ಗುರುವಿಗೆ ಕೊಟ್ಟಾಗಳೇ ಹೆಣ್ಣಳಿದುದು. ಅವರವರಾಚರಣೆಯ ನೋಡಿ ಕೊಡುವುದಲ್ಲದೆ ಬೇಡಿದ ಪರಿಯಲ್ಲಿ ಕೊಡುವದೇನೊ? ಅಯ್ಯ ಸಿಂಧು ಬಲ್ಲಾಳ ತನ್ನ ವಧುವ ಕೊಟ್ಟನೆಂದು ಹೇಳಿದಲ್ಲಿ ತನ್ನ ಹೆಂಡತಿಯನೇನಾದರೂ ಕೊಟ್ಟನೆ? ಇಲ್ಲಿಲ್ಲ. ಹೆಣ್ಣು ಎಂದರೆ ತಾನು ಶರಣಸತಿ ಲಿಂಗಪತಿ ಎಂಬ ಭಾವದಿಂದ ಲಿಂಗಕ್ಕೆ ಮನ ಕೊಟ್ಟು ವಧುವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು. ಹೆಣ್ಣು ಎಂದರೆ ತನ್ನ ತನುವ ಗುರುವಿಗೆ ಕೊಟ್ಟು ಸ್ವಯಂಭುವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು. ಹೆಣ್ಣು ಎಂದರೆ ಜಂಗಮಕ್ಕೆ ಧನವ ಕೊಟ್ಟು ನಿಧಿನಿಧಾನಒಲ್ಲವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು. ಹೆಣ್ಣು ಸಲ್ಲದು ಜಂಗಮಕ್ಕೆ. ಹೊನ್ನು ಸಲ್ಲದು ಲಿಂಗಕ್ಕೆ. ಮಣ್ಣು ಸಲ್ಲದು ಗುರುವಿಗೆ. ಇದರ ಭೇದವನಂತ ಉಂಟು. ತಿಳಿವಡೆ ಬಹು ದುರ್ಲಭ. ತಿಳಿದು ನೋಡಿದಡೆ ಭಕ್ತಿಗೆ ಬಹು ಸುಲಭ. ತಿಳಿದು ಮಾಡಿ ಮೋಕ್ಷವ ಹಡೆ ದರಲ್ಲದೆ ತಿಳಿಯದೆ ಮಾಡಲು, ಅವರೇನು ಮರವಿನೊಳಗಿರುವ ಭಂಗಾ ರವಾಗಲಿ, ಸಮುದ್ರದೊಳಗಿರುವ ನಿಧಿನಿಧಾನಗಳಾಗಲಿ ತಂದಿಹರೇನೊ?

ಕಪಿಲಸಿದ್ಧಮಲ್ಲಿಕಾರ್ಜುನ ಇದರಿರವ ಹೇಳಿಕೊಡಯ್ಯ ಎನ್ನ ಪ್ರಾಣಗುರು ಚನ್ನಬಸವಣ್ಣನಿಂದ.

೧೨೫. ಮಾದಾರನಲ್ಲಿ ಉಂಡ ಶಿವನು. ನೀವೇಕೆ ಉಣ್ಣಿಸಿರಿ ಎಂದು ಕೇಳಿದರೆ ಕೊಡುವೆನುತ್ತರವ, ಕೇಳಿರೆಲೆ ಮನುಜರಿರಾ. ಮಾದಾರನಲ್ಲುಂಡ ಶಿವನು ಮೇದಾರನಲ್ಲಿಗೆ ಬಂದಲ್ಲಿ ರೂಪವಳಿದು ರೂಪಾಗಿ ಬಾ ಎಂದನಲ್ಲದೆ ಸಮರಸವ ಮಾಡಲಿಲ್ಲವು. ಮೇದಾರನಲ್ಲುಂಡು ಮಾದಾರನ ಮನೆಗೆ ಬಂದರೆ ರೂಪಳಿದು ರೂಪಾಗಿ ಬಾ ಎಂದನೆಂದು ಚನ್ನನು. ಶಬ್ದಸೂತಕ ಶರಣರಿಗಲ್ಲದೆ ಸೂತಕರಿಗೆಲ್ಲಿಹದೊ ಕಪಿಲಸಿದ್ಧಮಲ್ಲಿಕಾರ್ಜುನಾ? ನಿಮ್ಮ ಲೀಲೆ ನಿಮಗಲ್ಲದೆ ನಮಗೇಕಯ್ಯ ಈ ಜನರರಿಯದವರು.

೧೨೬. ಶಿವನು ಚನ್ನನ ಮನೆಯಲ್ಲಿ ಅಂಬಲಿಯನುಂಡನೆಂದರೆ ನಮ್ಮ ಗಣಂಗಳು ನಗುವರಯ್ಯ. ಕೈಬಡೆದು ಕೈಬಡೆದು ನಗುವರಯ್ಯ. ಶಿವನಾಚರಣೆ ಶಿವನಿಗೆ ಇರಲಿ. ನಮಗೇಕೆಂದರು? ಶಿವನು ಉತ್ಪತ್ತಿ ಸ್ಥಿತಿಲಯಂಗಳಿಗೆ ಕರ್ತನು. ನಾವು ಉತ್ಪತ್ತಿ ಸ್ಥಿತಿ ಲಯಂಗಳಳಿಯಬೇಕೆಂದು ಬಂದೆವಲ್ಲದೆ ಅವರಲ್ಲಿ ವಾಕ್ಸಾಮರಸ್ಯವಲ್ಲದೆ ಕಾಯಸಾಮರಸ್ಯವು ಇಲ್ಲವು. ಶಬ್ದವಿರಹಿತನಾಗಬೇಕೆಂಬವಂಗೆ ಶಬ್ದಸೂತಕವೇಕಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೧೨೭. ಅಧ್ಯಾತ್ಮ ಅಧ್ಯಾತ್ಮನೆಂದೆಂಬಿರಿ. ಅಧ್ಯಾತ್ಮವಾರಿಗೆ? ಶ್ರೀಗುರುಸ್ವಾಮಿ ಬಹಳವಸ್ತು ಶಿವಲಿಂಗ ಸೂಕ್ಷ್ಮವ ಮಾಡಿ ಕರಸ್ಥಲದಲ್ಲಿ ಕೊಟ್ಟ ಬಳಿಕ ಬೇರೆ ಯೋಗವುಂಟೇ? ತನ್ನ ಹಸ್ತವ ಮಸ್ತಕದಲ್ಲಿಟ್ಟು ವಾಯು ಪ್ರಾಣಿಯಾಗಿದ್ದುದ ಕೊಂದು ಲಿಂಗ ಪ್ರಾಣಿಯ ಮಾಡಿದ ಬಳಿಕ ಅಕ್ಷರೈದರಲ್ಲಿ ಮುಕ್ತನ ಮಾಡಿದ ಬಳಿಕ ಮರಳಿ ಯೋಗವುಂಟೇ ಶಿವಯೋಗವಲ್ಲದೆ? ಲಿಂಗಾರ್ಚನೆಯ ಮಾಡಿ ಜಂಗಮ ಪ್ರಸಾದವ ಕೊಂಡ ಬಳಿಕ ಮರಳಿ ಬರಿಯ ಯೋಗಕ್ಕೆ ಒಡಂಬಡುವನೆ ಅರಿವು? ಇಂತಪ್ಪ ವನತಿಗಳಿದು ಶುದ್ಧ ಶಿವಯೋಗವ ಮಾಡಿದಾತ ಚನ್ನಬಸವಣ್ಣ ಮಹಾಲೋಕದಲ್ಲಿಪ್ಪ ಅಧ್ಯಕ್ಷರ ದ್ವಯವ ಭೇದಿಸಿ ತಂದು ಕರಸ್ಥಲದಲ್ಲಿರಿಸಿ ಇದು ಉರುತರ ಪದವೆಂದು ತೋರಿಕೊಟ್ಟ ಎನ್ನ ತನ್ನಂತೆ ಮಾಡಿದ ಗುರುವೆ ಚನ್ನಬಸವಣ್ಣ ಆನು ಚನ್ನಬಸವಣ್ಣನ ಕರುಣದಿಂದ ಅಭ್ಯಾಸ

ಯೋಗವನತಿಗಳಿದು ಶಿವಯೋಗದಲ್ಲಿ ನಿತ್ಯನಾಗಿ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲಕ್ಕೆ ಅಧಿಕಾರಿಯಾದೆ. ನಿನ್ನ ವರ ಸಲುಗೆಗೆ ಸಂದೆ, ಚನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೨೮. ಹೆಸರಿಡಬಾರದ ಲಿಂಗವ ಹೆಸರಿಟ್ಟು ಎನ್ನ ಕರಸ್ಥಲಕ್ಕೆ ತಂದು ಕರತಳಾಮಳಕದಂತೆ ಮಾಡಿ ಎನ್ನ ಕರಸ್ಥಲಕ್ಕೆ ಕ್ರಿಯಾಲಿಂಗವ ಕೊಟ್ಟು ಶ್ರೀಗುರು ಚನ್ನಬಸವಣ್ಣ ಹೆಸರಿಟ್ಟ ಲಿಂಗದ ಹೆಸರ ಹೇಳು ವೆನು ಕೇಳಯ್ಯ. ಕಂಜ ಕರ್ಣಿಕೆಯ ಹಣೆಯಲ್ಲಿ ವಿಹತ್ತವವಸವೆಂದು ಬರೆದ ಐದಕ್ಷರವೇ ಆತನ ಪ್ರಥಮನಾಮ. ಅವ್ವಯ ಕರದೊ ಳಿಪ್ಪ ಆರಕ್ಷರ ಆತನ ದ್ವಿತೀಯ ನಾಮ. ಅವ್ವಯ ಆನಂದ ಮಸ್ತಕ ಮೊಳಿಪ್ಪ ಅಕ್ಷರವೆ ಆತನ ಆಚಾರ್ಯನಾಮ. ಇಂತೀ ನಾಮತ್ರಯಂಗಳ ನರಿದು ಧ್ಯಾನಾ ರೂಢನಾಗಿ ಮಾಡುವರು ಇತ್ತಾನಿಕೊಬ್ಬರು. ಈ ಬಸ ವಣ್ಣ ಮೊದಲಾದ ಪುರಾತರು ಆ ಅವ್ವಯ ಅನುಮತದಿಂದ ಲಿಂಗಾರ್ಚ ನೆಯ ಮಾಡಿ ನಿತ್ಯ ನಿಜನಿವಾಸಿಗಳಾದರು. ಆ ಶರಣರ ಅನುಮತದರು ವಿನ ಉಪದೇಶವ ಕೇಳಿ ಎನ್ನಗಿನ್ನಾವುದು ಹದನವಯ್ಯಾ ಎಂಬ ಚಿಂತೆಯ ಬಿಟ್ಟು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೈಯಲ್ಲಿ ಪಿಡಿದೆನು.

೧೨೯ ಆದಿ ಆಧಾರವಿಲ್ಲದಂದಿನ, ಸಾದಾಖ್ಯ ದೇಹವಿಲ್ಲದಂದಿನ, ಸೀಮೆ ಸಂಬಂಧಗಳಿಲ್ಲದಂದಿನ, ಅನಾದಿ ಸಂಸಿದ್ಧನ ಆಗು ಮಾಡಿ ಹೆಸ ರಿಟ್ಟ ಕರಸ್ಥಲಕ್ಕೆ ತಂದು ಕೊಟ್ಟ ಗುರುಚನ್ನಬಸವಣ್ಣನಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ.

೧೩೦. ಇಹಲೋಕ ಪರಲೋಕವೆಂಬ ಸಂದಳಿಯಿತ್ತಯ್ಯ. ಗುರು ವಿನ ಹಸ್ತದಲ್ಲಿ ಸತ್ತು ಪಂಚಾಕ್ಷರಿಯಿಂದೆತ್ತಿದ ಕಾರಣದಲ್ಲಿ ನಿತ್ಯವು. ಲಿಂಗಾರ್ಚನೆಯ ಮಾಡುವ ಕಾರಣದಲ್ಲಿ ನಿತ್ಯವು. ವಿಭೂತಿ ರುದ್ರಾ ಕ್ಷಿಯ ಧಾರಣ ಮಾಡುವ ಕಾರಣದಲ್ಲಿ ಇಹಲೋಕವೆಂದೆನು. ಹಂಗು ಹರಿದು ಒಂದಾದ ಬಳಿಕ ಮಲಮಾದಂಗಳು ಹರಿದು ನಾನು ನೀನಾದ ಬಳಿಕ, ಎಲೆ ಅಯ್ಯ, ಭಕ್ತರ ಸರ್ವಾಂಗ ಲಿಂಗ ತನು ಭಕ್ತರಿಪ್ಪ ಲೋಕವೇ ರುದ್ರಲೋಕ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೧೩೧. ಶುದ್ಧವನರಿದೆ ಚನ್ನಬಸವಣ್ಣ ನಿಮ್ಮಿಂದೆ. ಸಿದ್ಧವನರಿದೆ ಚನ್ನಬಸವಣ್ಣ ನಿಮ್ಮಿಂದೆ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಚನ್ನಬಸ

ವಣ್ಣ ಗುರುವಾಗಿ ಬಂದು ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನು. ಬದುಕಿದೆನಯ್ಯ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.

೧೩೨. ರೂಪಿಂಗೆ ರೂಪು, ಜ್ಞಾನಕ್ಕೆ ದಾನ, ಪ್ರಾಣಕ್ಕೆ ಪ್ರಸಾದ ಲಿಂಗತ್ರಯವ ತಂದು ಅವರವರ ಕರದಲ್ಲಿ ದೀಕ್ಷೆಯ ಮಾಡಿದ ಚನ್ನಬಸವಣ್ಣ ಕಪಿಲಸಿದ್ಧಮಲ್ಲಿಕಾರ್ಜುನಾ.

೧೩೩. ಎಂದೊ ಎನಗೆ ಶಿವಪದ ಎಂದು ಚಿಂತಿಸುವಂಗೆ ಮುಂದು ತೋರುತ್ತಿದೆ ಪ್ರಸಾದದ ಬೀಡು. ಆ ಬೀಡು ಕಂಡು ಶಿವಗಣಂಗಳ ನೆರವ ಮಾಡಿಕೊಂಡು ಪರಮ ಗುರು ಚನ್ನಬಸವಣ್ಣನ ಶ್ರೀಪಾದಾರವಿಂದವನರಿದು ಅವರ ಕೃಪಾವಲೋಕನದಿಂದ ನಿಮ್ಮ ಶ್ರೀಪಾದವನರಿದೆ ಕಪಿಲಸಿದ್ಧಮಲ್ಲಿನಾಥಯ್ಯ.

೧೩೪. ಎನ್ನ ಜನನವು ಇಲ್ಲ. ಮುನ್ನವೆ ಸಂದಳಿದೆ. ಕಳುಹಿದಂತೆ ಉನ್ನತೋನ್ನತನಾದೆ. ಚನ್ನಬಸವಣ್ಣನ ಕರುಣದಿಂದೆ ನಿನ್ನ ರೂಪಾದೆ. ಇನ್ನೆನಗೆ ಅರಿವು ಉಂಟೇ ಕಪಿಲಸಿದ್ಧ ಮಲ್ಲಿಕಾರ್ಜುನಾ?

೧೩೫ ಎನ್ನ ತನ್ನವನೆನಿಸಿ ಮನ್ನಿಸಿದ ಭಕ್ತಿಯೊಳು ಸನ್ನುತನು. ಆದೆನೈ ಸಕಲದೊಳಗೆ. ಬಿನ್ನಾಣ ದೇಹವನು ತನ್ನಂತೆ ಮಾಡಿದನು ಚನ್ನಬಸವಣ್ಣನೈ ಶ್ರೀಗುರು ಮಲ್ಲಿಕಾರ್ಜುನಾ.

೧೩೬. ಕರಂಗಳೆ ಮನೆಯಾಗಿ ಕರಂಗಳಾಗಿ ಅರ್ಪಿಸುವ ಭೇದವನಾರು ಬಲ್ಲರಯ್ಯ ಚನ್ನಬಸವಣ್ಣನಲ್ಲದೆ? ತನ್ನ ಪ್ರಾಣ ಇಷ್ಟಲಿಂಗ ಸಂಬಂಧಿಯ ಇಂದ್ರಿಯಂಗಳೈದು ಮುಖಂಗಳಾಗಿ ಅರ್ಪಿಸುವ ಭೇದವನಾರು ಬಲ್ಲರಯ್ಯ ಚನ್ನಬಸವಣ್ಣನಲ್ಲದೆ? ಆನಂದ ಸ್ಥಾನದ ಅನುಮಿಷಾಕ್ಷರದ ಸಂಯೋಗ ಅರ್ಪಣದ ಭೇದವ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಲ್ಲಿ ಚನ್ನಬಸವಣ್ಣ ಬಲ್ಲ. ಮಿಕ್ಕಿನವರಿಗೆ ಸಾಮಾನ್ಯವೆಂಬೆನಯ್ಯ.

೧೩೭. ಭಕ್ತಿವಿಡಿದು ಭಕ್ತನಾದ. ಪ್ರಸಾದವಿಡಿದು ಧೈರ್ಯವಿಡಿದು ಆ ಭಕ್ತಂಗೆ ಪ್ರಸಾದಿಯಾದ ಪ್ರಸಾದಿ. ಕರ್ಮರಹಿತನಾಗಿ ಕಾಲ ಕಲ್ಪಿತವಿಲ್ಲದ ಆ ಭಕ್ತಂಗೆ ಪ್ರಾಣಲಿಂಗಿಯಾದ ಪ್ರಸಾದಿ. ಪತಿಭಕ್ತಿವಿಡಿದು ಕಾಮಮೋಕ್ಷಂಗಳಾಶೆಯಂ ನಿವೃತ್ತಿಯಂ ಮಾಡಿದ ಆ ಭಕ್ತಂಗೆ ಐಕ್ಯನಾದ ಪ್ರಸಾದಿ. ನಮ್ಮ ಕಪಿಲಸಿದ್ಧಮಲ್ಲಿನಾಥನಲ್ಲಿ ಸರ್ವಕ್ಕೆ ಚೈತನ್ಯವಾದ ನಮ್ಮ ಚನ್ನಬಸವಣ್ಣನೆಂಬ ಅಚ್ಚಪ್ರಸಾದಿ.

೧೩೮. ಮೂರು ಲಿಂಗಕ್ಕೆ ಮೂಲಮಂತ್ರವಾದಾತ ಗುರು. ಮೂರು ವಿದ್ಯಕ್ಕೆ ವಿದ್ಯಾರೂಪವಾದಾತ ಗುರು. ಒಡ್ಡಿದ ಪ್ರಪಂಚವನತಿಗಳೆದು ರೂಪಿಯ ರೂಪವಾದಾತ ಗುರು ಲೋಕತ್ರಯಕ್ಕೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಗುರು.

೧೩೯. ಐದು ಬ್ರಹ್ಮದಲ್ಲಿ ಅಯ್ಯ ನೀನು ಅತಿಶಯ ಜ್ಯೋತಿರ್ಮಯನು. ಆನಂದ ಸ್ಥಾನದಲ್ಲಿ ಅಯ್ಯ ನೀನು ಅತಿಶಯ ನಿತ್ಯಮಯನು. ಬಾಹ್ಯಾಭ್ಯಂತರದಲ್ಲಿ ಪರಿಪೂರ್ಣನು. ಎನ್ನ ಆಧಿಕ್ಯವನರಿಯಲ್ಕೆ ನಿಗಮಕ್ಕಭೇದ್ಯ. ಗುರುವಿನ ಕರುಣದಿಂದ ಎನ್ನ ಕರಸ್ಥಲದಲ್ಲಿ ಸಿಕ್ಕಿ ಒಳಗಾದೆ ಮಹಾಲಿಂಗ ಕಪಿಲಸಿದ್ಧಮಲ್ಲಿಕಾರ್ಜುನಾ.

೧೪೦. ಭೇದಿಸಬಾರದೆ ಇಪ್ಪ ಅಭೇದ್ಯ ಶಿವನೆ ನಿನ್ನ ಭೇದಿಸಿ ತಂದು ಕೊಟ್ಟನೆನ್ನ ಗುರು. ಇನ್ನು ನಾ ಬಿಡುವೆನೆ? ಬಿಡೆನು. ಮುಚ್ಚಿದೆ ಪಾದೋದಕವ ನಚ್ಚಿದೆ ಪ್ರಸಾದವ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.

೧೪೧. ಸೀಮೆ ಸಂಬಂಧಕ್ಕೆ ಮೀರಿಪ್ಪ ಮಂತ್ರಕ್ಕೆ ರಾಜಮಂತ್ರವು ತಾನು. ಪಂಚಾಕ್ಷರಿ ಪಂಚಾಕ್ಷರಿ ಗುಣದ ಬಸವಾಕ್ಷರತ್ರಯದ ಧ್ಯಾನ ಮೌನದ ಗುಣದ ಸತ್ವವಿಡಿದು ಆನಂದ ತ್ರೈಲಿಂಗ ಮೂಲಮಂತ್ರಕ್ಕೆ ಬಸವಾಕ್ಷರ ತ್ರಯವು ಮಾತೆಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೪೨. ದೆಸೆ ದಿಗ್ವಳಯದಲ್ಲಿ ಪಸರಿಸಿ ಪರ್ಬಿತ್ತು ನಿನ್ನ ನಾಮ. ವಸುಧೆ ಎಲ್ಲವು ಹೆಣ್ಣು ನೀನೆ ಗಂಡು. ಬಸವಾಕ್ಷರತ್ರಯದಿಂದುದ್ಭವಿಸಿ ಸಕಲ ಬ್ರಹ್ಮಾಂಡಗಳಾದವೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೪೩. ಮುನ್ನ ಮುನ್ನ ಶಶಿರವಿಗಳಿಲ್ಲದ ಮುನ್ನ, ಬ್ರಹ್ಮ ವಿಷ್ಣ್ವಾದಿಗಳುದ್ಭವಿಸದ ಮುನ್ನ ಮುನ್ನ, ಮೂರ್ತಿಗಳೆಂಟು ಒಂದಾಗದ ಮುನ್ನ, ತನುಮಧ್ಯವಳಯದಲ್ಲಿ ಸಕಲ ಬ್ರಹ್ಮಾಂಡ ಜಲಮಯವಾಗಿಪ್ಪಲ್ಲಿ, ಭಕ್ತಿ ಕಾರಣ ಬಸವನವಗ್ರಹಿಸಿಪ್ಪಲ್ಲಿ ಅಂದೆತ್ತಲಿದ್ದೆ. ಅದ ನೀನೆ ಬಲ್ಲೆಯಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಕುರುಹುಗೆಟ್ಟ ನಿಶ್ಚಿಂತನು.

೧೪೪. ಇಂದ್ರಾದಿ ದೇವತಾ ಸಂಕುಳಕೆ ಅಂತಪ್ಪ ಪದವನಿತ್ತಾತ ಬಸವಣ್ಣನಯ್ಯ. ಬ್ರಹ್ಮಾದಿ ದೇವತಾ ಮೊದಲಾದ ಜನ್ಮಕ್ಕೆ ಅಂತಪ್ಪ ಪದವನಿತ್ತಾತ ಬಸವಣ್ಣನಯ್ಯ. ಶಿವಲಿಂಗ ಭಕ್ತರಿಗೆ ಚರಲಿಂಗದಾಚರ

ಣೆಯ ಪರಿಯಾಯದಿಂದರಿದಾತ ಗುರು. ಇಹಪರದನುವಿಷದ ಸುದ್ದಿ ಯನರಿದಾತ ಗುರು ಬಸವಣ್ಣನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೧೪೫. ಪ್ರಸಾದ ವೈದ ಪಾದೋದಕವೆರಡೈದರ ಆದಿ ಅಕ್ಷರದಲ್ಲಿ ದೀಕ್ಷಾತ್ರಯವು ನಾದದಿಂದವೆ ತೂಗಿ ಬಿಂದು ಸಮನಿಸದೀಗ. ಆಧಾರ ಸ್ಥಾನಕ್ಕೆ ಅತ್ಯತಿಷ್ಠ ಮೂಲಸ್ಥಾನದಲ್ಲಿ ಮುನ್ನೂರ ಕಮಲಕ್ಕೆ ಆದಿ ಭ್ರಮ ರನು ಬಸವ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೪೬. ಅಣ್ಣನ ನೋಡಿದರೆ ಲೋಕಕ್ಕೆ ಜಗದ ಕಣ್ಣು ಮದವ ಕಳೆದನು. ಮುಕ್ಕಣ್ಣನಿಪ್ಪೆಡೆಯ ತೋರಿದ. ಅಣ್ಣ ಬಸವಣ್ಣ ವಾಙ್ಮ ನಕ್ಕಗೋಚರ ಮುಕ್ಕಣ್ಣನ ಅವತಾರಂಗಳನು ನಾ ವಿವೇಕದಿಂದರಿದು ಮರೆದ. ಸತ್ಯಶುದ್ಧ ನಿರ್ಮಳ ಕೈವಲ್ಯ ವಾಙ್ಮನಸಗೋಚರ ಸತ್ಯಶುದ್ಧ ಬಸವಣ್ಣ ಅಣ್ಣ ನಿಮ್ಮಿಂದ ಶುದ್ಧವ ಕಂಡೆ ಸಿದ್ಧವ ಕಂಡೆ ಪ್ರಸಿದ್ಧವ ಕಂಡೆ ಆರರಲ್ಲಿ ಆಂದೋಳವಾದೆ ಆರು ವ್ರತದಲ್ಲಿ ನಿಪುಣನಾದೆ. ನೀನೊಂದು ಮೂರಾದೆ ಮೂರೊಂದಾಗಿ ತೋರಿದ ಗುಣವಿಂತುಟಯ್ಯ ಬಸವಣ್ಣ. ಇನ್ನೆನಗಾಧಿಕ್ಯವಪ್ಪುದೊಂದಿಲ್ಲ. ನಾ ನಿಮ್ಮ ವರ್ಣಿಸಿ ಹರಿವೆ. ಹರಿದು ಭರದಿಂಪೆ ಗೆಲುವೆ ತತ್ವಮೂವತ್ತಾರರಮೇಲೆ ಒಪ್ಪಿಪ್ಪ ತತ್ವಮುಖಿಯ ನೈದುವೆ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಎನಗರಿದಪ್ಪುದಿಲ್ಲ ಕಾಣಾ ಬಸ ವನ ಪ್ರಸಾದದಿಂದ.

೧೪೭. ಲೋಕ ಲೌಕಿಕಗಳೆಲ್ಲ ನೀವು ಕೇಳಿರೆ. ಏಕೈಕ ರುದ್ರನ ವತಾರನರಿದೆವೆಂಬಿರಿ. ನೋಡಿ ನಚ್ಚಿರೆ ಶಿವನ. ಶಿವನು ಬಸವಣ್ಣನಾದ ನೋಡಿರೆ. ಬಸವಣ್ಣ ಗುರುವಾದ. ಬಸವಣ್ಣ ಲಿಂಗವಾದ. ಬಸವಣ್ಣ ಚರವಾದ. ಬಸವಣ್ಣ ಪರಿಣಾಮ ಪ್ರಸನ್ನ ಪರವಾದ. ಬಸವಣ್ಣ ಮೂಲತ್ರಯವಾದ. ಬಸವಣ್ಣ ಭಕ್ತಿ ಎರಡತೆಯಾದ. ಬಸವಣ್ಣ ಆರರ ಮೇಲೆ ತೋರಿದ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಬಸವಣ್ಣನ ಪ್ರಸಾ ದವ ಕೊಂಡು ಭವ ನಾಸ್ತಿಯಾದೆ.

೧೪೮. ಸೀಮೆ ಮೀರಿದ ಸಂಬಂಧನೆ ಸಂಬಂಧದಲ್ಲಿ ಸಮನಿಸದ ಸಂಯೋಗನೇ ಎನ್ನ ಸಲಹುವ ಗುರುಲಿಂಗಜಂಗಮ ಪಾದೋದಕ ಪ್ರಸಾದಕ್ಕೆ ಅರ್ಹನ ಮಾಡಿದೆ. ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ, ನೀ ಬಸವನಾಗಿ ಬಂದು ನಿನ್ನವರಿಗೆ ಯೋಗ್ಯನ ಮಾಡಿದೆ. ಭವವ ತಪ್ಪಿಸಿದೆ.

೧೪೯. ಗುರುವಾಗಿ ಬಂದು ಎನಗೆ ದೀಕ್ಷೆಯ ಮಾಡಿದಿರಿ. ಲಿಂಗವಾಗಿ ಬಂದೆನ್ನ ಮನದ ಮಲಿನವ ಕಳೆದಿರಿ. ಜಂಗಮವಾಗಿ ಬಂದೆನ್ನ ಪ್ರಪಂಚುಕತನವ ಕಳೆದು ಪರಮ ಸೀಮೆಯ ಮಾಡಿದಿರಿ. ಇಂತಿವೆಲ್ಲವೂ ಬಸವಣ್ಣನಾಗಿ ಎನಗೆ ಪ್ರಸಾದವ ನೀಡಿ ಸಲಹಿದ ಕಪಿಲಸಿದ್ಧ ಮಲ್ಲಿಕಾರ್ಜುನ ಇನ್ನೆನಗತಿಶಯವು ಇಲ್ಲ.

೧೫೦. ಅರ್ಪಿತ ಅವಧಾನ ಮುಖಂಗಳು ಎಲ್ಲರಿಗೆ ಸುಲಭವೆ? ಅನಾದಿ ಸಂಸಿದ್ಧವಾಗಿ ಬಂದ ಬಸವಣ್ಣಂಗಲ್ಲದೆ ತ್ರೈಲಿಂಗದ ಮೂಲಕ್ಕೆ ಮಂತ್ರಾದಿ ರೂಪ ಬಸವಣ್ಣ ಲಿಂಗಪ್ರಸಾದಕ್ಕೆ ಅರ್ಹ ಬಸವಣ್ಣ ಮೂರು ಲಿಂಗ ಒಂದಾದ ಮೂರ್ತಿ ಬಸವಣ್ಣ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನೀ ಸಾಕ್ಷಿಯಾಗಿ ಬಸವನ ನೆನೆವರು ನೀನಹರು.

೧೫೧. ಪ್ರಥಮಕ್ಕೆ ನಾಮಕ್ಕೀಗ ಬಸವಾಕ್ಷರವೇ ಬೀಜ. ಗುರು ನಾಮ ಮೂಲಕ್ಕೆ ಅಕ್ಷರಾಂಕ ಬಸವಣ್ಣ ಬಸವಣ್ಣ ಬಸವಣ್ಣ ಎಂದೀಗ ದೆಸೆಗೆಟ್ಟೆನಯ್ಯ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೫೨. ಆದಿ ಆಧಾರಕ್ಕೆ ಮೂಲ ತಾ ಬಸವಣ್ಣ ಹೋದನೈ ಭಕ್ತಿಯೊಳಗೆ ಹೊಲಬು ದಪ್ಪಿ. ಊರನರಿಯದ ಗ್ರಾಮ ಹೊಲಬುದಪ್ಪಿದ ಸೀಮೆ ಆತನಾನತದಿಂದೆ ನೀನಾದೆನೈ. ಬಸವಣ್ಣ ಬಸವಣ್ಣನೆಂಬ ನಾಮಾಕ್ಷರದೊಳಗೆ ದೆಸೆಗೆಟ್ಟೆನೈ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೫೩. ಶುದ್ಧ ಸಿದ್ಧ ಪ್ರಸಿದ್ಧದ ನೆಲೆಯನರಿದಿಹೆನೆಂದು ತೊಳಲಿ ಬಂದೆ ಗಿರಿಗಹ್ವರದೊಳಗೆ. ಕಂಡೆ ಕಾಣೆನೆಂಬ ಸಂಶಯವಾಯಿತ್ತು. ಅದೇನು ಕಾರಣ? ನಿನ್ನವರ ಗಣಸಮೂಹಕ್ಕೆ ತಾತ್ಪರ್ಯವ ಬಲ್ಲರಾಗಿ ನೀನು ಸದ್ಭಕ್ತ ದೇಹಿಕನಾಗಿ ಸದ್ಭಕ್ತರಲ್ಲಿ ಒಚ್ಚತವಾಗಿಪ್ಪೆಯಾಗಿ 'ಇಪ್ಪಗಿರಿ ಗಹ್ವರದಲ್ಲಿ ಗುರುವಿನ ಕರುಣದಿಂದ ಕಂಡೆನೇನಿಪ್ಪೆ ನೆಲೆಯ ಶುದ್ಧವ ಲಿಂಗದಲ್ಲಿ ಸಿದ್ಧವ ಗುರುವಿನಲ್ಲಿ ಪ್ರಸಿದ್ಧವ ಜಂಗಮದಲ್ಲಿ ಕಂಡೆನರಿದೆ ನಚ್ಚಿದೆ ಮಚ್ಚಿದೆ. ಎನ್ನ ಸರ್ವ ಸ್ವಾಯತವ ನೊಚ್ಚಗೊಟ್ಟು ನಿನ್ನ ಗಣ ಸಮೂಹಕ್ಕೆ ಪ್ರಾಪ್ತನಾದೆ. ನಿನ್ನ ಭಕ್ತರ ಸಲುಗೆಗೆ ಸಂದೆ ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ.

೧೫೪. ಸೋಹಂ ನೀನೆ ಎಲೆ ಅಯ್ಯ. ಕೋಹಂ ತತ್ವ ತೂರ್ಯಾರ್ಥವು ನೀನೆ ಅಯ್ಯ. ನಾಹಂ ನಾಹಂ ನೀನೆ ಅಯ್ಯ. ಆನೆಂಬುದು

ಭ್ರಾಂತು ಎಂಬೆ. ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ ಗುರುವಿನ ಕೈಯ್ಯಲು ನಾನು ಸತ್ತು ಹುಟ್ಟಿದ ಬಳಿಕ ಆನು ನೀನೆಂಬ ಸಂದಳಿದೆ.

೧೫೫. ಅಂಗೈಯ್ಯ ನೋಟದೊಳು ಕಂಗಳ ನೆಟ್ಟು ಕಂಗಳ ತೇಜ ಹಿಂಗದು. ಲಿಂಗ ಪ್ರಭೆಯೊಳಗೆ ಅಂಗವೆಲ್ಲ ಲಿಂಗಲೀಯವಾಗಿ ಸಂಗ ನಿಸ್ಸಂಗವೆಂಬ ದಂದುಗ ಹರಿದು ಹಿಂದು ಮುಂದೆಂಬ ಭಾವ ವಳಿವುದು. ನಿಂದ ನಿಜದಲ್ಲಿ ನಿರಾಳದಲ್ಲಿ ಪ್ರಾಣಸಮರತಿಯಾಗಿ ಕಪಿಲ ಸಿದ್ಧಮಲ್ಲಿಕಾರ್ಜುನನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಎನ್ನ ಗುರು ಚನ್ನ ಬಸವಣ್ಣನವರೆ.

೧೫೬. ವಾಣಿ ನಾಲ್ಕರ ಮೇಲೆ ಮಾಣದೆ ನುಡಿವ ನಿರ್ವಾಣಿಯ ಸಂಭಾಷಣೆಯ ಮಾಡಬಲ್ಲರೆ ನಿರ್ವಾಣವೇಳರೊಳಗೆ ಪರಿಪೂರ್ಣವಾಗಿರ್ಪ ಮಹಾವರ್ಣವ ತನ್ಮಯ ಮಾಡಬಲ್ಲರೆ ನಿರ್ವಾಣಸ್ಥಾನಹತ್ತರಲ್ಲಿ ಆನಂದ ಸಿಂಹಾಸನ ನಾನಾ ಬೆಳಗಿನ ಬೀಜದ ತಿರುಳನನುಭವಿಸಬಲ್ಲರೆ ಲಿಂಗಾನುಭಾವಿ. ಪ್ರಾಣ ಮಹತ್ತರದಲ್ಲಿ ಧ್ಯಾನಚತುಷ್ಟಯ ಕೂಡಿದಲ್ಲಿ ಸಕೀಲ ಬಲ್ಲರೆ ಲಿಂಗೈಕ್ಯ. ಇದು ಕಾರಣ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.

೧೫೭. ಭಕ್ತರೂಪ ಬಸವಣ್ಣ ಗುರುರೂಪ ಚನ್ನಬಸವಣ್ಣ ಪ್ರಸಾದ ರೂಪು ಚನ್ನಬಸವಣ್ಣ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಪ್ರಭುವಾಗಿ ಬಂದು ಬಸವಣ್ಣ ಚನ್ನಬಸವಣ್ಣನ ಒಕ್ಕುದ ಕಂಡು ಜಂಗಮವಾದನು.

೧೫೮. ನಿಮ್ಮ ಮಹಿಮರು ನಿಮ್ಮ ಮಹಿಮೆಯ ತಿಳಿಯರು ನೋಡಯ್ಯ. ನಿಮ್ಮ ಸತ್ವವೇ ಬಸವಣ್ಣನು ನಿಮ್ಮ ಜ್ಞಾನವೇ ಚನ್ನಬಸವಣ್ಣನು ನಿಮ್ಮ ರಾಣಿಯರೇ ಅಕ್ಕನಾಗಮ್ಮನು ನಿಮ್ಮ ಮಹತ್ವವೆ ಪ್ರಭುದೇವನು ನೋಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೫೯. ಮರ್ಮವನರಿತು ಅಯ್ಯ ನಿಮ್ಮ ಕೊಂಬುವರು ಸುಲಭವೆ? ಲೋಕದಲ್ಲಿ ಲಿಂಗಭಕ್ತಿ ಜಂಗಮಭಕ್ತಿ ಗುರುಭಕ್ತಿ ಸುಲಭವೆ? ಲಿಂಗ ಭಕ್ತ ಪ್ರಭುದೇವರು ಜಂಗಮಭಕ್ತ ಬಸವಣ್ಣನು. ಗುರು ಮೊದಲಾದವರ ಪ್ರಸಾದ ಸರ್ವಕ್ಕೆ ಅನುಭಾವಿ ಚನ್ನಬಸವಣ್ಣ ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ ಇಂತಿವರ ಪಾದಕ್ಕೆ ನಮೋ ನಮೋ ಎಂಬೆನು.

೧೬೦. ಎಲೆ ಎಲೆ ಲಿಂಗವೆ ನಾನಂದೆ ಬರಲಿಲ್ಲ ಕಲ್ಯಾಣಕ್ಕೆ. ಎಲೆ ಎಲೆ ಲಿಂಗವೆ ನಾನಂದೆ ಬರಲಿಲ್ಲ ಮಾರ್ಗಕ್ಕೆ. ಎಲೆ ಎಲೆ ಲಿಂಗವೆ ನಾನಂದೆ ಚನ್ನಬಸವಣ್ಣನಾಗಲಿಲ್ಲ ಲಿಂಗವೆ ಲಿಂಗವೇ ಕಪಿಲಸಿದ್ಧಮಲ್ಲಿಕಾರ್ಜುನಾ.

೧೬೧. ಗುರುವಿನ ಕೃಪೆಯಿಂದ ಸಾಧಾರಣ ತನುವ ಮರೆದೆ. ಗುರುವಿನ ಕೃಪೆಯಿಂದ ಶುದ್ಧಸಿದ್ಧ ಪ್ರಸಿದ್ಧ ಪ್ರಮಾಣವನರಿದೆ. ಎನಗಾಧಿಕ್ಯವಪ್ಪ ವಸ್ತು ಬೇರೊಂದಿಲ್ಲ. ಅದೇನು ಕಾರಣ? ಅವನಾದೆನಾಗಿ ಗುರುವೆ ಎನ್ನ ತನುವಿಂಗೆ ಲಿಂಗದೀಕ್ಷೆಯ ಮಾಡಿ ಎನ್ನ ಜ್ಞಾನಕ್ಕೆ ಸ್ವಾನುಭವ ದೀಕ್ಷೆಯ ಮಾಡಿ ಎನ್ನ ತನುಮನಧನದಲ್ಲಿ ವಂಚನೆ ಇಲ್ಲದೆ ಮಾಡಲೆಂದು ಜಂಗಮದೀಕ್ಷೆಯ ಮಾಡಿ ಎನ್ನ ಸರ್ವಾಂಗವು ನಿನ್ನ ಪಶ್ರ್ರಮಸ್ಥಾನ ಶುದ್ಧ ಮಂಟಪವಾದ ಕಾರಣ ವ್ಯಾಪ್ತಿಯನರಿಯದೆ ಲೋಕ ಎನ್ನೊಳಗಾಯಿತ್ತು ಆ ಲೋಕಕ್ಕೆ ಹೊರಗಾದೆನಾಗಿ. ಅದೇನು ಕಾರಣ? ಜನನ ಮರಣ ಪ್ರಳಯಕ್ಕೆ ಹೊರಗಾದೆನಾಗಿ. ಗುರುವೆ ಸದ್ಗುರುವೆ ಎನ್ನ ಭವದ ಬೇರು ಹರಿದೆ ಗುರುವೆ. ಭವಪಾಶ ವಿಮೋಚನನೆ ಅವ್ಯಯ ಮನದ ಸರ್ವಾಂಗ ಲೋಲುಪ್ತ ಭುಕ್ತಿ ಮುಕ್ತಿ ಫಲಪ್ರದಾಯಕ ಗುರುವೆ ಬಸವಣ್ಣ ಕಪಿಲಸಿದ್ಧಮಲ್ಲಿಕಾರ್ಜುನಾ ಚನ್ನಬಸವಣ್ಣನಾಗಿ ಪ್ರಭು ಮೊದಲಾಗಿ ಅಸಂಖ್ಯಾತರೆಲ್ಲರನು ತೋರಿದ ಗುರುವೆ.

೧೬೨. ಆಯಿತ್ತಾಯಿತ್ತು ಫಲವಿಲ್ಲದ ವೃಕ್ಷ. ಆಯಿತ್ತಾಯಿತ್ತು ಪದವಿಲ್ಲದ ಫಲ. ಆಯಿತ್ತಾಯಿತ್ತು ಸೀಮೆಯ ಮೀರಿದ ಸಂಬಂಧ. ಆಯಿತ್ತಾಯಿತ್ತು ಅನ್ವಯದಲ್ಲಿ ಆಂದೋಳ. ಆಯಿತ್ತಾಯಿತ್ತು ನಿತ್ಯದಲ್ಲಿ ಭಕ್ತಿ. ಆಯಿತ್ತಾಯಿತ್ತು ಭಕ್ತಿಯಲ್ಲಿ ವೈರಾಗ್ಯ. ಆಯಿತ್ತಾಯಿತ್ತು ವೈರಾಗ್ಯದಲ್ಲಿ ಅನುಗುಣ. ಆಯಿತ್ತಾಯಿತ್ತು ಸ್ವಾನುಭವ. ಸ್ವಾನುಭವದಲ್ಲಿ ಸಕಲಭಕ್ತಿ ಸಕಲ ಭಕ್ತಿಯಿಂದ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ ಸಂಯೋಗ ಬಸವಣ್ಣಂಗೆ.

೧೬೩. ಅಯ್ಯ ನಿಮ್ಮ ಶರಣ ಬಸವಣ್ಣನಿಂದೆ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯ. ನಿಮ್ಮ ಶರಣ ಬಸವಣ್ಣನಿಂದೆ ನಿರವಯವನಾದೆನು. ಎಲೆ ಕಪಿಲಸಿದ್ಧಮಲ್ಲಿನಾಥಯ್ಯ, ನಿಮ್ಮ ಶರಣ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು.

೧೬೪. ಎಲೆ ಅಯ್ಯ ನಿಮ್ಮ ನಚ್ಚಿನ ಮೆಚ್ಚಿನ ಶರಣರ ಸಂಗದಲ್ಲಿ ರಿಸಿ ಎನ್ನ ಸೀ ಮಾಡಿದಿರಿ. ಆಹಾ, ನಿಮ್ಮ ಕರುಣವನೇನೆಂದು ಉಪಮಿಸುವೆನು? ಎರಡು ಪುರವ ಮೆಟ್ಟಿ ಮೇಲು ಪುರವ ನೋಡುತ್ತಿರ್ದೆನು. ಮೇಲು ಪುರವ ಭೇದಿಸಲೊಡನೆ ನೀನು ನಾನಾದೆನಯ್ಯ ಕಪಿಲಸಿದ್ಧ. ಮಲ್ಲಿಕಾರ್ಜುನ ನಿಮ್ಮ ಶ ಣ ಪ್ರಭುದೇವರ ಕರುಣದಿಂದೆ ಆನು ಬದುಕಿದೆನು.

೧೬೫. ಅಯ್ಯಾ ಮೂರು ಪುರದ ಮೇಲುಪ್ಪರಿಗೆಯು ಕೆಲಸವನೇನೆಂಬೆನಯ್ಯ. ಮುತ್ತಿನ ಕಲಶದ ಮೇಲೊಂದು ಅರಳಿದ ಪುಷ್ಪದ ಪರಿಯೊಳಗೆ ಅಗ್ನಿಯ ಕಂಡೆನಾಗಿ ಕಪಿಲಸಿದ್ಧ ಮಲ್ಲಿನಾಥಯ್ಯ ನಿಮ್ಮ ಶರಣ ಚನ್ನಬಸವಣ್ಣ ತೋರಿದ ಹಾದಿ ಸುಪಥವಾಗಿತ್ತಾಗಿ ನಾನು ಚನ್ನಬಸಣ್ಣಂಗೆ ನಮೋ ನಮೋ ಎನುತಿರ್ದೆನು.

೧೬೬. ಅಜ್ಞಾಸಿದ್ಧನನರ್ಚಿಸುವಲ್ಲಿ ಆರಯ್ಯ ಬಲ್ಲವರು ಚನ್ನಬಸವಣ್ಣನಲ್ಲದೆ? ಮೂರ್ತಿಯುಂಟು. ಆಗದ ಮುನ್ನ ಮುಖಲಿಂಗವಾಗಿರ್ದ ಸುದ್ದಿಯನಾರು ಬಲ್ಲವರು, ಚನ್ನಬಸವಣ್ಣನಲ್ಲದೆ? ಪದಮುಲಜ್ಞಾನವಲ್ಲಿ ಒಪ್ಪಿಪ್ಪ ಅಕ್ಷರದ್ವಯದ ಭೇದಾದಿ ಭೇದಮಂ ಭೇದಿಸಿ ಲೋಕಕ್ಕೆ ಭಕ್ತಿಯ ಸಾಧಿಸಿ ಕೊಟ್ಟ ಲೋಕಕ್ಕೆ ಬರುತರವಾದ ಕಾರಣ ಚನ್ನಬಸವಣ್ಣನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೬೭. ಎಲೆ ಅಯ್ಯ ಗಾರುಡವ ಬಲ್ಲೆನಯ್ಯ. ಮತ್ತೆ ಗಾರುಡಿಗನಲ್ಲ ನೋಡಯ್ಯ ಎನ್ನ ಮನದ ಮೇಲಿಪ್ಪ ಶಂಕೆ ಎಂಬ ವಿಷವಗಾರುಡಿಸಿ ಮಾಣಿಸಿ ನಿಃಶ್ಶಂಕನಮಾಡಿದ ಕಪಿಲಸಿದ್ಧಮಲ್ಲಿನಾಥನಲ್ಲಿ ಮಡಿವಾಳಮಾಚಿತಂದಿಯ ಪಾದಕ್ಕೆ ನಮೋ ನಮೋ ಎಂಬೆನು.

೧೬೮. ಮೂರು ಕಟ್ಟಿಗೆಯು ಮೂರರಲ್ಲಿರಿಸಿದೆನು. ನಿರಾಳ ನಿಷ್ಪತ್ತಿಯಾದ ಲಿಂಗದಲ್ಲಿ ಆರೂಢ ಅಂಗುಲದೊಳಗೆ ಆರುವೆರಳನಿರಿಸಿದೆನು. ಧೀರ ಮೋಳಿಗೆಯ ಮಾರ ಶರಣು ಶರಣು. ಆರೂಢ ದಶಗಳ ಭೇದವನರಿದಂತೆ ತೋರಿದ ಶರಣೆಂದೆನ್ನೈ ಕಪಿಲಸಿದ್ಧಮಲ್ಲಿಕಾರ್ಜುನಾ.

ಇಂತು ಬಸವರಾಜ ದೇವರು ಸಿದ್ಧರಾಮಯ್ಯ ದೇವರುಗಳು ಮೋಳಿಗೆಯ ಮಾರಿತಂದೆಗಳೊಡನೆ ಮಹಾನುಭಾವ ಸಂಗೋಷ್ಠಿಯಂ ಮಾಡಿ ತಮ್ಮ ಗೃಹಕ್ಕೆ ಲಿಂಗೈಕ್ಯವಾದಿಹೆವೆಂಬ ಆತುರದಿಂ ನುಡಿದ ಪ್ರಸ್ತಾವದ ವಚನ.

೧೬೯. ಓಂ ಎಂದಲ್ಲಿ ನಿರಾಕಾರವಾದೆಯಲ್ಲ. ಓಂ ಎಲ್ಲ ತತ್ವ ಮಸಿ ಎಂದಲ್ಲಿ ತತ್ವರೂಪಾಗಿ ಜಗವ ರಕ್ಷಿಸಿಕೆನೆಂದು ಕರ್ತೃರೂಪಾದೆ ಯಲ್ಲ. ನಿಮಗೆ ಮರ್ತ್ಯದ ಮಣಿಹವಿಲ್ಲ ಪರಿಯಂತರ ಎನಗೆ ಕಟ್ಟು ಗುತ್ತಿಗೆಯು ಹೊತ್ತು ಶಿವಭಕ್ತರ ಮನೆಗೆ ನೀವು ಕಾಯಕದ ಕೃತ್ಯ ಇನ್ನೆಷ್ಟು ದಿನ ಹೇಳಾ ನಿಷ್ಕಳಂಕ ಮಲ್ಲಿಕಾರ್ಜುನಾ.

೧೭೦. ಆದಿಮಧ್ಯಾಂತವ ಬೇಧಿಸಿದ ಮಹಿಮನು ನಾದಕ್ಕತೀ ತನು. ಪರಬ್ರಹ್ಮದ ಭೇದಾದಿ ಭೇದದ ಪರತತ್ವ ಮೂಲವೆಯಾದ ಆದಿ ಗುರುಘಟ್ಟಿವಾಳ ಕಪಿಲಸಿದ್ಧ ಮಲ್ಲಿನಾಥಾ.

ಆ ಸಮಯದಲ್ಲಿ ಸಿದ್ಧರಾಮ ತಂದೆಗಳು ಮಹದೇವಿಯಕ್ಕಗಳ ಸ್ತುತಿ ಸಿದ ವಚನ.

೧೭೧. ಅಹುದಹುದು ಮತ್ತೇನು ಮರಹಿಂಗೆ ಹಿರಿದು ಕಿರಿ ದುಂಟಲ್ಲದೆ ಅರುಹಿಂಗೆ ಹಿರಿದು ಕಿರಿದುಂಟೆ ಹೇಳಯ್ಯ? ಸಾವಿಂಗೆ ಭಯ ಉಂಟಲ್ಲದೆ ಅಜಾತಂಗೆ ಭಯವು ಉಂಟೆ ಹೇಳಯ್ಯ ಕಪಿಲಸಿದ್ಧ ಮಲ್ಲಿನಾಥಯ್ಯನಲ್ಲಿ?

೧೭೨. ಎಲೆ ಎಲೆ ಅಯ್ಯ ನೀವು ಹೇಳಯ್ಯ. ಎನಗೆ ಗತಿ ಏನು? ಮತಿ ಏನು? ನಿಮ್ಮಲ್ಲಿ ಸಮರಸವೆಂತು ಹೇಳಯ್ಯ? ಮೂರನೆಯ ಕರು ಮಾಡದ ಮೇಲುವಾಗಿಲ ಮನೆಯೊಳಗಿಪ್ಪೆನು. ನಾನು ಕಾಮನ ಕಟ್ಟುವ ಪಂಜರವನಿಟ್ಟು ನಿಲ್ಲುವೆನು ಹೇಳು ಹೇಳಾ ನಿರ್ಣಯವ ಎಲೆ ಕಪಿಲ ಸಿದ್ಧಮಲ್ಲಿನಾಥಯ್ಯ.

ಅತ್ತಲಾ ಸೊನ್ನಲಾಪುರದಲ್ಲಿ ಸಿದ್ಧರಾಮಯ್ಯದೇವ ತಮ್ಮ ಮಹಾ ಜ್ಞಾನದಿಂದ ನೀಲಲೋಚನೆಯಮ್ಮನ ಲಿಂಗೈಕ್ಯವ ತಿಳಿದು ಸ್ತುತಿಸಿದ ಪ್ರಸ್ತಾವದ ವಚನ.

೧೭೩. ತಾಯಿಯೆ ಪರಮಸುಖಾಚಾರದ ಮೂರ್ತಿಯ ನಡಗಿಸಿ ನೀನೆಯಾದೆಯವ್ವಾ ತಾಯೆ. ಮಹಾಜ್ಞಾನ ಕಲ್ಪಿತದಲ್ಲಿ ನೀನೆಯಡಗಿ ದೆಯವ್ವಾ. ತಾಯೆ ನೀಲಮ್ಮನೆಂಬ ಸುಖವಾಸಿಮೂರ್ತಿ ಕಪಿಲಸಿದ್ಧಮ ಲ್ಲಿನಾಥಯ್ಯ ನಮ್ಮ ತಾಯೆ ನೀಲಮ್ಮನಾದಳು.

ಪ್ರಭುದೇವರಕೂಡ ಪ್ರಶ್ನಮಾಡಿದ ವಚನ ॥

೧೭೪. ಎಲೆ ಅಯ್ಯ ನಿಮ್ಮವರ ನೋವೆ ಎನ್ನ ನೋವು ನೋಡಾ. ಕಂಡು ಕಂಡು ಸೈರಿಸಲಾರೆ ನೋಡಯ್ಯ. ನಿಮ್ಮವರೊಡನೆ ಸರಸಾಗಿಪ್ಪ

ವರ ಕಂಡರೆ ನಾಸವರಿಗೆ ಮುನಿವೆ ನೋಡಾ ಕಪಿಲಸಿದ್ಧಮಲ್ಲಿನಾಥ ನೀನವರಲ್ಲಿ ಇಪ್ಪೆಯಾಗಿ.

೧೭೬. ಎಕ್ಕೆವಿಂಡುಗಳೆಂಬುವರು ಮುಕ್ಕಣ್ಣಾ ನಿಮ್ಮ ಗಣಂಗಳು ಬತ್ತಿದ ಕೆರೆ ಬಾಯಿ ಬಿಟ್ಟಂತೆ ಮೊರೆಯಿಟ್ಟು ಬರಲು ಹೊತ್ತಿದ ಅಂಗಾಲು ಕಿಚ್ಚುನೆತ್ತಿಗೆ ಮುಟ್ಟಿದರೆ ಚಕ್ಕನೆ ಕಪಿಲಸಿದ್ಧ ಮಲ್ಲಿನಾಥ ನೊಸಲ ಕಣ್ಣ ತೆಗೆದನು.

೧೭೭. ಬ್ರಹ್ಮನಾದಡಾಗಲಿ ವಿಷ್ಣುವಾದಡಾಗಲಿ ಇಂದ್ರನಾದಡಾಗಲಿ ಚಂದ್ರನಾದಡಾಗಲಿ ನಮ್ಮ ಶಿವಶರಣರ ನೋವು ಎಮ್ಮ ನೋವು ನೋಡಾ. ಅವರ ನೊರಸುವೆನುರುಹುವೆ ಎಂದು ಕಪಿಲಸಿದ್ಧ ಮಲ್ಲಿಕಾರ್ಜುನ ತನ್ನ ನೊಸಲ ಕಣ್ಣಿಂಗೆ ಬೆಸನನಿತ್ತರೆ ನಿಲಬಲ್ಲ ಗರುವರನಾರನು ಕಾಣೆ.

೧೭೮. ಅಯ್ಯ ನಿಮ್ಮ ಮೂರ್ತಿಯ ನೋಡಿಹೆನೆಂದರೆ ದೃಷ್ಟಿಯಾರವು. ನಿಮ್ಮ ತೇಜವನಾರು ನೋಡಲಮ್ಮರಯ್ಯ. ನಿಮ್ಮ ತೇಜವ ನೋಡುವವರಿಗೆ ಉಪಮಿಸಬಾರದು. ನೀವು ಮುನಿದು ನೊಸಲ ಕಣ್ಣ ತೆಗೆದರೆ ಅದಕ್ಕೆ ಇದಿರಪ್ಪರು ಇನ್ನಾರು ಹೇಳಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ತೇಜವ ಮೂರು ಲೋಕವ ನುಂಗಿದರೆ ನೋಡಿ ಕಣ್ಣ ಮುಚ್ಚುತ್ತಿರ್ದೆನು.

# ಮಹೇಶ್ವರಸ್ಥಲ.

೧೭೯. ನೀ ಮುನಿದರೆ ಮುನಿ. ನಾನನ್ನುವೆನಯ್ಯ ಮೀರಿದ ವಚನವ ನೀ ಮಾಡಲಾದವು. ನಾನೇನು ಹೇಳಿದೆನೆ ಅಯ್ಯ? ಇಲ್ಲಿ ಇಲ್ಲವು ಬಹು ದುರ್ಲಭ ದುರ್ಲಭ ನಿನ್ನ ಸ್ಥಲವಳವಡುವುದು ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನ.

೧೮೦. ಹೆಣ್ಣಳಿದ ಬಳಿಕ ಮಣ್ಣಿನ ಹಂಗೇಕಯ್ಯ? ಮಣ್ಣಳಿದ ಬಳಿಕ ಹೊನ್ನಿನ ಹಂಗೇಕಯ್ಯ? ಮುಕ್ಕಣ್ಣನಾದ ಬಳಿಕ ಮೂರರ ಹಂಗು ಏನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೧೮೧. ಅಳವಟ್ಟಿತ್ತಳವಟ್ಟಿತ್ತಯ್ಯ ನಿಮಗಲ್ಲದಾರಿಂಗೆ ಅಳವಟ್ಟಿತ್ತಳವಟ್ಟಿತ್ತಯ್ಯ. ನಿಮಗಲ್ಲದಾರಿಂಗೆ ಅಳವಟ್ಟ ಬಳಿಕ ಕಳವಳಗೊಂಡಳು ಕಪಿಲಸಿದ್ಧಮಲ್ಲಿನಾಥಾ.

೧೮೨. ಹೇಳುವರೆ ಬಹು ಸುಲಭ. ಆಳುವರೆ ಅದು ಬಹು ದುರ್ಘಟ ನೋಡಯ್ಯ. ಆಳಿದ ಹಂಗೇಕಯ್ಯ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನ ತಂದೆ.

೧೮೩. ಜಂಗಮವಾಗಿ ಫಲವೇನಯ್ಯ ಜಗದ ಹಂಗು ದೊರೆಯದನ್ನಕ್ಕ? ಯೋಗಿಯಾಗಿ ಫಲವೇನಯ್ಯ ನಿನ್ನಂಗ ಬರದನ್ನಕ್ಕ ಎಲೆಕಪಿಲಸಿದ್ಧಮಲ್ಲಿಕಾರ್ಜುನಾ?

೧೮೪. ನೀರಿಲ್ಲದಲ್ಲಿ ಜಳಕವಮಾಡಿ ತರುವಿಲ್ಲದಲ್ಲಿ ಪುಷ್ಪವನೆತ್ತಿ ಕರವಿಲ್ಲದೆ ಪೂಜಿಸಬಲ್ಲಡೆ ಜಂಗಮನೆಂಬೆ ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನ ದೇವ ಆನು ತ್ರಿಕರಣ ಶುದ್ಧನಾಗಿ.

೧೮೫. ನೀರ ಕುಡಿದು ಅಗ್ನಿಯ ನುಂಗಿದವರ ಜಂಗಮವೆಂಬೆ. ಊರ ನೋಡಿ ಸೇರದವಗೆ ಜಂಗಮವೆಂದೆಂಬೆ. ಹೆಣ್ಣ ಭೋಗಿಸಿ ಮುಕ್ಕಣ್ಣನ ಪಡೆದಾತನ ಜಂಗಮವೆಂಬೆನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೧೮೬. ಜಂಗಮವಾದುದಕ್ಕೆ ಇದೆ ಚಿಹ್ನ ನೋಡಾ. ಅಂಗವಿಡಿದು ಲಿಂಗವ ಪೂಜಿಸುವ ಲಿಂಗವಿಡಿದು ಅಂಗವ ಪೂಜಿಸ ನೋಡಾ. ಶತದಳ ಸಹಸ್ರ ಸೂರ್ಯವರ್ಣದ ಪದ್ಮದೊಳಿಪ್ಪ ಮಹಾಲಿಂಗವನರುಹಿ

ಪ್ರಾಣಲಿಂಗಿಯ ಕೂಟವನರಿವಾತನೇ ಜಂಗಮ ಕಾಣಾ ಕಪಿಲಸಿದ್ಧಮ ಲ್ಲಿಕಾರ್ಜುನಾ.

೧೮೭. ಒಂದು ಕೈಯಾದ.ದು ಗಂಡು. ಅಂದು ಲಗ್ನವ ಮಾಡ ಬೇಕೆಂದು ಬಂದನಯ್ಯ ಲಿಂಗವು ಆ ಲಿಂಗರಮಣನಾಗಬೇಕೆಂದು ಹೋದರೆ ನೆರೆದು ಸುಮ್ಮನಾದ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

---

## ನಾಗಮ್ಮನವರ ಮುಂದೆ ಹಾಡಿದ ವಚನ.

೧೮೮. ನೋಡವ್ವ ನೋಡವ್ವ ಇದರಂದವ. ತಾ ಬಂದರೆನ್ನ ಕರ ಒಂದು ತಾಯಾಯಿತ್ತು. ಮತ್ತೊಂದು ಕರ ತಂದೆಯಾಯಿತ್ತು. ಅವರವರು ಕೂಡಿದಲ್ಲಿ ಶಬ್ದವಿಲ್ಲದ ಕೂಸು ಹುಟ್ಟಿತ್ತು. ಆ ಕೂಸು ಎನ್ನ ನಟ್ಟಿಬಿಟ್ಟಿತ್ತು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೧೮೯. ಬರುವ ಮುಂದೆ ಪುರುಷನಿದ್ದೆ. ಬಂದ ಬಳಿಕ ಸ್ತ್ರೀಯು ಳಾದೆ. ಇನ್ನು ಮೇಲೆ ನಪುಂಸಕನಾದೆ. ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜು ನನ ಕೂಡಬೇಕೆಂದಲ್ಲಿ ಪುರುಷನಾದೆ ನೋಡವ್ವ ಎನ್ನ ಹೆತ್ತ ತಾಯಿ.

೧೯೦. ಮೊಮ್ಮಗನಾಗಿ ಮೊಮ್ಮಗಳಾಗಿ ಮೊಮ್ಮಗನಾಗಿ ನಿಂದೆ ನೋಡವ್ವ. ಮಗನ ಕರುಣದಿಂದೆ ಮಗನಾಗಿ ಮಗನಾದೆ ನೋಡವ್ವ. ಮಗನ ಕರುಣದಿಂದ ಮಗನಾಗಿ ಮಗನಾದೆ ನೋಡವ್ವ. ಮಗನ ಕರುಣದಿಂದ ಮಗನು ಹೋಗಿ ಮಹಾಲಿಂಗನಾದೆ ನೋಡವ್ವ ನಿನಗೆ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

೧೯೧ ಲಿಂಗ ಘನವೆಂಬೆನೆ? ಗುರುವಿಡಿದು ಕಂಡೆ. ಗುರು ಘನವೆಂಬೆನೆ? ಸಾಕಾರವಿಡಿದು ಕಂಡೆ ಸಾಕಾರ ಘನವೆಂಬೆನೆ? ನಿರಾ ಕಾರವಿಡಿದು ಕಂಡೆ. ನಿರಾಕಾರ ಘನವೆಂಬೆನೆ? ಜಂಗಮ ವಿಡಿದು ಕಂಡೆನಯ್ಯ ಎಲೆ ಕಪಿಲ ಸಿದ್ಧಮಲ್ಲಿಕಾರ್ಜುನಾ.

೧೯೨. ಹೆತ್ತ ತಾಯಿ ನೀನೆ ಅವ್ವ. ನನ್ನ ಹತ್ತರ ಬಂದಾಕೆ ನೀನೆ ಅವ್ವ ಲಿಂಗದ ಮೊತ್ತವಾದಾಕೆ ನೀನೆ ಅವ್ವ. ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜು ನನ ರಾಣಿ ನೀನೆ ಅವ್ವ. ಇದರನುಭಾವ ತಿಳಿದಾತನೆ ಜಂಗಮ. ಇದರನು ಭಾವವನು ಕೇಳಿದಾತನೆ ಭಕ್ತ ನೋಡವ್ವ. ಆತ ಪ್ರಾಣಲಿಂಗಿಯವ್ವ.

೧೯೩. ನೀರನೆರೆಯದೆ ಒಂದು ಮರನಾಯಿತ್ತು ನೋಡವ್ವ. ಆ ಮರಕ್ಕೆ ಉರ್ಧ್ವಶಾಖೆ ಅಧೋ ಶಾಖೆ ಎಂಬ ಟೊಂಗೆಗಳಾದವು ನೋಡವ್ವ. ಮತ್ತನಂತ ಪರ್ಣಗಳಾದವು. ಪೂರ್ಧ್ವ ಶಾಖೆಯ ನೋಡ ಹೋದರೆ ಅಧೋಶಾಖೆ ಕಾಣಬಾರದು. ಅದೋ ಶಾಖೆ ನೋಡಹೋ ದರೆ ಊರ್ಧ್ವ ಶಾಖೆ ಕಾಣಬಾರದು. ಅದು ವಿಚಾರಿಸಿ ನೋಡಿದರೆ ಒಂದೆಯಾಗಿಹುದು. ಇದರ ಕುರುಹು ನೋಡಿ ನೋಡಿ ನಿಬ್ಬೆರಗಾವೆ ನೋಡವ್ವ ಕಪಿಲ ಸಿದ್ಧ ಮಲ್ಲಿಕಾರ್ಜುನನಲ್ಲಿ.

೧೯೪. ಲಿಂಗವ ಪೂಜಿಸ ಹೋದರೆ ಲಿಂಗರೂಪಾದೆನು. ಜಂಗ ಮವ ಪೂಜಿಸ ಹೋದರೆ ಪ್ರಭುವಾದೆನು. ಗುರುವಿನ ಪೂಜಿಸ ಹೋದರೆ ಚನ್ನಬಸವಣ್ಣನಾದೆನು. ಎನಗಾಜ್ಞೆಯಾದರೆ ಬರಿಯ ಸಿದ್ಧರಾಮನಾಗಿ ನಿಂದೆನು ನೋಡಾ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ ನಿಮ್ಮ ಶರಣರ ಸಮೂಹದಲ್ಲಿ.

---

## ಸೊನ್ನಲಿಗಿಗೆ ಬರುವ ಅಭಿಪ್ರಾಯವು.

೧೯೫. ಎನ್ನ ಒಳಗೆ ಒತ್ತಿನೋಡುವಿರಿ. ಎನ್ನಲ್ಲೇನುಂಟಯ್ಯ? ನುಡಿಯಿಲ್ಲದಭವ ನೀನು. ನುಡಿಗಲಿತೆನೆಂದರೆ ನಿಮ್ಮನೊಡಂಬಡಿಸಲು ಆನು ಸಮರ್ಥನೆ? ಅನಂತ ವೇದಂಗಳೆಲ್ಲವು ನಿಮ್ಮ ಮುಂದೆ ಉಸರಿ ಕ್ಕಲಮ್ಮದೆಲ್ಲ ಮೂಕರಾಗಿದ್ದವು. ನಿಮಗಾನಿದಿರುತ್ತರವ ಕೊಟ್ಟು ಕೇಡಿಂಗೆ ಏನೆಂಬೆನೆಲೆ ಆಯ್ಯ ಕಪಿಲಸಿದ್ಧ? ನಾನುಭಯ ಭ್ರಷ್ಟನೆಂಬುದ ನೀವೆ ಬಲ್ಲಿರಿ.

೧೯೬. ಅಯ್ಯಾ ನಿಮ್ಮ ಕಂಡ ಕಾಣಿಕೆಯಲ್ಲಿ ನಂಬಿ ನಚ್ಚಿ ಶರ ಣುವೋಗಲರಿಯದೆ ಕೆಮ್ಮನೆ ಕೆಟ್ಟೆ. ಅಹಂಕಾರವ ಹೊತ್ತುಕೊಂಡು ಕೆಟ್ಟೆ ನೋಡಯ್ಯ. ಕೆಡಿಸಿ ಮರುಗಿ ಮರಸಿಹೆನೆಂಬ ಮರುಳ ನಾನಯ್ಯ. ಕಪಿಲಸಿದ್ಧಮಲ್ಲಿನಾಥಯ್ಯ ಹಾಲಲದ್ದು, ನೀರಲದ್ದು ನೀನೇ ಗತಿ ಮತಿ.

೧೯೭. ಎನ್ನ ಭಾರ ನಿಮ್ಮದಯ್ಯ. ಎನ್ನ ಹಾನಿ ವೃದ್ಧಿ ನಿಮ್ಮ ದಯ್ಯ. ಎನ್ನ ಕರ ಕಾಡದಿರು ತಂದೆ. ನಿನ್ನ ಕಾಟ ಎನ್ನ ಪ್ರಾಣದೋಟ ಕಪಿಲಸಿದ್ಧ ಮಲ್ಲಿನಾಥ ಕೊಲ್ಲು ಕಾಯಿ. ನಿನ್ನ ಧರ್ಮದವ ನಾನು.

೧೯೮. ಎನ್ನ ತನು ಕರಗಿದ ಎನ್ನ ಮನ ಕರಗಿದ ಮಃಖವಿನಾರದಯ್ಯ. ಅಯ್ಯ ಅಯ್ಯ ಅಂದಳುವದಕ್ಕೆ ಇದಾರದಯ್ಯ? ಮನವೆಂಬ ಕೂರಸಿಗೆ ಗುರಿ ಮಾಡಿದವರಾರಯ್ಯ? ಆಹಾ ಎಂಬ ಧ್ವನಿಯು ಕೇಳಲಾರನೆ ಕಂಡು ಕರುಣದಿಂದ ಶಿರವ ಹಿಡಿದೆತ್ತಿ ಎನ್ನ ಕಣ್ಣಾಸೀರು ತೊಡೆದನು ಕಪಿಲ ಸಿದ್ಧ ಮಲ್ಲಿನಾಥಯ್ಯ.

೧೯೯. ಯೋಗದ ಹೊಲಬ ನಾನೆತ್ತ ಬಲ್ಲೆನಯ್ಯ ಯೋಗ ಶಿವ ಶಕ್ತಿ ಸಂಪುಟವಾಗಿಪ್ಪುದಲ್ಲದೆ. ಶಿವ ಶಕ್ತಿ ವಿಯೋಗನಾದ ಯೋಗ ವಿಲ್ಲವಯ್ಯ. ಹೃದಯ ಕಮಲದಲ್ಲಿ ಭ್ರಮಿಸದೆ ಇಪ್ಪಾತ ನೀನೆಯಲ್ಲದೆ ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೨೦೦. ಉತ್ಪತ್ತಿ ಸ್ಥಿತಿಲಯುವಿಲ್ಲದಭವ ನೀನು ಕಂಡಯ್ಯ. ಎನಗೆ ಬೇರೆ ಸ್ವತಂತ್ರವಿಲ್ಲ, ಕೇಳಾ. ನಿನ್ನ ಇಚ್ಛಾಮಾತ್ರದಿಂದ ನಾನಿಪ್ಪೆನು. ಹಿರಿಯ ನೀನೇ ದೇವಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೨೦೧, ಅಪ್ಪುದನಲ್ಲದುದನೊಪ್ಪವ ಮಾಡುವಿರಯ್ಯ. ನಿನ್ನೊಲವು ಚಲುವು ಕಂಡಯ್ಯ. ನೀನಿಂತು ನೋಡಿದರಂತಿಪ್ಪುದಲ್ಲದೆ ಅಪ್ಪುದಲ್ಲವೆಂಬವರಿಲ್ಲ ಕಾಣಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೨೦೨. ಮಾತುಳ್ಳನ್ನಕ್ಕ ದೇಹ ಹಿಂಗದು. ನೆನಹುಳ್ಳನ್ನಕ್ಕ ಪ್ರಾಣಸೂತಕ ಬಿಡದು. ಕಾಯದ ಜೀವದ ಹೊಲಿಗೆಯು ಸಂದ ಬಿಚ್ಚಲರಿಯದು. ಆನು ನಿರ್ದೇಹಿ ಎಂದರೆ ನಗರೆ ನಿಮ್ಮ ಪ್ರಮಥರು? ಎನ್ನ ಅಂತರಂಗದುಲುಳ್ಳ ಅವಗುಣವ ಹಿಂಗಿಸಿ ನಿನ್ನಂತೆ ಮಾಡಿದ ಡಾನುಳಿವೆನಲ್ಲದೆ ಬೇರೆ ಗತಿಯು ಕಾಣೆ ನೋಡಾ ಅಯ್ಯಾ. ಕಪಿಲ ಸಿದ್ಧ ಮಲ್ಲಿನಾಥಾ ಹಿಂದೆ ಇಲ್ಲದಡೇನು ಮುಂದೆ ತಪ್ಪದು.

ಅಲ್ಲಮ ದೇವನು ಸಿದ್ಧರಾಮನ ಕೈವಿಡಿದು ಯೋಗ ಮಂದಿರಕ್ಕೆ ಬರತಕ್ಕ ಸಮಯದಲ್ಲಿ ಸಿದ್ಧರಾಮೇಶ್ವರ ದೇವರು ನುಡಿದ ವಚನ.

೨೦೩. ಎಮ್ಮನಲ್ಲ ಒಲಿದು ಒಲಿಸಿಕೊಡುತ್ತಿರೆ ಬಾರಾ ಬಾರಾ ಎಂದೆನ್ನ ಕರಣ ಹರಣವ ತೋರಿದರೆ ತಾನೆ ಒಲಿದು ಬಂದೆನ್ನ ತಲೆಯ ಪಿಡಿದು ನಗಹಿ ಎನ್ನ ಮನೆಗೆ ಬಂದ ಕಪಿಲ ಸಿದ್ಧ ಮಲ್ಲಿನಾಥನ ಒಲುಮೆಯ ಘನವನೇನೆಂದುಪಮಿಸುವೆನು?

ಆ ವೇಳೆಯಲ್ಲಿ ಎಮ್ಮ ಮಂದಿರಕ್ಕೆ ಪ್ರಭುಸ್ವಾಮಿಗಳು ಬಂದರೆಂದು ಸಂತೋಷದಿಂದ ಹಾಡಿದ ವಚನ.

೨೧೪. ಅಂಗವಳಿದು ನಿಂದವನೆಂದು ನಾನರಿಯೆ. ಆವ ವೇಷದಲ್ಲಿ ನಿಂದ ಠಾವ ನರಿಯೆ. ಕ್ರೋಧವೆಂಬ ಸಂಸಾರ ಸಾಗರದಲ್ಲಿ ಸಾಧನೆಯ ಮಾಡಲಾಗಿ ಪ್ರಭುದೇವರ ಸುಳುಹು ಅಘಟಿತವಾಯಿತ್ತು ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೨೧೫. ಅಯ್ಯ ಅಯ್ಯ ನೀವು ಬಾರದಿದ್ದರೆ ಅಂತು ಹಂಬಲಿಸುತ್ತಿದ್ದೆ. ನೀನೆನ್ನ ಹಂಬಲವ ಕೇಳಿ ಕರುಣದಿಂದ ಭೋರನೆ ಬಂದರೆ ಆನು ತಳವೆಳಗಾಗಿ ಅವಗುಣವೆಂಬ ರಜವ ಕಳೆದು ಕಂಬಳಿಯಲ್ಲಿ ಪೀಠವನೊಲ್ಲದೆ ಹೃದಯ ಪೀಠವನಿಕ್ಕಿ ಮೇಲುಪ್ಪರಿಗೆಯ ಪೊರತೆಯ ತಂದು ಪಾದಾರ್ಚನೆಯ ಮಾಡಿ ಎರಡೆಸಳ ಕಮಲವ ನೆರೆದು ಪಾದಕ್ಕೆ ಪೂಜಿಸಿ ಕಂಗಳ ತಿರುಳ ತೆಗೆದು ಆರತಿಯನೆತ್ತಿ ಬಸಿರ ನುಂಗಿದ ಪರಿಮಳವ ಧೂಪವ ಬೀಸಿ ನೆತ್ತಿಯ ಪರಿಯಾಣದೊಳಿಟ್ಟು ಬೋನವ ಗಡಣಿಸಿದರೆ ಸುಯಿಧಾನ ಸವಿಯದೆ ಆರೋಗಣೆಯ ಮಾಡಿ ಉಂಡ ಬಾಯ ತೊಳೆವರೆ ಸಂದೇಹವಾದುದೆಂಬ ಮೇಲು ಸೆರಗಿನೊಳು ತೊಡೆದು ಕೊಂಡು ಬಾಯ ಮುಚ್ಚಳ ತೆಗೆಯದೆ ತ್ರಿಕರಣವೆಂಬ ತಾಂಬೂಲವನವಧರಿಸಿದ ಭಾವದ ಕನ್ನಡವ ಹರಿದು ಹಾಯಿಕಿದ ಆತನ ಪಾದಕ್ಕೆ ಶರಣೆಂದು ಪಾದೋದಕ ಕೊಂಡೆ. ಪ್ರಸಾದಕ್ಕೆನ್ನ ಸೆರಗ ಹಾಸಿ ಆರೋಗಿಸಿ ಸುಖಿಯಾದೆನು ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮ ಶರಣರ ಪ್ರಭುದೇವರ ಕರುಣವೆನಗೆ ಸಾಧ್ಯವಾದ ಪರಿಯನೇನೆಂದು ಉಪಮಿಸುವೆನು?

೨೧೬. ಆದಿಯಿಂದ ನಿಮ್ಮಿಂದಲಾದೆನಯ್ಯ. ಆದಿಯಲ್ಲಿ ನಿಮ್ಮಲ್ಲಿ ತದ್ಗತನಾಗಿ ಇದ್ದೆನಯ್ಯ. ನಿಮ್ಮ ಹಸ್ತ ಮುಟ್ಟಿದಲ್ಲಿ ನಿಮ್ಮ ನೆನೆವ ಮನದೊಳಗಿಟ್ಟು ಕೊಂಡಿದ್ದೆನಯ್ಯ. ಕಾಯಕವೆಂಬ ಕಪಟವನೊಡ್ಡಿ ನಿನ್ನ ಮರೆಸಿಕೊಂಡಿದ್ದರೆ ನಿನ್ನ ಬೆಂಬಳಿಯ ಸಂದು ನಿಮ್ಮ ಕಂಡೆನಯ್ಯ. ಕಪಿಲ ಸಿದ್ಧ ಮಲ್ಲಿನಾಥಯ್ಯ ನೀನೆನ್ನ ಮನವ ತಿಳಿದಡೆ ಅಸಾಧ್ಯ ಉಂಟೆ ದೇವರದೇವಾ?

೨೧೭. ಕಂಡ ಕನಸು ದಿಟವಾಗಿ ಕಂಡೆನೆಂಬೆ. ಕಂಡೆನೆಂಬುದು ಬೆನ್ನ ಬಿಡದು. ಕಂಡುದುದ ಕಾಣೆನೆಂಬುದ ಎರಡನು ಅರಿಯದೆ ತವಕ

ತಲ್ಲಣಕ್ಕೆ ಎಡೆಯಾದೆನು. ತವಕದ ಕೂಟ ನಿಮ್ಮಲ್ಲಿ ತದ್ಗತವಾದೆನು ಕಪಿಲಸಿದ್ಧ ಮಲ್ಲಿನಾಥಯ್ಯ ನಿಮ್ಮ ಕರುಣವೆನಗೆ ಸಾಧ್ಯವಾಯಿತ್ತು.

೨೦೮. ಕೊಡುವ ತವಕವೆ ನಿಮ್ಮಲ್ಲಿ ನಿಕೂಪನಾಗಿದ್ದಲ್ಲಿ ಕೂಪೆ ನೋಡಯ್ಯ. ನೀನೊಲ್ಲದಿದ್ದರೆ ಒಲ್ಲೆನಯ್ಯ. ಎನ್ನರಿವು ಮರವೆ ಇಬ್ಬರಿಗೂ ಸಮ ನೋಡಯ್ಯ. ಎನ್ನ ಬಯಕೆಯೊಳಗಣ ಬಯಕೆಯು ನಿಧಾನವು ನೀನೆಂದು ಕಂಡಬಳಿಕ ಬಯಸುವಾತ ನೀನೆ ಕಾಣಾ ಕಪಿಲಸಿದ್ಧ ಮಲ್ಲಿನಾಥಯ್ಯ,

೨೦೯ ಅಣುವಿನೊಳಗಣ ಅಣುವಾಗಿಪ್ಪಿರಿ ಎಲೆ ದೇವಾ. ನೀವು ಮನದೊಳಗೆ ಘನವಾಗಿಪ್ಪಿರಲೆದೇವಾ. ಜಗದೊಳಗೆಲ್ಲವು ನೀವಿಲ್ಲದೆಡೆಯುಂಟೆ? ಎಂಬತ್ತುನಾಲ್ಕು ಲಕ್ಷ ಶಿವಾಲಯಂಗಳ ಮಾಡಿ ನೀವು ಒಮ್ಮನದೊಳಗಿಪ್ಪುವ ಕಂಡು ನಾನು ಮಾಡಿದೆನಲ್ಲದೆ ಕಪಿಲಸಿದ್ಧ ಮಲ್ಲಯ್ಯ ಎನಗೆ ಬೇರೆ ಸ್ವತಂತ್ರವಿಲ್ಲವರಿಯೆನು.

೨೧೦. ಸಕಲ ಲಿಂಗವ ಹಿಡಿದು ಅಗಲದೆ ನಡೆ ಎಂದಿರಾಗಿ ನಡೆವುತ್ತಿರ್ದೆನು. ಲಿಂಗ ಪ್ರತಿಷ್ಠೆಯ ಮಾಡೆಂದು ಎನಗೆ ನಿರೂಪಿಸುತ್ತಿರ್ದ ಕಾರಣ ಮಾಡುತ್ತಿರ್ದೆನಲ್ಲದೆ ಎನಗೆ ಬೇರೆ ಸ್ವತಂತ್ರ ಉಂಟೆ? ಹಿಂದೆ ನೀವು ಕೊಟ್ಟ ನಿರೂಪು ಹುಸಿಯಾದರೆ ಇನ್ನುಮುಂದೆ ಸ್ವಯವಪ್ಪಂತೆ ನಡಿಸಾ ಕಪಿಲಸಿದ್ಧ ಮಲ್ಲಿನಾಥಯ್ಯ.

೨೧೧. ಕೃಷಿಯ ಮಾಡಿ ಉಣ್ಣದೆ ಹಸಿವು ಹರವ ಇನ್ನೆಂತೊ. ಕರ್ಮಯೋಗವ ಮಾಡದೆ ನಿರ್ಮಲಸುಚಿತ್ತವನರಿವ ಪರಿ ಇನ್ನೆಂತೊ. ಬೇಯದ ಅಶನವನುಂಬ ಠಾವಾವುದು ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗಕ್ಕೆ

೨೧೨. ಕೈಯ್ಯಲ್ಲಿ ಹಿಡಿದು ಕೊಂಬುದು ಕರ್ಮ ಪೂಜೆಯಲ್ಲವೆ? ಮನದಲ್ಲಿ ಮಾಡುವುದೆಲ್ಲವು ಕಾಯದ ಕರ್ಮವಲ್ಲವೆ? ಭಾವ ಶುದ್ಧವನರಿವ ಪರಿ ಇನ್ನಾವುದು ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೧೩. ಬಣ್ಣವಿಲ್ಲದ ಚಿನ್ನ ನಾನು ಕರ್ಮನಾದ ಪರಿ ಇನ್ನೆಂತಯ್ಯ. ಹೂವಣಿಗೆ ವಾಸನೆ ಮೂಡಿದ ಠಾವಿನಲ್ಲಿ ವಾಸನೆ ನಿಂದ ದಿಲ್ಲವೆ ಅಯ್ಯ? ಕ್ರಿಯೆ ಶುದ್ಧವಾದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವು ಭಾವಶುದ್ಧವಾಗಿಪ್ಪನು.

೨೧೪. ನುಡಿವೆಹೆನೆಂಬೆ. ಉಲುಹಿನ ಗಲಬೆಯು ತೋಟಿ ಬಿಡದು. ಉತ್ತಮ ಮಧ್ಯಮ ಕನಿಷ್ಠ ತಿರುಗಿ ಕಾಡಿಹೆನೆಂಬ ಕಾಲನ ಎಡೆಯಾಟ ಬಿಡದು. ಎನಗೆ ಗರ್ವ ಮೊದಲಾದಲ್ಲಿ ಕರ್ಮ ಹೆಗ್ಗಳವಾಯಿತ್ತು. ಉಭಯದ ತೋಟಿಯ ನಾ ಇನ್ನಾರಿಗೆ ಹೇಳುವೆ ಕಪಿಲಸಿದ್ಧಮಲ್ಲಿಕಾರ್ಜುನಾ?

೨೧೫. ಭೂಮಿ ಒಂದೆಂದಡೆಂಬ ವಚನವವೆ. ಹಿಂದೆ ಕಾಯ ಸೋಕಿಯರತಲ್ಲದೆ ಹೆಣ್ಣಿನರಸ ಚಿನ್ನದೋರದು ಕಾಯಕರ್ಮವ ಮಾಡಿ ಜೀವ ಜ್ಞಾನವನರಿದು ತ್ರಿವಿಧಭಾವ ಶುದ್ಧವಾಗಿಯಲ್ಲದೆ ಮೇಲೆ ಕಾಣಲಿಲ್ಲ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ.

೨೧೬. ಆನೇನು ಮಾಡುವದೆಲ್ಲವನು ನೀನೆ ಅಲ್ಲನೆಂದರೆ ಅದು ಮಾಣಲಿ. ನಿಮ್ಮಾಣತಿ. ಕಾಣಬಾರದ ಘನವ ಕಾಯದಲ್ಲಿ ಧರಿಸಿ ಹೇಳಬಾರದ ನಿಜವ ಮನದಲ್ಲ ನೆಲೆಗೊಳಿಸಿ ತೋರಬಾರದ ಘನವ ಕಾಯದಲ್ಲಿ ಧರಿಸಿ ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ ತೋರಬಾರದ ಕುರುಹ ಎನ್ನ ಅರಿವಿನಲ್ಲಿರಿಸಿ ಇನ್ನು ನಿಮ್ಮ ಕಾಂಬಂತೆ ಮಾಡಾ ಕಪಿಲಸಿದ್ಧಮಲ್ಲಿನಾಥಯ್ಯ.

ಪರಬ್ರಹ್ಮನೆಂಬುದು ಕಲ್ಪಿಸಿ ಹೇಳಬಾರದು. ಕಲ್ಪಿಸಿ ತೋರಬಾರದೆಂದು ಪ್ರಭುದೇವರು ನಿರೂಪಿಸಲು ಆದಕ್ಕೆ ಸಿದ್ಧರಾಮಯ್ಯ ದೇವರ ಬಿನ್ನಹ.

೨೧೭. ಬೆರಿಸಿ ಬೆಚ್ಚಾತನ ಕಂಡೆನಯ್ಯ. ಆತನ ಬಟ್ಟೆಯು ಕಾಣೆ ನೋಡಯ್ಯ. ಶರೀರವಿಡಿದಿಪ್ಪ ಶತಕೋಟಿ ಜೀವಂಗಳ ಭೇದವನರಿಯನು. ನಿಮ್ಮ ನಾನೆತ್ತ ಬಲ್ಲೆನಯ್ಯ? ನೀವು ಮಾಡಿದ ಬೆಂಬಳಿಯಲ್ಲಿ ಹೊರಗಾಣದಿಪ್ಪೆನಲ್ಲದೆ ನಾ ಬೇರೆ ಕಾಂಬುದು ಹುಸಿ ನೀ ತೋರಯ್ಯ ಎನಗೆ ಕಪಿಲಸಿದ್ಧಮಲ್ಲಿನಾಥಯ್ಯ.

೨೧೮. ಉಪಮೆ ಅನುಪಮೆ ಎಂಬುದು ನಿಮ್ಮಾಧೀನ ಕಂಡಯ್ಯ. ಹೇಳಿ ಕೇಳಿಹೆನೆಂಬುದು ನೀವು ಕಂಡಯ್ಯ. ಎನ್ನಂತರಂಗಕ್ಕೆ ಬಹಿರಂಗಕ್ಕೆ ನೀವೇ ಕರ್ತರಾದ ಕಾರಣ ನಿಮ್ಮ ನಿಜವ ಹೇಳದಿರ್ದಡೆ ಎಂತು ಹೇಳುವೆನಯ್ಯ ಕಪಿಲಸಿದ್ಧಮಲ್ಲಿನಾಥಯ್ಯ.

# ಶಿವಾನುಭವ.

( ದ್ವೈಮಾಸಿಕವು )



ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಏ. ಎಲ್. ಎಲ್. ಬಿ.

**ವಿಜಾಪುರ.**


ಸಂಪುಟ ೬ ಸಂಚಿಕೆ ೫

ಡಿಶಂಬರ

೧೯೩೧

# ವಿಷಯಾನುಕ್ರಮಣಿಕೆ.



---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೬] ಡಿಶಂಬರ ೧೯೩೧ [ಸಂಚಿಕೆ ೫

## ಷಟ್‌ಸ್ಥಲ ಮಹಿಮೆ.

(ಲೇಖಕಃ— ಶ್ರೀ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ.)

ಅಷ್ಟಾವರಣ ಸಮಾಯುಕ್ತೋ ಪಂಚಾಚಾರಪರಾಯಣಃ।
ಸದಾಚಾರ ಸಮಾಯುಕ್ತಃ ಷಟ್‌ಸ್ಥಲ ಜ್ಞಾನಮರ್ಹತಿ॥

ವೀರಶೈವ ಮತ ತತ್ವಗಳು ಪ್ರಾಮುಖ್ಯವಾಗಿ ಷಟ್‌ಸ್ಥಲಗಳಲ್ಲಿ ಪ್ರತಿಪಾದಿತವಾಗಿವೆ. ಸೊಲ್ಲಾಪುರದ ಸಿದ್ಧರಾಮ ಶಿವಯೋಗಿಗಳ ವೊಮ್ಮಕ್ಕಳಾದ ಶಿವಾಚಾರ್ಯರೆಂಬವರು ಈ ಷಟ್‌ಸ್ಥಲಗಳನ್ನು ಅಂಗಸ್ಥಳ ಹಾಗೂ ಲಿಂಗಸ್ಥಳವೆಂದು ೨ ಮುಖ್ಯಭಾಗಮಾಡಿ ಒಟ್ಟು ೧೦೧ ಸ್ಥಳಗಳಿಂದ ವೀರಶೈವ ಮತಸಿದ್ಧಾಂತವನ್ನು ತಮ್ಮ 'ವೀರಶೈವ ಸಿದ್ಧಾಂತ ಶಿಖಾಮಣಿ' ಎಂಬ ಅಪೂರ್ವವಾದ ಸಂಸ್ಕೃತ ಗ್ರಂಥದಲ್ಲಿ ಸವಿಸ್ತಾರವಾಗಿ ವಿವೇಚಿಸಿದ್ದಾರೆ. ಆ ಗ್ರಂಥಕ್ಕೆ ಮೈಸೂರ ಆಸ್ಥಾನ ವಿದ್ವಾನರಾಗಿದ್ದ ಎನ್. ಆರ್. ಕರಿಬಸವಶಾಸ್ತ್ರಿಗಳವರು ಕನ್ನಡದಲ್ಲಿ ಟೀಕೆಯನ್ನು ಬರೆದಿರುವರು. ವಿಜಾಪುರದ ರಾವಸಾಹೇಬ ಪಿ. ಜಿ, ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಕೀಲರು ಅನೇಕ ಶಿವಶರಣರ ವಚನಗಳನ್ನು ಸಂಗ್ರಹಿಸಿ ಷಟ್‌ಸ್ಥಲಗಳಿಗೆ ಅನುರೂಪವಾಗಿ ತಮ್ಮ 'ವಚನಶಾಸ್ತ್ರಸಾರ' ವೆಂಬ ಉದ್ಗ್ರಂಥದಲ್ಲಿ ಕ್ರಮಗೊಳಿಸಿರುವರು. ಶಿವಾಗಮಗಳಲ್ಲಿ ವೀರಶೈವ ಮತವು ಪ್ರತಿಪಾದಿತವಾಗಿದ್ದರೂ ಶಿವಶರಣರ ಷಟಸ್ಥಲ ವಚನಗಳೇ ವೀರಶೈವ ಮತಕ್ಕೆ ಮೂಲಾಧಾರಗಳು. ಶಿವಶರಣರ ವಚನಗಳನ್ನೇ ಕ್ರೋಡೀಕರಿಸಿ ಶ್ರೀ ಶಿವಾಚಾರ್ಯರು 'ವೀರಶೈವ ಸಿದ್ಧಾಂತ ಶಿಖಾಮಣಿ' ಎಂಬೀ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿರುವಂತೆ ಕಾಣುತ್ತದೆ.

ಶ್ರೀ. ಚನ್ನಬಸವಣ್ಣನವರಿಗೆ ಷಟ್‌ಸ್ಥಲಜ್ಞಾನಿಯೆಂಬ ಸಂಜ್ಞೆಯಿರು ವದರಿಂದ ಷಟ್‌ಸ್ಥಲ ಶಾಸ್ತ್ರದ ಪುರಸ್ಕರ್ತರು ಅವರೇ ಇರಬಹುದೆಂದು ಭಾಸವಾಗುತ್ತದೆ. 'ವೀರಶೈವ ಸಿದ್ಧಾಂತ ಶಿಖಾಮಣಿ' ಯಾಗಲಿ 'ವಚ ಶಾಸ್ತ್ರಸಾರ' ವಾಗಲಿ ಸಾಮಾನ್ಯ ಜನರಿಗೆ ಬಹು ಕಠಿಣಗ್ರಂಥಗಳಾಗಿವೆ. ಸಾಮಾನ್ಯರಿಗೂ ಷಟ್‌ಸ್ಥಲಗಳ ಜ್ಞಾನವಾಗಬೇಕೆಂಬ ಉದ್ದೇಶದಿಂದ ಈ ಅಲ್ಪ ಪ್ರಯತ್ನವನ್ನು ಮಾಡಿದ್ದಾಗಿದೆ.

ಷಟಸ್ಥಲ ಜ್ಞಾನವನ್ನು ಪಡೆಯಬೇಕೆಂಬ ಅಭಿಲಾಷೆಯುಳ್ಳ ಮನು ಷ್ಯನು ಮೊದಲು ಅಷ್ಟಾವರಣ ಪಂಚಾಚಾರಗಳ ಮಹತ್ವವನ್ನರಿತು ಆಚ ರಿಸಿದ ಬಳಿಕ ಷಟಸ್ಥಲ ಜ್ಞಾನವನ್ನು ಹೊಂದಲು ಅರ್ಹನಾಗುತ್ತಾನೆ. 'ವೇದದಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಹೇಳಿದೆ. ಅಥಃ ಮೇಲೆ ಅಂದರೆ ಮನುಷ್ಯನಲ್ಲಿ ಧರ್ಮಲಕ್ಷಣಗಳು ಕಂಡು ಬಂದ ಮೇಲೆ ಅವನಿಗೆ ಪರಬ್ರಹ್ಮ ಸಂಬಂಧವಾದ ಜ್ಞಾನವನ್ನರುಹಬೇಕೆಂಬರ್ಥ. ಧರ್ಮ ಲಕ್ಷಣಗಳಾವು? 'ಧೃತಿ ಕ್ಷಮಾ ದಮೋ ಸ್ತೇಯಂ ಶೌಚ ಮಿಂದ್ರಿಯ ನಿಗ್ರಹಃ'। ಧೀರ್ವಿದ್ಯಾ ಸತ್ಯಮಕ್ರೋಧಂ ದಶಕಂ ಧರ್ಮಲಕ್ಷಣಂ॥ ಎಂದು ಹೇಳಿದೆ. ಇದರಂತೆ ಅಷ್ಟಾವರಣ ಪಂಚಾಚಾರಗಳಲ್ಲಿ ಹೇಳಿದ ಸದಾಚಾರ ಸದ್ಗುಣಗಳು ನಮ್ಮಲ್ಲುಂಟಾದರೆ ಷಟಸ್ಥಲ ಮಾರ್ಗದಲ್ಲಿ ಪ್ರವೇಶಿಸಲಿಕ್ಕೆ ಸಮರ್ಥರಾಗುತ್ತೇವೆ. ಆದುದರಿಂದಲೇ ಅಷ್ಟಾವರಣ ಪಂಚಾಚಾರ ಷಟಸ್ಥಲಗಳೆಂದು ನಮ್ಮ ಆರ್ಯರು ಒಂದರಹಿಂದೊಂದು ಅನುಕ್ರಮಗೊಳಿಸಿರುವರು.

## ಭಕ್ತಸ್ಥಲ.

ವಾ. ಷ॥ ತನುವ ಬಳಲಿಸಿ ತಾನು ಪರಿಶುದ್ಧ ಕಾಯಕದಿ।
ಧನಧಾನ್ಯಮಂ ಗಳಿಸಿ ಗುರುಲಿಂಗ ಜಂಗಮಕೆ।
ಅನುರಾಗದಿಂ ಪರಮ ದಾಸೋಹಮಂ ಗೆಯ್ವೊಡಾತನೇ ಸದ್ಭ ಕ್ತನು॥

ವಿನುತ ಶ್ರೀ ಶಿವಶರಣ ಭಕ್ತತಾರಾಗಣದಿ।
ಮಿನುಗುತಿಹ ಚಂದ್ರಮ ನೊಲೊಪ್ಪುವಾ ಪರಭಕ್ತ।
ಬಿನದಿಂದ ಶ್ರೀ ಚನ್ನಬಸವೇಶನೆನ್ನೆದೆಯ ತೊಟ್ಟಿಲದಿ ನಲಿದಾ ಡೆಲೈ॥

ಷಟ್‌ಸ್ಥಲಜ್ಞಾನವೆಂದರೆ ಶಿವಜೀವೈಕ್ಯಜ್ಞಾನ ಅಥವಾ ಲಿಂಗಾಂಗೈಕ್ಯಜ್ಞಾನ. ಅಂಗವು ತನ್ನ ಗುಣಗಳನ್ನು ಹಿಂಗಿ ಲಿಂಗದಲ್ಲಿ ಬೆರೆಯುಬೇಕಾದರೆ ೬ ಸೋಪಾನಗಳನ್ನು ನಮ್ಮ ಪೂರ್ವಜರು ಕಲ್ಪಿಸಿದ್ದಾರೆ. ಅವು ಯಾವವೆಂದರೆ (೧) ಭಕ್ತ (೨) ಮಹೇಶ (೩) ಪ್ರಸಾದಿ (೪) ಪ್ರಾಣಲಿಂಗಿ (೫) ಶರಣ (೬) ಐಕ್ಯ. ಇವುಗಳಲ್ಲಿ ಭಕ್ತಸ್ಥಲವು ಮೊದಲನೆಯದು. 'ಭಕ್ತ' ನೆಂದರೆ ಭಕ್ತಿಯುಳ್ಳವನೆಂದು ಸಹಜವಾದ ಅರ್ಥವಾಗುತ್ತದೆ. ಆದರೆ ಭಕ್ತಸ್ಥಲದ ಲಕ್ಷಣದಲ್ಲಿ ಭಕ್ತಿಯೇ ಅಸಾಧಾರಣಧರ್ಮವೆಂದು ಪರಿಗಣಿಸಲ್ಪಟ್ಟಿಲ್ಲ. ಮಹಾ ಶಿವಶರಣರ ವಚನಗಳ ಮೇಲಿಂದ ವಿಶ್ವಾಸವೇ ಭಕ್ತಸ್ಥಲದ ಮುಖ್ಯಾಂಗವಾಗಿರುವದೆಂದು ತಿಳಿಯುಬರುತ್ತದೆ. ಶ್ರೀ ಪ್ರಭುದೇವರು ಹೇಳಿರುವುದೇನೆಂದರೆ "ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನೈಷ್ಠೆಯಿಂ ಮಹೇಶ್ವರನಾಗಿ, ಆ ನೈಷ್ಠೆಯೊಳಗಣ ಸಾವಧಾನದಿಂದ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭವದೊಳಗಣ ಅರುವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸ ಭಾವವನೈದಿದ ನಿರ್ಭಾವ ಪದದೊಳು ನಿಂದ ಭೇದವೇ ಐಕ್ಯಸ್ಥಲ ಕಾಣಾ ಗುಹೇಶ್ವರಾ." ಇದರ ಮೇಲಿಂದ ವಿಶ್ವಾಸವು ಭಕ್ತನ ಮುಖ್ಯ ಲಕ್ಷಣವೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಭಕ್ತಿಯು ಎಲ್ಲ ಸ್ಥಳಗಳಿಗೂ ಸಾಮಾನ್ಯ ಧರ್ಮವು. ಭಕ್ತಸ್ಥಲಕ್ಕೇನೇ ಅದನ್ನು ಸಂಪೂರ್ಣವಾಗಿ ಧಾರೆಯೆರೆದು ಬಿಡುವದನುಚಿತವು. 'ಭಕ್ತ' ಈ ಶಬ್ದವು 'ಭಜ' ಧಾತುವಿನಿಂದ ಹುಟ್ಟಿರುತ್ತದೆ. 'ಭಜ' ಇದಕ್ಕೆ ಆಶ್ರಯಿಸು ಅಥವಾ ಭಜಿಸು ಎಂಬರ್ಥ. ಜೀವಾತ್ಮನು ಪರಮಾತ್ಮನನ್ನು ಅರ್ಥಾತ್ ಅಂಗವು ಲಿಂಗವನ್ನಾಶ್ರಯಿಸಬೇಕಾದರೆ ಅಥವಾ ಭಜಿಸಬೇಕಾದರೆ ಪರಮಾತ್ಮನಲ್ಲಿ ಅರ್ಥಾತ್ ಲಿಂಗದಲ್ಲಿ ಮೊದಲು ವಿಶ್ವಾಸವಿರಬೇಕು. ವಿಶ್ವಾಸದಿಂದಲೇ ಆಸ್ತಿಕ ಬುದ್ಧಿ ಉದಯಿಸುತ್ತದೆ. ಆದರೆ ಅವಿಶ್ವಾಸದಿಂದ ನಾಸ್ತಿಕತೆಯುಂಟಾಗುತ್ತದೆ. ಆದುದರಿಂದ ವಿಶ್ವಾಸವೇ ಆಸ್ತಿಕ ಧರ್ಮದ ಮೂಲಾಧಾರವು. ಯಾವದಾದರೊಂದು ವಸ್ತುವಿನ ಮಹತ್ವ ತಿಳಿಯದ ಹೊರತು ಅದರಲ್ಲಿ ನಮಗೆ ವಿಶ್ವಾಸ ಹುಟ್ಟುವದಿಲ್ಲ. ಆದರೆ ವಿಶ್ವಾಸವಿಲ್ಲದಿದ್ದರೆ ಆ ವಸ್ತುವಿನ ಮಹತ್ವವೂ ತಿಳಿಯುವದಿಲ್ಲ. ಆದರೆ ಭಕ್ತಸ್ಥಲದವನಿಗೆ ಪರಮಾತ್ಮನ ಮಹತ್ವವನ್ನು ಸ್ವಾನುಭವದಿಂದರಿತುಕೊಳ್ಳುವದು ಅಸಂಭವವು. ಆತನು ಸ್ವಾನುಭವಿ

ಶ್ರೀ. ಚನ್ನಬಸವಣ್ಣನವರಿಗೆ ಷಟ್‌ಸ್ಥಲಜ್ಞಾನಿಯೆಂಬ ಸಂಜ್ಞೆಯಿರುವದರಿಂದ ಷಟ್‌ಸ್ಥಲ ಶಾಸ್ತ್ರದ ಪುರಸ್ಕರ್ತರು ಅವರೇ ಇರಬಹುದೆಂದು ಭಾಸವಾಗುತ್ತದೆ. 'ವೀರಶೈವ ಸಿದ್ಧಾಂತ ಶಿಖಾಮಣಿ' ಯಾಗಲಿ 'ವಚಶಾಸ್ತ್ರಸಾರ' ವಾಗಲಿ ಸಾಮಾನ್ಯ ಜನರಿಗೆ ಬಹು ಕಠಿಣಗ್ರಂಥಗಳಾಗಿವೆ. ಸಾಮಾನ್ಯರಿಗೂ ಷಟ್‌ಸ್ಥಲಗಳ ಜ್ಞಾನವಾಗಬೇಕೆಂಬ ಉದ್ದೇಶದಿಂದ ಈ ಅಲ್ಪ ಪ್ರಯತ್ನವನ್ನು ಮಾಡಿದ್ದಾಗಿದೆ.

ಷಟಸ್ಥಲ ಜ್ಞಾನವನ್ನು ಪಡೆಯಬೇಕೆಂಬ ಅಭಿಲಾಷೆಯುಳ್ಳ ಮನುಷ್ಯನು ಮೊದಲು ಅಷ್ಟಾವರಣ ಪಂಚಾಚಾರಗಳ ಮಹತ್ವವನ್ನರಿತು ಆಚರಿಸಿದ ಬಳಿಕ ಷಟಸ್ಥಲ ಜ್ಞಾನವನ್ನು ಹೊಂದಲು ಅರ್ಹನಾಗುತ್ತಾನೆ. 'ವೇದದಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಹೇಳಿದೆ. ಅಥಾ ಮೇಲೆ ಅಂದರೆ ಮನುಷ್ಯನಲ್ಲಿ ಧರ್ಮಲಕ್ಷಣಗಳು ಕಂಡು ಬಂದ ಮೇಲೆ ಅವನಿಗೆ ಪರಬ್ರಹ್ಮ ಸಂಬಂಧವಾದ ಜ್ಞಾನವನ್ನರುಹಬೇಕೆಂಬರ್ಥ. ಧರ್ಮಲಕ್ಷಣಗಳಾವು? 'ಧೃತಿ ಕ್ಷಮಾ ದಮೋ ಸ್ತೇಯಂ ಶೌಚ ಮಿಂದ್ರಿಯ ನಿಗ್ರಹಃ'। ಧೀರ್ವಿದ್ಯಾ ಸತ್ಯಮಕ್ರೋಧಂ ದಶಕಂ ಧರ್ಮಲಕ್ಷಣಂ॥ ಎಂದು ಹೇಳಿದೆ. ಇದರಂತೆ ಅಷ್ಟಾವರಣ ಪಂಚಾಚಾರಗಳಲ್ಲಿ ಹೇಳಿದ ಸದಾಚಾರ ಸದ್ಗುಣಗಳು ನಮ್ಮಲ್ಲುಂಟಾದರೆ ಷಟಸ್ಥಲ ಮಾರ್ಗದಲ್ಲಿ ಪ್ರವೇಶಿಸಲಿಕ್ಕೆ ಸಮರ್ಥರಾಗುತ್ತೇವೆ. ಆದುದರಿಂದಲೇ ಅಷ್ಟಾವರಣ ಪಂಚಾಚಾರ ಷಟಸ್ಥಲಗಳೆಂದು ನಮ್ಮ ಆರ್ಯರು ಒಂದರಹಿಂದೊಂದು ಅನುಕ್ರಮಗೊಳಿಸಿರುವರು.

## ಭಕ್ತಸ್ಥಲ.

ಮಾ. ಷ॥ ತನುವ ಬಳಲಿಸಿ ತಾನು ಪರಿಶುದ್ಧ ಕಾಯಕದಿ।
ಧನಧಾನ್ಯಮಂ ಗಳಿಸಿ ಗುರುಲಿಂಗ ಜಂಗಮಕೆ।
ಅನುರಾಗದಿಂ ಪರಮ ದಾಸೋಹಮಂ ಗೆಯ್ವೊಡಾತನೇ ಸದ್ಭಕ್ತನು॥
ವಿನುತ ಶ್ರೀ ಶಿವಶರಣ ಭಕ್ತತಾರಾಗಣದಿ।
ಮಿನುಗುತಿಹ ಚಂದ್ರಮ ನೊಲೊಪ್ಪುವಾ ಪರಭಕ್ತ।
ಬಿನದಿಂದ ಶ್ರೀ ಚನ್ನಬಸವೇಶನೆನ್ನೆದೆಯ ತೊಟ್ಟಿಲದಿ ನಲಿದಾಡೆಲೈ॥

ಷಟ್‌ಸ್ಥಲಜ್ಞಾನವೆಂದರೆ ಶಿವಜೀವೈಕ್ಯಜ್ಞಾನ ಅಥವಾ ಲಿಂಗಾಂಗೈಕ್ಯಜ್ಞಾನ. ಅಂಗವು ತನ್ನ ಗುಣಗಳನ್ನು ಹಿಂಗಿ ಲಿಂಗದಲ್ಲಿ ಬೆರೆಯಬೇಕಾದರೆ ೬ ಸೋಪಾನಗಳನ್ನು ನಮ್ಮ ಪೂರ್ವಜರು ಕಲ್ಪಿಸಿದ್ದಾರೆ. ಅವು ಯಾವವೆಂದರೆ (೧) ಭಕ್ತ (೨) ಮಹೇಶ (೩) ಪ್ರಸಾದಿ (೪) ಪ್ರಾಣಲಿಂಗಿ (೫) ಶರಣ (೬) ಐಕ್ಯ. ಇವುಗಳಲ್ಲಿ ಭಕ್ತಸ್ಥಲವು ಮೊದಲನೆಯದು. 'ಭಕ್ತ' ನೆಂದರೆ ಭಕ್ತಿಯುಳ್ಳವನೆಂದು ಸಹಜವಾದ ಅರ್ಥವಾಗುತ್ತದೆ. ಆದರೆ ಭಕ್ತಸ್ಥಲದ ಲಕ್ಷಣದಲ್ಲಿ ಭಕ್ತಿಯೇ ಅಸಾಧಾರಣಧರ್ಮವೆಂದು ಪರಿಗಣಿಸಲ್ಪಟ್ಟಿಲ್ಲ. ಮಹಾ ಶಿವಶರಣರ ವಚನಗಳ ಮೇಲಿಂದ ವಿಶ್ವಾಸವೇ ಭಕ್ತಸ್ಥಲದ ಮುಖ್ಯಾಂಗವಾಗಿರುವದೆಂದು ತಿಳಿಯಬರುತ್ತದೆ. ಶ್ರೀ ಪ್ರಭುದೇವರು ಹೇಳಿರುವುದೇನಂದರೆ "ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನೈಷ್ಠೆಯಿಂ ಮಹೇಶ್ವರನಾಗಿ, ಆ ನೈಷ್ಠೆಯೊಳಗಣ ಸಾವಧಾನದಿಂದ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭವದೊಳಗಣ ಅರುವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸ ಭಾವವನ್ನೈದಿದ ನಿರ್ಭಾವ ಪದದೊಳು ನಿಂದ ಭೇದವೇ ಐಕ್ಯಸ್ಥಲ ಕಾಣಾ ಗುಹೇಶ್ವರಾ." ಇದರ ಮೇಲಿಂದ ವಿಶ್ವಾಸವು ಭಕ್ತನ ಮುಖ್ಯ ಲಕ್ಷಣವೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಭಕ್ತಿಯು ಎಲ್ಲ ಸ್ಥಳಗಳಿಗೂ ಸಾಮಾನ್ಯ ಧರ್ಮವು. ಭಕ್ತಸ್ಥಲಕ್ಕೇನೇ ಅದನ್ನು ಸಂಪೂರ್ಣವಾಗಿ ಧಾರೆಯೆರೆದು ಬಿಡುವದನುಚಿತವು. 'ಭಕ್ತ' ಈ ಶಬ್ದವು 'ಭಜ' ಧಾತುವಿನಿಂದ ಹುಟ್ಟಿರುತ್ತದೆ. 'ಭಜ' ಇದಕ್ಕೆ ಆಶ್ರಯಿಸು ಅಥವಾ ಭಜಿಸು ಎಂಬರ್ಥ. ಜೀವಾತ್ಮನು ಪರಮಾತ್ಮನನ್ನು ಅರ್ಥಾತ್ ಅಂಗವು ಲಿಂಗವನ್ನಾಶ್ರಯಿಸಬೇಕಾದರೆ ಅಥವಾ ಭಜಿಸಬೇಕಾದರೆ ಪರಮಾತ್ಮನಲ್ಲಿ ಅರ್ಥಾತ್ ಲಿಂಗದಲ್ಲಿ ಮೊದಲು ವಿಶ್ವಾಸವಿರಬೇಕು. ವಿಶ್ವಾಸದಿಂದಲೇ ಅಸ್ತಿಕ ಬುದ್ಧಿ ಉದಯಿಸುತ್ತದೆ. ಆದರೆ ಅವಿಶ್ವಾಸದಿಂದ ನಾಸ್ತಿಕತೆಯುಂಟಾಗುತ್ತದೆ. ಆದುದರಿಂದ ವಿಶ್ವಾಸವೇ ಅಸ್ತಿಕ ಧರ್ಮದ ಮೂಲಾಧಾರವು. ಯಾವದಾದರೊಂದು ವಸ್ತುವಿನ ಮಹತ್ವ ತಿಳಿಯದ ಹೊರತು ಅದರಲ್ಲಿ ನಮಗೆ ವಿಶ್ವಾಸ ಹುಟ್ಟುವದಿಲ್ಲ. ಆದರೆ ವಿಶ್ವಾಸವಿಲ್ಲದಿದ್ದರೆ ಆ ವಸ್ತುವಿನ ಮಹತ್ವವೂ ತಿಳಿಯುವದಿಲ್ಲ. ಆದರೆ ಭಕ್ತಸ್ಥಲದವನಿಗೆ ಪರಮಾತ್ಮನ ಮಹತ್ವವನ್ನು ಸ್ವಾನುಭವದಿಂದರಿತುಕೊಳ್ಳುವದು ಅಸಂಭವವು. ಆತನು ಸ್ವಾನುಭವಿ

ಗಳ ಉದಾಹರಣೆಯನ್ನು ಕಣ್ಣುಮುಂದಿಟ್ಟುಕೊಂಡು ಅವರ ಮಾತಿನ ಮೇಲೆ ವಿಶ್ವಾಸವಿಡಬೇಕು. ತರ್ಕದಿಂದಾಗಲಿ, ಬುದ್ಧಿಶಕ್ತಿಯಿಂದಾಗಲಿ, ಶ್ರವಣದಿಂದಾಗಲಿ ಪರಮಾತ್ಮಜ್ಞಾನವನ್ನರಿತುಕೊಳ್ಳುವದಸಾಧ್ಯವು. ಏಕೆಂದರೆ 'ನೈಷಾತರ್ಕೇಣ ಮತಿರಾಪನೇಯಾ ನಮೇಧಸಾ ನ ಬಹುಧಾಶ್ರುತೇನ' ಎಂಬ ಶ್ರುತಿವಾಕ್ಯವಿರುವದು.

ನಾವು ಒಂದು ಹೊಳೆಯನ್ನು ದಾಟಬೇಕಾಗಿರುವದೆಂದು ತಿಳಿಯುವಾ. ಅದು ಆಳವಾಗಿರುವದೋ ದಾಟಲಿಕ್ಕೆ ಬರುವದೋ ನಮಗೆ ಗೊತ್ತಿಲ್ಲ. ಅಗ್ಗೆ ಅದನ್ನು ಬಲ್ಲಂಥ ಜನರು ದಾಟಲಿಕ್ಕೆ ಬರುತ್ತದೆಂತಲೂ ಈ ಮೊದಲು ಎಷ್ಟೋ ಜನರು ದಾಟಿ ಹೋಗಿರುವರೆಂತಲೂ ನಮಗೆ ಹೇಳಿದರೆ ನಾವು ಅವರ ಮಾತಿನ ಮೇಲೆ ವಿಶ್ವಾಸ ವಿಡಲೇಬೇಕು. ಅಂದರೆ ನಾವು ಹೊಳೆಯನ್ನು ದಾಟಬಲ್ಲೆವು. ಅವರ ಮಾತಿನ ಮೇಲೆ ವಿಶ್ವಾಸವಿಲ್ಲದೆ ಸುಮ್ಮನೆ ಕುಳಿತುಬಿಟ್ಟರೆ ಅಲ್ಲಿಯೇ ಕಡೆತನಕ ಕೂಡ್ರಬೇಕಾಗುತ್ತದೆ. ಅದರಂತೆಯೇ ಹಿಂದಿನವರು ಆಚರಿಸಿ ಸದ್ಗತಿಹೊಂದಿದ್ದರ ಉದಾಹರಣೆಯ ಮೇಲೆ ವಿಶ್ವಾಸವಿಟ್ಟು ನಾವೂ ಮುಂದರಿದರೆ ನಮಗೂ ಸದ್ಗತಿಯಾಗುವದು. ಹಾಗೇಕೆ, ಹೀಗೇಕೆ, ಎಂದು ನಾವು ತರ್ಕ ವಿತರ್ಕ ಮಾಡುತ್ತ ಕುಳಿತರೆ ನಮ್ಮ ಆಧ್ಯಾತ್ಮಿಕ ಪ್ರಗತಿ ಎಂದಿಗೂ ಆಗಲಾರದು.

ಯಾವದನ್ನೂ ಸಾರಾಸಾರ ವಿಚಾರಿಸದೆ ಒಮ್ಮೆಲೆ ವಿಶ್ವಾಸ ವಿಡುವದು ಮೂಢ ನಂಬಿಗೆಯಲ್ಲವೇ? ಎಂದು ಕೆಲವರು ಆಕ್ಷೇಪಿಸಬಹುದು. ಯಾವ ವಿಚಾರಮಾಡದೆ 'ಗತಾನು ಗತಿಕೋ ಲೋಕಃ' ಅಂದರೆ ಎಲ್ಲರೂ ಮಾಡುವಂತೆ ನಾನೂ ಮಾಡುತ್ತೇನೆಂದು ಹೇಳುವದು ಮೂಢ ನಂಬಿಗೆಯು. ಆದರೆ ವಿಚಾರ ಮಾಡಿಯೂ ಕೂಡ ಆ ವಿಚಾರಕ್ಕೆ ಯಾವದು ನಿಲುಕದಂಥ ಪ್ರಸಂಗದಲ್ಲಿ ಆ ವಿಚಾರ ಬಲ್ಲಂಥವರ ಮಾತಿನ ಮೇಲೆ ವಿಶ್ವಾಸವಿಡುವದೇನೂ ಮೂಢ ನಂಬಿಗೆಯೆನಿಸುವದಿಲ್ಲ. ಆದುದರಿಂದ ವಿಶ್ವಾಸವೆಂದರೆ ಮೂಢ ನಂಬಿಗೆಯಲ್ಲ; ಬುದ್ಧಿಗೆ ಅಗೋಚರವಾದ ಅದ್ಭುತ ಸಾಮರ್ಥ್ಯವನ್ನೊಳಕೊಂಡಂಥ ಶ್ರದ್ಧೆಯು. ಉದಾಹರಣಾರ್ಥ ಒಬ್ಬ ರೋಗಿಗೆ ಎಷ್ಟೋ ವಿಚಾರಮಾಡಿದರೂ ಔಷಧದ ಬಗ್ಗೆ ತನಗೆ ಏನೂ ಗೊತ್ತಾಗದಿದ್ದ ಪಕ್ಷದಲ್ಲಿ ಅತನು ವೈದ್ಯರು ಹೇಳಿದ ಮಾತನ್ನೇ ಸಮರ್ಪಕವಾಗಿ ನಂಬಬೇಕಾಗುತ್ತದೆ. ಅದರ ಹೊರತು ಗತ್ಯಂತರವಿಲ್ಲ ಗತ್ಯಂತರವಿಲ್ಲವೆಂದು ತಿಳಿದು ಕಂಡ ಕಂಡ ವೈದ್ಯರಲ್ಲಿ ವಿಶ್ವಾಸವಿಡುತ್ತ ಹೋಗು

ವದೆಷ್ಟು ಅಪಾಯಕರವೋ ಅದರಂತೆಯೇ ಅನೇಕ ಧರ್ಮಗಳು ಅನೇಕ ವಿಧವಾಗಿ ಪಾರಮಾರ್ಥ ಮಾರ್ಗವನ್ನು ತೋರಿಸಿಕೊಡುತ್ತವೆಂದು ಕಂಡ ಕಂಡಂತೆ ವಿಶ್ವಾಸವಿಡುತ್ತ ಹೋದರೆ ಯಾವ ದಡಕ್ಕೂ ಮುಟ್ಟುವದಿಲ್ಲ. ಏನೇ ಆಗಲಿ, ಒಬ್ಬ ವೈದ್ಯನನ್ನು ನಂಬಿಕೊಂಡಿರುವದೆಷ್ಟು ಕ್ಷೇಮಕರವೋ ಹಾಗೆಯೇ ಒಂದೇ ಧರ್ಮವನ್ನು ನಂಬಿಕೊಂಡಿರುವದು ವಿಹಿತವು. ನಮ್ಮ ವೀರಶೈವ ಧರ್ಮವು ಲಿಂಗಾಂಗ ಸಾಮರಸ್ಯವನ್ನು ಪ್ರತಿಪಾದಿಸುತ್ತದೆ. ಅನೇಕ ಪುರಾತನರು ಇಷ್ಟಲಿಂಗವೇ ಪರದೈವವೆಂದು ನಂಬಿ ಸದ್ಗತಿ ಹೊಂದಿದ್ದಾರೆ. ವೀರಶೈವರು ಲಿಂಗದ ವಿಷಯದಲ್ಲಿ ಯಾವ ಭಿನ್ನಭಾವವನ್ನು ಕಲ್ಪಿಸದೆ ಪುರಾತನರು ನಡೆದವ್ದರ ಮೇಲೆ ವಿಶ್ವಾಸವಿಟ್ಟು ಅವರಂತೆಯೇ ಆಚರಿಸಿದರೆ ತಮಗೂ ಸದ್ಗತಿಯಾಗುವದೆಂಬದರಲ್ಲಿ ಸಂದೇಹವಿಲ್ಲ.

ವಿಶ್ವಾಸವನ್ನು ಒತ್ತಟ್ಟಿಗೆ ಶೇಖರಿಸುವದರಿಂದ ಹೆಚ್ಚು ಶಕ್ತಿ ಬರುತ್ತದೆ. ಬೇರೆ ಬೇರೆ ಎಳೆಗಳನ್ನು ಕೂಡಿಸಿ ಹೊಸೆದು ಹಗ್ಗವಮಾಡಿದರೆ ಅದರಿಂದ ದೊಡ್ಡ ಆನೆಯನ್ನು ಸಹ ಬಿಗಿದು ಕಟ್ಟುವಂಥ ಸಾಮರ್ಥ್ಯ ಬರುವದಿಲ್ಲವೇ? ಅದರಂತೆಯೇ ಲೋಕರೂಢಿಯಿಂದಾಗಲಿ, ಅಥವಾ ಮನೆಹಿರಿಯರ ಅಜ್ಞಾನದ ನಡುವಳಿಕೆಯಿಂದಾಗಲಿ ವೀರಶೈವರು ಗಣಪತಿ, ವೀರಭದ್ರ, ವೆಂಕಟರಮಣ, ಶಕ್ತಿ, ಹನುಮಂತ, ಸ್ಥಾವರಲಿಂಗ, ಬಸವಣ್ಣ, ಯಲ್ಲವ್ವ ಮುಂತಾದ ವಿಗ್ರಹಗಳಲ್ಲಿ ವಿಶ್ವಾಸವಿಟ್ಟು ಪೂಜಿಸುವದುಂಟು. ವಿಶ್ವಾಸದಿಂದ ಪೂಜಿಸುವದರಿಂದ ಆ ಪೂಜೆಗೆ ತಕ್ಕಂತೆ ಫಲವಾದರೂ ಬರುವದುಂಟು. ಆದರೆ ಆಯಾಯ ದೇವರುಗಳನ್ನು ಪೂಜಿಸುವವರು ವೀರಶೈವ ಧರ್ಮಕ್ಕೆ ವಿರೋಧವಾಗಿದೆ. ಸ್ತ್ರೀಯಳಿಗೆ ಪತಿಯ ಸಮಾಗಮದಿಂದ ರತಿಸುಖ ದೊರೆಯುವದು. ಅನ್ಯ ಪುರುಷನ ಸಹವಾಸದಿಂದಲೂ ಆ ಸುಖವು ಲಭಿಸುವದು. ಆದರೆ ರತಿಸುಖವು ಎಲ್ಲಿಯಾದರೂ ಪ್ರಾಪ್ತಿಸಿದರೆ ತೀರಿತೆಂದು ಪರಪುರುಷನೊಡನೆ ರಮಿಸುವದು ಕುಲೀನ ಸ್ತ್ರೀಯಳಿಗೆಷ್ಟು ಅನುಚಿತವೋ ಅಷ್ಟೇ ಭಕ್ತನಾದರೂ ನಾನಾ ದೈವಂಗಳ ಕಡೆಗೆ ತನ್ನ ಮನಸ್ಸು ಹರಿಯುತ್ತಿದ್ದರೆ ಅದನ್ನು ಎಳೆದು ತಂದು ವೀರಶೈವ ಧರ್ಮಕ್ಕೆ ಅನುಗುಣವಾಗಿ ಇಷ್ಟಲಿಂಗದಲ್ಲಿರಿಸುವದು ಶ್ರೇಯಸ್ಕರವು. ಭಕ್ತಸ್ಥಲದವನಿಗೆ ಇಷ್ಟಲಿಂಗದಲ್ಲಿ ವಿಶ್ವಾಸವನ್ನು ಹುಟ್ಟಿಸಿಕೊಳ್ಳುವದೇ ಪ್ರಾಮುಖ್ಯವಾದ ಪ್ರಯತ್ನವಾಗಿರುತ್ತದೆ.

ವಿಶ್ವಾಸವು ಸಹಜ ಸ್ವಭಾವವಲ್ಲ. ಅದನ್ನು ನಾವು ಉಂಟುಮಾಡಿಕೊಳ್ಳಬೇಕಾಗುತ್ತದೆ. ಸಹಜವಾದುದು ಸುಸ್ಥಿರವಾಗಿರುವದು. ಉಂಟುಮಾಡಿಕೊಂಡದ್ದು ಬಹು ದಿವಸ ಬಾಳಲಾರದು. ಆದುದರಿಂದ ನಾವು ಕಲ್ಪಿಸಿಕೊಂಡದ್ದನ್ನು ಸಹಜವಾದುದನ್ನಾಗಿಯೇ ಮಾಡಬೇಕು. ಹಾಗೆ ಮಾಡುವದೂ ಶಕ್ಯವಿದೆ. ಎಷ್ಟೋ ಶೀಲಗಳು ಅಭ್ಯಾಸದಿಂದ ಸಹಜ ಸ್ವಭಾವವಾಗುವವು. ಉದಾಹರಣಾರ್ಥ ಮೈತೊಳೆಯದೆ ಹಾಗೆಯೇ ಉಣ್ಣುವ ರೂಢಿ ಇದ್ದ ಮನುಷ್ಯನಿಗೆ ಹಾಗೆಯೇ ಉಂಡರೆ ಕೆಡಕೆನಿಸುವದಿಲ್ಲ. ಆದರೆ ಜಳಕಮಾಡಿ ಊಟಮಾಡುವ ಅಭ್ಯಾಸಇರುವ ಮನುಷ್ಯನಿಗೆ ಮೈತೊಳೆದುಕೊಳ್ಳದೆ ಊಟ ಮಾಡೆಂದರೆ ಜೀವದ ಸುತ್ತ ಬಂದಂತಾಗುತ್ತದೆ. ನಾವು ಯಾವ ಪ್ರಕಾರ ಅಭ್ಯಾಸ ವಿಡುತ್ತೇವೆಯೋ ಆ ಪ್ರಕಾರ ನಮ್ಮ ಸ್ವಭಾವವುಂಟಾಗುತ್ತದೆ. ಇಂಗ್ಲಿಷದಲ್ಲಿ '*Habit is the second nature*' ಅಂದರೆ ಚಟವು (ಅಭ್ಯಾಸವು) ಎರಡನೆಯ ಸ್ವಭಾವವು ಎಂದು ಹೇಳಿದೆ. ವಿಶ್ವಾಸವು ಅಧೈರ್ಯವುಳ್ಳದ್ದಾಗಿಯೂ ಸಂಶಯಯುಕ್ತವಾಗಿಯೂ ಇರಕೂಡದು. ಅದು ಬಂಧುರವಾಗಿರಬೇಕು. ವಿಶ್ವಾಸವು ಬಂಧುರವಾಗಬೇಕಾದರೆ ಅಭ್ಯಾಸದಿಂದ ಅದನ್ನು ಸಹಜಸ್ವಭಾವವನ್ನಾಗಿ ಮಾಡಬೇಕು.

ವಿಶ್ವಾಸವು ದೃಢವಾಗಬೇಕಾದರೆ ಭಕ್ತಿಯೆಂಬ ಅಭ್ಯಾಸವು ಸರ್ವೋತ್ಕೃಷ್ಟವಾದುದು. ಭಕ್ತಿಯೆಂದರೆ ಇಷ್ಟಲಿಂಗದಲ್ಲಿಟ್ಟ ಪ್ರೇಮವು. ಪ್ರೇಮವು ಸಹಜ ಗುಣವು. ಈ ಸಹಜ ಗುಣದ ಸಹಾಯದಿಂದ ಕಾಲ್ಪನಿಕವಾದ ವಿಶ್ವಾಸವನ್ನು ಸಹಜವಾಗಿಯೂ ಸುಸ್ಥಿರವಾಗಿಯೂ ಮಾಡಲು ಶಕ್ಯವಿದೆ. ಮಗುವು ತಾಯಿ ತಂದೆಗಳನ್ನು ಪ್ರೀತಿಸುವಂತೆಯೂ, ಸೇವಕನು ಸ್ವಾಮಿಯನ್ನು ಪ್ರೀತಿಸುವಂತೆಯೂ ಲಿಂಗಾಂಗಿಯು ಇಷ್ಟಲಿಂಗದಲ್ಲಿ ಪ್ರೇಮವುಳ್ಳವನಾದರೆ ಅದರಲ್ಲಿ ವಿಶ್ವಾಸವು ಸುಸ್ಥಿರವಾಗಿ ನೆಲೆಗೊಳ್ಳುವದು. ಭಕ್ತನಾದವನು ಮೊದಲು ಇಷ್ಟಲಿಂಗವನ್ನು ತನ್ನ ತಾಯಿಯಂತೆ ಕಾಣಬೇಕು. ತಾಯಿಗೂ ಮಗುವಿಗೂ ಹೆಚ್ಚು ಸಂಬಂಧವಿರುತ್ತದೆ. ಭಕ್ತನಾದರೂ ಪಾರಮಾರ್ಥಿಕ ಜ್ಞಾನವಲ್ಲಿ ಬಾಲ್ಯಾವಸ್ಥೆಯಲ್ಲಿರತಕ್ಕವನು. ಆದುದರಿಂದ ಲಿಂಗವನ್ನು ತಾಯಿಯೆಂದು ಭಾವಿಸಿ ಆರಾಧಿಸುವದೇ ಉತ್ತಮ. ಇಷ್ಟಲಿಂಗವನ್ನು ತಾಯಿಯಂತೆ ತಿಳಿಯುವದೆಂದರೆ ತಾಯಿಯ ಗುಣಗಳನ್ನೆಲ್ಲ ಇಷ್ಟಲಿಂಗದ ಮೇಲೆ ಆರೋಪಿಸಬೇಕೆಂಬರ್ಥ. ಹಾಗಾದರೂ ನಮ್ಮ ತಾಯಿಯು ನಮ್ಮನ್ನು ರಕ್ಷಿ

ಸಿಯೇ ತೀರುವಳೆಂಬ ದೃಢ ವಿಶ್ವಾಸವುಳ್ಳವರಾಗಿರಬೇಕು. ತಾಯಿಯು ಮಗು ವನ್ನು ಹೇಗೆ ರಕ್ಷಿಸುವಳು? ಅತ್ತರೆ ಹತ್ತಿಗರೆಯುವಳು, ಹಟಮಾಡಿದರೆ ರಮ್ಮಿಸುವಳು, ನಿದ್ರೆಬಂದರೆ ಹಾಸಿ ಹೊಚ್ಚಿ ಮಲಗಿಸುವಳು, ಜೋಗು ಳವನ್ನು ಹಾಡಿ ಆನಂದಗೊಳಿಸುವಳು, ಮುದ್ದನ್ನು ನೀಡಿ ಆಲ್ಹಾದಗೊ ಳಿಸುವಳು, ತಪ್ಪನ್ನು ಕ್ಷಮಿಸುವಳು, ಹೆದರಿ ಓಡಿ ಬಂದರೆ ಗಟ್ಟಿಯಾಗಿ ಎದೆಗವಚಿಕೊಳ್ಳುವಳು. ನಾವು ಅವಳೆದುರಿಗೆ ಆತ್ಮಪೌರುಷಮಾಡಿಕೊಂ ಡರೆ ಪ್ರೇಮದಿಂದ ಕೇಳಿ ಹಿಗ್ಗುವಳು, ಬೇಡಿದುದನ್ನು ನೀಡಿ ಸಮ್ಮತಿ ಸುವಳು, ಇಲ್ಲದಿದ್ದರೆ ಮರಮರನೆ ಮರುಗುವಳು, ಮಗುವು ಊಟದ ಹೊತ್ತಿಗೆ ಮನೆಗೆ ಬಾರದಿದ್ದರೆ ಹಲಬುವಳು. ತಾಯಿಯು ಬಹು ಕೋಮ ಲಾಂತಃಕರುಣೆಯು. ತಾಯಿಯ ಕರಳು ಎಂತಹದಿರುತ್ತದೆಂಬ ಬಗ್ಗೆ ಒಂದು ಚಿಕ್ಕ ದೃಷ್ಟಾಂತವಿದೆ. ಒಬ್ಬ ದುಷ್ಟನು ತನ್ನ ತಾಯಿಯನ್ನು ಕೊಂದು ಪೋಲಿಸರ ಕೈಯಲ್ಲಿ ಸಿಕ್ಕು ನ್ಯಾಯಧೀಶನೆದುರಿಗೆ ತರಲ್ಪ ಟ್ಟನು. ನ್ಯಾಯಧೀಶನು ಆತನಿಗೆ ಮರಣದಂಡನೆ ವಿಧಿಸಿದನು. ಆಗ ಸತ್ತ ತಾಯಿಯ ತಲೆಬುರುಡಿಯು ನ್ಯಾಯಾಧೀಶನ ಪಾದದ ಮೇಲೆ ಬಿದ್ದು ತನ್ನ ಮಗನ ಜೀವವನ್ನುಳಿಸಬೇಕೆಂದು ಅಂಗಲಾಚಿ ಬೇಡಿಕೊಂಡಿತಂತೆ! ನೋಡಿರಿ. ತಾನು ಸತ್ತರೂ ತಾಯಿಯ ಪ್ರೇಮವು ಸಾಯುವದಿಲ್ಲವಲ್ಲ! ಮಗನು ಕುರೂಪಿಯಿರಲಿ, ದಡ್ಡನಿರಲಿ, ಕಿಡಿಗೇಡಿಯಿರಲಿ,ವ್ಯಭಿಚಾರಿಯಿ ರಲಿ, ಕುತ್ತಿಗೆಗೊಯ್ಕನಿರಲಿ, ಎಂಥವನಿದ್ದರೂ ಹತ್ತಿಗರೆಯುವಳು. ಹೆತ್ತ ವ್ವನಿಗೆ ಹೆಗ್ಗಣವು ಕೂಡ ಮುದ್ದಲ್ಲವೇ? ತಾಯಿಯ ಪ್ರೇಮವು ಸಾಗ ರಕ್ಕಿಂತ ಅಗಾಧವಾಗಿಯೂ ಆಕಾಶಕ್ಕಿಂತ ಉನ್ನತವಾಗಿಯೂ ಜಗತ್ತಿ ಗಿಂತ ಗುರುತರನಾಗಿಯೂ ಇರುತ್ತದೆ. ತನಗೆ ನೂರೆಂಟು ಸಂಕಟಗಳಿದ್ದರೂ ಮರೆತುಮಗುವನ್ನು ಸಂತೈಸುವಳು. ಇಂಥ ಅಮೌಲ್ಯವಾದ ಪ್ರೇಮಾಂತಃಕರ ಣವು ನಮ್ಮ ಲಿಂಗಮಾತೆಯಲ್ಲಿರುವವೆಂದು ಪೂಜಿಸಿದರೆ ನಮ್ಮ ವಿಶ್ವಾ ಸವು ಸ್ಥಿರಗೊಳ್ಳುವದು.

ಮರವು ಕ್ಷಮೆಗಳೆರಡು ತಾಯಿಯ ಮಧುರವಾದ ಗುಣಗಳು. ಮಕ್ಕಳು ತಪ್ಪುಮಾಡಿದರೆ ಅವುಗಳನ್ನು ಮರೆತು ಕ್ಷಮಿಸುವಳು. ಅದರಂತೆ ನಾವು ಎಷ್ಟೇ ತಪ್ಪುಮಾಡಿದರೂ ಲಿಂಗವನ್ನು ಮರೆಹೊಕ್ಕರೆ ಲಿಂಗಮಾ ತೆಯು ನಮ್ಮನ್ನು ಹೊರದೂಡುವದಿಲ್ಲ. ನಮ್ಮ ತಪ್ಪನ್ನು ಮನ್ನಿಸಿ ಹತ್ತಿ ಗರೆಯುವಳು. ಮಗನು ತಾಯಿಯನ್ನು ಧಪಾಧಪಾ ಹೊಡೆದು ಹೊರಗೆ

ಹಾಕಿದರೂ ಅವನ್ನು ಮರೆತು ಆತನಿಗೆ ಹಿತವನ್ನೇ ಬಯಸುವಳಲ್ಲದೆ ಅಹಿತವನ್ನೆಂದಿಗೂ ಚಿಂತಿಸಳು. ಮಗನು ಕಡುವೈರಿಯಾಗಿದ್ದರೂ 'ಅವ್ವಾ' ಎಂದು ಹತ್ತಿರ ಬಂದರೆ 'ಬಾ, ನನ್ನ ಮಗನೇ' ಎಂದು ಆದರಿಸುವಳು. ಆದುದರಿಂದಲೇ 'ತಾಯಿಗಿಂತ ಬಂಧುವಿಲ್ಲ ಉಪ್ಪಿಗಿಂತ ರುಚಿಯಿಲ್ಲ' ಎಂಬ ನಾಣ್ಣುಡಿಯು ಜಗತ್ಪ್ರಸಿದ್ಧವಾಗಿದೆ. ಮಗುವು ಹಸುಗೂಸಾಗಿದ್ದಾಗಿನಿಂದ ಹಿಡಿದು ಮುಪ್ಪಿನವನಾಗುವ ವರೆಗೂ ತಾಯಿಯ ಪ್ರೇಮದಲ್ಲಿ ಎಳ್ಳಷ್ಟಾದರೂ ಕೊರತೆಯಾದೀತೇನು? ಎಂದಿಗೂ ಇಲ್ಲ. ತನ್ನ ಮಕ್ಕಳ ಮೇಲೆ ಕುಂತೀದೇವಿಯ ಪ್ರೇಮವು ಹೊಗಳತಕ್ಕಂಥಾದ್ದಿದ್ದಿಲ್ಲವೇ? ಶಂಕರನೆಂಬ ಮಗನ ಮೇಲೆ ತಿರಕೋಳೋ ವಿನಾಚಿಯ ಮೋಹವೆಷ್ಟು? ತಾಯಿಯ ಸನ್ನಿಧಿಯಲ್ಲಿ ನಮ್ಮ ಕೋಪತಾಪಗಳೂ, ಚಿಂತಾತುರತೆಗಳೂ ನಿಮಿಷಮಾತ್ರದಲ್ಲಿಯೇ ಅಡಗುವವು. ಕ್ಷಮಾದಯಾ ಸಂಪನ್ನಳಾದ ಲಿಂಗಮಾತೆಯನ್ನು ನಾವು ಮರೆಹೊಕ್ಕರೆ ನಮಗೆ ಚಿಂತೆಯೆಲ್ಲಿ? ದುಃಖವೆಲ್ಲಿ? 'ಶಿವನೇ ನನ್ನನ್ನು ಕಾಪಾಡು, ಶಿವನೇ ನನ್ನನ್ನು ಕ್ಷಮಿಸು, ಶಿವನೇ ನನ್ನನ್ನು ಕರುಣಿಸು' ಎಂದು ಶಿವನನ್ನು ನಾವು ಪುರುಷನೆಂದು ಸಂಬೋಧಿಸಿದರೂ ದಯೆ, ಕ್ಷಮೆ, ಕರುಣಗಳು ತಾಯಿಯ ಗುಣಗಳಾದ್ದರಿಂದ ಪರ್ಯಾಯದಿಂದ ತಾಯಿಯೆಂದೇ ಸಂಬೋಧಿಸಿದಂತಾಯಿತು.

ನಾವು ಯಾವ ದೇವರನ್ನು ಯಾವ ಭಾವನೆಯಿಂದ ಆರಾಧಿಸುತ್ತೇನೆಯೋ ಆಯಾಯ ಗುಣಗಳು ನಮ್ಮಲ್ಲಿ ನೆಲಿಸುತ್ತವೆ. ವಿಷ್ಣು ದಯಾಮಾಯೆಗಳಿಂದ ಕೂಡಿದವನೆಂದು ದೇವತೆಗಳಾರಾಧಿಸಿದರು. ಶಿವನು ಉಗ್ರನೂ, ಪರಾಕ್ರಮಿಯೂ, ನಿಷ್ಕಪಟಿಯೂ ಎಂದು ತಿಳಿದು ರಾಕ್ಷಸರು ಆರಾಧಿಸಿದರು. ಆದುದರಿಂದ ಅಂತಂಥ ಗುಣಗಳು ಅವರಲ್ಲಿ ಮನೆಮಾಡಿಕೊಂಡವು. ತಾಯಿಯ ಗುಣಗಳನ್ನು ವಿಷ್ಣುವಿನಲ್ಲಿಯೂ ತಂದೆಯ ಗುಣಗಳನ್ನು ಮಹಾದೇವನಲ್ಲಿಯೂ ಕಲ್ಪಿಸಿಕೊಂಡರು. ಕೆಲವರು ಶಿವ ವಿಷ್ಣು ಇಬ್ಬರಲ್ಲಿಯೂ ತಾಯಿತಂದೆಗಳ ಗುಣಗಳನ್ನು ಕಲ್ಪಿಸಿ ಆರಾಧಿಸುವರು. ದೇವರು ಪುಲ್ಲಿಂಗವೋ, ಸ್ತ್ರೀಲಿಂಗವೊ, ನಪುಸಕಲಿಂಗವೋ ನಾವರಿಯೆವು. ಆದರೆ ಆ ಪರವಸ್ತುವಿನಲ್ಲಿ ಸ್ತ್ರೀಯ ಗುಣಗಳನ್ನು ಕಲ್ಪಿಸಿದರೆ ಸ್ತ್ರೀಲಿಂಗವೂ, ಪುರುಷಗುಣ ವಿಶಿಷ್ಟ ಮಾಡಿದರೆ ಪುಲ್ಲಿಂಗವೂ ಸ್ತ್ರೀಯೂ ಅಲ್ಲ ಪುರುಷನೂ ಅಲ್ಲ ಭಾವನಾ ವಿಶಿಷ್ಟವಾದುದೆಂದು ತಿಳಿದರೆ ನಪುಂಸಕಲಿಂಗವೂ ಆಗುವದು. ಸ್ತ್ರೀಯೆಂದು ತಿಳಿಯುವದು ಭಕ್ತಿಯ

ಮೊದಲನೆಯ ಸೋಪಾನವು, ಪುರುಷನೆಂದು ಭಾವಿಸುವದು ಎರಡನೆಯ ಸ್ಥಿತಿಯು, ಸಾಕಾರ ನಿರಾಕಾರ ವಸ್ತುವೆಂದು ಆರಾಧಿಸುವದು ಮೂರನೆಯ ಸ್ಥಿತಿಯು. ಕೆಲವರು ಪರಮಾತ್ಮನನ್ನು ತಮ್ಮ ಸ್ವಾಮಿ, ಮಗು, ಮಿತ್ರ, ಪತಿ, ಸ್ವತಃ ತಾನೇ, ಎಂಬ ಭಾವದಿಂದ ಪೂಜಿಸುವದುಂಟು. ಆದರೆ ಭಕ್ತಿಸ್ಥಳದವನಿಗೆ ಪರಮಾತ್ಮನು ತಾಯಿಯೆಂದು ತಿಳಿಯುವದೇ ಮುಖ್ಯ ಧರ್ಮವಾಗಿರುವದು. ಉಳಿದ ಸ್ಥಳದವರು ಬೇರೆ ಬೇರೆ ರೀತಿಯಾಗಿ ತಿಳಿದುಕೊಳ್ಳುವರು. ಯಾರ ಹತ್ತಿರಹೋಗಲು ನಾವು ಹಿಂಜರಿಯುವದಿಲ್ಲವೋ ಅವರಲ್ಲಿ ತಾಯಿಯ ಕೋಮಲಾಂತಃಕರಣವಿದೆಯೆಂದು ತಿಳಿಯಬೇಕು. ಯಾರ ಹತ್ತಿರ ಹೋಗಲು ನಮಗೆ ಭಯಬರುತ್ತದೆಯೋ ಅಂಥವರಲ್ಲಿ ತಂದೆಯ ಉಗ್ರಸ್ವರೂಪವಿದೆಯೆಂದು ಭಾವಿಸಬೇಕು. ಈ ಜಗತ್ತು ತಂದೆ ತಾಯಿಗಳ ದ್ವಂದ್ವಗುಣ ವಿಶಿಷ್ಟನಾದುದಾಗಿದೆ. ತಾಯಿಯಲ್ಲಿ ಕೋಮಲತೆ, ದಯಾ, ಕ್ಷಮಾ, ಶಾಂತಿ, ಚಟುವಟಿಕೆ ಮೊದಲಾದ ಗುಣಗಳಿರುವವು. ಆದರೆ ತಂದೆಯಲ್ಲಿ ಕಠಿಣತ್ವ, ಸ್ಥೈರ್ಯ, ಧೈರ್ಯ, ಪರಾಕ್ರಮ, ಮುಂತಾದ ಗುಣಗಳಿರುವವು. ಅಂತೆಯೇ ಕೆಲವು ಗುಣಗಳು ಸಂಸ್ಕೃತದಲ್ಲಿ ಸ್ತ್ರೀವಾಚಕವಾಗಿಯೂ ಕೆಲವು ಪುರುಷವಾಚಕವಾಗಿಯೂ ಇರುವವು. ಭಕ್ತನು ಇನ್ನೂ ಕೂಸು. ಕೂಸಿಗೆ ತಾಯಿಯೇ ಬೇಕು. ಆತನು ಇಷ್ಟಲಿಂಗದಲ್ಲಿ ತಾಯಿಯ ಗುಣಗಳನ್ನಾರೋಪಿಸಿ ಅದರ ಕರುಣವನ್ನು ಪಡೆದುಕೊಂಡ ಬಳಿಕ ಮಹೇಶ್ವರ ಸ್ಥಿತಿಗೆ ಬರುವನು. ಆಗ ಆತನಲ್ಲಿ ತಂದೆಯ ಗುಣಗಳು ಪ್ರವೇಶಿಸಲಾರಂಭಿಸುವವು. ಭಕ್ತಸ್ಥಲದಲ್ಲಿ ಪರಮಾತ್ಮನಿಗೂ ನಮಗೂ ತಾಯಿಮಕ್ಕಳ ಸಂಬಂಧವಿರುವಂತೆ ಮಹೇಶ್ವರ ಸ್ಥಳದಲ್ಲಿ ತಂದೆಮಕ್ಕಳ ಸಂಬಂಧವುಂಟಾಗುತ್ತದೆ.

## ಶ್ರೀ ಬಸವಣ್ಣನವರ ವಚನಗಳು.

ಅಯ್ಯಾ ಎಳೆಗರು ತಾಯನರಸಿ ಬಳಲುವಂತೆ, ಅಯ್ಯಾ ನಾ ನಿಮ್ಮ ನರಸಿ ಬಳಲುತ್ತಿದ್ದೇನೆ. ಅಯ್ಯಾ, ನೀವೆನ್ನ ಮನಕ್ಕೆ ಪ್ರಸನ್ನವ ಮಾಡಿ ಕಾರುಣ್ಯವ ಮಾಡಿರಯ್ಯ. ನೀವೆನ್ನ ಮತಕ್ಕೆ ನೆಲೆವನೆಯಾಗಿ ಕಾರುಣ್ಯವ ಮಾಡು. ನೀನಿನಿತು ಲೇಸನೀಯಯ್ಯ ಎಂಬೇಂ ಎಂಬೇಂ ಕೂಡಲ ಸಂಗಮ ದೇವಾ.

ಎನ್ನಯ್ಯಾ ನಿಮ್ಮನರಸುತ್ತಲಿದ್ದೇನೆ. ಎನ್ನಯ್ಯಾ ಕೂಡಲ ಸಂಗಮ ದೇವಾ ಭ್ರಮರಿನ ಲೇಸಿನಂತೆ ಕಾರುಣ್ಯವ ಮಾಡು. ತಪ್ಪೆನ್ನದು. ಶಿವಧೋ ಶಿವಧೋ. ಅಯ್ಯಾ ಕರ್ಮದಾಗರವ ಹೊಕ್ಕು, ವಿಷಯದ ಬಲೆಯಲ್ಲಿ ಸಿಲುಕಿ, ಅಯ್ಯಾ ದೇಹಮೋಹವೆಂಬ ದುಃಖಕ್ಕೀಡಾಗಿ, ಸಾಯುತ್ತಿದ್ದೇನೆ, ಬೇವುತ್ತಿದ್ದೇನೆ. ಅಯ್ಯಾ ತಪ್ಪೆನ್ನದು ತಪ್ಪೆನ್ನದು. ಈ ಮೊರೆಯ ವಿಚಾರಿಸಿ ಕಾರುಣ್ಯವ ಮಾಡು ಕೂಡಲಸಂಗಮದೇವಾ.

ಭಕ್ತನು ಕೂಸಿನಂತೆ ಭಕುತಿಯಿರಿಸಿ ದಾಸನಂತೆ ಸೇವೆ ಮಾಡಬೇಕು. ಭಕ್ತನಿಗೆ ಕಾಯಕ ದಾಸೋಹಗಳೆರಡು ಪ್ರಾಮುಖ್ಯವಾದ ಕರ್ತವ್ಯಗಳು. ಆತನು ತನ್ನ ತನುಮನ ಬಳಲಿಸಿ ಪರಿಶುದ್ಧ ಕಾಯಕದಿಂದ ಧನಧಾನ್ಯಗಳನ್ನು ಗಳಿಸಿ ಗುರು ಲಿಂಗ ಜಂಗಮದ ದಾಸೋಹ ಮಾಡಬೇಕು. ಭಕ್ತನಿಗೆ ನಾನು ಮಾಡಿದೆನು ನಾನು ಬಿಟ್ಟೆನೆಂಬ ಅಹಂಕಾರವಿರಕೂಡದು. "ಭಕ್ತನಾದರೆ ಕಿಂಕರರ ಕಿಂಕರನಾಗಿರಬೇಕೆ"ಂದು ಶ್ರೀ ಚನ್ನಬಸವೇಶ್ವರನು ಹೇಳಿದ್ದಾನೆ. ಒಬ್ಬರ ಗೋಣು ಮುರಿದು ತಂದು ಗುರುಲಿಂಗಜಂಗಮ ದಾಸೋಹ ಮಾಡಿದರೆ ಅದು ಅವರಿಗೆ ಸಲ್ಲದು. ತಾನು ಸ್ವತಃ ಉದ್ಯೋಗ ಮಾಡದೆ ಬೇರೆಯವರಿಂದ ಹಣ ಕೂಡಿಸಿ ತಂದು ದಾಸೋಹ ಮಾಡುವದು ಭಕ್ತನಿಗೆ ಕುಂದು. ಜೀನತನ ಮಾಡಿ ಬಿಡಲೂ ಬಾರದು. 'ಕೊಡಬೇಡ ಕೊಡದೆ ಇರಬೇಡ ಧರ್ಮವನ್ನು ಬಿಡಬೇಡವೆಂದ ಸರ್ವಜ್ಞ' ಹೀಗೆಂದು ಸರ್ವಜ್ಞ ಮೂರ್ತಿಯು ಹೇಳುವನು. ಭಕ್ತನು ಯಥಾಶಕ್ತಿ ಗುರುಲಿಂಗಜಂಗಮಕ್ಕೆ ತನ್ನ ಆಳಲಿ ಭಕ್ತಿಯನ್ನು ಮುಟ್ಟಿಸಬೇಕೆಂಬುದೇ ಅದರ ತಾತ್ಪರ್ಯ. 'ಮನವುಕ್ಕಿ ಮಾಡಬೇಕು ಭಕ್ತ' ಎಂದು ಹೇಳಿದೆ. ಆತನು ಮನಸ್ಸಿಲ್ಲದೆ ದಾಕ್ಷಿಣ್ಯಕ್ಕೊಳಗಾಗಿಯಾಗಲಿ, ಭೀತಿ ಅಜ್ಞಾನಗಳಿಂದಾಗಲಿ, ದಾನಧರ್ಮ ಮಾಡಿದರೆ ಅದು ಆತನ ಭಕ್ತಿಗೆ ಕುಂದಕವು. 'ಕೊಟ್ಟ ಬಳಿಕಿನ್ನು ಮನದೊಳಗೆ ಕುದಿಯುವವ ಮೂರ್ಖ'. ಆದುದರಿಂದ ಏನೇ ದಾಸೋಹ ಮಾಡಿದರೂ ನನ್ನದು ವ್ಯರ್ಥ ಹಾಳಾಯಿತಲ್ಲ, ಎಂದು ಮನದಲ್ಲಿ ಕುದಿಯಹತ್ತಿದರೆ ಅದು ಪರಮಾತ್ಮನಿಗೆ ಸಲ್ಲುವದಿಲ್ಲ. ಇಂಥ ಪರಿಯಿಂದ ದಾಸೋಹವ ಮಾಡುವವಕ್ಕಿಂತಲೂ ಬಿಡುವವೇ ಎಷ್ಟೋಪಟ್ಟು ಮೇಲು. ಶ್ರೀಬಸವಣ್ಣನವರು ಭಕ್ತಸ್ಥಲದ ಲಕ್ಷಣವನ್ನು ಈ ಪ್ರಕಾರ ಹೇಳಿರುವರುಃ— "ಸದಾಚಾರದಿಂದ ನಡೆವುದು, ಶಿವನಲ್ಲಿ ಭಕ್ತಿಯಾಗಿರುವುದು, ಲಿಂಗ ಜಂಗಮವು

ಬಂದರೆ ಸಂತೋಷ ಬುದ್ಧಿಯಾಗಿರುವದು, ಲಾಂಛನಧಾರಿಗಳ ಕಂಡರೆ ವಂದಿಸುವದು! ಇದು ಭಕ್ತಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮ ದೇವಾ". ಸದಾಚಾರದಿಂದ ನಡೆಯುವದೆಂದರೆ ಶ್ರೀ ಬಸವಣ್ಣನವರು ಹೇಳಿದಂತೆ "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಅನ್ಯರಿಗೆ ಅಸಹ್ಯ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲುಬೇಡ, ಇದೇ ಅಂತರಂಗದ ಶುದ್ಧಿ ಇದೇ ಬಹಿರಂಗದ ಶುದ್ಧಿ ಇದೇ ಕೂಡಲಸಂಗನು ದೇವರನೊಲಿಸುವ ಪರಿ." ಈ ಪ್ರಕಾರ ವರ್ತಿಸುವದು.

ಗುರಲಿಂಗಜಂಗಮ ಸೇವೆಮಾಡುವಾಗ ಭಕ್ತನು ಅತ್ಯಂತ ವಿನೀತನಾಗಿರಬೇಕು. ಮಾತಿನಿಂದಾಗಲಿ ಕೃತಿಯಿಂದಾಗಲಿ ದೊಡ್ಡವರೆದುರಿಗೆ ತನ್ನ ಪ್ರಶಂಸೆಯನ್ನು ಮಾಡಿಕೊಳ್ಳತಕ್ಕದ್ದಲ್ಲ.

ಕೆಲವು ಅರಣ್ಯಪಂಡಿತರು ಭಕ್ತ ಜಂಗಮ ಈ ಶಬ್ದಗಳನ್ನು ಜಾತಿ ಉದ್ಯೋಗಗಳಿಗನ್ವಯಿಸುವರು. ಆದರೆ ಗುಣ ಸಂಸ್ಕಾರಗಳಿಗೆ ಅನ್ವಯಿಸುವದಿಲ್ಲ. ವೈದ್ಯ ಅಥವಾ ವಕೀಲಿ ಕೆಲಸಮಾಡುವವನಿಗೆ ನಾವು ವೈದ್ಯ ಅಥವಾ ವಕೀಲಿ ಕುಲದವನೆಂದು ಹೇಗೆ ಕರೆಯುವದಿಲ್ಲವೋ ಹಾಗೆಯೇ ವೀರಶೈವರಲ್ಲಿ ಒಕ್ಕಲತನ, ವ್ಯಾಪಾರ, ಗಾಣಿಗತನ, ಬಳೆಗಾರಿಕೆ, ಅಗಸುತನ, ಹಡಪ ಮುಂತಾದ ಕಸಬುದಾರರಿದ್ದರೂ ಅವರೆಲ್ಲರೂ ವೀರಶೈವರೇ. ಆದರೆ ಇವರು ಸ್ವಲ್ಪ ಕಡಿಮೆ ಬುದ್ಧಿಯವರಿರುವರೆಂದು ತಿಳಿದು ಪ್ರತಿಷ್ಠಿತವಾದ ಅಯ್ಯನವರೆಂಬ ವರ್ಗವು ಅಕ್ಷರ ಸಾಲೆ ಕಲಿಸುವ ಮತ್ತು ಉಪದೇಶ ಮಾಡುವ ವರ್ಗವು ಅವರಿಗಿಂತಲೂ ತಾವು ಹೆಚ್ಚಿನವರೆಂದು ಸಾಧಿಸಿ ತಾವು ಮಾಹೇಶ್ವರರು ಅಂದರೆ ಹೆಚ್ಚಿನವರು; ಉಳಿದವರು ಭಕ್ತರು ಅಂದರೆ ಕಡಿಮೆಯವರು; ಈ ಪ್ರಕಾರ ಮಧ್ಯಂತರದಲ್ಲಿ ೨ ವರ್ಗಗಳನ್ನು ಕಲ್ಪಿಸಿ ಅವುಗಳನ್ನು ಪ್ರಚಾರದಲ್ಲಿ ತಂದರು. ಅದೇ ಈಗ್ಯೂ ರೂಢಿಯಲ್ಲಿದೆ. ವೀರಶೈವರಲ್ಲಿ ಬೇಕಾದ ಉದ್ಯೋಗ ಮಾಡುವವನು ಭಕ್ತನಾಗಬಲ್ಲನು, ಮಹೇಶ್ವರನಾಗಬಲ್ಲನು, ಪ್ರಸಾದಿಯಾಗಬಲ್ಲನು, ಪ್ರಾಣಲಿಂಗಿಯಾಗಬಲ್ಲನು, ಶರಣನಾಗಬಲ್ಲನು, ಐಕ್ಯನಾಗಬಲ್ಲನು. ಆದರೆ ಈ ಪಾರಮಾರ್ಥ ಸೋಪಾನಗಳನ್ನೇನು ಜಂಗಮ ಕಾಲಕ್ಕಷ್ಟೇ ಧಾರೆಯೆರೆದು ಕೊಟ್ಟಿಲ್ಲ. ಅಂಥ ಗುಣಗಳು ಸಂಸ್ಕಾರಗಳು ಯಾವನಿಗುಂಟೋ ಆತನು ಆಯಾಯ ಸ್ಥಲಗಳನ್ನು ಮುಟ್ಟಬಲ್ಲನು. ಎಷ್ಟೋ ಜನ ಭಕ್ತರು ಪ್ರಸಾದಿಕರಾಗಿರುವದನ್ನು ನೀವು ಕೇಳಿರುವಿರಿ.

ಶರಣರಾದುದನ್ನು ನೋಡಿರುವಿರಿ. ಪ್ರಸಾದಿ ಮತ್ತು ಶರಣಸ್ಥಲಗಳು ಮಹೇಶ್ವರ ಸ್ಥಲಗಳಿಗಿಂತಲೂ ಹೆಚ್ಚಿನವಲ್ಲವೇ? ಹೀಗಿದ್ದು ಭಕ್ತನು ಮಹೇಶ್ವರನಾಗಲಿಕ್ಕೆ ಬರುವದಿಲ್ಲವೆಂಬುದು, ಕೇವಲ ಅಯ್ಯನವರ ಕುಲಕ್ಕಷ್ಟೇ ಅದು ಸಲ್ಲಿದ್ದೆಂಬದೂ ಶುದ್ಧ ತಪ್ಪಲ್ಲವೇ? ವೀರಶೈವ ಧರ್ಮವು ಗುಣ ಸಂಸ್ಕಾರಗಳಿಗೆ ಮಹತ್ವ ಕೊಟ್ಟಿರುವದಲ್ಲದೆ ಜಾತಿ ಕುಲ ಕಸಬುಗಳಿಗೆ ಇಂಬುಗೊಟ್ಟಿಲ್ಲವೆಂಬದನ್ನು ಎಲ್ಲರೂ ಒಪ್ಪಿಕೊಳ್ಳಬಹುದು. ಹಾಗಿಲ್ಲದಿದ್ದರೆ ವೀರಶೈವ ಧರ್ಮಕ್ಕೆ ಅಷ್ಟು ಪ್ರಾಶಸ್ತ್ಯಯೇ ಉಂಟಾಗುತ್ತಿರಲಿಲ್ಲ. ಈ ವಿಷಯದಲ್ಲಿ ಶ್ರೀ ಶಿವಶರಣರ ವಚನಗಳೇ ಸಾಕ್ಷಿಯಾಗಿವೆ.

ಭಕ್ತನ ಮನಸ್ಸು ನಾನಾ ಸದ್ವಿಷಯ ದೈವಂಗಳ ಕಡೆಗೆ ಹರಿದಾಡುತ್ತಿರುತ್ತದೆ. ಅದು ಏಕಾಗ್ರವಾಗಿ ಒಬ್ಬ ಗುರುವಿನಲ್ಲಾಗಲಿ ಒಂದೇ ಲಿಂಗದಲ್ಲಾಗಲಿ ನೆಲಿಸುವದಿಲ್ಲ. ಭಕ್ತಿ ಪ್ರವಾಹವು ಒತ್ತಟ್ಟಿಗೆ ನಿಲ್ಲದೆ ಹರಿದಾಡುವದು ಅದಕ್ಕೆ ಸ್ವಭಾವವು. ಭಕ್ತನು ಕಂಡ ಕಂಡ ಭಕ್ತಂಗೆ ಕೈಮುಗಿಯುತ್ತ ಹೋಗುತ್ತಾನೆ. 'ಕಂಡ ಭಕ್ತಂಗೆ ಕೈಮುಗಿಯುವಾತನೇ ಭಕ್ತ' ನೆಂದು ಆದ್ಯರ ವಚನವುಂಟು. ಭಕ್ತನಿಗೆ ಕಾವೀಲಾಂಛನ, ಭಸ್ಮ, ರುದ್ರಾಕ್ಷಿ ಮುಂತಾದ ವೀರಶೈವ ಚಿಹ್ನಗಳನ್ನು ಕಂಡಾಕ್ಷಣವೇ ಸಾಷ್ಟಾಂಗವೆರಗಬೇಕೆಂಬ ಹಂಬಲ ವುಂಟಾಗುತ್ತದೆ. ಭಕ್ತನು ಒಬ್ಬ ವ್ಯಕ್ತಿಯಲ್ಲಿ ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೂ ಶರಣೆನ್ನುವನು. ಭಕ್ತನು ಬೆಳ್ಳಗಿದ್ದುದನ್ನೆಲ್ಲ ಹಾಲೆಂದೇ ಭಾವಿಸುವನ. ಮನುಷ್ಯನು ಯಾವ ಸ್ಥಳದವನಿರುವನೆಂಬದನ್ನು ಅವನ ವೃತ್ತಿಯುವೇಲಿಂದ ಕಂಡುಹಿಡಿಯಲಿಕ್ಕೆ ಬರುತ್ತದೆ. ಕಾಯಕ ದಾಸೋಹಗಳನ್ನು ಕೈಕೊಂಡು ದಾಸಾನುದಾಸನಾಗಿ ಗುರುಲಿಂಗಜಂಗಮಗಳ ಸೇವೆ ಮಾಡುವಂಥ ಪ್ರವೃತ್ತಿಯುಳ್ಳವನೇ ಭಕ್ತನು. ಭಕ್ತರು ಒಕ್ಕಲಿಗರಿರಬಹುದು, ಬಣಜಿಗರಿರಬಹುದು, ಅಯ್ಯಗಳಿರಬಹುದು.

ಭಕ್ತನಿಂದ ಏನಾದರೂ ಅಪರಾಧ ಘಟಿಸಿದರೆ ಆತನು ಆವೇಶವನ್ನು ಶಿವಕಾರುಣ್ಯ ಪಶ್ಚಾತ್ತಾಪಗಳಿಂದ ನಿವಾರಿಸಿಕೊಳ್ಳುವನು. ತಾನು ತಪ್ಪುಮಾಡಿದರೆ 'ಶಿವನೇ ಕ್ಷಮಿಸು ಕರುಣಿಸು, ನಾನು ಪಾಪಿಯು ಅಧಮನು, ಮದಾಂಧನು' ಹೀಗೆಂದು ತನ್ನನ್ನು ತಾನೇ ಹಳಿದುಕೊಂಡು ಆ ಮೂಲಕ ಉಂಟಾದ ಪಶ್ಚಾತ್ತಾಪದಿಂದ ಪುನೀತನಾಗುವನು. ಮಗುವು ತನ್ನ ತಾಯಿಯನ್ನು ಅಂಗಲಾಚಿ ಬೇಡಿಕೊಳ್ಳುವಂತೆ ಭಕ್ತನು ಪರಮಾ

ತ್ರಾಸಿಗೆ ಬೇಡಿಕೊಳ್ಳುವನು. ಮಗುವಿನ ಅಪರಾಧವನ್ನು ಮರೆದು ಕ್ಷಮಿಸದ ತಾಯಿಯಾರು? ಭಕ್ತನೆಂಬ ಕೂಸನ್ನು ಶಿವನೆಂಬ ತಾಯಿಯು ಎತ್ತಿ ಮುದ್ದಾಡಿಸುವಳು.

ಈಗ ಸಮಾಜದಲ್ಲಿ ಭಕ್ತರೆಂದರೆ ವಿಶೇಷತಃ ನಾನಾ ಕಸಬು ಕಾಯಕಗಳನ್ನು ಮಾಡಿಕೊಂಡು ಜೀವಿಸುವಂಥವರಾಗಿದ್ದಾರೆ. ಉದಾಹರಣಾರ್ಥ, ಒಕ್ಕಲಿಗರು, ವ್ಯಾಪಾರಸ್ಥರು, ನೇಕಾರರು, ಅಗಸರು, ಬಡಿಗರು, ಕ್ಷೌರಿಕರು, ಉಪ್ಪಾರರು, ಬಳೆಗಾರರು ಮುಂತಾದವರು ತಮ್ಮ ತಮ್ಮ ಉದ್ಯೋಗಗಳಿಂದ ಭಿನ್ನ ಭಿನ್ನವಾಗಿರುವರಲ್ಲದೆ ಅವರೆಲ್ಲರೂ ವೀರಶೈವರೇ· ಎಲ್ಲರೂ ಸರಿಸಮಾನರೇ. ಒಬ್ಬರು ಹೆಚ್ಚು ಇನ್ನೊಬ್ಬರು ಕಡಿಮೆಯೆಂದು ಭಕ್ತರು ಭಾವಿಸಕೂಡದು. ಭಕ್ತರಲ್ಲಿ ಜಾತಿಭೇದವನ್ನೆಣಿಸುವದು ಮಹಾ ಪಾಪವು. ಹಿಂದಕ್ಕೆ ಭಕ್ತರಲ್ಲಿ ಪರಸ್ಪರ ಅನ್ನಪಾನಾದಿಗಳೂ ಹೆಣ್ಣುಗಂಡುಗಳೂ ನಡೆಯುತ್ತಿದ್ದವು. ಆದರೆ ಕಾಲಾಂತರದಿಂದ ಈ ಅತಿ ವರ್ಣಾಶ್ರಮಿಗಳಿಗೆ ಚಾತುರ್ವರ್ಣಾಶ್ರಮದ ಗಾಳಿಯು ಸೋಂಕಿ ಉದ್ಯೋಗಗಳಲ್ಲಿಯೂ ಸಹ ಹೆಚ್ಚು ಕಡಿಮೆಗಳನ್ನು ಕಲ್ಪಿಸಿ ಬೇರೆ ಬೇರೆ ಒಳಪಂಗಡಗಳನ್ನು ಮಾಡಿಕೊಂಡು ಪರಸ್ಪರ ಅನ್ನವ್ಯವಹಾರವನ್ನೂ ಶರೀರಸಂಬಂಧವನ್ನೂ ಬಿಟ್ಟೆ ಬಿಟ್ಟಿದ್ದಾರೆ. ಈ ರೂಢಿಯು ಅಳಿದು ಹೋಗುವದು ಕಠಿಣವಾಗಿದ್ದರೂ ಅಳಿದು ಹೋಗುವದೇನೂ ಕೆಡಕಲ್ಲ. ಸಮಾಜದಲ್ಲಿ ಯೋಗ್ಯ ಸುಧಾರಣೆಯಾಗದ ಹೊರತು ತಳವೂರಿಕೊಂಡ ರೂಢಿಯು ನಾಶವಾಗುವದು ದುಸ್ತರವು. ಶ್ರೀ ಬಸವಣ್ಣನವರ ಕಾಲದಲ್ಲಿ ಅನೇಕ ಕೀಳು ಕುಲದವರು ಮತಾಂತರಹೊಂದಿ ಭಕ್ತರಲ್ಲಿ ಬೆರೆದು ಪೂರ್ವಪದ್ಧತಿಯನ್ನು ಹೊಲೆಗೆಡಿಸಿದರೆಂದು ಕೆಲವರು ಆಕ್ಷೇಪಿಸುತ್ತಾರೆ. ಈ ಆಕ್ಷೇಪಣೆಯು ನಿರಾಧಾರವಾದುದು. ಯಾಕಂದರೆ ಬಸವಣ್ಣನವರು ಅನಾಚಾರಿಗಳಿಗೆ ಲಿಂಗಧಾರಣ ಮಾಡಿ ಅವರನ್ನು ವೀರಶೈವ ಮತದಲ್ಲಿ ಸೇರಿಸಿಕೊಂಡಿಲ್ಲವೆಂಬ ಬಗ್ಗೆ ಅವರ ಎಷ್ಟೋ ವಚನಗಳು ಪ್ರಮಾಣವಾಗಿವೆ. ಉದಾಹರಣಾರ್ಥಃ—ಕುಂಬಳ ಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಕೊಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ? ಶ್ರೀ ಬಸವಣ್ಣನವರ ಕಾಲದಲ್ಲಿಯೂ ಒಳಪಂಗಡಗಳ ಪ್ರಶ್ನೆಯೂ ಇದ್ದಿತೆಂದೂ ಅದನ್ನು ದೂರಮಾಡಬೇಕೆಂಬ ಬಗ್ಗೆ ಸುಶಿಕ್ಷಿತರ ಪ್ರಯತ್ನವಿದ್ದಿತೆಂದೂ ಆಗಿನ

ಕಾಲದ ಎಷ್ಟೋ ಶಿವಶರಣರ ವಚನಗಳ ಮೇಲಿಂದ ಕಂಡುಬರುತ್ತದೆ. ವೀರಶೈವನು ಕಾಯಕದಲ್ಲಿ ಕುಲವನ್ನೆಣಿಸಬಾರದೆಂಬ ಬಗ್ಗೆ ಶ್ರೀ ಬಸವಣ್ಣನವರು ಹೇಳಿರುವದೇನಂದರೆ "ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ ನಿಮ್ಮ ಪುರಾತರಾಣೆ ತಲೆದಂಡ ತಲೆದಂಡ. ಕೂಡಲಸಂಗಮ ದೇವಾ ಭಕ್ತರಲ್ಲಿ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ." ಭಕ್ತರೆಲ್ಲರೂ ಕೂಡಿಯೇ ಅನ್ನಪಾನಾದಿಗಳನ್ನು ಮಾಡಬೇಕೆಂಬ ವಿಷಯದಲ್ಲಿ ಆ ಮಹಾನುಭಾವರು ಹೇಳಿರುವದೇನಂದರೆಃ—"ಕಾಗೆಯೊಂದಗಳ ಕಂಡರೆ ಕರೆಯದೆ ತನ್ನ ಬಳಗವನು? ಕೋಳಿಯೊಂದ ಗುಟುಕ ಕಂಡರೆ ಕೂಗಿ ಕರೆಯದೆ ತನ್ನ ಬಂಧುಬಳಗವನು? ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಕಾಗಿಕೋಳಿಗಳಿಗಿಂತ ಕರಕಷ್ಟ ಕಾಣಾ ಕೂಡಲಸಂಗಮದೇವಾ". ಬಸವನರಿತ ಭಕುತನೇ ಇಲ್ಲ ಎಂದು ಎಲ್ಲ ಶಿವಶರಣರು ಏಕಕಂಠವಾಗಿ ಒಪ್ಪಿದ್ದಾರೆ. ಆತನಿಂದಲೇ ನಮ್ಮ ವೀರಶೈವ ಸಮಾಜವು ಉನ್ನತಾವಸ್ಥೆಗೇರಿತು. ಆ ಬಸವನ ಭಕುತಿಯನ್ನೇ ನಾವು ನಿರಂತರ ಹಾಡಬೇಕಾಗಿದೆ.

## ಭೋಗಷಟ್ಪದಿ.

ಬಸವನಿಂದ ಭಕುತನಿಲ್ಲ। ವಸುಧಿಯಿಂದ ಭಾರವಿಲ್ಲ। ಅಸಮ ಮಹಿಮಲಿಂಗದಿಂದೆ ದೈವವಿಲ್ಲವು। ಮಿಸುಪ ಬಸವ ಭಕುತಿಭಾವ। ಬಸದಿಯಲ್ಲಿ ತೊಳಗಿ ಬೆಳಗಿ। ಎಸೆಯುಲೆಂದು ಸಾಂಬ ಶಿವನ ಬೇಡಿಕೊಂಬುವೆ ॥೩॥



# ಶ್ರೀಶೈಲ ಮಹಾಕ್ಷೇತ್ರ.

(ಲೇಖಕ:—ಕೀರ್ತನಕೇಸರಿ, ಕವಿರತ್ನ, ಶಿವಕೀರ್ತನ ಕವಿರಾಜ, ಕೀರ್ತನ ವಿಚಕ್ಷಣ ಬಿ. ಶಿವಮೂರ್ತಿಶಾಸ್ತ್ರಿ, ಹುಲ್ಯಕುಂಟೆಮಠ, ತುಮಕೂರು.)

ಭರತಖಂಡದಲ್ಲಿ ದೇದೀಪ್ಯಮಾನಗಳಾದ ಕ್ಷೇತ್ರಗಳಲ್ಲಿ ಶ್ರೀಶೈಲಕ್ಕೆ ಆದೊಂದು ಬಗೆಯ ಹೆಚ್ಚುಗಾರಿಕೆಯು ಪ್ರಾಪ್ತವಾಗಿದೆ. ಶಿವರಾತ್ರಿಯ ಕಾಲದಲ್ಲಿ ಶ್ರೀಶೈಲದಲ್ಲಿ ಪಾತಾಳ ಗಂಗೆಯ ಸ್ನಾನವೂ, ಶಿಖರೇಶ್ವರ ಹಾಗೂ ಮಲ್ಲಿಕಾರ್ಜುನರ ದರ್ಶನವೂ ಬಹು ಪುಣ್ಯಪ್ರದವೆಂದು ಭಾವಿಕಜನರು ನಂಬಿದ್ದಾರೆ.

ಮೇಲೆ ಕಂಡ ಭಾವನೆಯಿಂದಲೇ ಪ್ರೇರಿತನಾಗಿ ಈ ಲೇಖಕನೂ ಕಳೆದ ಶಿವರಾತ್ರಿಯನ್ನು ಶ್ರೀಶೈಲದಲ್ಲಿ ಕಳೆದನು. ಅವನು ಅಲ್ಲಿ ಕಂಡು ಕೇಳಿದುದನ್ನು ನಮ್ಮ ಶಿವಾನುಭವ ವಾಚಕರ ಸಲುವಾಗಿ ಇಲ್ಲಿ ವಿಸ್ತರಿಸುವನು.

ಶ್ರೀಶೈಲ ಕ್ಷೇತ್ರವು ಮದರಾಸು ಇಲಾಖೆಗೆ ಸೇರಿದ ಕರ್ನೂಲು ಜಿಲ್ಲೆಗೆ ಸೇರಿದೆ. ನಂದ್ಯಾಲ ಅಥವಾ ಕರ್ನೂಲ ರೈಲು ಸ್ಟೇಶನನಿಂದ ಆತುಂಕೂರಿಗೆ ಮೋಟಾರ ಸರ್ವಿಸಿದೆ. ಅಲ್ಲಿಂದ ಶ್ರೀಶೈಲಕ್ಕೆ ಬಾಡಿಗೆ ಗಾಡಿಗಳು ಸಿಕ್ಕುತ್ತವೆ. ಅಥವಾ ಮೋಟಾರಿನ ಕಾರಗಳೂ ಬಾಡಿಗೆಗೆ ಸಿಕ್ಕುತ್ತವೆ. ಶಿವರಾತ್ರಿಯ ಕಾಲದಲ್ಲಿ ಗಾಡಿ ಅಥವಾ ಮೋಟಾರಿನ ಬಾಡಿಗೆ ಒಂದಕ್ಕೆ ನಾಲ್ಕು ಹತ್ತು ಆಗುವುದೂ ಉಂಟು. ಅವರು ಕೇಳಿದಷ್ಟನ್ನು ಮಾತ್ರ ಪ್ರಯಾಣಿಕರು ಕೊಡಲು ಸಿದ್ಧರಾಗಿರತಕ್ಕದ್ದು. ಆ ಸ್ಥಳವೂ ಆಗಿನ ಸಂದರ್ಭವೂ ಅಂತಹುದು.

ಆತುಂಕೂರಿನಿಂದ ಗಾಡಿಯ ಮೇಲೆ ಹೋಗತಕ್ಕವರಿಗೆ ನಾಗಲೂಟಿಯು ಸಿಕ್ಕುತ್ತದೆ. ಇಲ್ಲಿ ವೀರಭದ್ರ ದೇವಾಲಯವಿದೆ. ಮೋಟಾರಿನಲ್ಲಿ ಹೋಗತಕ್ಕವರಿಗೆ ನಾಗಲೂಟಿಯು ಸಿಕ್ಕುವುದಿಲ್ಲ. ಮೋಟಾರಿನ ದಾರಿಯೇ ಬೇರೆ. ಪರ್ವತಕ್ಕೆ ಹೋಗತಕ್ಕವರೆಲ್ಲ "ಪೆಚ್ಚಲವು" ಎಂಬ ಒಂದು ಸ್ಥಳದಲ್ಲಿ ಮುಕ್ಕಾಂ ಮಾಡಬೇಕಾಗುತ್ತದೆ. ಇಲ್ಲಿ ನೀರಿನ ವಸತಿಯಿರುವುದರಿಂದ ಅಡಿಗೆಗೆ ಅನುಕೂಲವಿದೆ. ಪೆಚ್ಚಲುವಿನಲ್ಲಿ ಕೆಲವು ಅಂಗಡಿಗಳೂ ಜಾತ್ರೆಯ ಕಾಲದಲ್ಲಿರುತ್ತವೆ. ಇಲ್ಲಿ ಬ್ರಾಹ್ಮಣರ ಎರಡು

ಅನ್ನಛತ್ರಗಳಿರುತ್ತವೆ. ಅವರು ಎಲ್ಲ ಜಾತಿಯವರಿಗೂ ಸಹಾಯಕರಾಗಿರುತ್ತಾರೆ. ಇಲ್ಲಿ ಒಂದು ಪೋಲೀಸು ಠಾಣೆಯೂ ಇದೆ.

ಪೆಚ್ಚಲುವಿನಿಂದ ಮುಂದೆ ಮಲ್ಲೇಶ್ವರನ ಗುಡಿಯವರೆಗೂ ಕಾಲಿನಲ್ಲಿಯೇ ನಡೆಯಬೇಕು. ಪ್ರಾಯೇಣ ಇಲ್ಲಿಂದಲ್ಲಿಗೆ ೧೫ ಮೈಲುಗಳಾಗಬಹುದು. ದುರ್ಬಲರಾದವರು ಇಲ್ಲಿನ ಕಾಡುಜನರಿಂದ "ಚುಂಚ"ರು ಹೊರುವ "ಡೋಲಿ" ಎಂಬ ತೊಟ್ಟಿಲಿನಲ್ಲಿ ಕುಳಿತು ಬರಬಹುದು. ಶ್ರೀಶೈಲ ಯಾತ್ರೆಯು ಅತ್ಯಂತ ಕಷ್ಟಕರವಾದುದರಿಂದ ಬಲಶಾಲಿಗಳಿಗೆ ಮಾತ್ರ ಇದು ಸಾಧ್ಯ. ವೃದ್ಧರು, ದುರ್ಬಲರು, ಸ್ಥೂಲಕಾಯರು, ರೋಗಿಗಳು ಮೊದಲಾದವರು ಬೆಟ್ಟವನ್ನು ಹತ್ತಲಾರದೆ ಕಣ್ಣು ಬಿಡಬೇಕಾಗುವುದು. ಅಂತಹವರು ಡೋಲಿಗಳಲ್ಲಿ ಕುಳಿತುಬರುವುದೇ ಮೇಲು. ಡೋಲಿಯ ಕೂಲಿಯನ್ನು ಕುಳಿತುಕೊಳ್ಳುವ ಮನುಷ್ಯನ ಸ್ಥಿತಿಗನುಸಾರವಾಗಿ ತೆಗೆದುಕೊಳ್ಳುತ್ತಾರೆ. ಸ್ಥೂಲಾಂಗರಾದವರಿಗೆ ಒಂದಕ್ಕೆ ರಡರಷ್ಟು ಕೂಲಿ ಕೊಡಬೇಕಾಗುತ್ತದೆ.

ಶ್ರೀಶೈಲವು ಸಾಮಾನ್ಯವಾದ ಒಂದು ಪರ್ವತವಲ್ಲ ಅನೇಕ ಪರ್ವತಗಳಿಂದಕ್ಕೂ ಕೂಡಿದ ಪರ್ವತಾವಳಿ. ಭಯಂಕರವಾದ ಅಡವಿಯಿಂದಲೂ ಗಗನಚುಂಬಿತವಾದ ವೃಕ್ಷಗಳಿಂದಲೂ ನಾನಾಬಗೆಯ ಮೃಗಪಕ್ಷಿಗಳಿಂದ ಹಳ್ಳಬೆಟ್ಟಗಳಿಂದಲೂ ಕೂಡಿ ಅದೊಂದು ಅರಣ್ಯಮಯ ಪ್ರಪಂಚವೇ ಆಗಿದೆ.

ಶ್ರೀ ಮಲ್ಲಿಕಾರ್ಜುನನ ದರ್ಶನಕ್ಕೆ ಹೋಗಬೇಕಾದರೆ ಆರು ಬೆಟ್ಟಗಳನ್ನು ದಾಟಿ ಮೂರು ಕೊಳ್ಳಗಳನ್ನು ಇಳಿದು ಏಳನೆಯ ಬೆಟ್ಟದಲ್ಲಿರುವ ಮಲ್ಲಿಕಾರ್ಜುನನ ದರ್ಶನ ಮಾಡಬೇಕಾಗುತ್ತದೆ.

ಶ್ರೀಶೈಲದಲ್ಲಿ ದರ್ಶನೀಯವಾದ ಹಲವು ಸ್ಥಳಗಳಿವೆ. ಅವೆಲ್ಲವುಗಳನ್ನೂ ಕ್ರಮವಾಗಿ ಮುಂದೆ ವಿವರಿಸಿದೆ.

೧. ಭೀಮನಕೊಳ್ಳ:— ಇದು ಶ್ರೀಶೈಲಕ್ಕೆ ಹೋಗುವ ಮಾರ್ಗದಲ್ಲಿ ಸಿಕ್ಕುವ ಮಹಾ ಗಂಭೀರವಾದ ಹಳ್ಳ. ಇದು ಭಯಂಕರ (ಭೀಮ)ವಾಗಿರುದರಿಂದ ಇವಕ್ಕೆ ಭೀಮನಕೊಳ್ಳವೆಂದು ಹೆಸರಾಗಿರಬಹುದು. ಇವನ್ನು ಹತ್ತಿಳಿವುದು ಪ್ರಯಾಸಕರ.

೨. ಕೈಲಾಸ ಮಹಾದ್ವಾರಃ— ಮಲ್ಲಿಕಾರ್ಜುನ ದೇವಾಲಯಕ್ಕೆ ಸುಮಾರು ಎರಡು ಮೈಲ ದೂರದಲ್ಲಿ ಈ ಹೆಬ್ಬಾಗಿಲಿದೆ. ಹೆಸರು ಪವಿತ್ರತೆಯನ್ನು ಸೂಚಿಸುತ್ತದೆ.

೩. ಮಲ್ಲಿಕಾರ್ಜುನ ದೇವಾಲಯಃ— ಶ್ರೀ ಮಲ್ಲಿಕಾರ್ಜುನ ಲಿಂಗವು ಜ್ಯೋತಿರ್ಲಿಂಗವಾದುದರಿಂದ ಬಹು ಪ್ರಾಚೀನವೂ ಮಹಿಮಾಯುಕ್ತವೂ ಆಗಿದೆ. ಒಬ್ಬ ವೀರಶೈವ ಅರ್ಚಕರು ಪೂಜಿಸುತ್ತಿದ್ದಾರೆ. ವಿಶೇಷ ದಿನಗಳಲ್ಲಿ ಯಾರು ಬೇಕಾದವರೂ ಬಂದು ಕಾಶಿ ವಿಶ್ವನಾಥನನ್ನು ಪೂಜಿಸುವ ಹಾಗೆ ಪೂಜಿಸಬಹುದು.

ದೇವಾಲಯವು ವಿಶಾಲವಾದ ಒಂದು ಕೋಟೆಯಲ್ಲಿದೆ. ಕೋಟೆಯ ಗೋಡೆಯ ಮೇಲೆ ಹಿಂದೂ ಪುರಾಣಗಳ ಚಿತ್ರಗಳನ್ನು ಕೆತ್ತಿದ್ದಾರೆ. ನಾಲ್ಕು ದಿಕ್ಕಿಗೂ ಗೋಪುರಗಳಿವೆ. ಉತ್ತರ ದಿಕ್ಕಿನ ಗೋಪುರಗಳನ್ನು ಶಿವಾಜಿಮಹಾರಾಜನು ಕಟ್ಟಿಸಿದನೆಂದು ಹೇಳುತ್ತಾರೆ. ಉತ್ತರ ದಿಕ್ಕಿನದು ಹೊರತು ಮಿಕ್ಕ ದಿಕ್ಕಿನ ಗೋಪುರಗಳು ಜೀರ್ಣವಾಗಿ ಹೋಗಿವೆ. ಮಲ್ಲಿಕಾರ್ಜುನ ಲಿಂಗದ ಮುಂದಿನ ಬಸವನು ಎತ್ತರವಾಗಿಯೂ ಸುಂದರವಾಗಿಯೂ ಇದೆ. ದೇವಾಲಯವು ವಿಶಾಲವಾಗಿಯೂ ಭವ್ಯವಾಗಿಯೂ ಇದೆ. ದೇವಾಲಯದ ಅಂಗಳದಲ್ಲಿ ಕೆಲವು ತೀರ್ಥಗಳೆಂಬ ಕೊಂಡಗಳಿವೆ. ಜಾತ್ರೆಕಾಲದಲ್ಲಿ ಇವುಗಳಿಂದ ಜನರಿಗೆ ನೀರಿನ ಪೂರೈಕೆಯಾಗುತ್ತದೆ. ದೇವಾಲಯದಲ್ಲಿ ಹೊಯ್ಸಳ ದೇವಾಲಯಗಳಲ್ಲಿದ್ದಂತೆ ಪ್ರಶಂಸನೀಯವಾದ ಶಿಲ್ಪ ಕೆಲಸಗಳಿಲ್ಲ. ಇಲ್ಲಿನ ಪವಿತ್ರತೆಯ ಮತ್ತು ಪ್ರಾಚೀನತೆ ಬಹಳ. ದೇವಾಲಯವೂ ಪ್ರಕಾರವೂ ಜೀರ್ಣವಾಗುತ್ತ ಬಂದಿವೆ. ಪೂರ್ವದಲ್ಲಿ ಈ ದೇವಾಲಯದ ಒಳಭಾಗದಲ್ಲಿ ಚಿನ್ನದ ತಗಡನ್ನು ಹೊದ್ದಿಸಿದ್ದರಂತೆ. ಅಂತಹ ಸಂಪತ್ತೆಲ್ಲ ಈಗ ಮಾಯವಾಗಿಹೋಗಿದೆ.

ಭ್ರಮರಾಂಬಾ ದೇವಾಲಯಃ—ಮಲ್ಲಿಕಾರ್ಜುನಸ್ವಾಮಿಯ ಹಿಂಭಾಗದಲ್ಲಿ ಭ್ರಮರಾಂಬಾ ದೇವಾಗಾರವಿದೆ. ಜಗನ್ಮಾತೆಯನ್ನು ಬ್ರಾಹ್ಮಣ ಅರ್ಚಕನು ಪೂಜಿಸುತ್ತಿದ್ದಾನೆ.

ಸೂರಿಸಿಂಹಾಸನಃ— ಶ್ರೀ ಜಗದ್ಗುರು ಪಂಡಿತಾರಾಧ್ಯರು ಸ್ಥಾಪಿಸಿದ ಪಂಚ ಪೀಠಗಳಲ್ಲಿ ಒಂದಾದ ಸೂರಿ ಸಿಂಹಾಸನಮಠ. ಮಠವೆಲ್ಲಾ ಜೀರ್ಣವಾಗಿದೆ. ಕಟ್ಟಡ ಚಿಕ್ಕದು. ಅಲ್ಲಿ ಈಗ ಯಾರೂ ಇಲ್ಲ. ಯಾವ ಸಿಂಹಾಸನವೂ ಇಲ್ಲ. ಭರತಖಂಡದಲ್ಲಿ ಮೂವತ್ತೈದು ಲಕ್ಷ ವೀರಶೈವ

ರಿಂದಾದರೂ ಅವರದೊಂದು ಪೀಠಕ್ಕೆ ಈ ದುರ್ಗತಿ ಬಂದುದು ಬಹಳ ಶೋಚನೀಯವಾದ ಸಂಗತಿ.

ಪಂಚಮಠಗಳು:— ಮಲ್ಲೇಶ್ವರನ ದೇವಾಲಯದ ಹಿಂಭಾಗದಲ್ಲಿ ಐದು ಮಠಗಳಿವೆ. ಅವನ್ನು ಪಂಚ ಮಠಗಳೆಂದು ಕರೆಯುತ್ತಾರೆ. ಅವೆಲ್ಲವೂ ಜೀರ್ಣವಾಗಿ ಹೋಗಿವೆ. ೧. ಘಂಟೆಯಮಠ. ೨. ನಂದಿಮಠ. ೩. ಭಸ್ಮದಮಠ. ೪. ರುದ್ರಾಕ್ಷಿಮಠ ೫. ಸಾರಂಗಮಠ. ಈ ಐದಲ್ಲದೆ ಇನ್ನೂ ಹಾಳುಬಿದ್ದಿರುವ ಅನೇಕ ಮಠಗಳಿವೆ. ಎಲ್ಲವೂ ನೆಲವನ್ನಾಶ್ರೈಸುತ್ತಿವೆ. ಕೆಲವು ನೂರು ವರ್ಷಗಳ ಹಿಂದೆ ಈ ದೇವಾಲಯದ ಸುತ್ತಲೂ ಒಂದು ಪಟ್ಟಣವೇ ಅಸ್ತಿತ್ವದಲ್ಲಿತ್ತೆಂದು ಕಾಣಿಸುತ್ತದೆ. ಆ ಪಟ್ಟಣವಿದ್ದ ಕಾಲದಲ್ಲಿ ಈ ಮಠಗಳೆಲ್ಲವೂ ಉತ್ತಮವಾಗಿದ್ದವು. ಈಗ ದಿಕ್ಕಿಲ್ಲವಾಗಿವೆ.

ಮೇಲೆ ಕಂಡ ಐದು ಮಠಗಳಲ್ಲಿ ಭಸ್ಮದ ಮಠದಲ್ಲಿ ಪ್ರಣವಾಕ್ಷರ ಘಟಿತವಾದ ಒಂದು ಲಿಪಿಯಿದೆ. ಆ ಲಿಪಿಯ ಕಲ್ಲನ್ನು ಎಷ್ಟು ತೊಳೆದು ಕೈಯಿಂದ ತಿಕ್ಕಿದರೂ ಭಸ್ಮ ಬರುತ್ತದೆ. ಅದನ್ನು ಶ್ರೀ ರೇಣುಕಾಚಾರ್ಯನು ಸ್ಥಾಪಿಸಿದನೆಂದು ಹೇಳುತ್ತಾರೆ. ಲಿಪಿಯು ಬಾಳಬಂದುದಿನಲ್ಲಿದೆ. ಅದರಲ್ಲೇನಾದರೂ ಐತಿಹ್ಯವಿರಬಹುದೆಂದು ಕಾಣುತ್ತದೆ.

ಸಿದ್ಧರಾಮನ ಕೊಳ್ಳ:— ಶ್ರೀ. ಸಿದ್ಧರಾಮನು ಜಂಗಮರೂಪಿನ ಮಲ್ಲಿಕಾರ್ಜುನನನ್ನು ಹುಡುಕಿ ಬೇಸತ್ತು ಈ ಹಳ್ಳದಲ್ಲಿ ಹಾರಲಿಕ್ಕೆ ಹೋದಾಗ ಸ್ವಾಮಿಯು ಇಲ್ಲಿ ಪ್ರತ್ಯಕ್ಷವಾದನೆಂದು ಸಿದ್ಧರಾಮ ಪುರಾಣದಲ್ಲಿದೆ. ಸಿದ್ಧರಾಮನಿಗೆ ಶಿವನು ಪ್ರತ್ಯಕ್ಷವಾದ ಸ್ಥಳವಾದುದರಿಂದ ಇದನ್ನು ಸಿದ್ಧರಾಮನ ಕೊಳ್ಳವೆಂದು ಕರೆಯುತ್ತಾರೆ.

ಪಾತಾಳಗಂಗೆ:— ಈ ಕ್ಷೇತ್ರದಲ್ಲಿ ಇದು ಬಹು ಪವಿತ್ರ ತೀರ್ಥವಾಗಿದೆ. ಇದು ಎರಡು ಪರ್ವತಗಳ ಇರುಕಿನಲ್ಲಿರುವುದರಿಂದ ಪರ್ವತಾಗ್ರದಿಂದ ನೋಡುವವರಿಗೆ ಪಾತಾಳದಲ್ಲಿದ್ದಂತೆ ಕಾಣುತ್ತದೆ. ಅದರಿಂದಲೇ ಇದಕ್ಕೆ ಪಾತಾಳಗಂಗೆ ಎಂದು ಹೆಸರಾಗಿರಬಹುದು. ಇದಕ್ಕೆ ಕೃಷ್ಣಾನದಿಯ ಸಂಬಂಧವಿದೆಯಂತೆ. ಆದ್ದರಿಂದಲೇ ನೀರು ಅಮೃತತುಲ್ಯವಾಗಿದೆ. ಇದರ ಸ್ನಾನವು ಬಹು ಪವಿತ್ರವಾಗಿ ಭಾವಿಸಲ್ಪಟ್ಟಿದೆ. ಸಪ್ತ ಉಪನದಿಗಳಿಂದ ಕೂಡಿದ ಕೃಷ್ಣೆಯು ಈ ತೀರ್ಥಕ್ಕೆ ಸೇರಿರುವುದರಿಂದ

ಇದನ್ನು "ಸಪ್ತನದಿಯ ಸಂಗಮ" ಎಂದು ಕರೆಯುತ್ತಾರೆ. ಶಿವರಾತ್ರಿಯದಿನ ಈ ತೀರ್ಥವನ್ನು ಮಲ್ಲಿಕಾರ್ಜುನನ ಮೇಲೆ ಅಭಿಷೇಕಿಸುತ್ತಾರೆ. ದೇವಾಲಯದಿಂದ ಇಲ್ಲಿಗೆ ಮೂರು ಮೈಲು ಆಗಬಹುದು. ಹತ್ತಿಳಿಯುವದು ಕಷ್ಟಕರ.

ಕೋಟಿಲಿಂಗಃ— ಪಾತಾಳಗಂಗೆಯ ತಟವಿಡಿದು ಮುಂದೆ ಹೋದರೆ ಈ ಪ್ರದೇಶ ಸಿಕ್ಕುತ್ತವೆ. ನೀರಿನಲ್ಲಿ ಅನೇಕ ಕಲ್ಲುಗಳು ಮಸೆದು ಲಿಂಗಾಕಾರವಾಗಿರುತ್ತವೆ. ಆದ್ದರಿಂದ ಇದನ್ನು ಕೋಟಿಲಿಂಗವೆಂದು ಕರೆಯುತ್ತಾರೆ.

ಗುಪ್ತ ಕದಳಿಯ ವನಃ— ಇದು ಪಾತಾಳಗಂಗೆಯ ಪಕ್ಕದಲ್ಲಿರುವ ಚಂದ್ರಗುಪ್ತ ಪರ್ವತವನ್ನು ದಾಟಿದ ಮೇಲಿದೆಯೆಂದು ಹೇಳುತ್ತಾರೆ. ಅಲ್ಲಿ "ಕಮರೀಮಠ" ಎಂಬ ಒಂದು ಮಠವಿದೆಯಂತೆ. ಅಲ್ಲಿ ಕದಳಿ ಹಾಗೂ ಬಿಲ್ವ ವೃಕ್ಷಗಳು ಬಹಳವಾಗಿವೆಯಂತೆ. ಸಾಧಕರಿಗೆ ಮಾತ್ರ ಅದು ಗಮ್ಯಸ್ಥಾನ. ಮಿಕ್ಕವರಿಗೆ ಅಸಾಧ್ಯ. ಶ್ರೀ ಅಲ್ಲಮಪ್ರಭು ಮಹದೇವಿಯಕ್ಕ ಮೊದಲಾದ ಶಿವಶರಣರು ನಿರ್ವಯಲಾದ ಪವಿತ್ರ ಸ್ಥಾನವಿದೇ. ಅಲ್ಲಿ ಅನೇಕ ತಪಸ್ವಿಗಳೂ ಋಷಿಗಳೂ ಇದ್ದಾರೆಂದು ಭಾವಿಕ ಜನರು ನಂಬುತ್ತಾರೆ.

ಶಿಖರೇಶ್ವರಃ— ಶ್ರೀಶೈಲಕ್ಕೆ ಹೋದ ಯಾತ್ರಿಕರಿಗೆ ಪಾತಾಳಗಂಗೆಯ ಸ್ನಾನವೂ, ಶಿಖರೇಶ್ವರನ ದರ್ಶನವೂ, ಅತ್ಯವಶ್ಯಕವಾದವುಗಳಾಗಿವೆ. ಈ ಶಿಖರ ದರ್ಶನವು ಬಹು ಪುಣ್ಯಪ್ರದವೆಂದು ಭಾವಿಸಲ್ಪಟ್ಟಿದೆ. "ಶ್ರೀಶೈಲಶಿಖರಂ ದೃಷ್ಟ್ವಾ ಪುನರ್ಜನ್ಮಂ ನವಿದ್ಯತೇ" ಎಂಬ ಪುರಾಣವಾಕ್ಯವೂ ಇದನ್ನೇ ದೃಢಪಡಿಸುತ್ತದೆ. ಮಲ್ಲಿಕಾರ್ಜುನನ ಗುಡಿಯಿಂದ ಇಲ್ಲಿಗೆ ಎಳೆಂಟು ಮೈಲಿಗಳಾಗಬಹುದು. ಈ ಶಿಖರದಲ್ಲಿ ಒಂದು ಶಿವದೇವಾಲಯವಿದೆ. ಶಿವಲಿಂಗಕ್ಕೆ ಶಿಖರೇಶ್ವರನೆಂದು ಹೆಸರು. ಪಕ್ಕದಲ್ಲಿ ಸೀನೀರಿನ ಕೊಳವೊಂದಿದೆ. ಶಿಖರದ ಮೇಲೆ ನಿಂತು ಮಲ್ಲಿಕಾರ್ಜುನನ ಗುಡಿಯ ಗೋಪುರವನ್ನೂ ಪಾತಾಳಗಂಗೆಯನ್ನೂ ನೋಡಬಹುದು.

ಈ ಪರ್ವತಾವಳಿಯಲ್ಲೆಲ್ಲಾ ಈ ಶಿಖರವೇ ಮಹೋನ್ನತವಾದುದು. ಇಲ್ಲಿ ನಿಂತು ಸುತ್ತಲೂ ನಿರೀಕ್ಷಿಸಿದರೆ ಈ ಪರ್ವತದ ಸಂಪತ್ತನ್ನೆಲ್ಲಾ ನೋಡಬಹುದು. ಆಗ ಎತ್ತೆತ್ತಲೂ ಪರ್ವತವೂ ಕಾಡೂ ಕಂಗಳಿಗೆ ಕಂಗೊಳಿಸುತ್ತವೆ.

ಅರ್ಕೇಶ್ವರಃ— ಶಿಖರೇಶ್ವರನಿಗೆ ಬರುವ ಮಾರ್ಗದಲ್ಲಿಯೇ ಈ ಹೆಸರಿನ ಶಿವದೇವಾಲಯವಿದೆ. ಪಕ್ಕದಲ್ಲೊಂದು ಕೊಳ್ಳವಿದೆ. ಈ ಅರ್ಕೇಶ್ವರ ಲಿಂಗದ ದರ್ಶನವೂ ಪುಣ್ಯದಾಯಕವೆಂದು ಭಾವನೆ.

ಗುಪ್ತಗಂಗಾಃ— ಅರ್ಕೇಶ್ವರನಿಗೆ ಸಮೀಪದಲ್ಲಿಯೇ ಈ ಸಣ್ಣ ಜಲ ಪ್ರವಾಹವದೆ. ಈ ಸಣ್ಣ ಪ್ರವಾಹವು ಒಂದು ಕಡೆಹುಟ್ಟಿ ಮಧ್ಯೆ ಗುಪ್ತವಾಗಿ ದೂರದಲ್ಲಿ ಪ್ರಕಟವಾಗುತ್ತದೆ. ಇದನ್ನು ಗುಪ್ತ ಗಂಗಾ ಎಂದು ಕರೆಯುತ್ತಾರೆ.

ಮೇಲೆ ನಾನು ವರ್ಣಿಸಿದವುಗಳೇ ಅಲ್ಲದೆ, ಇನ್ನೂ ಪ್ರೇಕ್ಷಣೀಯವಾದ ಸ್ಥಳಗಳು ಈ ಕ್ಷೇತ್ರದಲ್ಲಿ ಅನಂತವಾಗಿವೆ. ಅವನ್ನೆಲ್ಲಾ ನೋಡುವಷ್ಟು ಸಮಯಾನುಕೂಲವು ಈ ಲೇಖಕನಿಗೆ ಲಭಿಸಲಿಲ್ಲವಾಗಿ ವಿಷಾದವಾಗುತ್ತದೆ.

ಕ್ಷೇತ್ರ ಮಹತ್ವಃ— ಶ್ರೀಶೈಲವು ಅನೇಕ ರೀತಿಗಳಿಂದ ಹಿಂದುಗಳಿಗೆ ಆದರಲ್ಲಿಯೂ ವೀರಶೈವರಿಗೆ ಪವಿತ್ರ ಸ್ಥಾನವಾಗಿದೆ. ಅವುಗಳಲ್ಲಿ ಮುಖ್ಯ ಕಾರಣಗಳನ್ನು ಮುಂದೆ ಸಂಗ್ರಹಿಸಿದೆ.

೧ ಇದು ಜ್ಯೋತಿರ್ಲಿಂಗವಾದ ಮಲ್ಲಿಕಾರ್ಜುನನಿರುವ ಸ್ಥಾನ. ಜಗನ್ಮಾತೆಯಾದ ಭ್ರಮರಾಂಭೆಯೂ ಪಾವನ ಸ್ವರೂಪಿಣಿಯಾದ ಪಾತಾಳಗಂಗೆಯೂ ಇರುವ ಪವಿತ್ರ ಸ್ಥಾನವಾದ್ದರಿಂದ ಮಹಾ ಸುಕ್ಷೇತ್ರ.

೨ ಶ್ರೀ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯರ ಸೂರಿ ಸಿಂಹಾಸನವಿರುವ ಸ್ಥಾನ.

೩ ಮಹಾ ಮಹಿಮನಾದ ಜಗದ್ಗುರು ರೇಣುಕಾಚಾರ್ಯನು ತಪಸ್ಸು ಮಾಡಿದ ಸ್ಥಾನ.

೪ ಮಹಾ ಮಹಿಮರೂ ನಿರಂಜನರೂಪಿಗಳೂ ಆದ ಅಲ್ಲಮ ಪ್ರಭು ಅಕ್ಕಮಹಾದೇವಿಯರು ನಿರ್ವಯಲಾದ ಸ್ಥಾನ.

೫ ಶಿವಯೋಗಿ ಪುಂಗವನಾದ ಸಿದ್ಧರಾಮನು ಶಿವನನ್ನು ಸಾಕ್ಷಾತ್ಕರಿಸಿಕೊಂಡ ಸ್ಥಳ.

೬ ಶಿಲಾದಾದಿ ಮಹರ್ಷಿಗಳು ತಪಸ್ಸಿದ್ಧಿ ಮಾಡಿಕೊಂಡ ಪುಣ್ಯ ಪ್ರದೇಶ.

ಈ ಕಾರಣಗಳಿಂದ ಇದು ಪುಣ್ಯಾರಣ್ಯವೆಂದೂ, ಪಾವನ ಪರ್ವತವೆಂದೂ, ಪವಿತ್ರ ಕ್ಷೇತ್ರವೆಂದೂ ಶಿವಭಕ್ತರು ಭಾವಿಸುವರು.

ಈ ಕ್ಷೇತ್ರಕ್ಕೆ ಪರ್ವತ ಮತ್ತು ಶ್ರೀಶೈಲವೆಂಬ ಎರಡು ಹೆಸರುಗಳಿವೆ. ಇವೆರಡಕ್ಕೂ ಪುರಾಣಗಳಲ್ಲಿ ಕಥೆಗಳಿವೆ. ಏನೆಂದರೆ.

ಶ್ರೀಶೈಲಃ— ಕೃತಯುಗದಲ್ಲಿ ಶ್ರೀ ಎಂಬ ಓರ್ವ ಋಷಿಕುಮಾರಿಯು ಶಿವನನ್ನು ಕುರಿತು ಸಾಕ್ಷಾತ್ಕಾರ ಮಾಡಿಕೊಂಡು ತನ್ನ ಹೆಸರನ್ನೇ ಈ ಪರ್ವತಕ್ಕಿಡಬೇಕೆಂದು ಕೇಳಿಕೊಂಡಳೆಂದೂ ಮಲ್ಲಿಕಾರ್ಜುನನು ಭಕ್ತಾಧೀನನಾಗಿ ಆ ಮಾತಿಗೊಪ್ಪಿ ಈ ಪರ್ವತಕ್ಕೆ "ಶ್ರೀಶೈಲ" ವೆಂದು ಹೆಸರಿಟ್ಟನೆಂದೂ ಸ್ಥಳಪುರಾಣದಲ್ಲೊಂದು ಕಥೆಯಿದೆ.

ಪರ್ವತಃ— ಶಿಲಾದ ಋಷಿಯ ಹಿರಿಯ ಮಗನಾದ ಪರ್ವತನು ಶಿವಭಕ್ತಿಯಿಂದ ಉದ್ರೇಕಿತನಾಗಿ ಶಿವನನ್ನು ಕುರಿತು ತಪಸ್ಸನ್ನು ಮಾಡಿದನೆಂದೂ ಶಿವನು ಸಾಕ್ಷಾತ್ಕಾರವಾದಾಗ ನಾನು ಸದಾ ನಿನ್ನ ಸಾನ್ನಿಧ್ಯದಲ್ಲಿರಬೇಕೆಂದು ಸಿದ್ಧಾಂತಮಾಡಿರುವೆನಾದುದರಿಂದ ಅನುಗ್ರಹಿಸಬೇಕೆಂದು ಬೇಡಿದನೆಂದೂ ಆಗ ಶಿವನು ಆ ಋಷಿಕುಮಾರನನ್ನು ಅಂಡಲಿರೂಪವಾದ ಪರ್ವತವಾಗುವಂತೆ ಹೇಳಿ ತಾನು ಭ್ರಮರಾಂಬಾ ಸಮೇತನಾಗಿ ಮಲ್ಲಿಕಾರ್ಜುನ ನಾಮದಿಂದ ಆ ಭಕ್ತನ ಮೇಲಿರುವುದಾಗಿ ಮಾತು ಕೊಟ್ಟು ಹಾಗೆಯೇ ಇರುವನೆಂದೂ ಮತ್ತೊಂದು ಕಥಯಿದೆ. ಆದ್ದರಿಂದ ಈ ಕ್ಷೇತ್ರವನ್ನು ಶ್ರೀಶೈಲ ಅಥವಾ ಪರ್ವತ ಎಂದು ಕರೆಯುತ್ತಾರೆ.

ಜಾತ್ರೆಯ ವಿಚಾರಃ— ಇಲ್ಲಿಗೆ ಯಾತ್ರೆಗಾಗಿ ಬರುವವರು ಇಲ್ಲಿನ ಸ್ಥಿತಿಗತಿಗಳನ್ನು ತಿಳಿಯುವುದಾವಶ್ಯಕ. ಪ್ರಯಾಣ ಜನರು ಶಿವರಾತ್ರಿಯಲ್ಲಿಯೇ ಬರುವುದನುಕೂಲ. ಆ ಕಾಲದಲ್ಲಿ ಇಲ್ಲಿ ಪೋಲೀಸು ಸಿಬ್ಬಂದಿ ಇರುವುದರಿಂದ ಕಳ್ಳಕಾಕರ ಭಯವಿಲ್ಲ. ಸ್ವಾಮಿಯ ದರ್ಶನಕ್ಕೆ ಶಿವರಾತ್ರಿಯ ದಿನಮಾತ್ರ ತಲೆಯೊಂದಕ್ಕೆ ೧॥ ರೂಪಾಯಿ ತೆರಿಗೆ ತೆಗೆದುಕೊಳ್ಳುತ್ತಾರೆ. ಈ ವರ್ಷ ಆ ಸುಂಕದ ಹಣ ೭ ಸಾವಿರ ರೂಪಾಯಿಗಳಾಗಿತ್ತು. ಈ ಹಣದಿಂದಲೇ ಜಾತ್ರೆಯ ಕಾರ್ಯಕಲಾಪಗಳು ನಡೆಯುತ್ತವೆ.

ಈ ದೇವಾಲಯದ ಜೀರ್ಣೋದ್ಧಾರಕ್ಕೂ ಕಾರ್ಯಕಲಾಪಗಳಿಗೂ ಆಂಧ್ರ ದೇಶೀಯರು ಒಂದು ಸಮಿತಿಯನ್ನು ಮಾಡಿಕೊಂಡು ತಮ್ಮಾ

ಲಕವಾಗಿ ಕೆಲಸಗಳನ್ನು ನಿರ್ವಹಿಸುತ್ತಾರೆ. ಜಾತ್ರೆಯ ಕಾಲದಲ್ಲಿ ನೀರಿಗೆ ಬಹಳ ಅನಾನುಕೂಲವಾಗಿರುತ್ತದೆ. ಇಲ್ಲಿನ ನೀರು ಪ್ರಾಯೇಣ ರೋಗ ಕಾರಕವಾಗಿರುತ್ತದೆ. ಪಾತಾಳ ಗಂಗೆಯ ನೀರು ಮಾತ್ರ ಉತ್ತಮವಾದುದು. ಅದು ಸಿಗುವುದು ಮಾತ್ರ ಕಷ್ಟ.

ವಾಸಕ್ಕೆ ಕೆಲವು ಮಂಟಪಗಳಿವೆಯಾದರೂ ಬರುವ ಜನ ಸಮೂಹಕ್ಕೆ ಸಾಲುವದಿಲ್ಲ. ಜಾತ್ರೆಯ ಕಾಲದಲ್ಲಿ ಅನೇಕ ಗುಡಿಸಲುಗಳನ್ನು ಹಾಕಿಸುತ್ತಾರೆ. ಅಂಗಡಿಕಾರರು ಅನೇಕರು ಬರುತ್ತಾರಾದರೂ ಪದಾರ್ಥಗಳು ಬಹು ತುಟ್ಟಿಯಾಗಿ ಮಾರಾಟವಾಗುತ್ತವೆ. ಕಾರಣ ಇಲ್ಲಿಗೆ ಸಾಮಾನು ಬಹು ದೂರದಿಂದ ಬಹು ಕಷ್ಟದಿಂದ ಸಾಗಬೇಕಾಗಿದೆ. ಈ ವರ್ಷ ದೇವಾಲಯಕ್ಕೂ ತೇರು ಬೀದಿಗೂ ವಿದ್ಯುದ್ದೀಪಗಳನ್ನು ಹಾಕಿಸಿ ಉಪಕಾರ ಮಾಡಿದ್ದರು.

ಚುಂಚರು:— ಈ ಶ್ರೀಶೈಲ ಪ್ರದೇಶದಲ್ಲಿ ಚುಂಚರೆಂಬುವ ತೆಲುಗು ಮಾತಾಡುವ ಕಾಡುಜನರು ಇದ್ದಾರೆ. ಇವರು ಪ್ರಯಾಣಿಕರ ಸಾಮಾನುಗಳನ್ನು ಕೂಲಿಗಾಗಿ ಹೊರುತ್ತಾರೆ. ಇವರು ಬಹು ಕಷ್ಟ ಜೀವಿಗಳು. ಬೇಟೆ ಪಶುಪಾಲನೆಗಳಿಂದ ಜೀವಿಸುತ್ತಾರೆ. ಬಾಣ ಪ್ರಯೋಗದಲ್ಲಿ ಚತುರರು. ಸಮಯ ಸಿಕ್ಕಿದರೆ ಕಳ್ಳತನಕ್ಕೂ ಇವರು ಹಿಂಜರಿಯುವುದಿಲ್ಲ. ಇವರು ಜಾತ್ರೆಗೆ ಹೋಗುವ ಜನರಿಂದ ತಲೆಯೊಂದಕ್ಕೆ ಒಂದು ಆಣೆಯಂತೆ ಸುಂಕ ವಸೂಲ ಮಾಡುತ್ತಾರೆ. ಇವರು ತಮಗೆ ಈ ಕ್ಷೇತ್ರವು ಸರ್ವ ಮಾನ್ಯವೆಂದು ಭಾವಿಸಿದ್ದಾರೆ. ಅಂತು ಇವರಿಂದ ಅನುಕೂಲ ಅನಾನುಕೂಲ ಎರಡೂ ಉಂಟೆಂದು ಹೇಳಬಹುದು.

ಈ ಮಹಾ ಕ್ಷೇತ್ರದ ವಿಷಯವನ್ನು ಬೇಕಾದಷ್ಟು ತಿಳಿಯಬೇಕಾಗಿದೆ. ಅದೆಲ್ಲವನ್ನೂ ಈ ಲೇಖನವೊಂದು ಪೂರೈಸಲಾರದು. ಈ ಶ್ರೀಶೈಲ ಜೀರ್ಣೋದ್ಧಾರ ಸಂಘದ ವ್ಯವಸ್ಥಾಪಕ ಸಮಿತಿಯ ಅಧ್ಯಕ್ಷರಾದ ತ್ರಿಲಿಂಗ ದೇಶೀಯರಲ್ಲಿ ಪ್ರಸಿದ್ಧರಾದ ಮ॥ ರಾ॥ ಪಿ. ರಾಮಯ್ಯ ಬಿ. ಎ. ಬಿ. ಎಲ್. ರವರು ತಾ. ೯-೩-೩೧ ನೇ ಪಂಚಾಚಾರ್ಯ ಪ್ರಭಾಪತ್ರಿಕೆಯಲ್ಲಿ ಈ ಕ್ಷೇತ್ರ ವಿಷಯವಾಗಿ ಒಂದು ಉತ್ತಮವಾದ ಲೇಖನ ಬರೆದಿದ್ದಾರೆ. ವಾಚಕರ ಅವಗಾಹನೆಗಾಗಿ ಅದನ್ನಿಲ್ಲಿ ಉದ್ಧರಿಸಿ ಬರೆದಿದೆ.

# ಶ್ರೀಶೈಲ ಮಹಾ ಕ್ಷೇತ್ರದ ಸಂಕ್ಷಿಪ್ತ ಚರಿತ್ರೆಯು.

ಶ್ರೀಶೈಲ ಮಹಾಕ್ಷೇತ್ರದ ಮಹಾತ್ಮೆಯು ಸ್ಕಾಂದ ಪುರಾಣದಲ್ಲಿಯೂ, ಮಹಾಭಾರತದಲ್ಲಿಯೂ ಉಲ್ಲೇಖಿಸಲ್ಪಟ್ಟಿರುವದರಿಂದ ಪ್ರಸಿದ್ಧ ಪವಿತ್ರ ಕ್ಷೇತ್ರಗಳಲ್ಲಿ ಇದೊಂದಾಗಿದೆ. ಕ್ರಿಸ್ತಶಕ ಮೊದಲನೆ ಶತಮಾನದಲ್ಲಿ ಈ ದೇಶಕ್ಕೆ ಬಂದಿದ್ದ ಚೈನಾದೇಶದ ಪ್ರಯಾಣಿಕರು ಈ ಮಹಾಕ್ಷೇತ್ರವನ್ನು ವಿಶೇಷವಾಗಿ ಪ್ರಶಂಸೆ ಮಾಡಿರುವರು. ಅದೂ ಅಲ್ಲದೆ ನಾಗಾರ್ಜುನ ಸ್ವಾಮಿಯೆಂಬ ಒಬ್ಬ ಬೌದ್ಧ ಸನ್ಯಾಸಿಯು ಈ ಮಹಾಕ್ಷೇತ್ರದಲ್ಲಿದ್ದು ಇಲ್ಲಿಯೇ ನಿರ್ವಾಣವಾದನೆಂಬುದಕ್ಕೆ ಆಧಾರವಿದೆ. ಪ್ರಾಚೀನ ಶಾಸನ ಸಂಶೋಧಕರೂ ಘನವಿದ್ವಾಂಸರೂ ಆದ ಶ್ರೀಕೃಷ್ಣ ಶಾಸ್ತ್ರಿಗಳು ಬರೆದಿರುವ ವರದಿಯನ್ನು ಓದಿದರೆ ಶ್ರೀಶೈಲ ಮಹಾಕ್ಷೇತ್ರದ ಅಡವಿಗಳೆಲ್ಲವೂ ಆರನೆಯ ಶತಮಾನದಲ್ಲಿ ದಕ್ಷಿಣದಲ್ಲಿ ಆಳಿದ ಕದಂಬ ಸಂತತಿಯ ಮಯೂರವರ್ಮನ ಆಳಿಕೆಗೆ ಸೇರಿದ್ದುವೆಂಬುದು ತಿಳಿದುಬರುತ್ತದೆ. ಅನೇಕ ಜಮೀನದಾರರೂ ಮಹಾರಾಜರೂ ಕುಟುಂಬ ಸಮೇತವಾಗಿ ಆಧ್ಯಾತ್ಮಿಕ ಸೌಖ್ಯವನ್ನು ಪಡೆಯುವದಕ್ಕೋಸ್ಕರ ಇಲ್ಲಿಗೆ ಬಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಸೇವೆಯನ್ನು ಮಾಡಿ ಅನೇಕ ವಿಧ ದಾನಗಳನ್ನು ಮಾಡಿರುವರೆಂಬುದು ಅನೇಕ ಶಾಸನಗಳಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಆಂಧ್ರ ಸಾಮ್ರಾಜ್ಯವನ್ನು ಅತ್ಯಂತ ವೈಭವದಿಂದ ಆಳಿದ ಶ್ರೀಪ್ರತಾಪರುದ್ರ ಮಹಾರಾಜನ ಪ್ರಭುತ್ವದ ವಿಧಾನವು ಹದಿನಾಲ್ಕನೆಯ ಶತಮಾನದ ಶಾಸನಗಳಿಂದ ತಿಳಿದುಬರುತ್ತದೆ. ಆ ಕಾಲದಲ್ಲಿ ಶ್ರೀಶೈಲದೇವಾಲಯದ ಧರ್ಮದರ್ಶಿಗಳಾಗಿದ್ದ ಈಶ್ವರ ಶಿವಾಚಾರ್ಯ ಮತ್ತು ಇತರ ಮೂವರು (ಈ ಶಿವಾಚಾರ್ಯನು ವೀರಶೈವ ಸ್ವಾಮಿಯಾಗಿರಬಹುದು.) ಪ್ರಾಚೀನ ರಾಜರು ದೇವಸ್ಥಾನದ ಉಪಯೋಗಕ್ಕಾಗಿ ದಾನಮಾಡಿದ್ದ ೭೦ ಹಳ್ಳಿಗಳ ವರಮಾನದಿಂದ ಜೀರ್ಣೋದ್ಧಾರ ಮೊದಲಾದ ಸುಧಾರಣೆಗಳನ್ನು ಮಾಡುತ್ತಿದ್ದರೆಂದು ಗೊತ್ತಾಗುತ್ತದೆ.

೧೪ನೆಯ ಶತಮಾನದಲ್ಲಿ ನೇಮರೆಡ್ಡಿಯವರು ಯಾತ್ರಿಕರ ಅನುಕೂಲಕ್ಕಾಗಿ ಪಾತಾಳ ಗಂಗೆಗೆ ಹೋಗಲು ಸೋಪಾನಗಳನ್ನು ನಿರ್ಮಿಸಿದರು. ಕೆಲವು ಕಾಲಗಳ ನಂತರ ಕದಂಬ ಸಂತತಿಯ ರಾಣಿ ವಿಟ್ಟಲಾಂಬಾ ಎಂಬವರು ಜೀರ್ಣೋದ್ಧಾರ ಮಾಡಿದರು. ಶ್ರೀ ಮಲ್ಲಿಕಾರ್ಜುನ

ಸ್ವಾಮಿ ದೇವಸ್ಥಾನದ ವೀರಮಂಟಪವು ನೇಮರೆಡ್ಡಿಯ ಮಗನಾದ ಅನ ರೇಮರೆಡ್ಡಿಯಿಂದ ಕಟ್ಟಿಸಲ್ಪಟ್ಟಿತು. ಕ್ರಿ. ಶ. ೧೪೦೫ ರಲ್ಲಿ ಸುಪ್ರಸಿದ್ಧ ವಿಜಯನಗರದ ರಾಜರಾದ ಹರಿಹರರಾಯರು ಮಲ್ಲಿಕಾರ್ಜುನ ಸ್ವಾಮಿಯ ಮುಖ್ಯ ಮಂಟಪವನ್ನೂ ಸಮೀಪದಲ್ಲಿ ಕೆಲವು ಕೆರೆಗಳನ್ನೂ ನಿರ್ಮಿಸಿದರು. ಕೆಲವು ಕಾಲಗಳ ಮಟ್ಟಿಗೆ ವಿಜಯನಗರದ ಪ್ರಭುಗಳಾದ ಶಾಲ್ವ ದೊರೆಗಳು ಅನೇಕ ದಾನಗಳನ್ನು ಮಾಡಿದರು.

ಶ್ರೀಕೃಷ್ಣದೇವರಾಯರ ಸಹೋದರರಾದ ವೀರ ನರಸಿಂಹರಾಯರು ಈ ಕ್ಷೇತ್ರಕ್ಕೆ ಬಂದು ಅನಂತ ದಾನಗಳನ್ನು ಮಾಡಿರುವರೆಂಬುವುದು ಅನೇಕ ಶಾಸನಗಳಿಂದ ವ್ಯಕ್ತವಾಗುತ್ತದೆ.

೧೬ನೆಯ ಶತಮಾನದ ಆದಿಯಲ್ಲಿ ಶ್ರೀಕೃಷ್ಣದೇವರಾಯನು ಜಯಶೀಲನಾಗಿ ತನ್ನ ದೇಶಕ್ಕೆ ಹಿಂತಿರುಗಿ ಹೋಗುತ್ತಿರುವಾಗ ಈ ಕ್ಷೇತ್ರಕ್ಕೆ ಬಂದು ದೇವಸ್ಥಾನದ ಹೆಬ್ಬಾಗಿಲಿನಿಂದ ಪಾತಾಳಗಂಗೆಗೆ ಹೋಗತಕ್ಕ ದಾರಿಯ ಉಭಯ ಪಾರ್ಶ್ವಗಳಲ್ಲಿಯೂ ಮಂಟಪಗಳನ್ನು ಕಟ್ಟಿಸಿ ದೇವಸ್ಥಾನದ ಪ್ರಾಕಾರದ ಪೂರ್ವ-ದಕ್ಷಿಣ ಮತ್ತು ಉತ್ತರದಿಕ್ಕಿನ ಗೋಡೆಗಳ ಮೇಲೆ ಸುಂದರವಾದ ವಿಗ್ರಹಗಳನ್ನು ಸಹ ಕೆತ್ತಿಸಿದರು.

ಹಂಪೆಯ ದೇವಸ್ಥಾನದಲ್ಲಿ ಕಂಡು ಬರುವ ಕಲಾಕೌಶಲ್ಯವು ಈ ದೇವಾಲಯದಲ್ಲಿಯೂ ಕಂಡುಬರುವುದರಿಂದ ಇಲ್ಲಿರುವ ಪ್ರತಿಮೆಗಳು ಶ್ರೀಕೃಷ್ಣದೇವರಾಯನಿಂದ ಕಳುಹಲ್ಪಟ್ಟಿದ್ದ ಶಿಲ್ಪಿಗಳಿಂದಲೇ ನಿರ್ಮಿಸಲ್ಪಟ್ಟಿರಬಹುದೆಂದು ಕಂಡುಬರುತ್ತದೆ. ಆ ಕಾಲದಲ್ಲಿ. ಶ್ರೀಶೈಲವು ದೊಡ್ಡ ಪಟ್ಟಣವಾಗಿದ್ದಿತೆಂದೂ ಶ್ರೀಕೃಷ್ಣದೇವರಾಯನಿಂದ ಕಳುಹಿಸಲ್ಪಟ್ಟ ಚಂದ್ರಶೇಖರರಾಯರು ಎಂಬುವರ ಆಳಿಕೆಗೆ ಒಳಪಟ್ಟಿದ್ದಿತಲ್ಲದ ಅವರು ನಂದಿಯನ್ನೂ ಸುವರ್ಣಮಯವಾದ ಕೆಲವು ವಾಹನಗಳನ್ನೂ ನಿರ್ಮಿಸಿ ದೇವಸ್ಥಾನದ ಗೌರವವನ್ನು ಹೆಚ್ಚಿಸಿದರು.

ಹಾಳುಬಿದ್ದಿರುವ ದೇವಸ್ಥಾನಗಳನ್ನೂ ಬೀದಿ ಮತ್ತು ಮನೆಗಳನ್ನೂ ನೋಡಿದರೆ ಇದು ಒಂದು ಕಾಲದಲ್ಲಿ ಅಭಿವೃದ್ಧಿಯನ್ನು ಪಡೆದಿದ್ದ ಪಟ್ಟಣವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.

೧೬ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ ಆಶ್ರಿತ ಸಂಸ್ಥಾನದ ಪ್ರಭುವರ್ಯರಾದ ಶಾಂತಲಿಂಗರಾಜ ಎಂಬುವರು

ಪ್ರವೇಶಗೋಪುರವನ್ನೂ, ನಂದಿ ಮೊದಲಾದ ವಾಹನಗಳನ್ನೂ ರಿಪೇರಿ ಮಾಡಿಸಿ ಗೋಡೆಗಳಿಗೂ ಸಹ ಭಂಗಾರದ ತಗಡನ್ನು ಹಾಕಿಸಿದ್ದರು.

೧೬ ನೆಯ ಶತಮಾನದಲ್ಲಿ ವಿಜಯನಗರ ರಾಜ್ಯವು ಮಹಮ್ಮದೀಯರ ಕೈವಶವಾದಾಗ ಶ್ರೀಶೈಲಪಟ್ಟಣವು ಹಾಳಾಯಿತು. ಮತ್ತು ೧೮ ನೆಯ ಶತಮಾನದಲ್ಲಿ ಮುನಾವರ್‌ಖಾನ್ ಎಂಬ ಮಹಮದೀಯ ದೊರೆಯ ಆಳಿಕೆಯಲ್ಲಿ ದೇವಸ್ಥಾನವು ಲೂಟಿ ಮಾಡಲ್ಪಟ್ಟಿತ್ತು. ಕಳ್ಳರು ಅನೇಕ ವಸ್ತುಗಳನ್ನು ದೋಚಿಕೊಂಡು ಹೋದರು. ಆಗ ಶ್ರೀಶೈಲ ಪಟ್ಟಣದ ಜನರು ಆ ಸ್ಥಳವನ್ನು ಬಿಟ್ಟು ಬೇರೆ ರಾಜ್ಯಗಳಲ್ಲಿ ನೆಲಿಸಿದರು. ಆ ಪಟ್ಟಣವು ಸಂಪೂರ್ಣವಾಗಿ ನಾಶವಾದ ಮೇಲೆ ಅದು "ಚುಂಚರು" ಮೊದಲಾದ ಕಾಡು ಜನರ ವಾಸಸ್ಥಾನವಾಯಿತು. ಆಗಾಗ್ಗೆ ರೋಹಿಲ್ಲಾ ಜನರು ಬಂದು ಲೂಟಿ ಮಾಡುತ್ತಿದ್ದರು. ಅಲ್ಲಿ ವಾಸವಾಗಿದ್ದ ಚುಂಚು ಜನರು ದೇವಸ್ಥಾನದ ಬಂಗಾರದ ತಗಡುಗಳನ್ನು ಕಳುವು ಮಾಡುತ್ತಿದ್ದರು. ಹಾಗೂ ಹೀಗೂ ಉಳಿದಂಥ ಕೆಲವು ಬಂಗಾರದ ತಗಡುಗಳು ಕರ್ನೂಲಿಗೆ ತರಲ್ಪಟ್ಟು ಹರಾಜು ಹಾಕಲ್ಪಟ್ಟವು. ಗೌರ್ನಮೆಂಟಿನವರು ಅವುಗಳನ್ನು ಕೊಂಡುಕೊಂಡು ಮದ್ರಾಸಿನ ಮ್ಯೂಜಿಯಂನಲ್ಲಿಟ್ಟಿರುವರು. ಅಲ್ಲಿ ಅದು ಶ್ರೀ ಶೈಲದ ಗತ ವೈಭವವನ್ನು ಸಾರುತ್ತದೆ.

ಹಿಂದುಳಿದ ಪಂಗಡಗಳಿಗೆ ಈಗ ಸಟ್ಲಮೆಂಟಾಗಿರುವ "ಸಿದ್ದಾಪುರಂ" ಎಂಬ ಸ್ಥಳವು ಮತ್ತು ಅದರ ವಿಶಾಲವಾದ ಕೆರೆಯು ಈ ದೇವಸ್ಥಾನಕ್ಕೆ ಪೂರ್ವದಲ್ಲಿ ಸರ್ವಾಗ್ರಹಾರವಾಗಿದ್ದಿತು. ಅನೇಕ ಶತಮಾನಗಳವರೆಗೂ ರಾಜಾಧಿರಾಜರುಗಳಿಂದ ಅನಂತ ಜಹಗೀರುಗಳನ್ನೂ ಗೌರವವನ್ನೂ ಪಡೆದು ಈ ಕ್ಷೇತ್ರವು ಅತ್ಯಂತ ವೈಭವವನ್ನು ಹೊಂದಿದ್ದಿತು. ಈ ಮಹಾಕ್ಷೇತ್ರಕ್ಕೆ ಈಗ ಪ್ರತಿದಿವಸದ ಪೂಜಾದಿ ಕಾರ್ಯಗಳನ್ನು ನಡೆಯಿಸಲು ಸಾಕಾದಷ್ಟು ಆಸ್ತಿ ಇಲ್ಲದಿರುವ ಸ್ಥಿತಿಯನ್ನು ನೋಡಿದರೆ ಯಾರಿಗೆ ತಾನೇ ದುಃಖದಿಂದ ಕಣ್ಣೀರು ಬರಲಿಕ್ಕಿಲ್ಲ.

ಒಂದಾನೊಂದು ಕಾಲದಲ್ಲಿ ಭಂಗಾರದ ತಗಡುಗಳಿಂದ ಕೆತ್ತಲ್ಪಟ್ಟಿದ್ದ ಗೋಡೆಗಳಿಗೆ ಈಗ ಸರಿಯಾದ ಗಾರೆ ಗಿಲಾಯಿ ಸಹ ಇರುವುದಿಲ್ಲ. ಅನೇಕ ಗೋಪುರಗಳು ಬಿದ್ದು ಹೋಗಿವೆ. ಅನೇಕ ಜಲಾಶಯಗಳು ಮುಚ್ಚಿಹೋಗಿವೆ. ಗರ್ಭಾಲಯದ ಕಲ್ಲುಕಂಭಗಳೂ, ಜಂತಿ

ಗಳೂ ಬಿದ್ದುಹೋಗಿವೆ. ಮೂರು ಶತಮಾನಗಳಲ್ಲಿ ಎಂತಹ ಅದ್ಭುತ ಬದಲಾವಣೆ. ಅಯ್ಯೋ! ಅಯ್ಯೋ!! ಓ ಮಲ್ಲಿಕಾರ್ಜುನಾ ನಿನ್ನ ಶಕ್ತಿಯು ರಾಜಾಧಿರಾಜರ ಹೃದಯಗಳಲ್ಲಿ ಬಿಂಬಿಸಿ ಪ್ರೇರೇಪಿಸದಿದ್ದರೆ ನಾಗೋನ್ಮುಖವಾಗಿರುವ ನಿನ್ನ ದೇವಸ್ಥಾನವನ್ನೂ ಜೀರ್ಣೋದ್ಧಾರ ಮಾಡಲು ಸಾಧ್ಯವಿಲ್ಲ.

ಆಂಧ್ರ ದೇಶದಲ್ಲಿ ರತ್ನಪ್ರಾಯರಾದ ಶ್ರೀಮಾನ್ ದೇಶೋದ್ಧಾರಕ ಕೆ. ನಾಗೇಶ್ವರರಾವರವರ ಅಧ್ಯಕ್ಷತೆಯಲ್ಲಿ "ಶ್ರೀಶೈಲಕ್ಷೇತ್ರದ ಜೀರ್ಣೋದ್ಧಾರ ಮತ್ತು ಅಭಿವೃದ್ಧಿಯ ಸಂಘ" ಎಂಬ ಸಂಸ್ಥೆಯು ಏರ್ಪಟ್ಟಿದೆ. ಮಲ್ಲಿಕಾರ್ಜುನ ಸ್ವಾಮಿಯ ಭಕ್ತರೆಲ್ಲರೂ ಧನರೂಪದಲ್ಲಿಯಾಗಲಿ ಅಥವಾ ಇನ್ನಾವ ವಿಧದಲ್ಲಿಯಾಗಲಿ ಸೇವೆ ಮಾಡದಿದ್ದರೆ ಮೇಲೆ ಕಂಡ ಸಂಘದವರ ಪ್ರಯತ್ನಗಳು ಸಿದ್ಧಿಸಲಾರವು.

**ಪಿ. ರಾಮಯ್ಯ ಪ್ರೆಸಿಡೆಂಟ**
ಶ್ರೀಶೈಲ ಮ್ಯಾನೇಜಮೆಂಟ ಬೋರ್ಡು

ಶ್ರೀಶೈಲ ಮಹಾಕ್ಷೇತ್ರದ ಸೇವೆಯಲ್ಲಿ ನಿರತರಾಗಿರುವ ಶ್ರೀ. ರಾಮಯ್ಯನವರ ಮೇಲಿನ ಲೇಖನದಿಂದ ಅನಂತ ಸಂಗತಿಗಳು ತಿಳಿದುಬರುತ್ತವೆ.

ಶ್ರೀಶೈಲದ ಘನತೆಯನ್ನು ಶ್ರೀ ಸರ್ಪಭೂಷಣ ಶಿವಯೋಗಿಗಳು ತಮ್ಮ ಕೈವಲ್ಯ ಕಲ್ಪವಲ್ಲರಿಯಲ್ಲಿ "ಶ್ರೀ ಗಿರಿಯ ಸುಕ್ಷೇತ್ರಕಿಂದುಹೋಗಿ ಯಾತ್ರೆಯ ಮಾಡಿ ಬಂದೆ ಶ್ರೀಗಿರಿಯು ಶರಿರದೊಳಗುಂಟು" ಎಂಬ ವಚನದಲ್ಲಿ ಹೇಳಿರುವುದನ್ನು ವಾಚಕರು ಸ್ಮರಿಸಿಕೊಳ್ಳಬಹುದು. ಸ್ಕಾಂದಪುರಾಣಾಂತರ್ಗತವಾದ ಶ್ರೀಶೈಲ ಮಹಿಮೆಯನ್ನು ಓದಿ ನೋಡಬಹುದು.

ಕಂದ॥ ಭ್ರಮರಾಂಬಾಂಧವನೆನಿಸುತೆ।
ಯಮಿಜನ ಹೃತ್ಕಮಲ ಮಧ್ಯೆರಾಜಿಪನೆನುತಂ॥
ಕ್ರಮಧಿಂ ಭಕುತರ ಪೊರೆಯುವ।
ವಿಮಲ ಶ್ರೀ ಮಲ್ಲಿಕಾರ್ಜುನಂ ಪೊರೆಗೆಮ್ಮಂ ॥೧॥

(ಶ್ರೀಗಿರಿಮಲ್ಲಿಕಾರ್ಜುನ ಸಲಹು ಮೂಜಗಮಂ)

---

## ಹರಿಹರಾಚಾರ್ಯರ ಕೃತ.

# ಲಿಂಗಾರ್ಚನೆಯ ರಗಳೆ.



ಕಂದ॥ ಇಂದುಧರ ನಿಮ್ಮ ಚರಣ।
ದ್ವಂದ್ವ ಮನನವರತವರ್ಚಿಸುತ್ತಿಹ ಸುಖಮಂ।
ತಂದೆ ಭವಭವದೊಳೀವುದು।
ಕಂದರ್ಪಮದಾರಿ ಹಂಪೆಯ ವಿರೂಪಾಕ್ಷಾ॥

## ಲಲಿತ ರಗಳೆ.

ಶ್ರೀಗುರುವೆ ಹಂಪೆಯ ವಿರೂಪಾಕ್ಷ ಕೇಳಯ್ಯ।
ನಾಗಭೂಷಣ ನಿಮ್ಮ ವೇಳೆಯಾಳಿನಯ್ಯ॥
ಸಲುಗೆಯಿಂ ಬಿನ್ನಪಂಗೈಯ್ದಪೆಂ ನಾನಯ್ಯ।
ಒಲವಿಂದೆನಗೆ ವಿರೂಪಾಕ್ಷ ಕರುಣಿಸುದಯ್ಯ॥

ಧರೆಯೊಳಗೆ ನಿಮ್ಮ ತೊತ್ತೆಂದು ಸಲಹುವದಯ್ಯ।
ಪರಮ ಭಕ್ತರ ಪದಕ್ಕೆನ್ನ ಸಲಿಸುವದಯ್ಯ॥

ಆಗಲದೆ ನಿರಂತರಂ ನಿಮ್ಮನರ್ಚಿಸುವುದಂ।
ಬೀಗೆ ಮೆಚ್ಚಿ ಮನವುಕ್ಕಿ ಬಂದು ಪುಳುಕಿಸುವುದಂ॥
ತುಂಗಭದ್ರಾನದಿಯ ಸಲಿಲಮಂ ಪೊಗತಂದು
ಲಿಂಗ ನಿಮಗಾನೆ ಮನವಾರೆ ಮಜ್ಜನಕೆಂದು॥

ಮಘಮಘಿಪ ಚಂದನವನುದ್ವರ್ತನಂ ಮಾಡಿ।
ಅಗಿಲು ಕರ್ದಮಗಳಂ ನಿಮ್ಮ ಮೈಯೊಳ್ತೀಡಿ॥

ಅರೆವಿರಿದ ಸುರಗಿ ಸುರಹೊನ್ನೆ ಸಂಪಗೆಗಳಂ।
ಪರಿಮಳವ ಸೂಸುತಿಹ ಮಲ್ಲಿಗೆಯರಲ್ಗಳಂ॥

ತನಿಗಂಪಸೂಸುವ ಮಲ್ಲಿಗೆ ಜಾಜಿ ಪೂಗಳಂ।
ಭರದಿಂದ ತಂದು ಪೂಮಾಲೆಯಂಗಳ ನೆಸಗಿ॥
ಪೆಂಪೆಸೆವ ಶಿವ ನಿಮ್ಮ ಸಿರಿಮುಡಿಯೊಳಗೆ ಸುತ್ತಿ।
ಕಮನೀಯವೆನಿಪ ಗುಗ್ಗಳದ ಧೂಪವನೆತ್ತಿ।
ರಮಣೀಯವೆನಿಪ ಪೊಳೆವಾರತಿಗಳನ್ನೆತ್ತಿ॥

ಸಂತೋಷದಿಂದೆ ಮಾಣಿಕದ ಪರಿಯಾಣಮಂ ।
ಮುಂತಿರಿಸಿ ಧಾವಳ್ಯಮಪ್ಪವೋಗರವ ನಿಂಬಪ್ಪ ॥

ದಿವ್ಯಾನ್ನವ ವೃತಾನ್ನ ದೇವಾನ್ನವಂ ಬಡಿಸಿ ।
ನವ್ಯ ಸೌರಭ ಶಾಕಪಾಕಂಗಳಂ ಬಡಿಸಿ ॥

ಹರುಷದಿಂ ಮನವುಕ್ಕಿ ಕರಗಳಂ ಮುಗಿಮುಗಿದು ।
ಹರನೆ ಕೈಕೊಳ್ಳೆಂದು ಭಕ್ತಿಯಿಂದಗಿದಗಿದು ॥

ಚೆನ್ನಯ್ಯ ನಿಕ್ಕಿದಂಬಲಿಯಿದಾರೈಸಯ್ಯ ।
ಕನ್ನೆ ನಿಮಗೆರೆದ ಹಾಲೆಂದ ಪಃ ೃಸಯ್ಯ ॥

ಚೋಳಿಯಕ್ಕನ ಬಾಯ ತುತ್ತೆಂದು ಕೊಳ್ಳಯ್ಯ ।
ಚೋಳನಿಮಗಿತ್ತನ್ನವೆಂದು ಕೈಕೊಳ್ಳಯ್ಯ ॥

ಕಣ್ಣಪ್ಪನಣುಗನೆಂದೆನಗೆ ಕರುಣಿಪುದಯ್ಯ ।
ಉಣ್ಣದಿರಬಾರದೆಂಬುದನರಿದೆ ನುಣ್ಣಯ್ಯ ॥

ಯಳೆಯಾಂಡ ಗುಡಿಯ ಮಾರನರಸುತ ನಾನಯ್ಯ ।
ಛಳಿಸಿದೇವಾನ್ನ ವಿಕ್ಕಿದ ಸುತನು ನಾನಯ್ಯ ॥

ಒಕ್ಕಲಿಗ ಮುದ್ದಯ್ಯನಕ್ಕರಿನ ಸುತನಯ್ಯ ।
ಚಿಕ್ಕನುಣ್ಣದೊಡೆ ನಿಮ್ಮಣುಗ ಸುತನಾನ್ಯೆಯ್ಯ ॥

ಎಂದು ಭಕ್ತಿಯ ಮನದೊಳಾನೆ ನಿಮಗುಣಲಿತ್ತು ।
ಸಂದ ಶರಣರ ವರ ನಿಧಾನ ನಿಮಗುಣಲಿತ್ತು ॥

ಪನ್ನೀರ ಅಗ್ಗಣಿಯ ತಂದು ಹಸ್ತಕ್ಕೆರೆದು ।
ಪನ್ನಗಧರಗೆ ಕೈಘಟ್ಟಿಯಂ ಕೊಟ್ಟಿರ್ದು ॥

ಕರ್ಪೂರ ವೀಳೆಯವನೊಸೆದಳ್ತಿಯಿಂ ಕೊಟ್ಟು ।
ಸರ್ಪಭೂಷಣ ನಿಮ್ಮ ಚರಣಕ್ಕೆ ಪೊಡಮಟ್ಟು ॥

ಹೆರೆ ಸಾರ್ದು ನಿಮ್ಮ ಪೂಜೆಯನಳ್ಕರಿಂ ನೋಡಿ ।
ಕರಿಕಂಠ ಶರಣೆಂದು ಸದ್ಭಕ್ತಿಯಂ ಬೇಡಿ ॥

ಮನವುಕ್ಕಿ ಪೊಗಳಲುದ್ಯುತನಾಗಿ ನಿಂದಿರ್ದು ।
ತನಿನೇಹ ವೊತ್ತರಿಸಿ ನಿಮ್ಮ ಹತ್ತಿರೆ ಸಾರ್ದು ॥

ದೇವ ಮಮಹೃತ್ಕಮಲಮಂಡಿತ ವಿರೂಪಾಕ್ಷ ।
ದೇವ ಪ್ರಮಥನಿಚಯ ಪರಿವೃತ ವಿರೂಪಾಕ್ಷ ॥

ದೇವ ನೃಕರೋಟಿಮಾಲಾಧರ ವಿರೂಪಾಕ್ಷ ।
ದೇವ ಕೋಟ್ಯರ್ಕ ತೇಜೋಮಯ ವಿರೂಪಾಕ್ಷ ॥

ದೇವ ಗಂಗಾಮಕುಟ ರಂಜಿತ ವಿರೂಪಾಕ್ಷ ।
ದೇವ ಭೃಂಗೀಶ ನಾಟ್ಯಪ್ರಿಯ ವಿರೂಪಾಕ್ಷ ॥

ದೇವ ಹರಹರ ಮನ್ಮನೋಹರ ವಿರೂಪಾಕ್ಷ ।
ದೇವ ಶಿವಶಿವ ಸದಾಶಿವ ಶಿವ ವಿರೂಪಾಕ್ಷ ॥

ಎಂದಿಂತು ಪೊಗಳ್ದು ತಣಿವೆಯ್ದದೇ ಬಾಯ್ಬಿಟ್ಟು ।
ನಿಂದೊಮ್ಮೆ ಹಾಡಿ ನೋಡುವೆನೆಂದು ಮನನಟ್ಟು ॥

ಲಲಿತ ಬಂಗಾಳದಿಂದೊಲಿದು ನಿಮ್ಮಂ ಹಾಡಿ ।
ಮಲಹರಿವರಾಳಿಯಿಂದೊಲಿದು ನಿಮ್ಮಂ ಹಾಡಿ ॥

ರೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ ।
ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ ॥

ಭಕ್ತೀಸರಾಗದಿಂ ತರ್ತು ನಿಮ್ಮಂ ಹಾಡಿ ।
ಚಿತ್ತದೊಡೆಯನೆ ಮತ್ತೆ ಮತ್ತೆ ನಿಮ್ಮಂ ಹಾಡಿ ॥

ಚನ್ನಯ್ಯನಂ ಹಾಡಿ ಹೊನ್ನಯ್ಯನಂ ಹಾಡಿ ।
ಕಿನ್ನರಿಯ ಬೊಮ್ಮಿ ತಂದೆಯನೊಪ್ಪದಿಂ ಹಾಡಿ ॥

ಕಕ್ಕಯ್ಯನಂ ಹಾಡಿ ಚಿಕ್ಕಯ್ಯನಂ ಹಾಡಿ ।
ಅಕ್ಕರಿಂ ನಿಜಲಿಂಗ ಚಿಕ್ಕಯ್ಯನಂ ಹಾಡಿ ॥

ಬಂಕಯ್ಯನಂ ಹಾಡಿ ಬಂಕಯ್ಯನಂ ಹಾಡಿ ।
ಲೆಂಕ ಮಂಚಣ್ಣನಂ ಕಲಿಕೇತನಂ ಹಾಡಿ ॥

ಬಸವರಾಜನ ಮಳೆಯರಾಜನೋಹಿಲಯ್ಯನಂ ।
ಮುಸುಟೇಯ ಚೌಡರಾಯನನುದ್ಭಟಯ್ಯನಂ ॥

ಕೇಶಿರಾಜನ ದುಗ್ಗಳವೆ ದಾಸಿಮಯ್ಯನಂ ।
ಬಾಷೆಗೀಶನ ತಂದ ಮಿಸುಪಾದಿಮಯ್ಯನಂ ॥
ಸಿದ್ಧರಾಮನನಲ್ಲಮನ ಮಲುಹಣಯ್ಯನಂ ।
ರುದ್ರಪಶುಪತಿ ಹಲಾಯುಧಮಯೂರಯ್ಯನಂ ॥

ಸಾಮವೇದಿಗಳಿಗೊಪ್ಪುವ ಶ್ವಪಚದೇವನಂ।
ಕಾಮಿತವನೀವ ಸಿರಿಯಾಳ ಚಂಗಳೆಯರಂ॥

ನಂಬಿಯಣ್ಣನ ನಿಂಬಿಯಕ್ಕ ಸತ್ಯಕ್ಕನಂ।
ಕೆಂಭಾವಿಯೊಳ್ಮೆರೆದ ಭಂಗ ಭೋಗಯ್ಯನಂ॥

ಕೊಂಡುಗೂಳಿಯ ಕೇಶಿರಾಜ ತೆಲುಗೇಶನಂ।
ಪಂಡಿತಾರಾಧ್ಯ ನಿಂಡೆಯ ಶಾಂತಿಮಯ್ಯನಂ॥

ಚೋಳಚೇರನು ಗೊಲ್ಲಳರ ಬಿಬ್ಬಿಬಾಚನಂ।
ಕೋಳೂರ ಕೊಡಗೂಸು ಮಹದೇವಿಯಕ್ಕನಂ॥

ಕಾಳಿದಾಸನ ಕಣ್ಣಪನ ಚೆನ್ನಬಸವನಂ।
ಮೋಳಿಗೆಯ ಮಾರಿತಂದೆಯ ಮಾದಿರಾಜನಂ॥

ಅಮ್ಮವ್ವೆ ರೆಮ್ಮವ್ವೆ ಕದಿರೆ ರೆಮ್ಮವ್ವೆಯಂ।
ನಿರ್ಮಳ ಜ್ಞಾನಿ ಕಮಳವ್ವೆ ಬಾಚವ್ವೆಯಂ॥

ಗುರುಭಕ್ತ ಜಗದೇವ ಮೊಲ್ಲೆಬೊಮ್ಮಯ್ಯನಂ।
ಪರದೈವರಹಿತ ಶಂಕರ ದಾಸಿಮಯ್ಯನಂ॥

ನಚ್ಚಿನರುವತ್ತು ಮೂವರನ ಸಂಖ್ಯಾತರಂ।
ಅಚ್ಚರಿಯೊಳೆಸೆವ ಭಕ್ತ್ಯಂಗನೆಯರೆಲ್ಲರಂ॥

ಭಕ್ತಿಯಿಂದಿಂತು ಪಾಡಲ್ಕೊಸೆದು ಮೆಚ್ಚಾಗಿ।
ಯುಕ್ತಿಯಂ ಮೀರಿದರಸಂ ನಿಮ್ಮ ನಚ್ಚಾಗಿ॥

ಇಂತು ಮಹಲಿಂಗಮಂ ಕಂಗಳೊಳಗೊತ್ತುತಂ।
ಮುಂದೆ ಹಾಹಾಯೆಂದು ವಿಷಯಕ್ಕೆಯುಳ್ಕುತಂ॥

ಭೃಂಗಿಯ ಪದಂಗಳಂ ನೆನೆನೆನೆದು ನೆನೆನೆನೆದು।
ಭಂಗಿಯಿಂ ಕೋಡಗಾಟವನಾಡಿ ನಲಿದಾಡಿ॥

ಗತಿವಾದ್ಯಗತಿಗಳಿಂ ಕುಣಿಕುಣಿದು ಕುಣಿದಾಡಿ।
ಅತಿಶಯನುಬೋಧೆಯಿಂ ಭಕ್ತಿಗೆ ಮನಂದಣಿದು॥

ಏನುವಂ ತಾನರಿಯದಾನಂದದಿಂ ನಿಂದು।
ಮೌನವೇ ಗತಿಮತಿಯದಾಗಿ ನೆರೆ ಸಲೆಸಂದು॥

ಪೊಗಳ್ವಕ್ಕರಂ ನಲಿದು ನಾಲಿಗೆಯ ಮೇಲಿರಲು ।
ಬಗೆಯ ಭಾವಂ ಬಲಿದು ಮನವನೆಡೆಗೊಂಡಿರಲು ॥

ಕೈಕಂಪನವ ಭೀತಿ ಮೈಬೆಮರುಯಿರದೇರೆ ।
ಬಾಯಿ ತೊದಳುಬ್ಬರಿಸೆ ಸುಯ್ಯು ನಿನ್ನೊಳಗಿರಿಸೆ ॥

ಏನೆನ್ನ ಶಂಭುವೆ ಸದಾಶಿವ ಮಹಾದೇವ ।
ಏನೆನ್ನ ಕಾರುಣ್ಯ ಸಿಂಧುವೆ ಮಹಾದೇವ ॥

ಏನೆನ್ನ ನಚ್ಚಿನಧಿದೈವವೆ ಮಹಾದೇವ ।
ಏನೆನ್ನ ಮಚ್ಚಿನ ಮಹಾಸುಧೆಯ ಮಾದೇವ ॥

ಏನೆನ್ನ ನಲಿದು ಪೊರೆವಾಳ್ದನೆ ಮಹಾದೇವ ।
ಏನೆನ್ನ ನೊಲಿವ ಕುಲದೈವವೆ ವಿರೂಪಾಕ್ಷ ॥

ಎಂದೀ ತೆರದಿ ನಿಮ್ಮನಪ್ಪಿ ಸುಖವಡೆವುದಂ ।
ತಂದೆ ಕರುಣಿಪುದಯ್ಯ ಸದ್ಭಕ್ತನಪ್ಪುದಂ ॥

ಆವಜಾತಿಗಳೊಳಗೆ ಹುಟ್ಟಿಸಿದೊಡೆಲೆ ದೇವ ।
ನೀವಲ್ಲದರಿಯದಂತಿರಿಸೆನ್ನನೆಲೆದೇವ ॥

ಇಳಿಕೈಯ್ಯದೀ ಸುಖವನೆನಗೆ ಕರುಣಿಪುದಯ್ಯ ।
ಬಳವಳಿಯ ತೊತ್ತೆಂದು ಬಡಿದು ಕಲಿಸುವುದಯ್ಯ ॥

ಬೇರೊಂದ ನೊಲಿವನಲ್ಲೆಂಬುದನರಿವುದಯ್ಯ ।
ಸಾರಿ ಮೊರೆಯಿಟ್ಟೆನೆನ್ನಂ ದಯದಿ ನೋಡಯ್ಯ ॥

ಆವ ತೆರದಿಂದಾದೊಡಂ ಗುರು ವಿರೂಪಾಕ್ಷ ।
ದೇವ ಕರುಣಿಪುದಯ್ಯ ಹಂಪೆಯ ವಿರೂಪಾಕ್ಷ ॥

ಆಳಿನಪಮಾನವಾಳ್ದಂಗಯ್ಯ ಕಾಯಯ್ಯ ।
ಜಾಳಿಸಿದ ಪಾಪಾತ್ಮವಿದನಿನ್ನು ನೀಗೈಯ್ಯ ॥

ಮಾಡುವವನುಂ ನೀನೆ ನೋಡುವವನುಂ ನೀನೆ ।
ಬೇಡುವವನುಂ ನೀನೆ ನುಡಿಸುವವನುಂ ನೀನೆ ॥

ತೊತ್ತಿಂಗದೇನಯ್ಯ ಭೃತ್ಯಂಗದೇನಯ್ಯ ।
ದೀನಂಗದೇನಯ್ಯ ಮೌನವೇ ನಿಮಗಯ್ಯ ॥

ಈಕ್ಷಿಸು ವಿರೂಪಾಕ್ಷ ರಕ್ಷಿಸು ವಿರೂಪಾಕ್ಷ ।
ದಯಗೈಯ್ವಿರೂಪಾಕ್ಷ ಭಯಹರ ವಿರೂಪಾಕ್ಷ ।
ಜಯಜಯ ವಿರೂಪಾಕ್ಷ ಜಯನಮೋಽಸ್ತುತೇ ॥

ಕಂದ ॥ ಕೇಳಯ್ಯ ವಿರೂಪಾಕ್ಷ ಕೃ ॥
ಪಾಳುವೆ ನಿಮ್ಮಡಿಯ ತೊತ್ತುತೊತ್ತಿನ ಭೃತ್ಯಂ ।
ಗಾಳಾಳಿನಾಳಿಗಾಳಾ ॥
ಳ್ಗೀಳುಂ ಭವದಲ್ಲಿ ಹಂಪೆಯ ವಿರೂಪಾಕ್ಷಂ ।

# ವೀರಶೈವರ ಇತಿಹಾಸ ಮತ್ತು ಧರ್ಮ.

(ಶಿವಾನುಭವ ಸಂಪುಟ ೬ ಸಂಚಿಕೆ ೩ ಪಾನ ೧೨೬ರಿಂದ ಮುಂದೆ ಸಾಗಿದುದು.)

ಲೇಖಕರು— ಡಾ॥ ಎಸ್ ಸಿ. ನಂದೀಮಠ ಎಮ್. ಏ. ಪಿ. ಎಚ್. ಡಿ.



ಇತಿಹಾಸಃ— ವೀರಶೈವ ಧರ್ಮದ ಉಗಮವು ಅತಿ ಪ್ರಾಚೀನ ಕಾಲದಲ್ಲಿ ಆಗಿರಬಹುದೆಂದು ಮೇಲೆ ತರ್ಕಿಸಿರುವುದು ವಾಚಕರ ಲಕ್ಷದಲ್ಲಿರಬಹುದು. ಆದರೂ ವೀರಶೈವರ ಉಲ್ಲೇಖವು ೧೧ ನೇ ಶತಮಾನಕ್ಕೂ ಪೂರ್ವದಲ್ಲಿ ಹುಟ್ಟಿದ ಆವ ಭಾರತೀಯ ಗ್ರಂಥದಲ್ಲಿಯೂ ಇದ್ದುದು ನಮ್ಮ ದೃಷ್ಟಿಗೆ ಬಿದ್ದಿಲ್ಲವೆಂದು ಹೇಳಿದುದನ್ನು ವಾಚಕರು ಮರೆತಿರಲಿಕ್ಕಿಲ್ಲ. ನಿಸ್ಸಂದೇಹವಾಗಿ ೧೨ನೇ ಶತಮಾನಕ್ಕೂ ಪೂರ್ವದಲ್ಲಿ ರಚಿತವಾದುವೆಂದು ನಿರ್ಣಿತವಾದ ಆವ ವೀರಶೈವ ಧರ್ಮ ಗ್ರಂಥಗಳೂ ಸಂಸ್ಕೃತ ಕನ್ನಡ ತಮಿಳು ತೆಲುಗು ಮೊದಲಾದ ಆವ ಭಾಷೆಗಳಲ್ಲಿಯಾದರೂ ಉಪಲಬ್ಧವಿದ್ದಂತೆ ಕಂಡುಬರುವುದಿಲ್ಲ; ಏಕೆಂದರೆ ಅತಿ ಪ್ರಾಚೀನ ಗ್ರಂಥಗಳೆಂದು ಗಣಿಸಲ್ಪಡುವ ಹಲಕೆಲವು ಗ್ರಂಥಗಳು ತೀರ ಇತ್ತೀಚೆಗೆ ಹುಟ್ಟಿದುವು. ಮೇಲಾಗಿ ಹಲಕೆಲವುಗಳ ಕಾಲವನ್ನು ಈಗಿನ ಚಿಕಿತ್ಸಕರಿಗೆ ಮನದಟ್ಟಾಗುವಂತೆ ಪ್ರಮಾಣ ಬದ್ಧವಾಗಿ ನಿರ್ಣಯಿಸುವ ಕೆಲಸವು ಇನ್ನೂ ಉಳಿದಿದೆ. ತಮ್ಮ ಪ್ರಾಚೀನತೆಯ ಬಗ್ಗೆ ಹೆಮ್ಮೆ ಪಡುವ ವೀರಶೈವರ ದೃಷ್ಟಿಯು ಅಂಥ ಗ್ರಂಥಗಳ ಪ್ರಮಾಣ ಬದ್ಧವಾದ ಕಾಲ ನಿರ್ಣಯದ ಕಡೆಗೆ ಹೋಗಿಲ್ಲ. ಆದುದರಿಂದ ೧೨ನೇ ಶತಮಾನಕ್ಕೂ ಪೂರ್ವದಲ್ಲಿ ವೀರಶೈವರ ಗ್ರಂಥಗಳು ಇದ್ದಿರಲಿಕ್ಕಿಲ್ಲ. ಒಂದು ವೇಳೆ ಇದ್ದಿದ್ದರೆ ಇನ್ನೂ ಬೈಲಿಗೆ ಬಂದಿಲ್ಲವೆಂದು ತಾತ್ಪೂರ್ತಿಯಾದರೂ ಒಪ್ಪಿಕೊಳ್ಳಬೇಕಾಗುವುದು. ಆದುದರಿಂದ ವೀರಶೈವರ ಇತಿಹಾಸವನ್ನು ಬರೆಯಬೇಕಾದರೆ ಉಪಲಬ್ಧವಿದ್ದ ಸಂಗ್ರಹದ ಆಧಾರದಿಂದಲೇ ಆರಂಭಿಸಬೇಕಾಗುವದು.

ವಚನಶಾಸ್ತ್ರಗಳಲ್ಲಿ ಆಗಾಗ್ಗೆ ಬರುವ ಉಲ್ಲೇಖ ಮತ್ತು ಬಸವ ಚನ್ನಬಸವಾದಿ ಪುರಾಣಗಳ ಆಧಾರ ಇವುಗಳಿಂದ ಬಸವಣ್ಣನವರಿಗಿಂತಲೂ ಮೊದಲು ಹಲವು ಶರಣರು ಶೈವ ಮತೋದ್ಧಾರಕ್ಕಾಗಿ ಹೆಣಗಾಡಿದರೆಂದು ಕಂಡುಬರುವುದು. ಇಂಥವರಲ್ಲಿ ದ್ರಾವಿಡ ದೇಶದ ಅರವತ್ತು

ಮೂವರು ಪುರಾತನರು ಮುಖ್ಯರು. ಬಸವಣ್ಣನವರ ವಚನಗಳಲ್ಲಿ ಅನೇಕ ಪುರಾತನರ ಹೆಸರುಗಳು ಬರುವವು. ಅರ್ಜುನವಾಡದ ಶಿಲಾಶಾಸನದಲ್ಲಿ ಬಸವರಾಜನನ್ವಯರುಮಪ್ಪ ಹಾಲಬಸವಿ ದೇವರು "ತ್ರೇಸಠಿ ಪುರಾತನರ ಪಾದಾರ್ಚಕರು" ಎಂಬುದಾಗಿ ಹೇಳಿದೆ. ತ್ರಿಷಷ್ಟಿ ಪುರಾತನರ ವರ್ಚಸ್ಸವು ಲಿಂಗವಂತರಲ್ಲಿ ವಿಪುಲವಾಗಿರುವುದು. ಪುರಾತನರ ಕಾಲವು ಸುಮಾರು ೬ ರಿಂದ ೯ ನೇ ಶತಮಾನದ ವರೆಗೆಂದು ನಿಶ್ಚಯವಾಗಿ ಗೊತ್ತಾಗಿರುವುದು. ಅರವತ್ತು ಮೂವರಲ್ಲಿ ಕಡೆಯವರಾದ ತಿರುನಾವಲೂರಲ್ಲಿ ಜನ್ಮ ತಾಳಿದ ಸುಂದರ ಮೂರ್ತಿ ನಾಯನಾರರು (ಕನ್ನಡ ಸೌಂದರ ನಂಬಿಗಳು) ಕ್ರಿ. ಶ. ೮೦೦ ರಿಂದ ಇತ್ತೀಚೆಗೆ ಇದ್ದಿರಲಾರರೆಂದು ಸಿದ್ಧವಾಗಿದೆ. ಆದುದರಿಂದ ಪುರಾತನರು ಕ್ರಿ. ಶ. ೮೦೦ ಕ್ಕೂ ಮೊದಲಿನವರು. ೧೧ನೇ ಶತಮಾನದಲ್ಲಿ ಇದ್ದ ನಂಬಿಯಾಂಡಾರ್ ನಂಬಿಯು ಪುರಾತನರಲ್ಲಿ ಕೆಲವರ, ಅಂದರೆ ತಿರುಣಾವುಕ್ಕರಸು, ಸಂಬಂಧರ್ ಮತ್ತು ನಂಬಿ ಇವರುಗಳ ಪದ್ಯಗಳನ್ನೊಳಕೊಂಡ ದ್ರಾವಿಡ ವೇದವನ್ನು ಸಂಕಲಿಸಿದನು. ಆದರೂ ಪುರಾತನರು ಇಷ್ಟ ಲಿಂಗಧಾರಿಗಳಾದ ವೀರಶೈವರಿದ್ದರೆಂದು ತರ್ಕಿಸಲು ಸಾಕಷ್ಟು ಆಧಾರಗಳಿಲ್ಲ. ಕ್ರಿ. ಶ. ೧೧೩೩ ರ ಸುಮಾರಕ್ಕೆ ಜೀವಿಸಿದ ಪ್ರಸಿದ್ಧ ತಮಿಳು ಶೈವ ಗ್ರಂಥಕಾರನಾದ ಶೆಕ್ಕಿಳಾರ್‌ನು ಪುರಾತನರ ಬಗ್ಗೆ ಆಕಾರದಲ್ಲಿದ್ದ ಕಲ್ಪನೆಗಳನ್ನೆಲ್ಲ ಸಂಗ್ರಹಿಸಿ "ಪೆರಿಯ ಪುರಾಣ" ವೆಂಬ ಗ್ರಂಥವನ್ನು ರಚಿಸಿರುವನು. ಈ ಗ್ರಂಥದಲ್ಲಿ ಪುರಾತನರು ಸ್ಥಾವರಲಿಂಗ ಪೂಜಕರೆಂದೇ ಉಲ್ಲೇಖವಿದೆಯಲ್ಲದೆ ಇಷ್ಟಲಿಂಗಧಾರಿಗಳಿದ್ದರೆಂಬ ಬಗ್ಗೆ ಗುರುತು ದೊರೆಯುವದಿಲ್ಲ. ಆದುದರಿಂದ ಇಷ್ಟಲಿಂಗಧಾರಿಗಳಾದ ವೀರಶೈವರ ಇತಿಹಾಸವನ್ನು ತ್ರಿಷಷ್ಟಿ ಪುರಾತನರಿಂದ ಆರಂಭಿಸಲು ಬರುವುದಿಲ್ಲ.

ಇನ್ನು ಸ್ವತಃ ಲಿಂಗಧಾರಿಗಳಾಗಿದ್ದು ವೀರಶೈವರ ಆಚರಣೆಯನ್ನು ಪ್ರಸಾರಮಾಡಲು ಹೆಣಗಿದವರಲ್ಲಿ ನಮಗೆ ಗೊತ್ತಿದ್ದಮಟ್ಟಿಗೆ ಜೇಡರ ದಾಸಿಮಾಯ್ಯರೊಬ್ಬರು. ಇವರ ಬಗ್ಗೆ ಬಸವೇಶ್ವರ ವಚನಗಳಲ್ಲಿ ಮೇಲಿಂದ ಮೇಲೆ ಉಲ್ಲೇಖವಿದೆ. ಬಸವಪುರಾಣದಲ್ಲಿಯೂ ಇತರ ವೀರಶೈವ ಗ್ರಂಥಗಳಲ್ಲಿಯೂ ಇವರ ಚರಿತ್ರವು ಬಂದಿದೆ. ಅದರೊಳಗಿನ ಕೆಲವು ವಿಷಯಗಳು ಶಿಲಾಶಾಸನದಿಂದ ಪ್ರಸ್ಥಿತವಾಗುವವು. ಕ್ರಿ. ಶ. ೧೧೪೮ ರಲ್ಲಿ ಹುಟ್ಟಿದ ಗೊಬ್ಬೂರ ಶಿಲಾಶಾಸನದಲ್ಲಿ ಜೇಡರ ದಾಸಯ್ಯ

ಗಳ ಹೆಸರಿದೆ. ಡಾ. ಫ್ಲೀಟರಂಥ ಪಾಶ್ಚಾತ್ಯ ಚಿಕಿತ್ಸಕರೂ ಕೂಡ ದಾಸಿಮಾರ್ಯರು ಐತಿಹಾಸಿಕ ಪುರುಷರಿದ್ದರೆಂದು ಒಪ್ಪಿಕೊಂಡಿರುವರು. ಕ್ರಿ. ಶ. ೧೦೧೮ ರಿಂದ ೧೦೪೨ ರ ವರೆಗೆ ಆಳಿದ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯ ಅಥವಾ ಜಗದೇಕಮಲ್ಲ ಜಯಸಿಂಹನ ಕಾಲದಲ್ಲಿ ದಾಸಿಮಾರ್ಯರಿದ್ದರೆಂದು ತಿಳಿಯುವುದರಿಂದ ಇವರು ಬಸವಣ್ಣನವರಿಗಿಂತ ನೂರಾರು ವರುಷ ಮೊದಲಿನವರು. ನಮಗೆ ಗೊತ್ತಿದ್ದ ವೀರಶೈವರ ಐತಿಹಾಸಿಕ ಪುರುಷರಲ್ಲಿ ಇವರೇ ಮೊದಲಿನವರೆಂದು ಅನ್ನಬಹುದು. ಆದುದರಿಂದ ಪ್ರಸ್ತುತಕ್ಕೆ ನಾವು ವೀರಶೈವರ ಇತಿಹಾಸವನ್ನು ಇವರ ಕಾಲದಿಂದ ಅಂದರೆ ೧೧ ನೇ ಶತಮಾನದಿಂದಲೇ ಆರಂಭಿಸಬೇಕಾಗುವುದು. ದಾಸಿಮಾರ್ಯರ ನಂತರ ವೀರಶೈವ ಧರ್ಮಪ್ರಸಾರಣಾಕಾರ್ಯಕ್ಕೆ ಕೈಹಾಕಿದ ಐತಿಹಾಸಿಕ ಪುರುಷನು ಏಕಾಂತದ ರಾಮಯ್ಯನೆಂಬುವವನು. ಈತನು ಮಾಡಿದ ಅದ್ಭುತ ಪವಾಡವನ್ನು ಅಬ್ಬಲೂರ ಶಾಸನವು ಬಣ್ಣಿಸುವುದು. ಈತನೂ ಬಸವಣ್ಣನವರಿಗಿಂತ ಮೊದಲಿನವನು. ನಂತರ ಬಸವಯುಗವು ಪ್ರಾರಂಭಿಸುವುದು. ಈ ಯುಗದಲ್ಲಿ ಮುಖ್ಯ ಆಶ್ರಯದಾತನೂ ಮಹತ್ವದ ವ್ಯಕ್ತಿಯೂ ಬಸವಂಣನೇ ಆದಾಗ್ಯೂ ಆ ಕಾಲದ ಅನೇಕ ಶಿವಶರಣರನ್ನು ಮರೆಯುವ ಹಾಗಿಲ್ಲ. ಅವರಲ್ಲನೇಕರು ನಿಷ್ಠೆಯಲ್ಲಿ ಬಸವನಿಗಿಂತಲೂ ಮಿಗಿಲಾದವರಿದ್ದರು. ಭಕ್ತಿ, ನಿಷ್ಠೆ, ಜ್ಞಾನ, ವೈರಾಗ್ಯ ಮೊದಲಾದವುಗಳಲ್ಲಿ ಪರಿಪೂರ್ಣರಾದ ತೇಜೋಮೂರ್ತಿಗಳನೇಕರು ಬಸವನಿಗೆ ಬೆಂಬಲರಾಗಿದ್ದರು. ಇವರೆಲ್ಲರಿಗೆ ಬಸವನು ಕೈಂಕರ್ಯಭಾವದಿಂದ ನಡೆಯುತ್ತಿದ್ದನು. ಬಸವಯುಗದಲ್ಲಾದ ಧಾರ್ಮಿಕ ಕ್ರಾಂತಿಯ ಶ್ರೇಯಸ್ಸು ಬಸವನ ಬೆಂಬಲಿಗರಾದ ಶರಣರಿಗೆ ಸೇರುವುದೆಂದರೆ ಅತಿಶಯೋಕ್ತಿಯಾಗಲಾರದು. ಬಸವಯುಗದಲ್ಲಾದ ಧಾರ್ಮಿಕ ಜಾಗ್ರತಿಗೆ ಮುಂದೆ ಕೆಲಕಾಲ ಪೋಷಣವು ದೊರೆತಂತೆ ತೋರುವುದಿಲ್ಲ. ಅದಕ್ಕೆ ಕಾರಣವು ಆ ಕಾಲದಲ್ಲಿ ದೇಶದಲ್ಲಿ ನೆಲಸಿದ ಅರಾಜಕತೆಯು. ದೇಶದಲ್ಲಿ ಸುಖಶಾಂತಿಗಳು ನೆಲಸಿದಾಗಲೇ ಜನರ ಪ್ರವೃತ್ತಿಯು ಸಂಸ್ಕೃತಿಯ ಕಡೆಗೆ ತಿರುಗುವುದು. ಆ ಕಾಲದ ಪರಿಸ್ಥಿತಿಯನ್ನು ನಿರೀಕ್ಷಿಸಲು ಕರ್ನಾಟಕದ ಇತಿಹಾಸವನ್ನು ಅವಲೋಕಿಸುವಾ.

ಚಾಲುಕ್ಯ ವಂಶದ ೨ ನೇ ತೈಲಪನು ರಾಷ್ಟ್ರಕೂಟರನ್ನು ಸೋಲಿಸಿ ಚಾಲುಕ್ಯರ ಪ್ರತಿಷ್ಠೆಯನ್ನು ಪುನಃ ಸ್ಥಾಪಿಸಿದ ನಂತರ ಚಾಲುಕ್ಯರ ಸಾಮ್ರಾ

ಜ್ಯವು ಆತನ ವಂಶದ ವಿಕ್ರಮಾದಿತ್ಯನ ಕಾಲದಲ್ಲಿ ಅಭ್ಯುದಯದ ಪರಮಾವಧಿಯನ್ನು ಹೊಂದಿ, ಬರಬರುತ್ತ ಇಳಿಯಹತ್ತಿತು. ಮೂರನೆಯ ತೈಲಪನ ಕಾಲದಲ್ಲಂತೂ ಚಾಲುಕ್ಯರ ರಾಜ್ಯದ ಕಟ್ಟುಗಳು ಸಡಿಲಾಗಿ ಅದು ಬಲಹೀನ ಸ್ಥಿತಿಗಿಳಿಯಿತೆಂದರೂ ತಪ್ಪಾಗದು. ಅದೇ ಕಾಲಕ್ಕೆ ಉತ್ತರದಲ್ಲಿ ದೇವಗಿರಿಯ ಯಾದವರೂ ದಕ್ಷಿಣದಲ್ಲಿ ಹೊಯ್ಸಳರೂ ಪ್ರಬಲರಾಗಹತ್ತಿ ಚಾಲುಕ್ಯರ ರಾಜ್ಯವನ್ನು ಒತ್ತನುಗ್ಗಹತ್ತಿದರು. ಇಂಥ ಪ್ರಸಂಗದಲ್ಲಿ ಚಾಲುಕ್ಯರ ರಾಜ್ಯದ ಸೂತ್ರಗಳು ಒಂದೊಂದಾಗಿ ಕಳಚುರಿ ವಂಶದ ಬಿಜ್ಜಳನ ಕೈಸೇರಹತ್ತಿದವು. ಕೆಲ ಕಾಲ ಕಲ್ಯಾಣದಲ್ಲಿ ತೈಲಪನು ನಾಮಾಂಕಿತ ರಾಜನಾಗಿ ಆಳಿದಂತೆ ತೋರುವುದು. ಬಿಜ್ಜಳನು ಚಲುಕ್ಯರ ರಾಜ್ಯದ ಮೇಲೆ ದಂಡೆತ್ತಿ ಬರಹತ್ತಿರುವ ಶತ್ರುಗಳನ್ನು ಮುರಿಬಡಿಯುವದರಲ್ಲಿ ಆಸಕ್ತನಾಗದೆ ತಾನೇ ಸಿಂಹಾಸನವನ್ನು ಆಕ್ರಮಿಸುವ ವಿಚಾರ ನಡಿಸಿದನು. ಮತ್ತು ಅದೇ ಪ್ರಕಾರ ತೈಲಪನನ್ನು ತಳ್ಳಿ ಸಿಂಹಾಸನವನ್ನೇರಿದನು ಆದುದುರಿಂದ ಯಾದವರೂ ಹೊಯ್ಸಳರೂ ಚಲುಕ್ಯ ರಾಜ್ಯದ ಬಹುಭಾಗವನ್ನು ಆಕ್ರಮಿಸಲು ಅನುವು ದೊರೆಯಿತು. ವಂಶಪರಂಪರೆಯಿಂದ ಚಾಲುಕ್ಯರ ಸೇವೆ ಮಾಡುತ್ತ ಬಂದ ಅನೇಕ ಮಂಡಲೇಶ್ವರರಿಗೆ ಬಿಜ್ಜಳನ ಈ ಕೃತಿಯು ಮನಸ್ಸಿಗೆ ಬಂದಂತೆ ತೋರುವುದಿಲ್ಲ. ಏಕೆಂದರೆ ಅವರಲ್ಲನೇಕರು ತೈಲಪನ ಮಗನಾದ ಸೋಮೇಶ್ವರನಿಗೆ ಆಶ್ರಯವನ್ನಿತ್ತರು. ಅದರೂ ಬಿಜ್ಜಳನು ಬಲಿಷ್ಠನಿದ್ದುದರಿಂದ ತನ್ನ ಪ್ರತಿಷ್ಠೆಯನ್ನು ಸ್ಥಾಪಿಸಲು ಶಕ್ತನಾದನು. ಚಲುಕ್ಯರ ರಾಜ್ಯದ ಬಹುಭಾಗದಲ್ಲಿ ಶಾಂತಿಯನ್ನೂ ವ್ಯವಸ್ಥೆಯನ್ನೂ ನೆಲೆಗೊಳಿಸಿದನು. ಇದೇ ಕಾಲಕ್ಕೆ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿದ್ದರು. ಶರಣರ ಸ್ವತಂತ್ರ ವಿಚಾರಗಳೂ, ಅವುಗಳಿಗಿದ್ದ ಬಸವನ ಬೆಂಬಲವೂ ಕೆಲವು ವಿಶಿಷ್ಟ ಜನರಿಗೆ ರುಚಿಸಿರಲಿಕ್ಕಿಲ್ಲ. ಭೀಮಕವಿಯ ಹೇಳಿಕೆಯಂತೆ ಕೆಲ ವಿಶಿಷ್ಟ ಜನರ ಉಪದೇಶದಿಂದ ಬಿಜ್ಜಳನು ಶರಣರನ್ನು ದಂಡಿಸಿದ್ದರೂ ದಂಡಿಸಿರಬಹುದು. ಶರಣರ ಅನುಯಾಯಿಗಳಿಗೂ ಬಿಜ್ಜಳನಿಗೂ ಮನಸ್ತಾಪವುಂಟಾಗಿರಬಹುದು. ಆದರೂ ಸಾಮಾನ್ಯರಲ್ಲಿ ಬಸವ ಮೊದಲಾದ ಶರಣರ ಬಗ್ಗೆ ಆದರವಿತ್ತೆಂದು ತೋರುವುದು. ಏಕೆಂದರೆ ಬಿಜ್ಜಳನ ಮರಣಾನಂತರ ನಾಮಧಾರಿಗಳಾದ ಇಬ್ಬರು ಮೂವರು ರಾಜರಾದರೂ ಕಳಚುರಿ ರಾಜ್ಯವು ಕುಪ್ಪಳಿಸಿತು. ಬಸವನ ಮತಕ್ಕೆ ಬಲವೇರಿತು.

ಬಿಜ್ಜಳನ ರಾಜ್ಯದ್ರೋಹದ ಕೃತಿಗಾಗಿ ಮೊದಲೇ ಮನ ನೊಂದು ಅನೇಕ ಮಾಂಡಲಾಧೀಶ್ವರರು ಶರಣರಿಗುಂಟಾದ ತಾಪದಿಂದ ಮತ್ತಿಷ್ಟು ಬಿಜ್ಜಳನಿಂದ ದೂರಾಗಿರಬಹುದು. ಬಿಜ್ಜಳನ ಬಲವಂತರಾದ ದಂಡನಾಯಕರಲ್ಲಿ ಓರ್ವನೂ ಬಿಜ್ಜಳನಿಗೆ ಸಹಾಯಕನೂ ಆದ ಬರ್ಮರಸನು ಬಿಜ್ಜಳನ ಮರಣಾನಂತರ ಚಲುಕ್ಯ ವಂಶದ ನಾಲ್ಕನೇ ಸೋಮೇಶ್ವರನನ್ನು ಅಣ್ಣೀಗೇರಿಯಲ್ಲಿ ಪಟ್ಟಕ್ಕೆ ಕುಳ್ಳಿರಿಸಿದನು. ಇದರಿಂದ ಪುನಃ ಕಲಹಕ್ಕೆ ಆರಂಭವಾಯಿತು. ಚಲುಕ್ಯರು, ಕಲಚೂರ್ಯರು, ಯಾದವರು, ಹೊಯ್ಸಳರು ಮತ್ತು ಅವರವರ ಅನುಯಾಯಿಗಳು ತಮ್ಮ ತಮ್ಮ ಹಕ್ಕು ಸ್ಥಾಪಿಸುವದಕ್ಕೋಸುಗ ಹೋರಾಡಹತ್ತಿದುದರಿಂದ ದೇಶದಲ್ಲಿ ಕ್ಷೋಭವು ನೆಲಸಿರಬೇಕು. ಆ ಕಾಲದ ಹಲಕೆಲವು ವೀರಗಲ್ಲುಗಳ ಮೇಲಿಂದ ಈ ಊಹೆಯು ಸತ್ಯತೆಯು ಬಲಪಡುವುದು.

ಕಲ್ಯಾಣವನ್ನೇ ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಬಸವಣ್ಣನವರ ಆಶ್ರಯದಲ್ಲಿದ್ದ ಶರಣರೆಲ್ಲರು ಬಸವಣ್ಣನವರು ಕಲ್ಯಾಣವನ್ನು ಬಿಟ್ಟನಂತರ ಮನಬಂದಂತೆ ಹೊರಟುಹೋದರು. ಅವರು ಹೋದ ಹೋದಲ್ಲೆಲ್ಲ ಕಲ್ಯಾಣದಲ್ಲಿ ಆಚರಣೆಯಲ್ಲಿ ತಂದಂಥ ವೀರಶೈವ ತತ್ವಗಳನ್ನು ಬೀರಿ ಅನೇಕರನ್ನು ತಮ್ಮೊಳಗೆ ಎಳಕೊಳ್ಳಹತ್ತಿದರು. ಇದೇ ಕಾಲದಲ್ಲಿಯೇ ಕನ್ನಡಿಗರು ಅಭಿಮಾನ ಪಡತಕ್ಕ ವಚನ ವಾಙ್ಮಯವು ಬಯಲಿಗೆ ಬರಹತ್ತಿತು. ತೀರ ಸುಲಭ ಮತ್ತು ಅಜ್ಞರಿಗೂ ಕೂಡ ತಿಳಿಯುವ ಮಾತುಗಳಲ್ಲಿ ತತ್ವಜ್ಞಾನದ ತಿರುಳನ್ನು ಹೇಳಹತ್ತಿದರು. ಭಕ್ತಿ, ಜ್ಞಾನ, ವೈರಾಗ್ಯ, ನೀತಿ ಮೊದಲಾದವುಗಳನ್ನು ಬೋಧಿಸಿದರಿಷ್ಟೇ ಅಲ್ಲ, ಆದರೆ ಜನರಲ್ಲಿ ಸ್ವಾಭಾವಿಕವಾಗಿ ನೆಲೆಗೊಂಡ ಧಾರ್ಮಿಕ ಮತ್ತು ಸಾಮಾಜಿಕ ಕುಂದುಗಳನ್ನು ಹೊರಗೆಡವಿದರು. ಜೀವ, ಜಗತ್ತು, ಶಿವ ಇವರ ಪರಸ್ಪರ ಸಂಬಂದವನ್ನೂ ಇಹಲೋಕ ಪರಲೋಕಗಳ ತಾರತಮ್ಯವನ್ನೂ ಇಹದಲ್ಲಿಯ ಸದ್ವರ್ತನೆಯೇ ಪರಲೋಕದ ದ್ವಾರವನ್ನು ತೆರೆಯುವ ಬೀಗದ ಕೈಯೆಂಬುದನ್ನೂ ಮನಸ್ಸಿಗೆ ನಡುವಂಥ ಮಾತುಗಳಿಂದ ಹೇಳಿದರು. ವಚನ ವಾಙ್ಮಯವು ಸರಳ ಗದ್ಯದಲ್ಲಿದ್ದರೂ ಕಾವ್ಯಮಯವಾಗಿರುವುದು. ಪ್ರಾಚೀನ ಭಾರತೀಯರ ಪ್ರಜ್ಞಾತಿಶಯದ ಕುರುಹೆಂದು ಗಣಿಸಲ್ಪಡುವ ಉಪನಿಷತ್ತುಗಳಿಗಿಂತ ಆನ ಭಾಗದಲ್ಲಿಯೂ ನಮ್ಮ ವಚನಶಾಸ್ತ್ರಗಳು ಕಡಿಮೆಯುವಲ್ಲವೆಂದು ಹೇಳಲು ಅಭಿಮಾನವೆನಿಸುತ್ತದೆ.

ಇಂಥ ಅಪಾರವಾದ ಅಪರೂಪ ಸಾಹಿತ್ಯವನ್ನು ಕಲ್ಪಿಸಿ ಮಾತೃಭಾಷೆಗೆ ಭೂಷಣ ಪ್ರದರಾದವರು ನಮ್ಮ ಶರಣರು. ಇವರಿಂದಲೇ ವೀರಶೈವ ಮತವು ಬಹಳವಾಗಿ ಪಸರಿಸಿತು. ಆ ಕಾಲದಲ್ಲಿದ್ದ ಅನೇಕ ಶೈವ ಪಂಥಗಳು ತಮ್ಮ ತಮ್ಮೊಳಗಿನ ವ್ಯತ್ಯಾಸಗಳನ್ನು ಹರಿದೊಗೆದು, ಒಂದಾಗಿ ವೀರಶೈವ ಮಾರ್ಗವನ್ನೇ ಅನುಸರಿಸಿ, ಅದನ್ನೇ ಬೆಳೆಸಿದರು.

ದೇಶದಲ್ಲಿ ಶಾಂತತೆಯಿಲ್ಲದುದರಿಂದ ಬಸವಣ್ಣನವರ ನಂತರ ಸುಮಾರು ನೂರು ವರ್ಷಗಳ ವರೆಗಾದರೂ ಧರ್ಮಪ್ರಸಾರ ಕೆಲಸವು ಸಾವಕಾಶವಾಗಿ ನಡೆದಿರಬಹುದು. ಹದಿಮೂರನೇಯ ಶತಮಾನದ ಆದಿಯಲ್ಲಿ ಕಲಚೂರ್ಯರೂ ಚಾಲುಕ್ಯರೂ ಉರುಳಿ, ಹೊಯ್ಸಳ ಮತ್ತು ಯಾದವರೀರ್ವರೇ ಉಳಿದರು. ಕೆಲ ವರ್ಷಗಳಲ್ಲಿ ಕರ್ಣಾಟಕದ ಉತ್ತರ ಭಾಗವನ್ನು ಯಾದವರೂ ದಕ್ಷಿಣ ಭಾಗವನ್ನು ಹೊಯ್ಸಳರೂ ಆಕ್ರಮಿಸಿದರು. ಆಂಧ್ರದೇಶದ ಬಹುಭಾಗವನ್ನು ಆಳುತ್ತಿದ್ದ ಕಾಕತೀಯ ಪ್ರತಾಪರುದ್ರನು ಶೈವಪಕ್ಷಪಾತಿಯಾಗಿದ್ದನು. ಈತನು ದೀಕ್ಷಾಗುರುವು ವಿಶ್ವೇಶ್ವರ ಶಂಭುವೆಂದೂ ಮತ್ತು ವಿಶ್ವೇಶ್ವರನ ಸುತ್ತುಮುತ್ತು ನೂರಾರು ವೀರಶೈವಾಚಾರ್ಯರಿರುತ್ತಿದ್ದರೆಂದೂ ಶಿವಾನುಭವದಲ್ಲಿ ಹಿಂದೆಯೊಮ್ಮೆ ಪ್ರಸಿದ್ಧಿಸಿದ ಮಲಕಾಪುರದ ಶಿಲಾಶಾಸನದಿಂದ ತಿಳಿಯುವುದು. ಇದೇ ವಂಶದ ಪ್ರತಾಪರುದ್ರನೋರ್ವನು ವೀರಶೈವ ಕವಿಗಳಾದ ರಾಘವಾಂಕಾದಿಗಳಿಗೆ ಆಶ್ರಯವನ್ನಿತ್ತಂತೆ ಕಂಡುಬರುವುದು.

ಇದೇ ಕಾಲಕ್ಕೆ ಮುಸಲ್ಮಾನರು ಉತ್ತರ ಹಿಂದುಸ್ತಾನವನ್ನು ನುಂಗಿ ದಕ್ಷಿಣಕ್ಕೆ ಕಾಲು ಚಾಚಹತ್ತಿದ್ದರು. ಬಿರುಗಾಳಿಯಂತೆ ಬಂದ ಮಲಿಕಕಾಫರನ ದಾಳಿಯಿಂದ ದಕ್ಷಿಣದಲ್ಲಿಯ ಹಲವು ರಾಜ್ಯಗಳೂ ಪ್ರಸಿದ್ಧ ದೇವಾಲಯಗಳೂ ನೆಲಕ್ಕುರುಳಿದವು. ಮುಂದೆ ಮುಸಲ್ಮಾನರು ತಮ್ಮ ವರ್ಚಸ್ಸವನ್ನು ಬೆಳೆಸಹತ್ತಿದರು. ತಮ್ಮ ತಮ್ಮೊಳಗೆ ಹೊಡೆದಾಡಿ ನಿರ್ವಿಣ್ಣರಾದ ಹೊಯ್ಸಳ ಯಾದವರು ಮುಸಲ್ಮಾನರಿಗೆ ತಡೆಯಲಿಲ್ಲ. ದಕ್ಷಿಣ ಹಿಂದುಸ್ತಾನವೂ ಕೂಡ ಮುಸಲ್ಮಾನ ಮಯವಾಗುವ ಸಂಭವವು ತೋರಹತ್ತಿತು. ಈ ಪ್ರಸಂಗದಲ್ಲಿ ವಿಜಯನಗರದ ರಾಜ್ಯವು ಸ್ಥಾಪನೆಯಾಗಿ ಹಿಂದೂ ಧರ್ಮಕ್ಕೆ ಆಶ್ರಯ ಸ್ಥಾನವಾಯಿತು. ವಿಜಯನಗರದ ರಾಜರಲ್ಲನೇಕರು ಶೈವ ಪಕ್ಷಪಾತಿಗಳಿದ್ದರು. ಕೆಲವರು ವೀರಶೈವರ ಆಶ್ರಯದಾತರೂ ಆಗಿದ್ದರು. ರಾಜ ಮನೆತನದವರಲ್ಲಿ ಹಲವರು ವೀರಶೈವ

ಮತಾವಲಂಬಿಗಳಾಗಿದ್ದರೆಂದು ಊಹಿಸಲೂ ಅವಕಾಶವಿದೆ. ವಿಜಯ ನಗರದ ರಾಜ್ಯದಾಡಳಿತೆಯಲ್ಲಿ ಬಹುಜನ ವರ್ಚಸ್ವಿಗಳಾದ ವೀರಶೈವ ವಿದ್ವಾಂಸರಾಗಿ ಹೋದರು. ಪ್ರಸಿದ್ಧ ತೆಲಗು ಕವಿಯಾದ ಶ್ರೀನಾಥನು ತನ್ನ ಗ್ರಂಥಗಳಲ್ಲೊಂದನ್ನು ತನ್ನ ಗುರುವಾದ ಕ್ರಿಯಾಶಕ್ತಿಗೆ ಅರ್ಪಿಸಿ ರುವನು. ಈ ಕ್ರಿಯಾಶಕ್ತಿಯು ವೀರಶೈವ ಗುರುವೆಂದು ಕೆಲವರ ಅಭಿ ಪ್ರಾಯ. ವೀರಶೈವರ ಹೆಚ್ಚಳವು ಹೆಚ್ಚಿದುದು ಪ್ರೌಢ ದೇವರಾಯನ (ಕ್ರಿ. ಶ. ೧೪೧೯—೧೪೪೪) ಕಾಲದಲ್ಲಿ. ಲಕ್ಕಣ್ಣ ಮತ್ತು ಜಕ್ಕಣ್ಣ ಮೊದಲಾದ ಅಧಿಕಾರಿಗಳು ಸ್ವತಃ ವೀರಶೈವರಿದ್ದುದರಿಂದ ರಾಜಾಸ್ಥಾನ ದಲ್ಲಿ ಆಗಾಗ್ಗೆ ವೀರಶೈವ ಮತವನ್ನು ಎತ್ತಿ ಹಿಡಿಯುತ್ತಿದ್ದರು. ಇವರ ಗುರುಗಳು ಪರಮ ವಿರಕ್ತರೂ ಒಳ್ಳೇ ವಿದ್ವಾಂಸರೂ ಆದ ಮಹಲಿಂಗ ದೇವರು. ಪ್ರಭುದೇವರ ಷಟ್‌ಸ್ಥಲದ ವಚನಗಳಿಗೆ ಇವರು ಬರೆದ ಟೀಕೆ ಯಿಂದ ಇವರ ವಿದ್ವತ್ತೆಯು ಸ್ಪಷ್ಟವಾಗುವದು. ಇದೇ ಕಾಲದಲ್ಲಿ ನೂರೊಂದು ವಿರಕ್ತರು ವೀರಶೈವ ಮತ ಪ್ರಸಾರಕ್ಕೋಸುಗ ಬಹಳ ಹೆಣ ಗಾಡಿದರು. ವಚನ ವಾಙ್ಮಯವನ್ನು ಉದ್ಧರಿಸಿದರು. ಅದಕ್ಕೆ ಟೀಕೆ ಟಿಪ್ಪಣಿ ಮೊದಲಾದವುಗಳನ್ನು ಬರೆದರು. ಈ ಕಾಲದಲ್ಲಿ ವೈಷ್ಣವ ಮತವು ಇವರ ಬಲವಾದ ಪ್ರತಿಸ್ಪರ್ಧಿಯಾಗಿತ್ತು. ಆಗಾಗ್ಗೆ ವೀರಶೈವ ರಿಗೂ ವೀರ ವೈಷ್ಣವರಿಗೂ ಸ್ಪರ್ಧೆಗಳು ನಡೆಯುತ್ತಿದ್ದವು. ಚಾಮರಸನ ಪ್ರಭುಲಿಂಗ ಲೀಲೆಯ ಉಗಮವು ಇಂಥ ಸ್ಪರ್ಧೆಯಲ್ಲಿಯೇ ಉಂಟಾಯಿ ತೆಂದು ವೀರಶೈವರಲ್ಲಿ ಪ್ರಚಾರದಲ್ಲಿದ್ದ ಕಥೆಗಳಿಂದ ಗೊತ್ತಾಗುವದು. ಬಸ ವಣ್ಣನವರ ತರುವಾಯ ವೀರಶೈವರ ಇತಿಹಾಸದಲ್ಲಿ ಈ ಕಾಲವು ಬಲು ಮಹತ್ವವಾದುದು. ಈ ಕಾಲದಲ್ಲಿ ಈ ಮತಕ್ಕೆ ರಾಜಾಶ್ರಯವೂ ಜನಾಶ್ರ ಯವೂ ಉಂಟಾದವು.

ವಿಜಯನಗರದ ಧೊರೆಗಳ ಒಡೆತನದಲ್ಲಿಯೇ ವೀರಶೈವ ಸಂಸ್ಥಾನ ಗಳು ಉದಯಿಸಹತ್ತಿದವು. ಇಂಥವುಗಳಲ್ಲಿ ಕೆಳದಿ ಸಂಸ್ಥಾನವು ಮುಖ್ಯ ವಾದುದು. ನಮಗೆ ದೊರೆಯುವ ಆಧಾರಗಳಿಂದ ಈ ವಂಶದ ದೊಡ್ಡ ಸಂಕಣ್ಣನಾಯಕನು ವೀರಶೈವ ಮತಪ್ರಸಾರಕ್ಕೆ ಬಲು ಸಹಾಯಕಾರಿ ಯಾದನೆಂದು ಕಂಡುಬರುವುದು. ಈತನು ಯಾತ್ರೆಗಾಗಿ ಹೊರಟು ದೂರ ದೂರ ದೇಶಗಳಲ್ಲಿರುವ ಪ್ರಸಿದ್ಧ ಕ್ಷೇತ್ರಗಳಲ್ಲಿ ಮಠಗಳನ್ನು ಸ್ಥಾಪಿ ಸಿದಂತೆ ಪ್ರತೀತಿಯಿದೆ. ಕೆಳದಿಯ ಅರಸರಿಂದ ವೀರಶೈವರಿಗೆ ಬಹಳ

ಸಹಾಯವಾಯಿತು. ಈ ಅರಸರ ಆಶ್ರಯದಿಂದ ಹಲವು ವೀರಶೈವ ಧಾರ್ಮಿಕ ಗ್ರಂಥಗಳು ಹೊರಬಿದ್ದವು. ವೀರಶೈವ ಮತವನ್ನು ಸಂಸ್ಕೃತದಲ್ಲಿ ವಿವರಿಸುವ ಹವ್ಯಾಸವು ಈ ಕಾಲದಲ್ಲಿ ವಿಶೇಷವಾಗಿದ್ದಂತೆ ತೋರುವುದು. ಆದುದರಿಂದಲೇ ಸಂಸ್ಕೃತ ಗ್ರಂಥಗಳು ಹೆಚ್ಚಾಗಿ ಹುಟ್ಟಿದವು. ಶಿವತತ್ವ ರತ್ನಾಕರದ ಕರ್ತೃವಾದ ಬಸವರಾಜ, ಪರ್ವತ ಶಿವಯೋಗಿ, ಮೋನಪ್ಪ, ನಿರ್ವಾಣ ಮಂತ್ರಿ ಮೊದಲಾದವರು ಕೆಳದಿಯರಸರ ಕಾಲದವರು ಸುಮಾರು ಕ್ರಿ. ಶ. ೧೫೦೦ ರಿಂದ ೧೭೫೦ ರ ವರೆಗೆ ವೀರಶೈವ ಮತಪ್ರಸಾರವೂ ಅಭ್ಯುದಯವೂ ಬಲು ಜೋರಿನಿಂದ ನಡೆದಂತೆ ತೋರುವುದು. ಕ್ರಿ. ಶ. ೧೫೬೪ ರಲ್ಲಿ ವಿಜಯನಗರದ ರಾಜ್ಯವು ನಾಶವಾದರೂ ಈ ಮತ ಪ್ರಸಾರಕ್ಕೆ ತೊಂದರೆಯಾದಂತೆ ತೋರುವುದಿಲ್ಲ. ಅನೇಕ ಅಧಿಕಾರಿಗಳು ಕೆಲ ಮಟ್ಟಿಗೆ ಸ್ವತಂತ್ರ ಸಂಸ್ಥಾನಗಳನ್ನೇ ಸ್ಥಾಪಿಸಹತ್ತಿದರು. ಮುಂದೆ ಬರಬರುತ್ತ ಅಂಥ ಸಂಸ್ಥಾನಗಳ ಸಂಖ್ಯೆಯು ಬೆಳೆಯಹತ್ತಿತು. ಆ ಕಾಲದಲ್ಲಿ ವೀರಶೈವ ಗುರುಗಳು ಈಗಿನವರಂತೆ ಸಂಕುಚಿತ ಭಾವನೆಯವರಿದ್ದಿಲ್ಲ. ಅವರು ಧರ್ಮ ನೀತಿಗಳನ್ನು ಬೋಧಿಸುವುದೇ ತಮ್ಮ ಆಯುಷ್ಯದ ಧ್ಯೇಯವೆಂದು ತಿಳಿದಿದ್ದರು. ತಮ್ಮ ಸಾದಾ ಮತ್ತು ಸಾತ್ವಿಕ ವೃತ್ತಿಯಿಂದ ಆ ಕಾಲದ ಅಧಿಕಾರಿಗಳಲ್ಲಿಯೂ ಸಾಮಾನ್ಯರಲ್ಲಿಯೂ ತಮ್ಮ ಬಗ್ಗೆ ಪೂಜ್ಯ ಭಾವವನ್ನು ನೆಲೆಗೊಳಿಸಿದ್ದರು. ಈ ಕಾಲದಲ್ಲಿಯೇ ಹಲವು ಪಾಳೆಯಗಾರರನ್ನು ಲಿಂಗವಂತ ಧರ್ಮಕ್ಕೆ ಸೇರಿಸಿಕೊಂಡರು. ಹದಿನೆಂಟನೆಯ ಶತಮಾನದ ಆರಂಭಕ್ಕೆ ಕರ್ನಾಟಕದ ಬಹುತರ ಸಂಪೂರ್ಣ ಭಾಗವನ್ನು ಒಂದಿಲ್ಲೊಂದು ಪ್ರಕಾರದಿಂದ ಲಿಂಗವಂತರೇ ಆಳುತ್ತಿದ್ದರು. ಮೈಸೂರ ಸಂಸ್ಥಾನಾಧಿಪತಿಗಳು ಕ್ರಿ. ಶ. ೧೭೦೪ ರ ವರೆಗೆ ಶುದ್ಧ ಲಿಂಗವಂತರಿದ್ದರು. ಮಸಾಲೆ ಸಾಮಾನುಗಳಿಗೆ ಆಗರವಾದ ಕೊಂಕಣವೆಲ್ಲವು ಕೆಳದಿಯರಸರ ಆಧಿಪತ್ಯಕ್ಕೊಳಪಟ್ಟಿತ್ತು. ದಕ್ಷಿಣದಲ್ಲಿ ಬಲು ವೀರರೆಂದು ಹೆಸರಾದ ಕೊಡವರ ಅರಸರು ಲಿಂಗವಂತರಿದ್ದರು. ಶಿರಸಂಗಿ ಕಿತ್ತೂರ ಮೊದಲಾದ ದೇಸಾಯಿಯವರು ನಮ್ಮ ಕಡೆಯ ಬಹುಭಾಗವನ್ನು ಆಳುತ್ತಿದ್ದರು. ಬಹುತರ ಕರ್ನಾಟಕದಲ್ಲಿ ಗ್ರಾಮಾಧಿಕಾರಿಗಳು (ಗೌಡರು) ಲಿಂಗವಂತರೇ ಇದ್ದಾರೆ. ಅಳರಸರು ಯಾರೇ ಇದ್ದರೂ ಭೂಮಿಯ ಒಡೆಯರು ಲಿಂಗವಂತರೇ ಆಗಿದ್ದರೆಂದು ಕಂಡು ಬರುವುದು. ಲಿಂಗವಂತರ

ಪ್ರತಿಷ್ಠಿತ ಸಂಸ್ಥಾನಗಳನ್ನು ಮುರಿಯಲು ಮೊದಲು ಟಿಪೂವೂ ನಂತರ ಮರಾಠರೂ ಕಾರಣರಾದರು.

ವೀರಶೈವರು ಸ್ವಭಾವತಃ ಶಾಂತರೂ ಕೃಷಿವಾಣಿಜ್ಯಾದಿ ಉದ್ಯೋಗ ನಿರತರೂ ಆದಾಗ್ಯೂ ವೀರರೂ ಧೀರರೂ ಪ್ರಸಂಗಬಂದಾಗ ಸಾಹಸಿಗಳೂ ಆಗಿರುವರು. ವೀರಶೈವರ ಐತಿಹಾಸಿಕ ಪುರುಷರು ನ್ಯಾಯಪಕ್ಷಪಾತಿಗಳೂ ರಾಜ್ಯಕಾರಣಪಟುಗಳೂ ಹೆಸರಾದ ದಂಡನಾಯಕರೂ ಆಗಿದ್ದರು. ಉದಾಹರಣೆಗಾಗಿ ಲಕ್ಕಣ್ಣ ದಂಡೇಶನನ್ನು ತೆಗೆದುಕೊಳ್ಳಬಹುದು. ಓರ್ವ ಪೋರ್ತಗೀಜ ಗ್ರಂಥಕಾರನು ಲಕ್ಕಣ್ಣನನ್ನು ಬಣ್ಣಿಸಿದ ಬಣತಿಯನ್ನು ಓದಿದರೆ ಈ ಮಾತು ಮನದಟ್ಟಾಗುವುದು. ಶಿರಸಂಗಿ ಜಾಯಪ್ಪ ದೇಸಾಯಿಯವರು ಪೇಶವಾಯಿಯವರ ದರಬಾರದಲ್ಲಿ ತೋರಿಸುತ್ತಿದ್ದ ಜಾಣ್ಮೆಯ ಬಗ್ಗೆ ಈಗಲೂ ಕೆಲ ವೃದ್ಧರು ಹೇಳುವ ಸಂಗತಿಗಳನ್ನು ಲಕ್ಷಕ್ಕೆ ತಂದರೆ ಇವರು ಅಕಬರನ ದರಬಾರದಲ್ಲಿದ್ದ ಬೀರಬಲ್ಲನಿಗೆ ಕಡಿಮೆಯವರಲ್ಲವೆಂದು ಅನ್ನಿಸುವುದು. ಶೌರ್ಯದಲ್ಲಿ ಕೊಡಗಿನ ವೀರರಾಜೇಂದ್ರ ಮತ್ತು ಕೆಳದಿಯ ದೊಡ್ಡಸಂಕಣ್ಣ ನಾಯಕರಿಗೆ ಸರಿಹೋಲುವವರು ವಿರಳ. ಆದೇಕೆ? ಈ ಮತದ ಲಲನಾಮಣಿಗಳು ಕೂಡ ಮಹಾವೀರರನ್ನು ಬೊಟ್ಟು ಕಚ್ಚಿಸಿರುವರು.

ಮಹಾರಾಷ್ಟ್ರದಲ್ಲಿ ಹಿಂದೂ ರಾಜ್ಯವನ್ನು ಸ್ಥಾಪಿಸಿದ ಶಿವಾಜಿಯ ಶೌರ್ಯವನ್ನು ಅರಿಯದವರಾರು? ಇಂಥ ವೀರನು ನಮ್ಮ ಕರ್ನಾಟಕದ ಮೇಲೆ ದಾಳಿಮಾಡಿ ತನ್ನ ಮಲತಮ್ಮನಿಂದ ತಂದೆಯ ಆಸ್ತಿಯಲ್ಲಿ ಪಾಲು ತೆಗೆದುಕೊಂಡು ಬರುವಾಗ ದಾರಿಯಲ್ಲಿ ಹುಬ್ಬಳ್ಳಿಯನ್ನು ಸುಲಿದು ರಾಯಗಡ ಕಡೆಗೆ ತೆರಳಿದನು. ಧಾರವಾಡದಿಂದ ಸವದತ್ತಿಯ ಕಡೆಗೆ ಕೆಲವು ಮೈಲುಗಳ ಮೇಲೆ ಬೆಳವಡಿಯೆಂಬುದೊಂದು ಹಳ್ಳಿಯು ಈಗಲೂ ಇರುವದು ಆ ದಾರಿಯಿಂದ ಹೋದವರ ಲಕ್ಷದಲ್ಲಿರಬಹುದು. ಈ ಊರಲ್ಲಿ ಆ ಕಾಲಕ್ಕೆ ಈಶ್ವರಪ್ರಭುವೆಂಬ ದೇಸಾಯಿಯಿದ್ದನು. ಆತನ ಹೆಂಡತಿಯೇ ವೀರಸಾಧ್ವೀಮಣಿ ಮಲ್ಲಮ್ಮ. ಶಿವಾಜಿಯು ಮಾರ್ಗದಲ್ಲಿ ಬೆಳವಡಿ ಸಂಸ್ಥಾನದ ಹದ್ದಿಯಲ್ಲಿ ಹಾಯಬೇಕಾಗಿತ್ತು; ಸಂಸ್ಥಾನದ ಪ್ರಜೆಗಳಿಗೆ ತೊಂದರೆ ಕೊಡದೆ ದಾಟಿ ಹೋಗಲು ಅಪ್ಪಣೆಯೂ ದೂರೆತಿತ್ತು. ಆತನ ದಂಡಾಳುಗಳಲ್ಲಿ ಕೆಲವರು ರೈತರಿಗೆ ತೊಂದರೆ ಕೊಟ್ಟದ್ದರಿಂದ ಮಲ್ಲಮ್ಮನು ವಿಜಯಿಯಾಗಿ ಪಡೆಸಹಿತ ಮನೆಯ ಕಡೆಗೆ

ತೆರಳಿದ ಶಿವಾಜಿಯನ್ನು ತಡೆದಳು. ಶಿವಾಜಿಗೆ ಒಂದೆರಡು ದಿವಸಗಳಲ್ಲಿ ಸಂಸ್ಥಾನವನ್ನು ನೆಲಸಮ ಮಾಡುವೆನೆಂಬ ಹೆಮ್ಮೆ. ಆದುದರಿಂದ ಯುದ್ಧಕ್ಕೆ ಆರಂಭವಾಯಿತು. ಮಲ್ಲಮ್ಮನು ಸ್ವತಃ ಶಸ್ತ್ರಧಾರಿಯಾಗಿ ಹೋರಾಡ ಹತ್ತಿದಳು. ಮೂರುತಿಂಗಳ ವರೆಗೂ ಶಿವಾಜಿಗೆ ಹಣಿಯಲಿಲ್ಲ. ಶಿವಾಜಿಯು ಆಕೆಯ ಶೌರ್ಯಕ್ಕೆ ಮೆಚ್ಚಿ ಆಕೆಯನ್ನು ಮನ್ನಿಸಿ ರಾಯಗಡದ ಕಡೆಗೆ ತೆರಳಿದನು. ದೊಡ್ಡವರ ಮನಸ್ಸು ದೊಡ್ಡದು. ಬಲಿಷ್ಠರಾದ ಬಾದಶಹರಿಗೆ ಕಾಲಸ್ವರೂಪನಾದ ಶಿವಾಜಿಗೆ ಚಿಕ್ಕದೇಸಗತಿಯ ಹೆಣ್ಣುಮಗಳು ಕೂಡ ಹಣಿಯಲಿಲ್ಲ. ಮರಾಠಿ ಇತಿಹಾಸಕಾರರು ಮಲ್ಲಮ್ಮನು ಜಾತಿಯಿಂದ ಬ್ರಾಹ್ಮಣಳೆಂದು ಕೆಲವರೂ, ಪ್ರಭು ಎಂದು ಕೆಲವರೂ, ಬರೆದುಕೊಂಡಿದ್ದಾರೆ. ಲಿಂಗವಂತಳೆಂದು ಅನೇಕರಿಗೆ ಗೊತ್ತಿಲ್ಲ. ವೀರಶೈವರ ಇತಿಹಾಸದಲ್ಲಿ ಪ್ರಜ್ವಲಿಸುವ ಇನ್ನೋರ್ವ ಲಲನಾಮಣಿಯು ಇಕ್ಕೇರಿಯ ರಾಣಿಯಾದ ಚನ್ನಮ್ಮಾಜಿಯು. ಈಕೆಯು ಚಿಕ್ಕ ಚನ್ನಬಸವನನ್ನು ಮುಂದಿಟ್ಟುಕೊಂಡು ಕೊಂಕಣದ ರಾಜ್ಯವನ್ನೆಲ್ಲ ಆಳುತ್ತಿದ್ದಳು. ಆ ಕಾಲಕ್ಕೆ ದಿಲ್ಲಿಯ ಮಹತ್ವಾಕಾಂಕ್ಷಿಯಾದ ಬಾದಶಹ ಔರಂಗಜೇಬನು ಮುಸಲ್ಮಾನರನ್ನು ಕೂಡ ನೋಡದೆ ದಕ್ಷಿಣದ ರಾಜ್ಯಗಳನ್ನೆಲ್ಲ ತಾನೇ ಸ್ವತಃ ದಂಡು ತೆಗೆದುಕೊಂಡು ಬಂದು ಮುರಿದುಹಾಕಿದನು. ಮರಾಟರನ್ನು ಬೇರು ಸಹಿತ ಕಿತ್ತೊಗೆಯಬೇಕೆಂದು ಆತನ ಪ್ರತಿಜ್ಞೆ. ಅದರಂತೆ ಶಿವಾಜಿಯ ಹಿರಿಯ ಮಗನಾದ ಸಂಭಾಜಿಯನ್ನು ಕೊಲ್ಲಿಸಿ ಆತನ ಹೆಂಡತಿಯನ್ನೂ, ಮಗನನ್ನೂ ಸೆರೆಹಿಡಿದನು. ಗಟ್ಟಿಗರಾದ ಮರಾಟರು ಶಿವಾಜಿಯ ಮತ್ತೋರ್ವ ಮಗನಾದ ರಾಜಾರಾಮನನ್ನು ಬೆನ್ನು ಕಟ್ಟಿದರು. ಔರಂಗಜೇಬನು ಮಹಾರಾಷ್ಟ್ರದಲ್ಲಿಯ ಎಲ್ಲ ಸಂಸ್ಥಾನಗಳನ್ನು ಕೈವಶಮಾಡಿಕೊಂಡು, ರಾಜಾರಾಮನಿಗೆ ಗುಡ್ಡದಲ್ಲಿಯೂ ಕೂಡ ನಿಲ್ಲಲು ಅವಕಾಶ ಕೊಡಲಿಲ್ಲ. ರಾಜಾರಾಮನು ಅತ್ತಿತ್ತ ಅಲೆದಾಡಿ ಬೇಸತ್ತು ದಕ್ಷಿಣದಲ್ಲಿರುವ ತನ್ನ ಬಂಧುಗಳ ಕಡೆಗೆ ಹೋಗಬೇಕೆಂದು ನಿಶ್ಚೈಸಿದನು. ಆದರೆ ಅತ್ತ ಹೋಗಲು ಚನ್ನಮ್ಮನ ರಾಜ್ಯದೊಳಗಿಂದಲೇ ಹಾಯ್ದು ಹೋಗಬೇಕಾಗುತ್ತಿತ್ತು. ಈತನಿಗೆ ಮಾರ್ಗವನ್ನು ಕೊಟ್ಟರೆ ದಿಲ್ಲಿಯ ಬಾದಶಹನು ರೊಚ್ಚಿಗೆದ್ದು ಆಕೆಯ ರಾಜ್ಯವನ್ನೇ ಹಾಳುಮಾಡುವ ಸಂಭವ. ಕೊಡದಿದ್ದರೆ ಮರಾಟರ ವಂಶವೇ ನಿರ್ಮೂಲವಾಗುವ ಪ್ರಸಂಗ. ಆದರೂ ರಾಜಾರಾಮನಿಗೆ ಮಾರ್ಗವನ್ನು ಕೊಟ್ಟಳೆಷ್ಟೇ ಅಲ್ಲ, ಆತನು ತನ್ನ ಸೀಮೆ

ಯನ್ನು ದಾಟುವ ವರೆಗೆ ಆತನನ್ನು ರಕ್ಷಿಸುವ ಭಾರವನ್ನು ವಹಿಸಿದಳು. ಸ್ವತಃ ಶಸ್ತ್ರಪಾಣಿಯಾಗಿ ರಾಜಾರಾಮನ ಬೆನ್ನಟ್ಟಿ ಬಂದ ಮೊಗಲ ಪಡೆಯನ್ನು ತಡೆದಳು. ಈ ಕಾಲಕ್ಕೆ ರಾಜಾರಾಮನೂ ಆತನ ಅನುಯಾಯಿಗಳೂ ಕೊರಳೊಳಗೆ ಲಿಂಗವನ್ನು ಕಟ್ಟಿಕೊಂಡು ಜಂಗಮರ ವೇಷವನ್ನು ಹಾಕಿಕೊಂಡು ಯಾತ್ರಿಕರಂತೆ ಪ್ರವಾಸ ಮಾಡಿದರು. ರಾಜಾರಾಮನು ತನ್ನ ರಾಜ್ಯದ ಗಡಿಯನ್ನು ದಾಟಿ ಹೋಗುವ ವರೆಗೆ ಮೊಗಲರನ್ನು ತನ್ನ ಸೀಮೆಯೊಳಗೆ ಕಾಲಿಡಗೊಡಲಿಲ್ಲ. ನಂತರ ರಾಜಾರಾಮನು ಬಲು ದೂರ ಹೋದನೆಂದು ಸುದ್ದಿಯು ಮುಟ್ಟಿದ ಕೂಡಲೇ ಮೊಗಲ ಪಡೆಯು ಜಿಂಜಿಯ ಕಡೆಗೆ ತೆರಳಿತು. ಈ ಪ್ರಸಂಗದಲ್ಲಿ ಚನ್ನಮ್ಮಾಜಿಯು ತೋರಿಸಿದ ಅತುಲ ಧೈರ್ಯ, ಶೌರ್ಯ, ಸಾಹಸಾದಿ ಗುಣಗಳು ವರ್ಣನೀಯವಾದುವು. ರಾಜಾರಾಮನನ್ನು ಅತಿ ದೊಡ್ಡ ಪ್ರಾಣಸಂಕಟದಿಂದ ಉಳಿಸಿದ ಶ್ರೇಯಸ್ಸು ಚನ್ನಮ್ಮಾಜಿಗೆ. ಸುಮಾರು ನೂರು ವರ್ಷಗಳ ಹಿಂದೆ ಆಂಗ್ಲರ ಸಂಗಡ ಹೋರಾಡಿದ ಕಿತ್ತೂರ ಚನಮ್ಮನ ಧೈರ್ಯ ಸಾಹಸಗಳಿಗೆ ಕೊರತೆಯುಂಟೇ? ವೀರಶೈವರಲ್ಲಿ ಸ್ತ್ರೀಯರೇ ಇಂಥ ಸಹಾಸಿಗಳೂ, ಯುದ್ಧ ಪಟುಗಳೂ, ಅಭಿಮಾನಿಗಳೂ ಆಗ್ನಿಹೋದುದು ಅಭಿಮಾನಪಡತಕ್ಕ ಸಂಗತಿಯಲ್ಲವೇ!

**ಸಶೇಷ,**



# ಷಟ್‌ಸ್ಥಲ ಪ್ರಕಾಶ.

(ಲೇಖಕರು:— ಬ್ಯಾ. ಕಲ್ಯಾಣಪ್ಪನವರು ಬಿ. ಎ.)

---

## ಭೋಗಷಟ್ಪದಿ.

### ೧ ಭಕ್ತ.

ಗುರುವುಲಿಂಗ ಜಂಗಮಗಳ
ಚರಣದಲ್ಲಿ ಭಕ್ತಿಯಿರಿಸಿ
ಪರಮಶುದ್ಧ ಕಾಯಕದಲಿಗಳಿಸಿ ದ್ರವ್ಯವ।
ನಿರುತ ತ್ರಿವಿಧದಾಸೋಹವನು
ಸರಸದಿಂದ ಗೆಯ್ದುರಮಿಪ
ನರನೆ ಪರಮಭಕ್ತನೆನಿಪ ವೀರಶೈವರೊಳ್ ॥೧॥

ಲಿಂಗವೆನ್ನ ಮಾತೆಯೆಂದು
ಹಿಂಗದಮಳ ಶ್ರದ್ಧೆಯಿಂದ
ತುಂಗಮಹಿಮ ಭಕುತ ಕೂಸಿನಂತೆ ಚರಿಪನು।
ಅಂಗಗುಣಗಳಳಿಯಲೆಂದು
ಲಿಂಗಗುಣಗಳುಳಿಯಲೆಂದು
ಲಿಂಗಮಾತೆಯತುಲ ಪ್ರೇಮವನ್ನು ಪಡೆವನು ॥೨॥

ನನ್ನ ಕುಲವು ಹೆಚ್ಚುಯೆಂದು
ನಿನ್ನ ಕುಲವು ಕಡಿಮೆಯೆಂದು
ಕುನ್ನಿಯಂತೆ ಭಕುತ ತಾನು ಬೊಗಳಲಾರನು।
ಚೆನ್ನ ಲಿಂಗವನ್ನು ಧರಿಸಿ
ಭಿನ್ನ ಕಾಯಕಗಳ ಮಾಳ್ಪ
ರನ್ನು ಶ್ರೇಷ್ಠರೆಂದು ಕಾಂಬ ಭಕ್ತಿಯಿಂದಲಿ ॥೩॥

ಕೂಸಿನಂತೆ ಭಕ್ತಿಯಿರಿಸಿ
ದಾಸನಂತೆ ಸೇವೆಮಾಡಿ
ಮೀಸಲಾದ ನಡತೆ ನುಡಿಗಳಿಂದ ಶೋಭಿಸಿ।
ಕಾಸಿ ತೆಗೆವ ಚಿನ್ನದಂತೆ

ಸೋಸಿ ತೆಗೆದ ತುಪ್ಪದಂತೆ
ಈಶನೊಲ್ಮೆ ಪೊಂದಿ ಬೆಳಗುತಿರ್ಪ ಭಕ್ತನು ॥೪॥

ಬಸವನಿಂದ ಭಕುತನಿಲ್ಲ
ವಸುಧಿಯಿಂದ ಭಾರವಿಲ್ಲ
ಅಸಮಮಹಿಮ ಲಿಂಗದಿಂದ ದೈವವಿಲ್ಲವು ;
ಮಿಸುಪ ಬಸವ ಭಕುತಿಭಾವ
ವಸುಧಿಯಲ್ಲಿ ತೊಳಗಿ ಬೆಳಗಿ
ಎಸೆಯಲೆಂದು ಸಾಂಬಶಿವನ ಬೇಡಿಕೊಂಬುವೆ ॥೫॥

## ೨ ಮಹೇಶ.

ನೇಮ ನಿಷ್ಠೆ ವ್ರತಗಳಿಂದ
ಕಾಮಲೋಭಗಳನು ಹುರಿದು
ಸ್ವಾಮಿಯೆನಿಸಿ ಭಕ್ತಗಣಕೆ ಬೋಧೆಗೆಯ್ಯುತೆ ।
ನೇಮವ್ರತಕೆ ಭಂಗಬರಲು
ಭೀಮ ಶಪಥವನ್ನು ತೊಟ್ಟು
ಸೋಮಧರನ ಕೃಪೆಯ ತಾ ಮಹೇಶ ಪಡೆವನು

ಮೂರು ವಿಧದ ದೀಕ್ಷೆ ಹೊಂದಿ
ಮೂರು ಸ್ನಾನ ಮೂರು ಪೂಜೆ
ಮೂರು ಲಿಂಗ ತೃಪ್ತಿಗೆಯ್ದು ಶುದ್ಧನಪ್ಪನು ।
ಸಾರ ತ್ರಿಕರಣ ಶುದ್ಧವಾಗೆ
ದೂರಮಾಡಿ ಸ್ವಾರ್ಥದಿರವ
ವೀರಶೈವ ಧರ್ಮಸೇವೆ ಮಾಳ್ಪ ಸಂತತಂ ॥೨॥

ಹರಪುರಾಣ ಪುಣ್ಯಕಥೆಯ
ಮಿರುಪಕೀರ್ತನಂಗಳನ್ನು
ಸರಸಮಾದ ನೀತಿ ಧರ್ಮ ಶಾಸ್ತ್ರ ತತ್ವವ ।
ಮೆರೆವ ಪ್ರವಚನಗಳ ತಾನು
ಪರಮ ಭಾಷಣಂಗಳನ್ನು
ಒರೆವ ಪ್ರೇಮದಿಂ ಮಹೇಶ ಶ್ರೋತೃ ವೃಂದಕೆ ॥೩॥

ಲಿಂಗ ಬಿಟ್ಟು ಅನ್ಯದೇವ
ರಿಂಗೆ ನಮಿಪ ಭ್ರಷ್ಟರಿಂಗೆ
ಸಿಂಗದಂತೆ ಗರ್ಜಿಸುವನು ಹಂಗುಯಿಲ್ಲದೆ ।
ಲಿಂಗಧರ್ಮಕಾಗಿ ತಾನು
ಹಿಂಗಿಬಿಡುವ ಪ್ರಾಣವನ್ನು
ಭಂಗಗೆಟ್ಟು ಬಾಳಲಾರ ಲಜ್ಜೆಯಿಂದಲಿ ॥೪॥

ಪರರ ಹೊನ್ನು ಹೆಣ್ಣುಗಳನು
ದುರುಳ ಮನದಿ ನೋಡಲಾರ
ಮರುಳತನದಿ ಆಶೆಗೆಳಿಪರನ್ನು ಸಹಿಸನು ।
ಹೊರಗೆ ಒಂದು ಒಳಗೆ ಒಂದು
ಬರಿದೆ ಡಂಭ ಬಡಿಯುವರ್ಗೆ
ವರಮಹೇಶ ಬಸವ ಶ್ರೇಷ್ಠ ಬುದ್ಧಿ ವೇಳ್ವನು ॥೫॥

## ೩ ಪ್ರಸಾದಿ.

ತನ್ನ ರಸನೆವಾಣಿಚಿತ್ತ-
ವನ್ನು ಸುಪ್ರಸನ್ನಗೊಳಿಸಿ
ಚೆನ್ನ ಸಾವಧಾನದಿಂದ ರಮಿಪ ಮೂರುತಿ ।
ಉನ್ನತದಿ ಪ್ರಸಾದಿಯೆನಿಸಿ
ಸನ್ನುತಾತ್ಮ ಶಾಂತಿಯಿಂದ
ತನ್ನ ಬನ್ನವನ್ನು ನೀಗಿ ತೃಪ್ತನಪ್ಪನು ॥೧॥

ಮಿತದಿ ಅನ್ನ ಮಿತದಿ ಪಾನ
ಮಿತದಿ ನಡೆಯು ಮಿತದಿ ನುಡಿಯು
ಮಿತದೊಳಿರ್ದು ಶಾಂತಿ ಸಾವಧಾನಪೊಂದುವಂ ।
ಹಿತವ ಮಾಳ್ಪ ಮೌನಯೋಗ
ರತನು ವ್ಯಸನ ವಿಘ್ನಗಳಲಿ
ಸತತ ಮನವು ಶಾಂತಿಗೊಳ್ಳಲೆಂದು ಯತ್ನಿಪಂ ॥೨॥

ಚಿತ್ತದಲ್ಲಿ ಕಳೆಯು ತುಂಬಿ
ನಿತ್ಯ ಮೊಗದಿ ನಗೆಯು ತೋರಿ
ಸತ್ಯ ವಚನ ಸರಳಭಾವ ಶಾಂತ ಮೂರ್ತಿಯು ।

ಹತ್ತಿರದೊಳು ಬರ್ಪ ಜನರ
ಹತ್ತೆಗರೆದು ಪ್ರೇಮದಿಂದ
ಮುತ್ತಿನಂಥ ಮಾತನಾಡಿ ತೃಪ್ತಿಗೊಳಿಸುವಂ ॥೩॥

ಅಂಗ ಸುಖವ ಹಿಂಗಿ ತಾನು
ಲಿಂಗತೃಪ್ತಿಗಾಗಿ ಕಾರ್ಯ
ಸಾಂಗಗೊಳಿಪ ಮೋದದಿಂದ ನಗುವ ಕಷ್ಟಕೆ।
ಹಂಗಿ ನನ್ನ ವಸ್ತ್ರತೊರೆದು
ತಂಗುಳನ್ನ ಹರಕು ಬಟ್ಟೆ
ಪಿಂಗದಮಳ ಪ್ರೇಮದಿಂ ಪ್ರಸಾದಿ ಸೇವಿಪಂ ॥೪॥

ಬಸವ ಧನಿಯು ಸುಪ್ರಸಾದ
ರಸನೆವಾಣಿ ಚಿತ್ತದಲ್ಲಿ
ಮಿಸುಪ ಸಾವಧಾನ ಶಾಂತಿ ಹರ್ಷವೀಯಲ್ಕೆ।
ಬಸದಿಯಲ್ಲಿ ಪೇರ್ಮೆವೆತ್ತ
ರಸಿಕ ಬಸವ ವಚನ ಸುಧೆಯು
ಹಸಿದಸುಪ್ರಸಾದಿಗಳ್ಗೆ ತೃಪ್ತಿಯೀಯಲ್ಕೆ ॥೫॥

## ೪ ಪ್ರಾಣಲಿಂಗಿ.

ಜಗದ ಸರ್ವ ಜೀವಿಗಳನು
ಬಗೆದು ತನ್ನ ಪ್ರಾಣದಂತೆ
ಮಿಗಿಲು ಭೂತದಯೆ ಪರೋಪಕಾರಬುದ್ಧಿಯಿಂ।
ಬಗೆಬಗೆಯಲಿ ಹಿತವಮಾಳ್ಪ
ಝಗಿಪಮೂರ್ತಿ ಪ್ರಾಣಲಿಂಗಿ
ಸೊಗಸಿನಿಂದ ಕರುಣರಸವ ಸುರಿಸುತಿರ್ಪನು ॥೧॥

ತನ್ನ ಲಿಂಗ ಪ್ರಾಣವಾಗಿ
ಚೆನ್ನ ಪ್ರಾಣಲಿಂಗವಾಗಿ
ಬನ್ನಬಡುವ ಜೀವಿ ಪ್ರಾಣಲಿಂಗವಾಗಿರೆ।
ತನ್ನ ಕರುಣವನ್ನು ನೀಡಿ
ಸನ್ನುತಾತ್ಮ ಪ್ರಾಣಲಿಂಗಿ
ಉನ್ನತದೊಳು ಪರರ್ಗೆ ಹಿತವ ಮಾಳ್ಪ ಸಂತತಂ ॥೨॥

ಪರರ ಸುಖವೆ ತನ್ನ ಸುಖವು
ಪರರ ನೋವೆ ತನ್ನ ನೋವು
ಪರರು ನೊಂದುಕೊಂಡರಕಟ ಕಳವಳಿಸುವನು ।
ಪರರು ತನಗೆ ಕಷ್ಟಕೊಡಲಿ
ಹರಣ ಮಾಡುತಿರಲಿ ಜೀವ
ದುರುಳರನ್ನು ಕರುಣಿಸೆಂದು ಹರನ ಬೇಡುವಂ ॥೩॥

ಸ್ವಾನುಭವದ ತುಟ್ಟತುದಿಯ
ತಾನು ಕಂಡು ಲೋಕದಲ್ಲಿ
ಹೀನ ಜಂತುಗಳಲಿ ಲಿಂಗಭಾವ ತಾಳ್ವನು ।
ಜ್ಞಾನಿ ಪ್ರಾಣಲಿಂಗಿ ಕಾವ-
ಧೇನು ಸಕಲ ಜೀವಗಣಕೆ-
ಸಾನುನಯದಿ ಸುಖದ ಮಧುರ ರಸವನೀಯುವಂ ॥೪॥

ಹೃದಯದಲ್ಲಿ ಕರುಣರಸದ
ನಿಧಿಯು ಸೂಸಿ ಹರಿಯುತಿಹುದು
ಮುದದಿ ಜೀವರಾಶಿಯುದರೊಳೀಸುತಿರ್ಪುದು ।
ಸದಯಗುಣ ಸುಧಾಮ ಬಸವ
ಸದುಳದಿಂದ ಪ್ರಾಣಲಿಂಗಿ
ಯೆದೆಯೊಳಿರ್ದು ಕರುಣರಸದ ಧಾರೆ ಸುರಿಸುವಂ ॥೫॥

## ೫ ಶರಣ.

ಅರಿವಿನಿವಾಳ ಜ್ಯೋತಿಯನ್ನು
ಮಿರುಪಯೆದೆಯೊಳಿರಿಸಿಕೊಂಡು
ಶರಣಲಿಂಗದೊಡನೆ ಸರಸವಾಡುತಿರ್ಪನು ।
ಶರಣ ಲಿಂಗ ಸತಿಯುಯೆನಿಸಿ
ಧರೆಯೊಳಿರ್ದು ಯಿಲ್ಲದಂತೆ
ಮರೆಯುತಿರ್ಪ ಬಾಹ್ಯದುಃಖಸುಖವ ದಾಂಟ ತಾಂ ॥೧॥

ಶರಣ ಹಿಡಿದ ಮಣ್ಣು ಚಿನ್ನ
ಶರಣ ನುಡಿದ ನುಡಿಯು ಪ್ರಣವ
ಶರಣ ನಡೆವ ನಡೆಯು ಮೋಕ್ಷಪಥವು ಲೋಕಕೆ ।
ಶರಣ ಕುಡಿವ ಜಲವು ತೀರ್ಥ

ಲಿಂಗದಲ್ಲಿ ಶರಣನಿರುತ
ಸಂಗಿಯಾಗಿ ಮರೆದು ತನ್ನ
ಶೃಂಗಸುಖವನೇರಿಯಿಳಿವ ಲೀಲೆಯಿಂದಲಿ ।
ಲಿಂಗದೊಡನೆ ಜೀಕೆಯಾಡಿ
ತುಂಗವೋಕ್ಷ ಶಿಖರವೇರಿ
ಲಿಂಗಗೂಡಿ ಮರಳಿ ಧರೆಗೆ ಯಿಳಿವ ಸದ್ರನೆ ॥೩॥

ಶರಣ ಸುಖದ ಸೀಮೆ ಮೀರಿ
ಶರಣ ದುಃಖ ಪಾರಗಂಡು
ಶರಣಭಯವಿದೂರನಾಗಿ ಮರಣಕಂಜನು ।
ಶರಣ ನಿತ್ಯ ಭಾವದಲ್ಲಿ
ಸರಸವಾದ ಹರುಷದಿಂದ
ಮೆರೆಯುತಿರ್ಪ ದೂರನಾಗಿ ನಿಂದೆಸ್ತುತಿಗಳಿಂ ॥೪॥

ಶರಣಬಸವರಕ್ಷಿಸೆನ್ನ
ಮರಣಭಯವ ನೀಗಿ ನೀನು
ಕರುಣದಿಂದೆ ವಿಮಳಹರುಷ ನೀಡಿ ಮೋದದಿಂ ;
ಶರಣ ಶರಣು ಯೆಂದವರ್ಗೆ
ಮರಣವಿಲ್ಲವೆಂಬ ನುಡಿಯು
ಧರೆಯೊಳೆಲ್ಲ ಬೆಳಗುತಿರಲಿ ಸರ್ವಕಾಲವು ॥೫॥

## ೬ ಐಕ್ಯ.

ಅಂಗಲಿಂಗ ಭೇದವಳಿದು
ಲಿಂಗದೊಳಗೆ ಬೆರೆದು ತಾನು
ಲಿಂಗರೂಪದಿಂದ ಜಗದಿ ಬೆಳಗುತಿರ್ಪನು ।
ತುಂಗ ಪರಮ ಹಂಸನಾಗಿ
ಲಿಂಗ ಚಿತ್ಸರೋವರದೊಳು
ಪಿಂಗದಮಳನಂದದಿಂದಲೈಕ್ಯ ರಮಿಪನು ॥೧॥

ಹೊರಗೆ ಶಬ್ದ ಶೂನ್ಯವಾಗಿ
ಮಿರುಗುತಿಹುದು ಪ್ರಣವನಾದ
ಮಿರುಪ ಲಿಂಗ ರೂಪವೊಂದೆ ಮಿನುಗುತಿರ್ಪುದು ।

ಪರಮ ಸುಪ್ರಕಾಶ ಮಿಂಚಿ
ಪರಿಯುತಿಹುದು ಪೂರವಾಗಿ
ವರಸಮಾಧಿಯಲ್ಲಿ ಐಕ್ಯ ನಿರತನಾಗಿರೆ ॥೨॥

ನೀರಿನಲ್ಲಿ ಲವಣ ಬೆರೆದು
ಕ್ಷೀರದಲ್ಲಿ ಸವಿಯು ಗೂಡಿ
ಸಾರ ಸೊಡರಿನಲ್ಲಿ ಜ್ಯೋತಿಯಡಗಿ ಕಾಂಬವೋಲ್ ।
ಪಾರಮಾರ್ಥ ಲಿಂಗದಲ್ಲಿ
ನೇರವಾಗಿಯಿರಿಸಿ ಅಂಗ
ತೋರುತಿರ್ಪನೇಕ ವಾಗಿ ಐಕ್ಯ ಸ್ನೇಹವಿಂ ॥೩॥

ಪರಮನಲ್ಲಿ ಬೆರೆದ ಬಳಿಕ
ಮರಳಿ ಭವಕೆ ಬಾರನಯ್ಯ
ನಿರುತ ಮೋಕ್ಷ ಸುಖವ ಪೊಂದಿ ರಮಿಸುತಿರ್ಪನು ।
ಪರಮ ಶಿವನು ತನ್ನ ಅಂಶ
ವಿರಿಸಿ ಧರೆಯೊಳೆಲ್ಲ ಕೊನೆಗೆ
ಸರಸದಿಂದ ತನ್ನ ಅಂಶ ಹೀರಿಕೊಂಬನು ॥೪॥

ಪರಮ ಭಕುತ ಗಮಿತ ಶ್ರದ್ಧೆ
ವರ ಮಹೇಶಗಮಳನಿಷ್ಠೆ
ಸರಸ ಸುಪ್ರಸಾದಿಗುಚಿತ ಸಾವಧಾನವು ।
ಮಿರುಪ ಪ್ರಾಣಲಿಂಗಿಗಿನ್ನು
ಪರಮಸ್ವಾನುಭವವುಗೂಡಿ
ಶರಣಗರಿವು ಐಕ್ಯಗಮಳ ಮೋಕ್ಷ ಸೌಖ್ಯವು ॥೫॥

ಸಂಗಮೇಶ ಲಿಂಗದಲ್ಲಿ
ಮಂಗಳೈಕ್ಯನಾದ ಬಸವ
ಲಿಂಗ ತಾನು ಲೋಕವಂದ್ಯನಾಗಿ ಶೋಭಿಪಂ ।
ಅಂಗ ಲಿಂಗ ಸಂಗ ಮಾಡಿ
ತುಂಗ ಸುಖವನೇರಿ ರಮಿಪ
ಮಂಗಳಾತ್ಮರಿಂಗೆ ನಮಿಪೆ ಪರಮ ಭಕ್ತಿಯಿಂ ।೬॥

---

# ಶ್ರೀ ಎಡೂರ ವೀರಭದ್ರದೇವಾಲಯು.

(ಲೇಖಕ:— ವೀರಪ್ಪ ಯುಗಟ ಬಿ. ಎ ಎಲ್ ಎಲ್. ಬಿ. ಹಾವೇರಿ.)

ಈ ದೇವಾಲಯುವು ಕರ್ನಾಟಕದಲ್ಲಿ ಬಹು ಪುರಾತನವಾದ ಮತ್ತು ಪ್ರಸಿದ್ಧವಾದ ಕ್ಷೇತ್ರವಾಗಿದೆ ಎಡೂರ ಕ್ಷೇತ್ರವು ಬೆಳಗಾವ ಜಿಲ್ಹಾ ಚಿಕ್ಕೋಡಿ ತಾಲೂಕು ಕೃಷ್ಣಾನದಿಯು ತೀರದಲ್ಲಿದೆ. ಇದು ಶೇಡಬಾಳ ಸ್ಟೇಶನದಿಂದ ೧೫ ಮೈಲು ದೂರದಲ್ಲಿದೆ. ಅಲ್ಲಿಗೆ ಯಾವಾಗಲೂ ಮೋಟಾರ ಮತ್ತು ಟಾಂಗೆಗಳು ಓಡಾಡುತ್ತವೆ. ಎಡೂರ ಶಬ್ದವು ಎಡವೀರ ಶಬ್ದದ ರೂಪಾಂತರವು. ಶ್ರೀ ವೀರಭದ್ರದೇವಾಲಯುವು ಕೃಷ್ಣಾನದಿಯು ಎಡಭಾಗದ ತೀರದಲ್ಲಿರುವದರಿಂದ ಎಡವೀರ ಎಂದು ಹೆಸರುಂಟಾಗಿದೆ. ದೇವಾಲಯುದ ೨—೩ ಫರ್ಲಾಂಗಿನಲ್ಲಿ ವೃಂದಾವನವೆಂಬ ಒಂದು ರಮ್ಯವಾದ ಸ್ಥಳವಿದೆ. ಇಲ್ಲಿ ಎರಡು ಶಿವಲಿಂಗಗಳುಂಟು. ದೇವಾಲಯುದ ಸುತ್ತಲೂ ನದಿಯು ತೀರದಲ್ಲಿಯೂ ದೊಡ್ಡ ದೊಡ್ಡ ಗಿಡಗಳ ವನಗಳಿರುವದರಿಂದ ಸೃಷ್ಟಿಸೌಂದರ್ಯವು ಮನೋಹರವಾಗಿರುವದು. ಬೇಸಿಗೆಯುಲ್ಲಿ ಇಲ್ಲಿಯು ಹವೆಯು ಅತ್ಯುತ್ತಮವಾಗಿರುವದು. ಹೈದರಾಬಾದ, ಮೈಸೂರ, ಮಹಾರಾಷ್ಟ್ರ ಮೊದಲಾದ ಕಡೆಗಳಿಂದ ಎಷ್ಟೋ ಜನ ಭಕ್ತರು ಮತ್ತು ದೊಡ್ಡ ದೊಡ್ಡ ಅಧಿಕಾರಿಗಳು ಬೇಸಿಗೆಯುಲ್ಲಿ ಇಲ್ಲಿಗೆ ಬಂದು ದೇವದರ್ಶನ ಹೊಂದಿ ಪಾವನ ಹೊಂದುವರಲ್ಲದೆ ಹವೆಯು ಗುಣದಿಂದ ನಿರೋಗಿಗಳಾಗಿಯೂ ಹೋಗುತ್ತಾರೆ.

ಶ್ರೀ ವೀರಭದ್ರ ದೇವಾಲಯುದ ಕಟ್ಟಡವು ಬಹು ವಿಶಾಲವಾಗಿಯೂ ಮನೋಹರವಾಗಿಯೂ ಇದೆ. ಇದು ಪೂರ್ವ ಪಶ್ಚಿಮ ೧೫೦ ಫೂಟ ಉದ್ದವಾಗಿಯೂ ಉತ್ತರ ದಕ್ಷಿಣ ೧೦೦ ಫೂಟು ಅಗಲವಾಗಿಯೂ ಇದೆ. ದೇವಾಲಯುದ ಸುತ್ತಲೂ ಆವರಣ ಗೋಡೆಯೂ ಅದಕ್ಕೆ ಹೊಂದಿ ವಸತಿ ಗ್ರಹಗಳು ಭಕ್ತರ ವಾಸಕ್ಕಾಗಿ ಕಟ್ಟಲ್ಪಟ್ಟಿವೆ. ದೇವಾಲಯುಕ್ಕೆ ೩ ದೊಡ್ಡ ಮಹಾದ್ವಾರಗಳಿವೆ. ಪೂರ್ವದಿಕ್ಕಿನ ಮಹಾದ್ವಾರವು ಪುರಾತನವಾಗಿದ್ದು ಎರಡು ಮಹಡಿಗಳುಳ್ಳದ್ದು. ಇದನ್ನು ೩೦ ವರ್ಷಗಳ ಹಿಂದೆ ರಾ। ಸಾ। ಮಲ್ಲಪ್ಪ ಶಿಂತ್ರೆ ಕುರ್ಲೆ ಇವರು ಜೀರ್ಣೋದ್ಧಾರ ಮಾಡಿದರು. ದಕ್ಷಿಣ ಮಹಾದ್ವಾರವು ೩ ಅಂತಸ್ತುಗಳುಳ್ಳದ್ದಿದ್ದು ಮನೋಹರವಾದ ಕಮಾನುಗಳಿಂದಲೂ

ಗೊಂಬೆಗಳಿಂದಲೂ ಅಲಂಕೃತವಾಗಿದೆ. ಇದನ್ನು ಕೊಲ್ಹಾಪುರದ ಒಬ್ಬ ಸರದಾರನು ಕಟ್ಟಿಸಿದನೆಂದು ಹೇಳುತ್ತಾರೆ. ಗರ್ಭಗುಡಿಯ ಬಾಗಿಲನ್ನು ನಿಪ್ಪಾಣಿಯ ಶ್ರೀಮಂತ ಚನ್ನಪ್ಪ ಬರದೆ ಇವರು ೧೯೧೫ ನೇ ಇಸ್ವಿಯಲ್ಲಿ ಹೊಸದಾಗಿ ಹಚ್ಚಿಸಿ ಬಾಗಿಲುಗಳಿಗೆ ಅಂದವಾದ ನಕ್ಷೆಗಳಿಂದ ಕೂಡಿದ ಬೆಳ್ಳಿಯ ತಗಡುಗಳನ್ನು ಬಡಿಸಿದ್ದಾರೆ. ತಲೆಬಾಗಿಲ ಮಧ್ಯದ ಗಣಪತಿ ಮೂರ್ತಿಗೆ ಬಂಗಾರದ ಗಿಲೀಟು ಮಾಡಿರುವದರಿಂದ ಬಹು ಅಂದವಾಗಿ ಕಾಣುವದು. ವೀರಭದ್ರ ಮೂರ್ತಿಯು ಭವ್ಯವೂ ಕಲಾಯುಕ್ತವಾಗಿಯೂ ಇದೆ. ಗುಡಿಯ ಶಿಖರವೂ ಸಹ ಬಹಳ ಕೌಶಲ್ಯದಿಂದ ಕಟ್ಟಲ್ಪಟ್ಟಿರುವದು. ಶಿಖರವು ಅಷ್ಟಕೋನಾಕೃತಿಯಿದ್ದು ೩ ಅಂತಸ್ತುಗಳುಳ್ಳದ್ದಾಗಿದೆ. ಎಂಟು ದಿಕ್ಕಿನಲ್ಲಿಯೂ ಎಂಟು ಪೌರಾಣಿಕ ದೇವತೆಗಳ ಸುಂದರ ಮೂರ್ತಿಗಳು ಸ್ಥಾಪಿಸಲ್ಪಟ್ಟಿವೆ. ಪೂರ್ವದಿಕ್ಕಿನಲ್ಲಿ ಶಿವಪಂಚಾಯತನ ಮೂರ್ತಿಯೂ ಪಶ್ಚಿಮಕ್ಕೆ ವರಣನೂ ಉತ್ತರಕ್ಕೆ ಕುಬೇರನೂ ದಕ್ಷಿಣಕ್ಕೆ ಯಮಧರ್ಮ ಮೂರ್ತಿ ತಮ್ಮ ತಮ್ಮ ವಾಹನಸಹಿತವಾಗಿ ಸ್ಥಾಪಿಸಲ್ಪಟ್ಟಿವೆ. ಇದೇ ಪ್ರಕಾರ ಮೇಲಿನ ೨ ಅಂತಸ್ತುಗಳಲ್ಲಿಯೂ ೩೩ ಕೋಟಿ ದೇವತೆಗಳ ಮೂರ್ತಿಗಳು ಸ್ಥಾಪಿಸಲ್ಪಟ್ಟಿವೆ. ಗುಡಿಯ ಆವರಣದಲ್ಲಿ ಗಣಪತಿ, ಮಾರುತಿ, ಕರವೀರಭದ್ರ, ನಂದಿ ಮೊದಲಾದ ಅನೇಕ ದೇವತಾಪ್ರತಿಮೆಗಳು ಇವೆ. ಹೆಜ್ಜೆ ಹೆಜ್ಜೆಗೂ ದೇವತೆಗಳ ದರ್ಶನವೂ ಸ್ಮರಣೆಯೂ ಆಗಿ ಪವಿತ್ರ ಕಲ್ಪನೆಯೇ ಉತ್ಪನ್ನವಾಗಲೆಂಬ ಉದ್ದೇಶದಿಂದಲೋ ಈ ಪ್ರತಿಮೆಗಳ ಸ್ಥಾಪನೆಯಾಗಿದೆಯೆಂಬಂತೆ ಭಾಸವಾಗುತ್ತದೆ.

ದೇವಾಲಯದ ಪ್ರಾಕಾರದಲ್ಲಿಯೇ ಒಂದು ಭವ್ಯವಾದ ಸಭಾಮಂಟಪವಿರುವದು. ಇವೆಲ್ಲ ಇಮಾರತುಗಳು ಬಲವಾದ ಕಲ್ಲುಗಚ್ಚುಗಳಿಂದ ಕಟ್ಟಲ್ಪಟ್ಟಿವೆ. ಆವರಣದ ಪಟಾಂಗಣದಲ್ಲಿ ಕಲ್ಲುಗಳ ಪರಸೆ ಇದ್ದು ಬಹು ಅಚ್ಚುಕಟ್ಟಾಗಿ ಕಾಣುವದು. ಇದನ್ನು ರಾಮದುರ್ಗದ ಶ್ರೀಮಂತ ವೀರಬಸಪ್ಪ ಮರಬದ ಇವರು ೩೦--೪೦ ವರ್ಷಗಳ ಹಿಂದೆ ಮಾಡಿಸಿದರು. ಆವರಣದಲ್ಲಿ ಒಂದು ಉತ್ಸವ ಮೂರ್ತಿಯ ದೇವಾಲಯವೂ ಇದೆ. ಉತ್ಸವಮೂರ್ತಿಯು ಬಹು ಸುಂದರವಾಗಿದೆ. ಇದರ ಚರಿತ್ರೆಯು ಚಮತ್ಕಾರವುಳ್ಳದ್ದಾಗಿದೆ. ಈ ಮೂರ್ತಿಯನ್ನು ಮೊದಲು ದಾನೋಳಿಯ ಪಾಟೀಲರು ತಮ್ಮ ಮನೆಯಲ್ಲಿ ಪೂಜೆಗೋಸ್ಕರ ಮಾಡಿಸಿದ್ದರು. ಪಾಟೀಲರು ಜೈನ ಧರ್ಮದವರಾದರೂ ವೀರಭದ್ರ ದೇವರು ಪೂರ್ವ

ದಿಂದಲೂ ಅವರ ಮನೆಯ ದೇವತೆಯು. ಮೂರ್ತಿಯನ್ನು ಅಕ್ಕಸಾಲಿಗನ ಮನೆಯಿಂದ ಪಲ್ಲಕ್ಕಿಯಲ್ಲಿ ಕೂಡ್ರಿಸಿಕೊಂಡು ಉತ್ಸವದಿಂದ ಮನೆಗೆ ತರಬೇಕೆಂದು ಹೊರಟಾಗ ಪಲ್ಲಕ್ಕಿಯನ್ನು ಹೊತ್ತವರು ದೇವಪ್ರೇರಣೆ ಹೊಂದಿ ಎಡೂರ ಮುಖವಾಗಿ ಹೋಗಹತ್ತಿದರು. ಎಷ್ಟು ಪ್ರಯತ್ನ ಮಾಡಿದರೂ ಮನೆಯ ಕಡೆಗೆ ತಿರುಗದಾದರು. ಆಗ ಕೆಲವರು ನೀವು ಈ ಮೂರ್ತಿಯನ್ನು ಎಡೂರಲ್ಲಿಯೇ ಸ್ಥಾಪಿಸಿರಿ, ದೈವಿಕ ಇಚ್ಛೆಯ ವಿರುದ್ಧವಾಗಿ ನಡೆದರೆ ಕ್ಷೇಮವಾಗಲಿಕ್ಕಿಲ್ಲ ಎಂದು ಹೇಳಲಾಗಿ ಪಾಟೀಲರು ಸಾವಿರಾರು ಜನರೊಂದಿಗೆ ಹಾಗೆಯೇ ಎಡೂರಿಗೆ ಹೋಗಿ ದೇವಸ್ಥಾನದಲ್ಲಿಯೇ ಮೂರ್ತಿಯನ್ನು ಸ್ಥಾಪಿಸಿದರೆಂದು ಐತಿಹ್ಯವದೆ.

ಎಡೂರಲ್ಲಿ ಶ್ರೀ ವೀರಭದ್ರ ದೇವಾಲಯದ ಹೊರ್ತಾಗಿ ಅವೃಶ್ಯೇಶ್ವರ, ಪಂಚಲಿಂಗೇಶ್ವರ ಮೊದಲಾದ ದೇವಾಲಯಗಳೂ ಶ್ರೀ ಕಾಡದೇವರು ಮಠದ ಪುರಾತನಸ್ವಾಮಿಗಳ ೬-೭ ಸಮಾಧಿಗಳೂ, ದೇವಾಲಯದಲ್ಲಿ ೧೦-೧೫ ವರ್ಷಪರ್ಯಂತ ವಾಸವಾಗಿದ್ದ ಒಬ್ಬ ಪ್ರಸಿದ್ಧ ಸಾಧುವಿನ ಸಮಾಧಿಯೂ ಇವೆ. ಶ್ರೀ ಕಾಡದೇವರಸ್ವಾಮಿ ಮಠವು ಭವ್ಯವಾದದ್ದು ಇದೆ. ಶ್ರೀ ವೀರಭದ್ರದೇವರ ಪೂಜಾ ಹಕ್ಕು ಈ ಮಠಕ್ಕೆ ಇದೆ. ಇವರು ತಮ್ಮ ನತಿಯಿಂದ ೨ ಜನ ಪೂಜಾರಿಗಳನ್ನು ನೇಮಿಸಿರುವರು. ಈ ಮಠಕ್ಕೆ ಮಾಂಜರಿ, ಶಹಾಪುರ, ಸೌವತ್ತಿ ಮೊದಲಾದ ಗ್ರಾಮಗಳ ಜಮೀನುಗಳ ಉಂಬಳಿಯುಂಟು. ಇದರ ಉತ್ಪನ್ನವು ಮಠಕ್ಕೆ ಪ್ರತಿವರ್ಷ ೫೦೦೦ ರೂ. ಗಳ ವರೆಗೆ ಆಗುವದು. ಶ್ರೀ ವೀರಭದ್ರದೇವರ ಪೂಜೆಗೆ ಯಡೂರಲ್ಲಿಯ ೨ ಜಮೀನುಗಳು ಸೌದತ್ತಿ, ಕಲ್ಲೋಳಗಳಲ್ಲಿಯ ಜಮೀನುಗಳು ಮಠಕ್ಕೆ ಇನಾಂ ಸಿಕ್ಕವೆ. ಈ ಮಠವು ಬಾಳೇಹಳ್ಳಿ ಪೀಠಕ್ಕೆ ಸಂಬಂಧಿಸಿದ್ದು ಇದೆ.

ಶ್ರೀ ಕಾಡದೇವರು ಮಠದ ಮೂಲ ಸ್ವಾಮಿಗಳು ಕ್ರಿ. ಶ- ೧೧ ನೇ ಶತದ ಅಂತ್ಯ ಭಾಗದಲ್ಲಿ ಅನೇಕ ದೇಶಗಳನ್ನು ಸಂಚಾರ ಮಾಡಿ ಎಡೂರ ಗ್ರಾಮಕ್ಕೆ ಬಂದರು. ಅಲ್ಲಿಯ ನದೀತೀರ ಮತ್ತು ಮನೋಹರವಾದ ವನಗಳನ್ನು ನೋಡಿ ಅಲ್ಲಿಯೇ ತಪಶ್ಚರ್ಯ ಮಾಡಹತ್ತಿದರು. ಆಗ ಅಲ್ಲಿಯ ವೀರಭದ್ರ ದೇವಾಲಯವು ಬಿದ್ದು ಹೋಗಿ ವೀರಭದ್ರಮೂರ್ತಿಯು ಭೂಮಿಯಲ್ಲಿ ಹುಗಿದು ಹೋಗಿತ್ತು. ಅದರ ಮೇಲೆ ಗಿಡಗಂಟಿಗಳು ಬೆಳೆದು ಹೋಗಿದ್ದವು. ಮೂರ್ತಿಯು ಕೂಡ್ರುವ ಪೀಠದ ಮೇಲೆ ದನ

ಕುರಿ ಕಾಯುವ ಹುಡುಗರು ಬೀರ ದೇವರ ಮೂರ್ತಿಯೆಂದು ಒಂದು ಉದ್ದವಾದ ಕಲ್ಲನ್ನಿಟ್ಟು ಅಡವಿಯ ಹೂಗಳಿಂದ ಪೂಜಿಸುತ್ತಿದ್ದರು. ವೀರ ಭದ್ರ ದೇವರ ಎಷ್ಟೋ ಭಕ್ತರು ಅದೇ ವೀರಭದ್ರ ದೇವರೆಂದು ಅದನ್ನು ಪೂಜಿಸಿ ಹೋಗುತ್ತಿದ್ದರು. ಶ್ರೀ ಸ್ವಾಮಿಗಳು ಈ ಅವಸ್ಥೆಯನ್ನು ನೋಡಿ ಭಕ್ತರನ್ನು ಕೂಡಿಕೊಂಡು ಹೋಗಿ ವೀರಭದ್ರ ಮೂರ್ತಿಯನ್ನು ಭೂಮಿ ಯೊಳಗಿಂದ ಅಗಿದು ತೆಗೆದು ಗಿಡಗಂಟಿಗಳನ್ನು ಕಡಿಸಿ ದೇವಸ್ಥಾನದ ಭೂಮಿಯನ್ನು ಸ್ವಚ್ಛ ಮಾಡಿಸಿದರು. ಕ್ರಿ. ಶ ೧೨೧೦ ರಲ್ಲಿ ದೇವಗಿರಿ ಯಲ್ಲಿ ಆಳುತ್ತಿದ್ದ ೨ನೇ ಸಿಂಹಣರಾಜನು ಆಗ ಕೊಲ್ಹಾಪುರದಲ್ಲಿ ಆಳು ತ್ತಿದ್ದ ಶಿಲಾಹಾರ ವಂಶದ ೨ ನೇ ಭೋಜನನ್ನು ಕ್ರಿ. ಶ. ೧೨೧೩ ರಲ್ಲಿ ಸೋಲಿಸಿ ತುಂಗಭದ್ರಾ ನದಿಯ ವರೆಗೆ ಉತ್ತರ ಕರ್ನಾಟಕವನ್ನು ತನ್ನ ಸ್ವಾಧೀನ ಮಾಡಿಕೊಂಡನು. ಸಿಂಹಣರಾಜನು ಎಡೂರಿಗೆ ಬಂದಾಗ ಶ್ರೀ ಕಾಡದೇವ ಸ್ವಾಮಿಗಳ ದರ್ಶನ ತೆಗೆದುಕೊಂಡು ಅವರ ಅನುಗ್ರಹದ ಮೇರೆಗೆ ಶ್ರೀ ವೀರಭದ್ರ ದೇವರ ಗರ್ಭದೇವಾಲಯವನ್ನು ಕಟ್ಟಿಸಿದನು. ಮತ್ತು ಅದರ ಪೂಜಾವಿನಿಯೋಗಕ್ಕೆ ಮೇಲೆ ಹೇಳಿದ ಅನೇಕ ಗ್ರಾಮ ಜಮೀನುಗಳನ್ನು ಉಂಬಳಿ ಹಾಕಿ ಸ್ವಾಮಿಗಳ ಶಿಷ್ಯರಾದ ಜಂಗಮರನ್ನು ಪೂಜಾರಿಗಳನ್ನಾಗಿ ನೇಮಿಸಿದನು. ಆಗ ಎಡೂರ ಗ್ರಾಮವು ಅಸ್ತಿತ್ವದಲ್ಲಿ ರಲಿಲ್ಲ. ಸ್ವಾಮಿಗಳ ಪರ್ಣಕುಟೀರವು ಮಾತ್ರ ಇತ್ತು. ಕ್ರಮೇಣ ಸ್ವಾಮಿ ಗಳ ಶಿಷ್ಯರು ತಮ್ಮ ಮನೆ, ಗುಡಿಸಲುಗಳನ್ನು ಕಟ್ಟುತ್ತ ಬಂದರು. ಇದೇ ಮುಂದೆ ಎಡೂರ ಗ್ರಾಮವಾಗಿ ಬೆಳೆಯಿತು. ಈ ಪ್ರಕಾರ ಗರ್ಭಗುಡಿ ಯನ್ನು ಸಿಂಹಣರಾಜನು ಕಟ್ಟಿಸಿದನಂತರ ಮೇಲೆ ಹೇಳಿದ ಮಹನೀ ಯರು ಕಾಲಕಾಲಕ್ಕೆ ಒಂದೊಂದು ಭಾಗವನ್ನು ಕಟ್ಟಿಸುತ್ತ ಸದ್ಯದ ಸ್ಥಿತಿಗೆ ತಂದಿರುತ್ತಾರೆ.

ಶ್ರೀ ಸ್ವಾಮಿಗಳು ಅನಂತರ ೪-೫ ವರ್ಷ ಶ್ರೀಶೈಲ ಮೊದಲಾದ ಗಿರಿಗಳನ್ನು ಸಂದರ್ಶಿಸಿ ಸಿದ್ಧಗಿರಿ ಕ್ಷೇತ್ರಕ್ಕೆ ಬಂದು ತಮ್ಮ ಶಿಷ್ಯರೊಬ್ಬರಿಗೆ ತಮ್ಮ ಅಧಿಕಾರ ಕೊಟ್ಟು ಅಲ್ಲಿಯೇ ಅದೃಶ್ಯರಾದರು.

ಮೇಲ್ಕಂಡ ವಿಷಯಗಳನ್ನು ಸೂಚಿಸತಕ್ಕ ಶಿಲಾಶಾಸನಗಳು ವೀರ ಭದ್ರ ದೇವಾಲಯದಲ್ಲಿ ಇವೆ. ಕಾಡಸಿದ್ಧೇಶ್ವರರು ಬಹು ಹೆಸರಾದ ವೀರ ಶೈವ ಮಹಾತ್ಮಿಕ ಪುರುಷರು. ಅವರು ಲಿಖಿಸಿದ ಕಾಡಸಿದ್ಧೇಶ್ವರ ವಚನವು ಉಪಲಬ್ಧವಿದೆ. ಇದು ವಚನ ಗ್ರಂಥಗಳವ ಬಹು ಪ್ರಸಿದ್ಧವಾದ ಗ್ರಂಥವು.

ಇದರಲ್ಲಿ ಷಟ್‌ಸ್ಥಲದ ಮರ್ಮಗಳು ಬಹು ಗೂಢ ವಾಕ್ಯಗಳಿಂದ ವಿಶದೀಕರಿಸಲ್ಪಟ್ಟಿವೆ. ಈ ವಚನ ಗ್ರಂಥಕ್ಕೆ ಟೀಕೆಯು ಸಹ ಉಂಟು ಈ ಮಹತ್ವದ ಗ್ರಂಥವನ್ನು ಪ್ರಸಿದ್ಧಗೊಳಿಸುವದು ವೀರಶೈವ ಸಮಾಜಕ್ಕೆ ಅತ್ಯಾವಶ್ಯಕವಾಗಿರುತ್ತದೆ.

ಇತ್ತೀಚಿಗೆ ಕಾರಣಾಂತರಗಳಿಂದ ದೇವಾಲಯದ ಅಧಿಕಾರವು ವೀರಶೈವರಿಂದ ತಪ್ಪಿ ಹೋಗಿ ಬ್ರಾಹ್ಮಣರ ಕೈಸೇರಿತ್ತು. ಆದರೆ ಈ ಬಗ್ಗೆ ಹೈಕೋರ್ಟಿನ ವರೆಗೂ ಕೋರ್ಟುಗಳಲ್ಲಿ ವ್ಯಾಜ್ಯ ನಡಿದು ವೀರಶೈವರೇ ದೇವಾಲಯಕ್ಕೆ ಅಧಿಕಾರಿಗಳೆಂದು ಅಂತ್ಯದಲ್ಲಿ ಸ್ಥಾಪಿತರಾಗಿರುತ್ತದೆ.

---

## ಬಡವನೆಂದಳಲದಿರು!

[ಲೇಖಕ:— ಶ್ರೀಯುತ ಈಶ್ವರ ಸಣಕಲ್ಲ ರಬಕವಿ.]

ಅಳಲದಿರು ಬಡವನೆಂದಳಲದಿರು ನೀ।
ಇಳೆಯಾಣ್ಮನಾ ದಿವ್ಯ ಸಂಪದವದಿರಲು ॥ಪಲ್ಲ॥

ಸಂಜೆಮುಂಜಾವುಗಳ ಹೂಬಿಸಿಲ ಹೊನ್ನು ತಾ।
ರಂಜಿಸುತ ಸುತ್ತಲೂ ಸೂರೆಯಾಗಿರಲು।
ನಂಜಿನಂತಿಹ ಜಗದ ಹೊನ್ನಿಗಾಸೆಯ ಪಡದೆ।
ಅಂಜಿ ಹಿಂಜರಿಯುತ್ತ ನೀನದನ ಮರೆಯೈ ॥೧॥

ಇರುಳು ಬಂತೆಂದು ಕಂಬನಿಯುದುರಿಸುವದೇಕೆ?।
ಇರುಳು ತೋರುವ ಚುಕ್ಕಿಮುತ್ತುಗಳ ನೋಡೈ।
ತರಳ, ಬೆಳಗಾಗುತಿರೆ ಯುದುರಿಯವು ನಿನಗಾಗಿ।
ಅರಳಾಗಿ ಸೌಸವವ ಸೂಸುತಿರುತಿರಲು ॥೨॥

ಮುಗಿಲಿನೊಳು ಮೂಡಿರುವ ಕಾಮನಾ ಬಿಲ್ಲಿನೊಳು।
ಝಗಝಗಿಸುತಿರುವ ನವರತ್ನಗಳ ಪ್ರಭೆಯು।
ಒಗೆದಿರಲು, ನೀನದನು ನೋಡಿ ನಲಿವುದ ಬಿಟ್ಟು,।
ಹಗಲಿರುಳು 'ಬಡವನೆಂ' ದಳುತಿರುವದೇಕೆ? ॥೩॥

ಕಂಗೊಳಿಪ ಇರುಳಿನೊಳು ತಿಂಗಳುದಯಿಸ ತ ಜಿ।
ದಿಂಗಳಿನ ತನಿವಾಲ ತಾ ಸ.ರಿಸುತಿರಲು!।
ಕಂಗಾಲನಂತೆ ಬಳಲುವದನ್ನು ಬಿಟ್ಟು ಸೀ।
ಹಿಂಗಿಸುತ ಬಗೆವಸಿವ, ತೃಪ್ತಿವಡೆ ಮರುಳಾ! ॥೪॥

ಹಚ್ಚ ಹಸುರಿನ ಹುಲ್ಲುಗದ್ದೆಯೊಳು ತಾ ಕುಳಿತು,।
ಅಚ್ಚ ನೀಲಿಯ ಮುಗಿಲನೇ ನೋಡಿ ನೋಡಿ,।
ಇಚ್ಚೆಯೊಲು ಹಾಡುತಿಹ ಹಕ್ಕಿಗಳ ಸರಗೇಳಿ॥
ಮೆಚ್ಚದಲೆ ಯುಳಿದ ವೈಭವಕಾಸೆಯೇಕೆ? ॥೫॥

ಹರಿದ ತೊರೆಗಳು ನಿರುತ ಪೇಳ್ವ ಗಾನವ ಕೇಳಿ,।
ನೆರೆ ಮೌನಧ್ಯಾನದೊಳು ಸುಮ್ಮ ನಿಂತಿರುವ।
ಅರೆಗಳನು ನೋಡುತಲಿ, ಯಾವನನೊ ಸತತವೂ।
ಅರಸುತಿಹ ವಿಶ್ವಕ್ಕೆ ಬೆರಗಾಗಿ ನಿಲದೆ

ತಿಳಿವಿನಾ ತಿಳಿಹೊನ್ನು, ಶಾಂತಿಯಾ ತನಿಹೊನ್ನು।
ಹೊಳೆವ ಸೃಷ್ಟಿಯ ಸೊಬಗಿನಾ ದಿವ್ಯ ಹೊನ್ನು।
ಇಳಿಯುತಿರೆ ನಿನಗಾಗಿ ವೆಚ್ಚವಿಲ್ಲದಲೇನು,।
ಬಳಲುತಲಿ, ನರಳುತಲಿ ಯುಳುತಲಿರುತಿಹರೇ? ॥೭॥

ಎಣಿಸುತಿರೆ, ಈ ದಿವ್ಯ ಸಂಪತ್ತು ನಿನಗಿರಲು,।
'ಹಣವಿಲ್ಲ! ಹಾ!' ಎಂದು ಅಳುತ ಕೂಡ್ರುವರೇ?।
ಹಣದ ಕೋಟಿಯ ಗಳಿಸಿ, ಇದ ಗಳಿಸದನ ಬಾಳು।
ಹೆಣನ ಬಾಳ್ವೆಯೆ ಸರಿಯು! ತಿಳಿದಿದನು ನೋಡೈ ॥೮॥



# ವೀರಶೈವ ಮಠಗಳಿಗೋಸ್ಕರ ಒಂದು ಪ್ರಮಾಣ ಗ್ರಂಥದ ಅವಶ್ಯಕತೆ.

(ಲೇಖಕ:— ಸಂಪಾದಕರು.)

---

ವೀರಶೈವ ಸಮಾಜದಲ್ಲಿ ಮಠಗಳು ಅತ್ಯಂತ ಮಹತ್ವದ ಸಂಸ್ಥೆಗಳಾಗಿರುತ್ತವೆ. ಇವುಗಳು ವೀರಶೈವ ಧರ್ಮದ ಸಂಸ್ಕೃತಿಯನ್ನು ಸ್ಥಿರಗೊಳಿಸಲಿಕ್ಕೂ ಸಮಾಜದಲ್ಲಿ ಒಕ್ಕಟ್ಟು ಮತ್ತು ವ್ಯವಸ್ಥೆಯನ್ನು ನೆಲೆಗೊಳಿಸಲಿಕ್ಕೂ ಒಂದು ಕಾಲಕ್ಕೆ ಅತ್ಯಂತ ಸಹಾಯಕಾರಿಗಳಾದವು. ಹೋದ [illegible]ರ ವರ್ಷಗಳ ವರೆಗೆ ಅತ್ಯಂತ ಬಿಕ್ಕಟ್ಟಿನ ಪ್ರಸಂಗಗಳಲ್ಲಿ ವೀರಶೈವ ಸಮಾಜದ ಅಸ್ತಿತ್ವ ಮತ್ತು ಆದರ ಸಾಮರ್ಥ್ಯವನ್ನು ಕಾಯಲು ಇವುಗಳೇ ಪ್ರಬಲ ಕಾರಣಗಳಾದವು. ಈ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ಪರಧರ್ಮೀಯರ ಅತ್ಯಂತ ಉಗ್ರವಾದ ಆಘಾತಗಳು ಒದಗಿದವು. ಆದಾಗ್ಯೂ ಈ ಪ್ರಾಂತದಲ್ಲಿ ಹಿಂದುತ್ವವು ಮತ್ತು ವೀರಶೈವತ್ವವು ಸ್ಥಿರವಾಗಿ ಉಳಿದಿರುತ್ತವೆ. ಆದರೆ ಅದೇ ಬಂಗಾಲ, ಪಂಜಾಬ, ಆಸಾಮುಗಳಲ್ಲಿ ಹಿಂದೂ ಜನರ ಸಂಖ್ಯೆಯು ಒಟ್ಟು ಜನಸಂಖ್ಯೆಯಲ್ಲಿ ಅರ್ಧಕ್ಕಿಂತಲೂ ಕಡಿಮೆಯಾಗಿರುತ್ತದೆ. ಆದರೆ ಕರ್ನಾಟಕದಲ್ಲಿ ಮುಸಲ್ಮಾನರ ರಾಜಧಾನಿಗಳಿದ್ದು ಧರ್ಮಾಂಧ ಇಸ್ಲಾಮೀ ಬಾದಶಹರು ಅನೇಕರು ಆಗಿಹೋದರೂ ಅವರ ಆಳಿಕೆಯ ಪರಿಣಾಮಗಳು ಕರ್ನಾಟಕದಲ್ಲಿ ಏನೂ ಆಗಿರುವದಿಲ್ಲ. ಇದಕ್ಕೆ ಮುಖ್ಯ ಕಾರಣವು ವೀರಶೈವ ಮಠಗಳ ಮೂಲಕ ಜನಸಮುದಾಯದಲ್ಲಿ ಉಂಟಾದ ಧಾರ್ಮಿಕ ಸುವ್ಯವಸ್ಥೆ ಮತ್ತು ಒಕ್ಕಟ್ಟು ಇವುಗಳೇ ಇರುತ್ತವೆಂದು ಹೇಳಬಹುದು. ಈ ಮಠಗಳು ಸಣ್ಣ ಹಳ್ಳಿಗಳಲ್ಲಿ ಸಹ ಇದ್ದುಕೊಂಡು ಧಾರ್ಮಿಕ ಉಜ್ವಲ ಕಳೆಯನ್ನು ಜನರಲ್ಲಿ ಸ್ಥಿರತರವಾಗಿ ನೆಲೆಯೂರಿಸಿದವು ಇದರಿಂದ ಪರಧರ್ಮೀಯರ ಉಪಟಳದ ಪರಿಣಾಮಗಳು ಕರ್ನಾಟಕದಲ್ಲಿ ಏನೂ ಒದಗಿಬಂದಂತೆ ಕಂಡಬರುವದಿಲ್ಲ. ಆದರೆ ಈ ಬಗೆಯ ಧಾರ್ಮಿಕ ಸ್ಥಿತಿಯು ಉತ್ತರ ಹಿಂದುಸ್ತಾನದಲ್ಲಿ ಇಲ್ಲದ್ದರಿಂದ ಅಲ್ಲಿ ಹಿಂದೂಧರ್ಮವು ಕಳೆಗುಂದಲಿಕ್ಕೆ ಕಾರಣವಾಯಿತು.

ಪ್ರತಿಯೊಂದು ಧರ್ಮದ ಜಾಗ್ರತೆಯ ಕಾಲದಲ್ಲಿ ಎರಡು ಕಾರ್ಯಗಳು ಯಾವಾಗಲೂ ನಡೆಯುವದುಂಟು. ಒಂದು ಪ್ರಸಾರ ಕಾರ್ಯ,

ಮತ್ತೊಂದು ಪ್ರಸಾರವಾದದ್ದನ್ನು ಸ್ಥಿರಪಡಿಸುವ ಕಾರ್ಯ. ಪ್ರಸಾರ ಕಾರ್ಯ ಮಾಡುವಂಥವರು ಧರ್ಮದ ಉಜ್ವಲ ಅಭಿಮಾನವನ್ನು ತಾಳಿ ಅತ್ಯಂತ ಕಷ್ಟಗಳು ಒದಗಿದರೂ ಕೂಡ ಅವುಗಳನ್ನು ಸಹಿಸಿ ಜನರಲ್ಲಿ ಬೋಧ ಮಾಡುತ್ತ ಹೋಗುತ್ತಾರೆ. ಅವರು ಹೀಗೆ ಬೋಧ ಮಾಡುವದರಿಂದ ಸಮಾಜವು ಹೆಚ್ಚುತ್ತ ಹೋದ ಹಾಗೆ ಅದರಲ್ಲಿ ಒಂದು ವ್ಯವಸ್ಥೆಯನ್ನು ಮಾಡಿ ಈ ಮೂಲ ಪ್ರವರ್ತಕರ ಕಾರ್ಯಗಳನ್ನು ಸ್ಥಿರಪಡಿಸುವದು ಎರಡನೇ ಕಾರ್ಯವಾಗಿರುತ್ತದೆ. ಈ ಎರಡನೇ ಕಾರ್ಯಗಳನ್ನು ಮಠಗಳು ಮುಖ್ಯವಾಗಿ ಮಾಡುವದುಂಟು.

ಆದ್ದರಿಂದ ಈ ಮಠಗಳ ಕಾರ್ಯಗಳಾದರೂ ಅತ್ಯಂತ ಮಹತ್ವದವೆಂದು ಹೇಳಲು ಪ್ರತ್ಯವಾಯವಿಲ್ಲ. ಯಾಕಂದರೆ ಸಮಾಜದ ಮುಂದಿನ ಭಾವೀ ಸುಸ್ಥಿತಿಯು ಈ ಮಠಗಳ ಮೇಲೆಯೇ ಅವಲಂಬಿಸಿರುತ್ತದೆ. ಇವು ಸರಿಯಾಗಿ ನಡೆದರೆ ಸಮಾಜದಲ್ಲಿ ಧರ್ಮ, ನೀತಿ, ಆಚಾರಗಳು ಯೋಗ್ಯ ರೀತಿಯಿಂದ ಯಾವಾಗಲೂ ಸ್ಥಿರಪಡಲಿಕ್ಕೆ ಆಸ್ಪದವಾಗುತ್ತದೆ. ಇಲ್ಲದಿದ್ದರೆ ಆ ಸಮಾಜವು ಹಿಂದೆಗೆಯಹತ್ತುತ್ತದೆ. ವೀರಶೈವ ಸಮಾಜದಲ್ಲಿ ಮಠಗಳ ಸ್ಥಿತಿಯು ಹೆಚ್ಚು ಕಡಿಮೆ ಪ್ರಮಾಣದಿಂದ ಯಾವಾಗಲೂ ಚನ್ನಾಗಿ ಇದ್ದುದರಿಂದ ಅವರ ವಾಙ್ಮಯ ಮತ್ತು ಸಂಸ್ಕೃತಿ ಇವುಗಳು ಮುಸಲ್ಮಾನರ ಹಾವಳಿಯಲ್ಲಿ ಕೂಡ ಸ್ಥಿರವಾಗಿ ಉಳಿಯಲು ಕಾರಣವಾಯಿತು. ಆದರೆ ಈ ಸ್ಥಿತಿಯು ಈ ಕಾಲಕ್ಕೆ ಉಳಿದಿರುವದಿಲ್ಲ. ಮಠಗಳ ಕಟ್ಟುಗಳು ಈಗ ಬಹಳ ಸಡಿಲಾಗಿರುತ್ತವೆ. ಇದಕ್ಕೆ ಅನೇಕ ಕಾರಣಗಳಿರಬಹುದು. ಅವುಗಳಲ್ಲಿ ಒಂದು ಈಗಿನ ಸಮಾಜದ ಪರಿಸ್ಥಿತಿಗೆ ಅನುಗುಣವಾಗಿ ಇವು ವರ್ತಿಸದಿದ್ದದ್ದೆ ಮುಖ್ಯವಾಗಿದೆ. ಪರಿಸ್ಥಿತಿಗೆ ಅನುಸರಿಸಿ ಸಂಸ್ಥೆಗಳು ಇದ್ದರೆ ಅವು ಬಲಪಡುತ್ತವೆ. ಇಲ್ಲದಿದ್ದರೆ ಬಲಪಡಲಾರವು. ಇಷ್ಟೇ ಅಲ್ಲ, ಅವು ಸಮಾಜದ ಪ್ರಗತಿಗೂ ಹಾನಿ ತರುತ್ತವೆ. ಈ ಪ್ರಕಾರ ಅವುಗಳಿಂದ ಹಾನಿಯಾಗಹತ್ತಿದಕೂಡಲೆ, ಅವುಗಳು ತೀವ್ರವಾಗಿ ನಾಶಹೊಂದಹತ್ತುತ್ತವೆ.

ಆದರೆ ಈಗಿನ ನಮ್ಮ ಲೇಖದ ಉದ್ದೇಶವು ಮಠಗಳು ಹ್ಯಾಗೆ ಇರಬೇಕು, ಮತ್ತು ಅವುಗಳ ಕಾರ್ಯಗಳು ಹ್ಯಾಗೆ ನಡೆಯಬೇಕು ಎಂಬುದನ್ನು ವಿಚಾರಿಸುವದು ಇರುವದಿಲ್ಲ. ಆದರೆ ಮಠಗಳ ಮೂಲಕ ವೀರಶೈವ ಸಮಾಜದಲ್ಲಿ ಆಗಿಂದಾಗ್ಗೆ ವ್ಯಾಜ್ಯಗಳು ಉತ್ಪನ್ನವಾಗುವ

ದುಂಟು. ಇವು ಕೋರ್ಟು ಕಚೇರಿಗಳಿಗೆ ಹೋಗಿ ಅಲ್ಲಿ ನಾನಾಬಗೆಯ ತೀರ್ಪುಗಳು ಆಗುತ್ತವೆ. ಈ ತೀರ್ಪುಗಳು ಸರಿಯಾಗಿ ಆಗದ್ದರಿಂದ ಸಮಾಜದ ಸುವ್ಯವಸ್ಥೆಗೆ ಭಂಗ ಬರುತ್ತದೆ. ಇದಲ್ಲದೆ ಪಕ್ಷಕಾರರ ಆರ್ಥಿಕ ಹಾನಿಯು ಬೇರೆ. ಈ ಸ್ಥಿತಿಯನ್ನು ಹ್ಯಾಗೆ ದೂರಮಾಡಬೇಕೆಂಬುದನ್ನು ವಿವರಿಸುವದೇ ನಮ್ಮ ಉದ್ದೇಶ. ಕೋರ್ಟುಗಳಲ್ಲಿ ತಪ್ಪು ತೀರ್ಪುಗಳಾಗುವದಕ್ಕೆ ನ್ಯಾಯಾಧೀಶರು ಯಾವಾಗಲೂ ಜವಾಬುದಾರರಿರುವದಿಲ್ಲ. ಆವರೆ ಪಕ್ಷಾಂಧರಾದ ಕಕ್ಷಿಗಾರರು ನಾನಾತರದ ಪುರಾವೆಗಳನ್ನು ಅವರ ಮುಂದೆ ತಂದು ನಿಜಸ್ಥಿತಿಯನ್ನು ಮರೆಮಾಜಿಸುವದುಂಟು ಇದರಿಂದ ಈ ಸ್ಥಿತಿಯಾಗುವದು. ಇದಲ್ಲದೆ ಮಠಗಳ ಸಲುವಾಗಿ ಒಂದು ವ್ಯವಸ್ಥಿತವಾಗಿ ಬರೆದ ಒಂದಾದರೂ ಆಧಾರಗ್ರಂಥವು ವೀರಶೈವರಲ್ಲಿ ಉಪಲಬ್ಧವಿರುವದಿಲ್ಲ. ಇದರಿಂದ ನ್ಯಾಯಾಧೀಶರು ತಪ್ಪುಗ್ರಹಿಕೆಯುಳ್ಳವರಾಗಿ ಮಠಗಳ ನಿಜವಾದ ನಿರ್ಬಂಧಗಳಿಗೆ ವಿರೋಧವಾಗಿರುವ ನಿರ್ಣಯಗಳನ್ನು ಕೊಡುವದುಂಟು. ಈ ಸ್ಥಿತಿಯನ್ನು ವೀರಶೈವ ಸಮಾಜವು ದೂರಮಾಡಿಕೊಳ್ಳಲು ಶಕ್ಯವಿದೆ. ಈ ಸಂಗತಿಯ ಮಹತ್ವವನ್ನು ಸಮಾಜದ ನಿದರ್ಶನಕ್ಕೆ ತರುವದೇ ನಮ್ಮ ಈ ಲೇಖನದ ಮುಖ್ಯೋದ್ದೇಶವಾಗಿದೆ.

ಈ ಸ್ಥಿತಿಯನ್ನು ದೂರಮಾಡಲಿಕ್ಕೆ ಸದ್ಯಕ್ಕೆ ಒಂದೇ ಉಪಾಯವಿರುತ್ತದೆ. ಏನೆಂದರೆ ವೀರಶೈವ ಸಮಾಜದವರು ತಮ್ಮ ಮಠಗಳ ಸಂಬಂಧದ ರೀತಿ ಮತ್ತು ಪದ್ಧತಿ ಇವುಗಳನ್ನು ಸಂಶೋಧಿಸಿ, ಅವುಗಳ ನಿಜಸ್ಥಿತಿಯನ್ನು ಸಂಗ್ರಹಿಸಿ ಒಂದು ಪ್ರಮಾಣ ಗ್ರಂಥವನ್ನು ರಚಿಸುವದು. ಇದರಿಂದ ಕೋರ್ಟಿನಲ್ಲಿ ಆಗುವ ಅಕ್ರಮಗಳು ಬಹುಮಟ್ಟಿಗೆ ದೂರಾಗುವವು. ಈಗ ಕೋರ್ಟಿನವರು ಗ್ಯಾಜಿಟಿಯರ, ಸ್ಟೀಲ್, ಫ್ಲೀಟ ಮೊದಲಾದವರ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ನಡೆಯುವದುಂಟು. ಇವು ಪೂರ್ಣ ತಪ್ಪುಳ್ಳವು ಇವೆ. ಇದರಿಂದ ಅನೇಕ ತಪ್ಪು ತೀರ್ಪುಗಳು ಆಗಿವೆ. ಆದರೆ ಮಠಗಳ ನಿಜಸ್ಥಿತಿಯನ್ನು ಅರುಹುವ ಒಂದಾದರೂ ಪ್ರಮಾಣ ಗ್ರಂಥವು ಸಮಾದಲ್ಲಿ ಉತ್ಪನ್ನವಾದರೆ ಈ ಬಗೆಯ ಅಕ್ರಮಗಳು ನಿಲ್ಲಬಹುದು.

ಈ ಮಹತ್ವದ ಕಾರ್ಯವನ್ನು ನಾವು ಆರಂಭಮಾಡಬೇಕೆಂದು ಉದ್ದೇಶಪಟ್ಟು ಮುಂದಿನ ಸಂಚಿಕೆಯಿಂದ ಮಠಗಳ ವ್ಯವಸ್ಥೆ, ಇವುಗಳ ಕಾರ್ಯ, ಇವುಗಳ ನಿರ್ಬಂಧನೆ ಈ ವಿಷಯಗಳ ಬಗ್ಗೆ ಲೇಖಗಳನ್ನು ಕೊಡಬೇಕೆಂದು ಯೋಚಿಸಿದ್ದೇವೆ. ಇದರಲ್ಲಿ ವಾಚಕರು ನಮಗೆ ಸಹಾಯ

ಮಾಡುವರೆಂದು ನಾವು ಅವರಿಗೆ ವಿನಂತಿ ಮಾಡಿಕೊಳ್ಳುತ್ತೇವೆ. ಅವರು ತಮ್ಮ ತಮ್ಮ ಭಾಗಗಳಲ್ಲಿ ಇರುವ ಮಠಗಳ ಸಂಬಂಧದ ರೀತಿ ನಡತೆಗಳನ್ನೂ, ಪದ್ಧತಿಗಳನ್ನೂ ಇದ್ದಕ್ಕಿದ್ದ ಹಾಗೆ ಸಂಗ್ರಹಿಸಿ ಲೇಖಗಳನ್ನೂ ಬರೆಯುತ್ತ ಹೋದರೆ ಈ ನಮ್ಮ ಉದ್ದೇಶವು ಕೊನೆಗಾಣಬಹುದು. ಇದಲ್ಲದೆ ವೀರಶೈವ ಮಠಗಳ ಬಗ್ಗೆ ಪುರಾತನ ಗ್ರಂಥಗಳಲ್ಲಿ ಉಲ್ಲೇಖಗಳು ಅಲ್ಲಲ್ಲಿ ಸಿಗುವದುಂಟು. ಇಂಥವುಗಳನ್ನು ಸಹ ನಾವು ಸಂಗ್ರಹಿಸಬೇಕು. ಇದರಿಂದ ಆಯಾ ಪ್ರಾಂತಗಳಲ್ಲಿ ಇರುವ ಪದ್ಧತಿಗಳು ಹೊರಪಟ್ಟು ಮುಂದೆ ಒಂದು ಯೋಗ್ಯ ಪ್ರಮಾಣ ಗ್ರಂಥವನ್ನು ನಿರ್ಮಿಸಲಿಕ್ಕೆ ಅನುಕೂಲವಾಗುವದು. ಈ ಬಗೆಯ ಗ್ರಂಥವು ಉತ್ಪನ್ನವಾದ ಬಳಿಕ ಮಠಗಳ ಸಲುವಾಗಿ ಯೋಗ್ಯ ಕಾಯದೆಯನ್ನು ಸಹ ಮುಂದೆ ಮಾಡಲು ಶಕ್ಯವಾಗುವದು. ಇದರಿಂದ ಮಠಗಳ ಮೂಲಕ ಸಮಾಜಕ್ಕೆ ಉಂಟಾಗುವ ನಷ್ಟಗಳೂ ನಾನಾವಿಧ ವ್ಯಾಜ್ಯಗಳೂ ಕಡಿಮೆಯಾಗದೆ ಇರಲಾರವು.

ವಾಚಕರು ನಮ್ಮ ವಿನಂತಿಗೆ ಮಾನ್ಯ ಮಾಡಿ ನಮಗೆ ಇದರಲ್ಲಿ ಸಹಕರಿಸುವರೆಂದು ನಾವು ಬಿನ್ನವಿಸಿಕೊಳ್ಳುತ್ತೇವೆ.

ಈ ವಿಷಯವಾಗಿ ಸುಮಾರು ೫ ವರ್ಷಗಳ ಹಿಂದೆ ಒಂದು ಪ್ರಕಟನೆಯನ್ನು ನಾವು ಹೊರಪಡಿಸಿದ್ದೆವು. ಅದರಲ್ಲಿ ಮಠಗಳ ಸಂಬಂಧವಾಗಿ ಅನೇಕ ಪ್ರಶ್ನೆಗಳು ಕೇಳಲ್ಪಟ್ಟಿದ್ದವು. ಅವುಗಳನ್ನೇ ನಾವು ವಾಚಕರ ತಿಳುವಳಿಕೆಗಾಗಿ ಇಲ್ಲಿ ಕೊಡುತ್ತೇವೆ. ಈ ಪ್ರಶ್ನೆಗಳಿಗೆ ಉತ್ತರವಾಗಿ ವಾಚಕರು ಲೇಖನಗಳನ್ನು ಬರೆಯುತ್ತ ಹೋದಲ್ಲಿ ಈ ಕಾರ್ಯಕ್ಕೆ ಅವರು ಬಹಳ ಸಹಾಯ ಮಾಡಿದಂತೆ ಆಗುವದು. ತಾವು ಸಂಗ್ರಹಿಸಿದಷ್ಟೇ ಮಾಹಿತಿಯನ್ನು ಅವರು ಕೊಡುತ್ತ ಹೋದಲ್ಲಿ ಅದು ಬಹಳ ಉಪಯುಕ್ತವಾಗುವದು. ವಾಚಕರು ನಮ್ಮ ಸೂಚನೆಯನ್ನು ಮಾನ್ಯಮಾಡುವರೆಂದು ಕೋರುತ್ತೇವೆ.

## ಮಠಗಳ ಸಂಬಂಧದ ಪ್ರಶ್ನಗಳು.

೧ ವೀರಶೈವರಲ್ಲಿ ಆಚಾರಬೋಧಕ ಮತ್ತು ಮಠಗಳ ಸಂಬಂಧದ ಗ್ರಂಥಗಳು ಯಾವವು?

೨ ವಿರಕ್ತಮಠಗಳ ಉತ್ಪತ್ತಿ ಮತ್ತು ಇದರಲ್ಲಿಯ ಭೇದಗಳು ಯಾವವು? ಈ ಭೇದಗಳಾಗಲಿಕ್ಕೆ ಕಾರಣಗಳು. ಆಧಾರ ಸಹಿತವಾಗಿ ತಿಳಿಸತಕ್ಕದ್ದು.

೩ ವಿರಕ್ತ ಮಠಗಳಿಗೆ ಅಧಿಕಾರಿಗಳನ್ನು ಮಾಡುವ ರೀತಿಗಳು ಯಾವವು? ಇವುಗಳಲ್ಲಿ ಭಕ್ತರ ಅಂಗವು ಎಷ್ಟರಮಟ್ಟಿಗೆ ಇರುತ್ತದೆ? ನಿಮ್ಮಲ್ಲಿ ಇಂಥ ಮಠಗಳಿಗೆ ಅಧಿಕಾರಿಗಳನ್ನು ಮಾಡುವ ಪದ್ಧತಿಯು ಯಾವದು ಇರುತ್ತದೆ?

೪ ವಿರಕ್ತ ಮಠಗಳಿಗೆ ಅಧಿಕಾರಿಗಳನ್ನು ನೇಮಿಸುವ ಕಾಲಕ್ಕೆ ಭಕ್ತರ ಅನುಮತಿಯನ್ನು ಯಾವ ಪದ್ಧತಿಯಿಂದ ತೆಗೆದುಕೊಳ್ಳತಕ್ಕದ್ದು? ಈ ಬಗ್ಗೆ ನಿಮ್ಮಲ್ಲಿ ಯಾವ ರೂಢಿಗಳು ಇವೆ?

೫ ವಿರಕ್ತ ಮಠಗಳಿಗೆ ಅಧಿಕಾರಿಗಳನ್ನು ಮಾಡಲಿಕ್ಕೆ ಅವಶ್ಯವಾದ ವಿಧಿಗಳು ಯಾವವು?

೬ ವಿರಕ್ತರು ಅಧಿಕಾರಿಗಳಾದ ಬಳಿಕ ಯಾವ ಕಾರಣಗಳಿಗೋಸ್ಕರ ಅವರನ್ನು ತೆಗೆಯಬಹುದು? ಹೀಗೆ ತೆಗೆದುಹಾಕಿದ ಉದಾಹರಣೆಗಳು ನಿಮ್ಮಲ್ಲಿ ಇವೆಯೋ ಹ್ಯಾಗೆ? ತೆಗೆದು ಹಾಕಲಿಕ್ಕೆ ಯಾವ ಕ್ರಮವನ್ನು ಅನುಸರಿಸತಕ್ಕದ್ದು?

೭ ಸಮಾಜಕ್ಕೋಸ್ಕರ ವಿರಕ್ತರು ಮಾಡತಕ್ಕ ಕರ್ತವ್ಯಗಳು ಯಾವವು? ಮತ್ತು ಅವರು ನಿಮ್ಮಲ್ಲಿ ಈಗ ಯಾವ ಕಾರ್ಯಗಳನ್ನು ಮಾಡುತ್ತಲಿದ್ದಾರೆ?

೮ ವಿರಕ್ತ ಮಠದ ಆಸ್ತಿಯ ವ್ಯವಸ್ಥೆಯಲ್ಲಿ ಭಕ್ತರ ಹಕ್ಕುಗಳು ಎಷ್ಟರ ಮಟ್ಟಿಗೆ ಇರುತ್ತವೆ?

೯ ವಿರಕ್ತರು ಮಠದ ಆಸ್ತಿಯನ್ನು ಎರಡನೆಯವರಿಗೆ ವತ್ತೀ ಅಥವಾ ಖರೀದಿ ಕೊಡಬಹುದೊ? ಈ ತರದ ಉದಾಹರಣೆಗಳು ನಿಮ್ಮಲ್ಲಿ ಆಗಿರುವವೊ? ಯಾವ ಕಾರಣಗಳಿಗೋಸ್ಕರ ಕೊಡಬಹುದು?

೧೦ ವಿರಕ್ತ ಮಠಾಧೀಶರು ತಮ್ಮ ಆಸ್ತಿಯ ಬಗ್ಗೆ ಮೃತ್ಯುಪತ್ರ ಅಥವಾ ವ್ಯವಸ್ಥಾಪತ್ರ ಮಾಡಬಹುದೊ? ಅವು ಎಷ್ಟರ ಮಟ್ಟಿಗೆ ಕಾಯದೇಶೀರ ಎಂದು ತಿಳಿಯತಕ್ಕದ್ದು?

೧೧ ಮರಿಗಳ ಹಕ್ಕುಗಳು ಏನು?

೧೨ ಮರಿಗಳನ್ನು ನೇಮಿಸಲಿಕ್ಕೆ ಯಾವಪಾದರೂ ವಿಧಿಗಳು ಅವೆಯೊ ಹ್ಯಾಗೆ? ಇದ್ದರೆ ಅವು ಯಾವವು?

೧೩ ಗುರುಸ್ಥಲ ಮಠಗಳ ಉತ್ಪತ್ತಿ ಮತ್ತು ಅವುಗಳಲ್ಲಿಯ ಭೇದಗಳು.

೧೪ ಈ ಮಠಗಳಿಗೆ ಪಟ್ಟದಯ್ಯಗಳನ್ನು ಯಾರು ನೇಮಿಸತಕ್ಕದ್ದು? ಅದಕ್ಕೆ ಭಕ್ತರ ಮತ್ತು ಶಿಷ್ಯರ ಒಪ್ಪಿಗೆಯು ಅವಶ್ಯವೋ? ಒಪ್ಪಿಗೆಯು ಅವಶ್ಯವಿದ್ದರೆ ಅದನ್ನು ಹ್ಯಾಗೆ ತೆಗೆದುಕೊಳ್ಳತಕ್ಕದ್ದು?

೧೫ ಗುರುಸ್ಥಲ ಮಠದ ಪಟ್ಟದ ಸಂಬಂಧದ ವಿಧಿಗಳು ಯಾವವು?

೧೬ ಚರಂತಿಗಳು ಎಂದರೆ ಯಾರು? ಅವರ ಕರ್ತವ್ಯಗಳೇನು? ಅವರಿಗೂ ಪಟ್ಟದವರಿಗೂ ಇರುವ ಸಂಬಂಧ.

೧೮ ಚರಂತಿಗಳಿಗೆ ಪಟ್ಟಾಧ್ಯಕ್ಷರುಗಳ ಆಸ್ತಿಯಲ್ಲಿ ಏನಾದರೂ ಹಕ್ಕುಗಳು ಇವೆಯೋ ಹ್ಯಾಗೆ? ಇದ್ದರೆ ಎಷ್ಟರ ಮಟ್ಟಿಗೆ?

೧೯ ಗಣಾಚಾರಿ, ಮಠಪತಿ, ಸ್ಥಾವರ, ಗಣಕುಮಾರ, ಸರಗಣಾಚಾರಿ ಇವರ ಕಾರ್ಯಗಳು ಯಾವವು? ಈ ಅಧಿಕಾರಿಗಳು ನಿಮ್ಮಲ್ಲಿ ಇರುವರೋ ಹ್ಯಾಗೆ? ಅವರು ನಿಮ್ಮಲ್ಲಿ ಯಾವ ಕಾರ್ಯ ಮಾಡುತ್ತಿರುವರು?

೨೦ ಮೇಲ್ಕಂಡ ಅಧಿಕಾರಿಗಳನ್ನು ಹ್ಯಾಗೆ ನೇಮಿಸತಕ್ಕದ್ದು?

೨೧ ಪುತ್ರವರ್ಗ ಮಠಗಳಲ್ಲಿ ಸಂಸಾರಿಕರ ಹಕ್ಕು ಎಷ್ಟರ ಮಟ್ಟಿಗೆ? ಅವರಿಗೆ ಮಠದ ಆಸ್ತಿಯನ್ನು ವಿಭಾಗ ಮಾಡಿಕೊಳ್ಳಲಿಕ್ಕೆ ಬರುವದೋ? ಹೀಗೆ ಆದ ಉದಾಹರಣೆಗಳು ನಿಮ್ಮಲ್ಲಿ ಉಂಟೋ?

೨೨ ಪುತ್ರವರ್ಗ ಮಠದಲ್ಲಿ ನೇಮಿಸಲ್ಪಟ್ಟ ಪಟ್ಟಾಧಿಕಾರಿಗೆ ಮಠದ ಆಸ್ತಿಯಲ್ಲಿ ಎಷ್ಟರ ಮಟ್ಟಿಗೆ ಹಕ್ಕು ಇದೆ?

೨೩ ಈ ಪಟ್ಟಾಧಿಕಾರಿಗಳ ಆಸ್ತಿಗೆ ವಾರಸದಾರರು ಯಾರು?

೨೪ ಈ ಪಟ್ಟಾಧಿಕಾರಿಗಳು ಪುನಃ ಲಗ್ನವಾಗಬಹುದೋ? ಅವರು ಲಗ್ನವಾದ ಬಳಿಕ ಅವರ ಹಕ್ಕುಗಳು ಯಾವವು?

೨೫ ಶಾಖಾಮಠಗಳಿದ್ದರೆ ಅವುಗಳಿಗೂ ಮೂಲ ಮಠಕ್ಕೂ ಇರುವ ಸಂಬಂಧ. ಈ ಶಾಖಾ ಮಠಗಳಲ್ಲಿ ಸ್ವತಂತ್ರವಾಗಿ ಪಟ್ಟಾಧಿಕಾರಿಗಳನ್ನು ನೇಮಿಸಬಹುದೋ? ಇಂಥ ಅಧಿಕಾರಿಗಳ ಹಕ್ಕುಗಳು ಯಾವವು?

೨೬ ಗುರುಸ್ಥಲ ಪಟ್ಟಾಧಿಕಾರಿಗಳ ಹಕ್ಕುಗಳು ಯಾವವು ಇವೆ? ಅವರಿಗೂ ಸಂಸಾರಕರಿಗೂ ಇರುವ ಸಂಬಂಧ.

೨೭ ಹೊಸ ಮಠಗಳನ್ನು ಸ್ಥಾಪಿಸಲು ಬರಬಹುದೋ? ಬರಬಹುದಾದರೆ ಹಕ್ಕು ಬಾಬುಗಳ ಸಂಬಂಧವಾಗಿ ಅವುಗಳ ಸ್ಥಾನವು ಯಾವದು?

೨೮ ಪುತ್ರವರ್ಗ ಮಠಗಳಿಗೆ ವಾರಸದಾರರು ಉಳಿಯದಿದ್ದರೆ ಶಿಷ್ಯವರ್ಗದಂತೆ ಅದರ ಅಧಿಕಾರಿಗಳನ್ನು ನೇಮಿಸಬಹುದೋ? ಈ ಸ್ಥಿತಿಯಲ್ಲಿ ಇಂಥ ಮಠಗಳ ಆಸ್ತಿಯು ಯಾರಿಗೆ ಹೋಗತಕ್ಕದ್ದು?

೨೯ ಶಿಷ್ಯವರ್ಗ ಮಠವು ಪುತ್ರವರ್ಗ ಮಠವಾಗಬಹುದೋ?

೩೦ ಗುರುಸ್ಥಲ ಮತ್ತು ವಿರಕ್ತ ಮಠಗಳ ಇಮಾರತುಗಳು ಎಷ್ಟರ ಮಟ್ಟಿಗೆ ಸಾರ್ವಜನಿಕವೆಂದು ತಿಳಿಯತಕ್ಕದ್ದು?

೩೧ ವಿರಕ್ತ ಮತ್ತು ಗುರುಸ್ಥಲ ಪಟ್ಟಾಧ್ಯಕ್ಷರು ವಿವಾಹಿತರಾದರೆ ಮುಂದೆ ಅವರ ಹಕ್ಕುಗಳು ಯಾವವು?

೩೨ ಲಗ್ನ ಮೊದಲಾದ ಕಾರ್ಯಗಳಲ್ಲಿ ಮನೆತನದ ಗುರುಗಳ ಕಾರ್ಯಗಳೇನು? ಮತ್ತು ಹಕ್ಕು ಬಾಬುಗಳನ್ನು ತೆಗೆದುಕೊಳ್ಳುವದರಲ್ಲಿ ಅವರಿಗೂ ಊರಲ್ಲಿಯ ಮಠದವರಿಗೂ ಪರಸ್ಪರ ಯಾವ ಹಕ್ಕುಗಳು ಇವೆ?

೩೩ ಲಗ್ನ ಮೊದಲಾದ ವಿಧಿಗಳಲ್ಲಿ ನಿಮ್ಮಲ್ಲಿ ಬಾಬುದಾರರು ಯಾರು? ಮತ್ತು ಪ್ರತಿ ಒಬ್ಬರಿಗೆ ಎಷ್ಟೆಷ್ಟು ಬಾಬುಗಳು ಸಿಗುತ್ತವೆ?

೩೪ ಮಠದ ಅಧಿಕಾರಿಗಳು ಯೋಗ್ಯ ಕೆಲಸ ಮಾಡದೆ ಹೋದರೆ ಅವರ ಬದಲು ಕೆಲಸ ಮಾಡಲಿಕ್ಕೆ ಯಾರನ್ನಾದರು ನೇಮಿಸಿಕೊಳ್ಳಬಹುದೋ? ಮತ್ತು ಹೀಗೆ ನೇಮಿಸಿಕೊಳ್ಳುವ ಅಧಿಕಾರವು ಯಾರದು?

೩೫ ಮಠಗಳಿಗೆ ಬಂದ ಹಕ್ಕು ಬಾಬುಗಳ ವಿನಿಯೋಗವನ್ನು ಹ್ಯಾಗೆ ಮಾಡಬೇಕು? ಅವುಗಳಲ್ಲಿ ಭಕ್ತರ ಅಂಗವು ಎಷ್ಟರ ಮಟ್ಟಿಗೆ ಇದೆ?

೩೬ ಸ್ತ್ರೀಯರು ಮಠದ ಕಾರ್ಯಗಳನ್ನು ಮಾಡಬಹುದೋ? ಮಾಡಬಹುದಾದರೆ ಹ್ಯಾಗೆ ಮಾಡತಕ್ಕದ್ದು?

೩೭ ಮಠಗಳಲ್ಲಿ ಅಜ್ಞಾನರು ಉಳಿದರೆ ಯಾರು ಮಠದ ಕಾರ್ಯ ಮಾಡತಕ್ಕದ್ದು?

೩೮ ವಿರಕ್ತ ಅಥವಾ ಶಿಷ್ಯವರ್ಗ ಮಠಗಳ ಅಧಿಕಾರಿಗಳನ್ನು ಜಂಗಮರ ಹೊರ್ತು ಭಕ್ತರನ್ನು ಮಾಡಿದ ಉದಾಹರಣೆಗಳು ನಿಮ್ಮಲ್ಲಿ ಇವೆಯೋ? ಇದ್ದರೆ ಅವರು ಯಾವ ಪಂಗಡದವರು?

೩೯ ವಿರಕ್ತರು ಸ್ವಾರ್ಜಿತ ಆಸ್ತಿಯನ್ನು ಮಾಡಿಕೊಳ್ಳಬಹುದೋ? ಮಾಡಬಹುದಾದರೆ ಹ್ಯಾಗೆ ಮಾಡಬಹುದು?

೪೦ ಲಗ್ನ ದೀಕ್ಷಾ ಅಂತ್ಯೇಷ್ಟಿಗಳನ್ನು ಮಾಡುವ ವಿಧಿಗಳ ಬೆಗ್ಗೆ ಇರುವ ಗ್ರಂಥಗಳಾವವು? ಮತ್ತು ಈ ವಿಧಿಗಳು ರೂಢಿಯಲ್ಲಿ ಈಗ ನಿಮ್ಮಲ್ಲಿ ಹ್ಯಾಗೆ ನೆರವೇರಿಸಲ್ಪಡುತ್ತವೆ?

ಮೇಲ್ಕಂಡ ಪ್ರಶ್ನಗಳ ಉತ್ತರಗಳನ್ನು ತಾವು ಕೊಡುವ ಕಾಲಕ್ಕೆ ಆದಷ್ಟು ಮಟ್ಟಿಗೆ ನಿಮ್ಮಲ್ಲಿ ಇರುವ ರೂಢಿಗಳನ್ನೂ ಉಂಟಾದ ಉದಾಹರಣೆಗಳನ್ನೂ ಯಥಾವತ್ತಾಗಿ ಕೊಡಬೇಕು ಮತ್ತು ಗೊತ್ತಿದ್ದಷ್ಟರ ಮಟ್ಟಿಗೆ ಗ್ರಂಥಗಳ ಅವತರಣಗಳನ್ನೂ ಕೊಡಬೇಕು.

---

ಹಾಲೇರಿಯಲ್ಲು ಇದ್ದ ಅಪ್ಪಾಜಿರಾಜರು ಸ್ವರ್ಗಸ್ಥರಾದರು. ಹಾಗೆ ಕೆಲವು ದಿವಸದೊಳಗೆ ಹೊರಮಲೆಯಲ್ಲಿ ಇದ್ದ ನಂದರಾಜರೂ ವೃತವಾದರು. ಅದೇ ತದನಂತರದಲ್ಲಿ, ಮೈಸೂರು ಕೃಷ್ಣರಾಜ ಒಡೆಯರು ಶೀರಿ ಹೋಗಿ ಚಾಮರಾಜ ಒಡೆಯರಿಗೆ ಪಟ್ಟವಾಗಿ ಇದ್ದಲ್ಲಿ, ಅವರು [ಶೀರಿ ಹೋದ ಮೇಲೆ] † ಪಟ್ಟದ ಸ್ತ್ರೀಯವರ ಮೇಲೆ ಕಣ್ಣು ಇಟ್ಟದ್ದರಿಂದ, ಈ ವಿವರ ಆ ರಾಣಿಯವರು ದಳವಾಯಿ ದೇವರಾಜರಿಗೆ ಹೇಳಿಕಳುಹಿಸಿದಲ್ಲಿ— "ಈ ನಡತೆ ಒಳ್ಳೇದಲ್ಲ. ಅಪಕೀರ್ತಿ ಬಂದೀತೆ"ಂದು ದಳವಾಯಿಯು ಚಾಮರಾಜ ಒಡೆಯರಿಗೆ ಹೇಳಿದಲ್ಲಿ--- "ಈ ಮೇರೆ ಹೇಳುವಂತದ್ದು ಚಾಕರರನ ಮರ್ಯಾದೆಯಲ್ಲ-" ಎಂದು ಅವರಮೇಲೆ[ಸಿಟ್ಟು]§ಮಾಡಿ, 'ನೀವು ಪಟ್ಟಣದ ಒಳಗೆ ಇರಬೇಡ. ಒಂದು ಗಡಿ ಒಳಗೆ [ಇದ್ದು]± ಕೊಳ್ಳಿ— ಎಂಬದಾಗಿ ದಳವಾಯಿ ದೇವರಾಜರಿಗೆ ಹೇಳಿದರಿಂದ, ಅವರು ಬೆಂಗಳೂರು ನಂದರಾಜ ಅರಸುಗಳು [ಸಹ] * ಕೂಡಿ, ಚಾಮರಾಜ ಒಡೆಯರನ್ನು ಕಪಾಲದುರ್ಗಕ್ಕೆ ಹಾಕಿ ಬಿಟ್ಟರು. ಆವಾಗ್ಗೆ ಅವರಿಗೆ ಪಟ್ಟವಾಗಿ ೧೮ ತಿಂಗಳು ಆಗಿಯಿತ್ತು. ಆ ಮೇಲೆ ಚಿಕ್ಕ ಕೃಷ್ಣರಾಜ ಒಡೆಯರಿಗೆ ೧೦ ವರುಷದ ಪ್ರಾಯದಲ್ಲಿ ತಂದು ಪಟ್ಟ ಕಟ್ಟಿದರು. ಅದೇ ತದನಂತರದಲ್ಲಿ ಇಕ್ಕೇರಿ ಸಂಸ್ಥಾನದ ಬೂದಿ ಬಸವಪ್ಪನಾಯಕರು ಶೀರಿ ಹೋಗಿ, ಅವರ ಕುಟುಂಬವಾದ ಈರಮ್ಮಾಜಿ ಎಂಬ ರಾಣಿಯವರು ದೊರೆತನ ಮಾಡಿಕೊಂಡು ಇದ್ದರು. ಆವಾಗ್ಗೆ ಈ ಮೂರು ಸಂಸ್ಥಾನದಲ್ಲಿಯೂ ರಾಜಕಾರ್ಯಕಾರಣ [ಗಳು] s ಈ ಮೇರೆ ಇರುತ್ತ ಇದ್ದಲ್ಲಿ, ಚಿಕ್ಕ ಕೃಷ್ಣರಾಜ ಒಡೆಯರಿಗೆ ದಳವಾಯಿ ದೇವರಾಜ ಅರಸುಗಳ ತಮ್ಮನಾದ ಕರಚೂರಿ ನಂದರಾಜ ಅರಸುಗಳ ಮಗಳನ್ನು ಮದುವೆ ಮಾಡಿದರು. ಆವಾಗ್ಗೆ [ನಂದ] × ರಾಜ ಅರಸುಗಳು ಸರ್ವಾಧಿಕಾರ ಮಾಡಿಕೊಂಡ ಯಿದ್ದರು. ಇವರ ಬಳಿಯಲ್ಲಿ ಹೈದರು ನಾಯಕನು ಕೆಲವು ಮಂದಿ ಸಹಿತನಾಗಿ ಚಾಕರಿಮಾಡಿಕೊಂಡು ಇದ್ದನು. ಆ ತದನಂತರ

† ಬ ಆ ಶೀರಿ ಹೋದ ಕೃಷ್ಣರಾಜ ಒಡೆಯರವರ

§ ಬ ಚಾಮರಾಜ ಒಡೆಯರು ಸಿಟ್ಟು

± ಬ ಹೋಗಿ ಇದ್ದು

* ಬ ಮದ್ದಗಿರಿ ನಂದರಾಜ ಅರಸಗಳು ಸಹ

s ಬ ಗಳು ಇರಲಿಲ್ಲ.

× ಬ ಕರಾಚೂರಿ ನಂದ

ದಲ್ಲಿ ನವಾಬ್ ಚಂದಾಸಾಹೇಬರು ಎಂಬವರು ತ್ರಿಚ್ಚಿನಪಳ್ಳಿ ಕೋಟೆ ತೆಗೆದುಕೊಳ್ಳಬೇಕು ಎಂಬದಾಗಿ ಆ ಕೋಟೆಗೆ ಮುತ್ತಿಗೆ ಹಾಕಿಕೊಂಡು ಇದ್ದದ್ದರಿಂದ, ಮುಮ್ಮದಲ್ಲಿ ಕಾನರು ಕರಚೂರಿ ನಂದರಾಜ ಅರಸುಗಳಿಗೆ ಬರೆಸಿ ಕಳುಹಿಸಿದ ವಿವರಃ— "ನೀವು ನಿಮ್ಮ ಪವುಜು ತೆಗೆದು ಕೊಂಡು ಬಂದು ಸಹಾಯ ಮಾಡಬೇಕು"— ಎಂಬದಾಗಿ ಬರೆಸಿ ಕಳುಹಿಸಿದಲ್ಲಿ, ಈ ಮಾತು ಕೇಳಿ ಇವರು ಪವ್ರಜು ತೆಗೆದುಕೊಂಡು ಬಂದು ಗುತ್ತಿ ಮುರಾ(ರಿ)ರಾವು ಕಡೆ ಪವುಜು ಸಹ ಕುಮ್ಮಕ್ಕಾಗಿ ತೆಗೆದು ಕೊಂಡು, ತ್ರಿಚ್ಚಿನಪಳ್ಳಿಗೆ ಹೋದರು. ಆವಾಗ್ಗೆ ಹೈದರ ನಾಯಕನು ಕರಾಚೂರಿ ನಂದರಾಜರ ಸಂಗಡ ಯಿದ್ದನು. ಮುಮ್ಮದಲ್ಲಿ ಕಾನರು ಕುಮ್ಮಕ್ಕಿಗೆ ಇಂಗ್ರೇಜಿಬಹದ್ದರ ಸರಕಾರದ ಪವುಜು ಕರೆಸಿ ಕೊಂಡು, ಚಂದಾಸಾಹೇಬರ ಸಂಗಡ ಲಡಾಯಿ ಮಾಡಿ, ಚಂದಾಸಾಹೇಬರ ಪವುಜು ಯಾವತ್ತೂ ಮುಳುಗಿಸಿದರು. ಆ ಮೇಲೆ ಅವರು ಓಡಿ ಹೋಗಿ ಜಂಬುಕೇಶ್ವರ ದೇವರ ಗುಡಿ ಹೊಕ್ಕು ಕೊಂಡು ಇದ್ದದ್ದರಿಂದ, ಅವರಿಗೆ ಮುಮ್ಮದಲ್ಲಿ ಕಾನರು ಹಿಡಿತರಿಸಿ, ತಲೆ ಹೊಡೆದು ಬಿಟ್ಟರು. ಆ ಬಳಿಕ ಕೆಲವು ದಿವಸ ಕರಚೂರಿ ನಂದರಾಜ ಅರಸುಗಳು ಅಲ್ಲಿ ಇದ್ದು, ಪುನಃ ಶ್ರೀರಂಗಪಟ್ಟಣಕ್ಕೆ ಬಂದರು. ಆ ಚಂದಾಸಾಹೇಬರ ಲಡಾಯಿದ ಸಮಯದಲ್ಲಿ ಹೈದರ ನಾಯಕನು ಕೆಲವು ಸಾಮಾನು ಫಿರಂಗಿ ಮುಂತಾಗಿ ಲೂಟಿ ಮಾಡಿಕೊಂಡು ಸ್ವಲ್ಪ ಪ್ರಬಲಿಸಿದನು.—"ಆ ಬಳಿಕ ಕರಚೂರಿ ನಂದರಾಜ ಅರಸುಗಳು ತ್ರಿಚ್ಚನಾಪಳ್ಳಿ ಲಡಾಯಿಕ್ಕೆ ಹೋಗಿ ಹೇರಾಳ ದ್ರವ್ಯ ಕರ್ಚು ಮಾಡಿದನು. ಕಾರ್ಯವು ಕೂಡಿ ಬರಲಿಲ್ಲ"— ಎಂಬದಾಗಿ ಚಿಕ್ಕ ಕೃಷ್ಣರಾಜ ಒಡೆಯರು ಪ್ರಸ್ತಾಪ ಮಾಡಿದ್ದರಿಂದ, ಆದನ್ನು (ಅವರು) * ತಿಳಿದು ತಿರುಗಿ ಬಿದ್ದು, ಆ ಕೃಷ್ಣ ರಾಜ ಒಡೆಯರ ಅರಮನೆಗೆ ಗುಂಡು ಹೊಡೆದು ಅವರ ಸಾಮಾಧಿಕರನ್ನು [ಅಜ್ಞೆ] || ಮಾಡಿಸಿ, ಅವರ ಮನೆಗೆ ಪಾರಾ ಯಿಟ್ಟು ಬಂದೋಬಸ್ತು ಮಾಡಿದರು. ಈ ಮೇರೆ ನಾಲ್ಕು ವರ್ಷ ಕಳೆಯಿತು.

ಅಷ್ಟರಲ್ಲಿ ಮೈಸೂರ ದೊಡ್ಡ ದಳವಾಯಿ ದೇವರಾಜರು ತೀರಿ ಹೋದ್ದರಿಂದ, ಅವರ ಕುಟುಂಬವಾದ ಚೆಲುವಾಜಮ್ಮಾಜಿಯವರು ಅಲ್ಲಿ ಬರೆವಣಿಗೆಯಲ್ಲು ಇದ್ದ ಕಂಡೇರಾವು ಎಂಬ ಬ್ರಾಹ್ಮಣನ ಕೂಡೆ ವ್ಯಭಿ

---

* ಬ ಕರಾಚೂರಿ ನಂದರಾಜ ಅರಸುಗಳು

|| ಬ ಹಿಡಿದು ಅಜ್ಞೆ

ಚಾರ ಮಾಡಿಕೊಂಡು, ಅವರು, ದೊಡ್ಡ ಕೃಷ್ಣರಾಜ ಒಡೆಯರ ರಾಣಿಯಾದ ದೊಡ್ಡಮ್ಮಾಜಿಯುವರಿಗೆ ಹೇಳಿ ಕಂಡೇರಾಯನಿಗೆ ಸರ್ವಾಧಿಕಾರವನ್ನು ಕೊಡಿಸಿದ್ದರಿಂದ, ಕರಚೂರಿ ನಂದರಾಜ ಅರಸು ಈ ಅನ್ಯಾಯ ತಿಳಿದು ಕಂಡೇರಾಯನ ಹಿಡಿದು ಶಿಕ್ಷೆ ಮಾಡಬೇಕೆಂಬದಾಗಿ ಅವನ ಸಂಗಡ ಜಗಳ ಮಾಡಿದಲ್ಲಿ ಅವನು ಸಿಕ್ಕಲಿಲ್ಲ. ಆ ಬಳಿಕ ಹೈದರಲ್ಲಿ ನಾಯಕನಿಗೆ ಕರಚೂರಿ ನಂದರಾಜರು ಕೆಲವು ಫವುಜು ಕೊಡಿಸಿಕೊಟ್ಟು ಕಂಡೇರಾಯನ [ಸಂಗಡ] ± ಜಗಳ ಮಾಡಿ ಅವನನ್ನು ಹಿಡಿದು ಕಬ್ಬಿಣದ ಪಂಜರದೊಳಗೆ ಹಾಕಿ, ಕೊಂದು ಹಾಕಿ ಬಿಟ್ಟು, ದೊಡ್ಡ ಕೃಷ್ಣರಾಜ ಒಡೆಯರ ಕುಟುಂಬವಾದ ದೊಡ್ಡಮ್ಮ ಎಂಬ ಮುದ್ದಮ್ಮಾಜಿಯವರು ಚಿಕ್ಕ ಕೃಷ್ಣರಾಜ ಒಡೆಯರು ಸಹ ಇದ್ದ ಅರಮನೆಗೆ ಸುತ್ತ ಪಹರೆ ಇಟ್ಟು, ಶ್ರೀರಂಗಪಟ್ಟಣದ ಕೋಟೆಯನ್ನು ತನ್ನ ಕೈವಶ ಮಾಡಿಕೊಂಡು, ಹೈದರಲ್ಲಿಖಾನಬಹಾದರ ಎಂಬದಾಗಿ ಹೆಸರು ಇಟ್ಟುಕೊಂಡು, ಆ ವ್ಯಭಿಚಾರಿ ಚೆಲುವಮ್ಮಾಜಿ ಎಂಬವಳನ್ನು ದಳವಾಯಿ ಮನೆಯಿಂದ ತೆಗೆದು ಬೇರೆ ಒಂದು ಮನೆಯೊಳಗೆ ಮಡಗಿ ಬಿಟ್ಟು, ಆ ದಳವಾಯಿಯುವರ ಮನೆಯಲ್ಲಿ ಹೈದರಲ್ಲಿಖಾನರು ಇಳುಕೊಂಡರು.

ಆ ತದನಂತರದಲ್ಲಿ, ಇತ್ತಲಾಗಿ ಇಕ್ಕೇರಿ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿಕೊಂಡು ಇದ್ದ ಬೂದಿಬಸವಪ್ಪನಾಯಕರ ಕುಟುಂಬ ಈರಮ್ಮಾಜಿಯುವರು ನಂಬ್ಯಣ್ಣ ಎಂಬ ಚಾಕರನ ಸಂಗಡ ವ್ಯಭಿಚಾರ ಮಾಡಿಕೊಂಡು, ಪಟ್ಟಕ್ಕೆ ಸಲ್ಲುವಂತ (ಹ) ದೊರೆಮಗನನ್ನು ಜಟ್ಟಿಗಳ ಕೈಯಿಂದ ಕುತ್ತಿಗೆ ಮುರಿಸಿ ಕೊಂದುಹಾಕಿ, ತನ್ನ ಮಿಂಡನಾದ ನಂಬ್ಯಣ್ಣನಿಗೆ ಸರ್ವಾಧಿಕಾರವನ್ನು ಕೊಟ್ಟು ಮಡಗಿದಳು. ಈ ಸಮಾಚಾರ ಹೈದರಲ್ಲಿ ಕಾನರು ಕೇಳಿ, ಇಕ್ಕೇರಿ ಸಂಸ್ಥಾನವನ್ನು ಆಕ್ರಮಿಸಿಕೊಳ್ಳುವ ಬಗ್ಗೆ, ಯಾವತ್ತೂ ಫವುಜು ತೆಗೆದುಕೊಂಡು, ಚಿತ್ರಕಲ್ಲು ಭರಮನಾಯಕರು ಅವರ ಫವುಜು ಸಹ ತೆಗೆದುಕೊಂಡು ಹೋಗಿ, ಇಕ್ಕೇರಿ ಸಂಸ್ಥಾನದ ಕೋಟೆಗೆ ಮುತ್ತಿಗೆ ಹಾಕಿ, ಕಿಂಚಿತವಾಗಿ ಜಗಳಮಾಡಿ, ಅಲ್ಲಿ ಇದ್ದ ಜನರನ್ನು ತನ್ನ ವಶೀಕರಣಮಾಡಿಕೊಂಡು, ಮೋಸದಿಂದ ಲಡಾಯಿ ಮಾಡಿ, ಕಲಿಸಂದ ೪೮೬೪ನೆ ಚಿತ್ರಭಾನು ಸಂವತ್ಸರದಲ್ಲಿ ಇಕ್ಕೇರಿ ಸಂಸ್ಥಾ

---

± ಬ ನಿಗ್ರಹಿಸು ಎಂಬದಾಗಿ ಹೇಳಿ ಮೈಸೂರಿಗೆ ಹೋದರು. ಹೈದರನಾಯಕರು ಕಂಡೇರಾಯನ ಸಂಗಡ

ನವನ್ನು ತೆಗೆದುಕೊಂಡು, ನಂಬ್ಯಣ್ಣ ಎಂಬವಗೆ ಹಿಡಿದು ಕೊಂದುಹಾಕಿ ಬಿಟ್ಟು, ಆ ಈರಮ್ಮಾಜಿಯೆಂಬವಳನ್ನು ಕವಲೆದುರ್ಗದ ಮೇಲೆ ಸೆರೆಹಾಕಿ ಬಿಟ್ಟು, ಇಕ್ಕೇರಿ ಸಂಸ್ಥಾನದ ಹೆಸರು ಹೈದರುನಗರಯೆಂಬದಾಗಿ ಇಟ್ಟು, ತಮ್ಮ ಹೆಸರನ್ನು ನವಾಬು ಹೈದರಲ್ಲಿಖಾನ [ಎಂಬದಾಗಿ] * ಕರುಕವಿಸಿಕೊಂಡು, ಆ ಸಂಸ್ಥಾನಕ್ಕೆ ಸೇರಿದ ಸೀಮೆ ವಿಚಾರಿಸಿ ಲೆಕ್ಕಾ ಕೇಳುವಾಗ್ಗೆ, ಮಂಗಳೂರು ತಾಲೂಕು ಮಾಡವೊಂಭತ್ತು ಮಾಗಣೆಯಿಂದ ಅಮರದ ಮಾಗಣೆ ಒಂದು, ಸುಳ್ಯದ ಮಾಗಣೆ ಒಂದು, ಅಂತೂ ಎರಡೂ ಸಹ, ಮೊದಲು ಸೋಮಶೇಖರ ನಾಯಕರು ಕೊಡಗಿನ ಸಂಸ್ಥಾನಕ್ಕೆ ದೊಡ್ಡ ವೀರಪ್ಪ ಒಡೆಯರಿಗೆ ಬಿಟ್ಟುಕೊಟ್ಟು ಯಿದ್ದಾರೆಯೆಂತ ಆ ಸ್ಥಳದ ಜನ ಹೇಳಿದಲ್ಲಿ, ಅದನ್ನು ವಿಚಾರಿಸಿ ಕೇಳಿದಲ್ಲಿ [ಸಹ ರುಜು ಆ] † ದ್ದರಿಂದ, ಈ ಎರಡು ಮಾಗಣೆವಿನಾ ಇಕ್ಕೇರಿ ಸಂಸ್ಥಾನಕ್ಕೆ ಸೇರಿದ ಸೀಮೆ ಗಡಿ ಬಂದ ಹಾಗೆ ಬಂದೋಬಸ್ತು ಮಾಡಿಕೊಂಡು, ಪುನಃ ಪಟ್ಟಣಕ್ಕೆ ಬಂದು, ದೊಡ್ಡ ಕೃಷ್ಣರಾಜ [ಒಡೆಯರು] ± ಸಹ ಇದ್ದ ಅರಮನೆಯಲ್ಲಿ ಇದ್ದ ಬೊಕ್ಕಸಬಂಡಾರ ಯಾವತ್ತು ತೆಗೆದುಕೊಂಡು, ತನ್ನ ಮಾತಿಗೆ ಅನುಕೂಲವಾಗದಂತ (ಹ) ಹಳೇ ಸರದಾರರನ್ನು ಪರಿಹರಿಸಿ ಬಿಟ್ಟು, ತನ್ನ ಬಂಧುವರ್ಗದವರ (ನ್ನು) ಪವುಜಿಗೆ ಸರದಾರ (ರನ್ನಾಗಿ) ಮಾಡಿಕೊಂಡು ದಿನದಿನಕ್ಕೆ ಪವುಜು ಹೆಚ್ಚಾಗಿ ಜಮಾಯಿಸುತ್ತ, ಯಾವತ್ತೂ ಪವುಜು ಬಂದು ಮೈಸೂರು ಕೋಟೆಗೆ ಮುತ್ತಿಗೆ ಹಾಕಿ, ಜಗಳಮಾಡಿ, ಆ ಕೋಟೆಯನ್ನು ತೆಗೆದುಕೊಂಡು, ಕರಚೂರಿ ನಂದರಾಜರನ್ನು ಹಿಡಿತಂದು [ಕೋಟೆ] = ವೊಳಗೆ ಸೆರೆಹಾಕಿ, ಮೈಸೂರು ಸೀಮೆ ಯಾವತ್ತೂ ಸ್ವಾಧೀನ ಮಾಡಿಕೊಂಡರು. ಆ ತದನಂತರದಲ್ಲಿ ಚಿಕ್ಕ ಕೃಷ್ಣರಾಜ ಒಡೆಯರು ತೀರಿಹೋದ್ದರಿಂದ, ಅವರ ಸಂತತಿಯೊಳಗೆ ಕೃಷ್ಣರಾಜರುಯೆಂಬವರ ತಂದು ನವಾಬಹೈದರಲ್ಲಿ ಖಾನಬಹದರವರು ಪಟ್ಟಕಟ್ಟಿ ಹೆಸರಿಗೆ ಮಡಗಿಯಿದ್ದರು.

---

* ಬ ಬಹದ್ದರಯೆಂಬದಾಗಿ

† ಬ ಸಹಜವಾ

± ಬ ವಡೆಯರವರ ರಾಣಿಯಾದ ಮುದ್ದಮ್ಮಾಜಿಯವರು, ಚಿಕ್ಕ ಕೃಷ್ಣರಾಜ ವಡೆಯರು

= ಬ ಪಟ್ಟಣದ ಕೋಟೆ

ಕೊಡಗಿನ ಸಂಸ್ಥಾನದಲ್ಲಿ ದೊರೆತನ ಮಾಡುತ್ತ ಇದ್ದ ಚಿಕ್ಕವೀರಪ್ಪ ಒಡೆಯರಿಗೆ ಹೈದರಲ್ಲಿಖಾನ ಬಹದರವರು ಬರೆಸಿ ಕಳುಹಿಸಿದ ವಿವರಃ— "ಏಳುಸಾವಿರ ಸೀಮೆ ಕೊಡಗಿನ ಸಂಸ್ಥಾನಕ್ಕೂ ಮೈಸೂರು ಸಂಸ್ಥಾನಕ್ಕೂ ಇತ್ತೆರಿಗೆ ಆಗಿಯಿದೆಯಲ್ಲಾ! ಅದರಲ್ಲಿ ಕೆಲವು ಮೈಸೂರವರಿಗೆ ಕೊಡುವ ಹಣ [ತೆಗೆದು] § ಕೊಡುವದು ನಮಗೆ ಕೆಲಸವಿಲ್ಲ. ನಮಗೆ ಸಲ್ಲತಕ್ಕಂತ (ಹ) ಸೀಮೆಯನ್ನು ಬಿಟ್ಟುಕೊಡಿ. ನಾವು ಬಂದೋಬಸ್ತು ಮಾಡಿಕೊಳ್ಳುತ್ತೇವೆ"— ಎಂಬದಾಗಿ ಬರೆಸಿ ಕಳುಹಿಸಿದರಿಂದ, ಅದೇ ಮೇರೆ ಚಿಕ್ಕವೀರಪ್ಪ ಒಡೆಯರವರು ಆ ಏಳುಸಾವಿರ ಸೀಮೆಯಲ್ಲಿ ಅವರಿಗೆ ಸಲ್ಲುವಂತ (ಹ) ಬೆಟ್ಟತ್ತಿ ೧, ಮಲ್ಲಿಪಟ್ಟಣ ೧, ಹೊಸೂರು ೧, ಎಂಬ ಮೂರು ಹೋಬಳಿಗಳನ್ನು ವಿಂಗಡಿಸಿ ಬಿಟ್ಟುಕೊಟ್ಟಲ್ಲಿ, ಮಲ್ಲಿಪಟ್ಟಣ ಎಂಬಲ್ಲಿ ಒಂದು ಕೋಟೆ ಕಟ್ಟಿ ಅಮಲ್‌ದಾರನ ಇರಿಸಿ, ಬಂದೋಬಸ್ತು ಮಾಡಿಕೊಂಡರು. ಈ ಕಡೆ ಸಲುವಂತ (ಹ) ಸೀಮೆಯನ್ನು ಕೊಡಗಿನ ರಾಜರು ಬಂದೋಬಸ್ತು ಮಾಡಿಕೊಂಡರು.

ಕೆಲವು ದಿವಸದ ಮೇಲೆ ನವಾಬು ಹೈದರಲ್ಲಿ ಕಾನರು ಪರಜುಲ್ಲಾಖಾನನ ಸಂಗಡ ದಂಡು ಕೂಡಿಸಿಕೊಟ್ಟು, ಕೊಡಗಿನ ಸಂಸ್ಥಾನದ ಮೇಲೆ ಜಗಳಕ್ಕೆ ಕಳುಹಿಸಿದರಿಂದ, ಆ ಪರಜುಲ್ಲಾಕಾನನು ಕಲಿಸಂಧ್ಯ ೪೮೬೭ ನೇ ಪಾರ್ಥಿವ ಸಂವತ್ಸರದಲ್ಲಿ ಉಬ್ಬಲಗಂಡಿ ಮಾಳದಲ್ಲಿ ಬಂದು ಇಳಿದಲ್ಲಿ, ಅವರಿಗೂ ಈ ಸಂಸ್ಥಾನದವರಿಗೂ ಹೇರಾಳ ಲಡಾಯಿಯಾಗಿ ಆ ಪರಜುಲ್ಲಾಕಾನನು ಮುರಿದು ಹೋಗಿ ಐಗೂರು ಸೀಮೆಯಲ್ಲಿ ಇಳಕೊಂಡನು. ಆ ಬಳಿಕ ನವಾಬ ಹೈದರಲ್ಲಿ ಕಾನರು ಪರಜುಲ್ಲಾಕಾನನ ಮುಖಾಂತರ ಹೇಳಿಸಿದ್ದುಃ— "ಮಹಾರಾಜನ ದುರ್ಗ ತಾಲೂಕಿನಿಂದ ಉಚ್ಚಂಗಿ ಮುಂತಾದ ಕೆಲವು ಸೀಮೆ ನಿಮ್ಮ ಸರಹದ್ದಿಗೆ ಮುಟ್ಟಿಯಿರುವದನ್ನು ವಿಂಗಡಿಸಿ, ನಿಮ್ಮ ಸಂಸ್ಥಾನಕ್ಕೆ ಬಿಟ್ಟು ಕೊಡುತ್ತ ಇದ್ದೇವೆ. ಪರಜುಲ್ಲಾಕಾನನ ದಂಡಿನ ಕರ್ಚು ಹೇರಳ ಮುಟ್ಟಿಯಿದೆ. ಆ ಬಗ್ಗೆ ಮೂರು ಲಕ್ಷ ವರಹ ಕೊಡಬೇಕು. ಆದ್ದರಿಂದ ನಿಮ್ಮ ನಮ್ಮ ಸ್ನೇಹ ಅನಂತಕಾಲ ಪರಿಯಂತರ ಶಾಶ್ವತವಾಗಿ [ಇರಬೇಕು.]" ± ಎಂಬದಾಗಿ ಹೇಳಿ ಕಳುಹಿಸಿದ

---

§ ಬ ತಾವು ತೆಗೆದು

± ಬ ಇದ್ದೀತು.

ರಿಂದ, ಕೊಡಗಿನ ಸಂಸ್ಥಾನದ ಚಿಕ್ಕ ವೀರಪ್ಪ ಒಡೆಯರು ಜವಾಬು ಕೊಟ್ಟ ವಿವರಃ— “ನೀವು ಹೇಳಿದ ಮೇರೆ ಸದರಿ ಬರೆಸಿದ ಸೀಮೆ ಈ ಕಡೆಗೆ ಬಿಟ್ಟು ಕೊಡುವಂತಾದ್ದು ಯಾವಾಗ ಬಿಟ್ಟು ಕೊಡುತ್ತೀರಿ?”— ಎಂತ ಕೇಳಿದಲ್ಲಿ, ಆ ಪರಜುಲ್ಲಾಕಾನನು ಹೇಳಿದ್ದುಃ— “ಈ ಮೂರು ಲಕ್ಷ ವರಹದಲ್ಲಿ ಕಾಲುವಾಸಿ ಹಣ ನೀವು ಕೊಟ್ಟ ಬಾಕಿ ಹಣವಿಗೆ ನಿಮ್ಮ ದಳವಾಯಿಯನ್ನು ಹೊಣೆ ಕೊಟ್ಟಲ್ಲಿ, ಆ ಸೀಮೆ ವಿಂಗಡಿಸಿ ಕೊಡುತ್ತೇವೆ. ಆ ಮೇಲೆ ಅಲ್ಲಿ ನಿಮ್ಮ ಠಾಣ್ಯ ಇಟ್ಟುಕೊಳ್ಳಿ.”— ಎಂಬದಾಗಿ ಹೇಳಿದರಿಂದ, ಈ ಅರ್ಥಕ್ಕೆ ಉಭಯ ಕಡೆ ಖುದ್ದು ಒಪ್ಪಿ ನಂಬಿಗೆ ಭಾಷೆ ಮಾಡಿ, ಖರಾರನಾಮಾ ಉಭಯ ಕಡೆಯವರು ಬರೆಸಿಕೊಂಡರು. ಅದೇ ಪ್ರಕಾರ ಕೊಡಗಿನ ಸಂಸ್ಥಾನದಿಂದ ಕಾಲವಾಸಿ ಹಣ, ಬಾಕಿ ಹಣವಿಗೆ ಹೊಣೆ ಆಗಿ ದಳವಾಯಿ ತಮ್ಮ ಚರಮಣ್ಣ ಎಂಬವನ ಸಹ ಪರಜುಲ್ಲಾಕಾನನ ಬಳಿಗೆ ಕಳುಹಿಸಿಕೊಟ್ಟು, ‘ಕರಾರು ಮೇರೆ ಸೀಮೆ ಬಿಡಿಸಿಕೊಡಿ’ – ಎಂಬದಾಗಿ ಕೇಳಿದಲ್ಲಿ, ಈ ವಿವರಕ್ಕೆ ಅವನು ಅರ್ಜಿ ಬರೆದುಕೊಂಡು, ಆ ಬಗ್ಗೆ ಹಣ ಆ ಚರಮಣ್ಣನ ಸಹ ನವಾಬ ಹೈದರಲ್ಲಿ ಕಾನರ ಬಳಿಗೆ ಕಳುಹಿಸಿ ಕೊಟ್ಟನು. ಈ ಪ್ರಕಾರ ಜವಾಬು ಸವಾಲು ಆಗುತ್ತ ಇರುವಾಗ್ಗೆ, ಚಿಕ್ಕ ವೀರಪ್ಪ ಒಡೆಯರು ಕಲಿಸಂದ ೪೮೬೮ನೇ ವ್ಯಯ ಸಂವತ್ಸರದಲ್ಲಿ ಸ್ವರ್ಗಸ್ಥರಾದರು. ಈ ಚಿಕ್ಕ ವೀರಪ್ಪ ಒಡೆಯರಿಗೆ ಅದರುವಾಯು ಸಂಭವಿಸಿಕೊಂಡು ಇದ್ದದರಿಂದ ಪುತ್ರ ಸಂತಾನಯಿಲ್ಲದೆ ಹೋಯಿತು. ಆದ್ದರಿಂದ ದೊಡ್ಡವೀರಪ್ಪ ಒಡೆಯರ ಸಂತತಿ ಮೂರು ತಲೆಯಂತರದ ಚಿಕ್ಕ ವೀರಪ್ಪ ಒಡೆಯರು ಕಾಲವಾದಾಗ್ಗೆ ಸಮಾಪ್ತವಾಯಿತು.

ಆ ಬಳಿಕ ಹಾಲೇರಿ ಅರಮನೆಯಲ್ಲು ನಿಂತುಯಿದ್ದ ಮುದ್ದರಾಜ ಅರಸುಗಳು ಹೊರಮಲೆಯಲ್ಲು ಇದ್ದ ನಂದರಾಜ ಅರಸುಗಳ ಮಗ ಮುದ್ದಯ್ಯ ಅರಸುಗಳು ಸಹ, ಅನ್ಯೋನ್ಯವಾಗಿ ಏಕೀಕರದಿಂದ ಕೊಡಗಿನ ರಾಜ್ಯಭಾರ ಮಾಡಿಕೊಂಡು ಇರುವಾಗ್ಗೆ, ಇವರು ಪರಜುಲ್ಲಾಕಾನನ ಸಂಗಡ ಕೇಳಿದ್ದು— “ಸಿಗದಿ ಮಾಡಿದ ಪ್ರಕಾರ ನಮ್ಮ ಸಂಸ್ಥಾನದಿಂದ ಕಾಲುವಾಸಿ ಹಣಕೊಟ್ಟು, ಬಾಕಿ ಹಣಕ್ಕೆ ನಮ್ಮ ದಳವಾಯಿ ತಮ್ಮನನ್ನು ಹೊಣೆಕೊಟ್ಟು ಇದ್ದೇವೆಯಷ್ಟೆ? ಇನ್ನು, ಕರಾರು ಮೇರೆ ಸೀಮೆ ಯಾಕೆ ಬಿಟ್ಟುಕೊಡುವದಿಲ್ಲ?”— ಎಂತ ಕೇಳಿದಲ್ಲಿ, ಆ ನವಾಬ ಹೈದರಲ್ಲಿಕಾನರು ಪರಜುಲ್ಲಾಕಾನನ ಮುಖಾಂತರ ಜವಾಬು ಹೇಳಿಸಿದ್ದುಃ— “ಈ ವರೆಗೆ

ಮಾತುಕತೆ ಮಾಡಿದ ಚಿಕ್ಕವೀರಪ್ಪ ಒಡೆಯರು ಕಾಲವಾದರು. ಈಗ ಬದಲು ರಾಜರಾಗಿದ್ದಾರೆ. ಆದ್ದರಿಂದ ನೀವು ತೀರ ಹಣಕೊಟ್ಟರೆ ಸೀಮೆ ಬಿಡಿಸಿಕೊಡುತ್ತೇವೆ"- ಎಂತ ಹೇಳಿಸಿದ್ದರಿಂದ, "ಕಾಲುವಾಸಿ ಹಣಕೊಟ್ಟು ಬಾಕಿ ಹಣವಿಗೆ ದಳವಾಯಿಯನ್ನು ಹೊಣೆ ಕೊಟ್ಟರೆ ಸೀಮೆ ಕೊಡುತ್ತೇವೆಯೆಂತ ಹೇಳಿ, ಈಗ ಯಾವತ್ತೂ ಹಣಕೊಟ್ಟರೆ ಸೀಮೆ ಕೊಡುತ್ತೇವೆ ಎಂತ ಹೇಳುತೀಯೆ? ಇನ್ನು ನಾವು ಬಾಕಿ ಹಣಕೊಟ್ಟರೆ ಅದನ್ನು ತೆಗೆದುಕೊಂಡು, ಕಡೆಗೆ ಸೀಮೆಯನ್ನು ಕೊಡದೆ ದಗಾಮಾಡುವ ಹಾಗೆ ಕಾಣುತ್ತದೆ. ನಾವು ನಿಗದೀ ಮೇರೆ ಹಣಕೊಟ್ಟು ಇದ್ದೇವೆ. ಇನ್ನು ಸೀಮೆ ಕೊಡಿ. ಬಾಕಿ ಹಣಕೊಡುತ್ತೇವೆ"— ಎಂತ ಹೇಳಿದಲ್ಲಿ, "ಅದು ಆಗದು. ಮುಂದಾಗಿಕೊಡಿ"— ಎಂತ ಹೇಳಿದ. ಇವರು "[ಮುಂಚಿತವಾಗಿ] † ಕೊಡಿ" ಎಂತ ಹೇಳಿದರು. ಈ ಮೇರೆ ಮಾತುಬಂದು ಅದೇ ವ್ಯಯಸಂವತ್ಸರದಲ್ಲಿ ಸಲ್ಲಾ ಮುರಿದು, ಹಾಲೇರಿ ಅರಮನೆಯಲ್ಲು ಇದ್ದ ಮುದ್ದರಾಜ ಅರಸುಗಳ ತಮ್ಮಂದಿರಾದ ಲಿಂಗರಾಜೇಂದ್ರ ಒಡೆಯರಿಗೂ ಪರಜುಲ್ಲಾಕಾನನಿಗೂ ಏಳುಸಾವಿರ ಸೀಮೆ ಬಳಿಯ ಜಗಳವಾಗಿ, ಪರಜುಲ್ಲಾಕಾನನ ದಂಡಿಗೆ ಬಹಳ ಪೆಟ್ಟಾಗಿ, ಅಲ್ಲಿಂದ ಅವನು ಮುಖಭಂಗಿತವಾಗಿ ಬಿಸಲೆಘಟ್ಟ ಇಳಿದು (ಹೋಗುವಾಗ್ಗೆ) * ಲಿಂಗರಾಜೇಂದ್ರ ಒಡೆಯರವರು ಮಂದಿ ತೆಗೆದುಕೊಂಡು ಹೋಗಿ, ಬಿಸಲೆಗಟ್ಟದಲ್ಲು ಅಡ್ಡಗಟ್ಟಿ ಜಗಳಮಾಡಿದಲ್ಲಿ, (ಅವರ) × ದಂಡಿಗೆ ಬಹಳ ಪೆಟ್ಟಾಗಿ, ಅರೆವಾಸಿ ದಂಡು ಮುಳುಗಿ ಹೋಗಿ, ಆ ದಂಡಿನ ಸಾಮಾನು, ಸರಂಜಾಮು, ತೋಪಿಕಾನೆ, ಪಿರಂಗಿ (ಮುಂತಾಗಿ) § ಕೊಡಗಿನ ಸಂಸ್ಥಾನದವರು ತೆಗೆದುಕೊಂಡರು. ಕೊಡಗಿನ ಸಂಸ್ಥಾನದಿಂದ ಹೊಣೆಕೊಟ್ಟು ಇದ್ದ ದಳವಾಯಿ ತಮ್ಮ ಚರಮಣ್ಣ ಎಂಬವನು ಪಟ್ಟಣದಲ್ಲಿ ಸಿಡುಬಾಗಿ ಅಲ್ಲಿಯೇ ಮೃತವಾದನು. ಇ ಬಳಿಕ ಈ ಪರುಜುಲ್ಲಾಕಾನನ ದಂಡು ಯಾವತ್ತೂ ಮುರಿದು (ಹಲಕಾದ) = ವರ್ತಮಾನ ನವಾಬ ಹೈದರಲ್ಲಿಖಾನರು

---

† ಬ ಸೀಮೆ ಮುಂಚಿತವಾಗಿ

* ಬ ಹೋಗಬೇಕೆಂದು ಹೋಗುವಾಗ್ಗೆ

× ಬ ಫರುಜುಲ್ಲಾ ಖಾನನ

§ ಬ ಮುಂತಾಗಿ ಆ ಗಟ್ಟದಲ್ಲು ಬಿಟ್ಟುಕೊಟ್ಟು ಉಳಿಕೆ ದಂಡು ತೆಗೆದುಕೊಂಡು ಹೋದನು. ಆ ಸಾಮಾನು, ಪಿರಂಗಿ, ತೋಪಿಖಾನೆ ಮುಂತಾಗಿ,

= ಬ ಫುಟಾಫುಟಿಯಾದ

ಕೇಳಿ, ಕೊಡಗಿನ ಸಂಸ್ಥಾನದವರಿಗೂ ನಮಗೂ ಮುಂದೆ ಕಜಾ ಇಲ್ಲದೆ ಸಲ್ಲಾಮಾಡಿ ದೋಸ್ತಿ ಮಡಗಬೇಕೆಂತ ನಿಶ್ಚೈಸಿ— "ಪ್ರಾಕುನಗರದ ದೊರೆಗಳು ಅಮರಸುಳ್ಯವನ್ನು ಕೊಡಗಿನ ಸಂಸ್ಥಾನಕ್ಕೆ ಸೇರಿಸಿಕೊಟ್ಟು ಇದ್ದಾರಷ್ಟೆ? ಈಗ ನಾವು ಅವರ ಸಮೀಪವಲ್ಲಿ ಇರುವ ಪಂಜಬೆಳ್ಳಾರೆ ಎಂಬ ಎರಡು ಮಾಗಣೆಯನ್ನು [ನಗರದ] ± ಸೀಮೆಯಿಂದ ವಿಂಗಡಿಸಿ, ಕೊಡಗಿನ ಸಂಸ್ಥಾನಕ್ಕೆ ಸೇರಿಸಿ, ಸರ್ವೆಹೊಳೆ ಬಳಿಯ ತೋರಣಕಟ್ಟಿಸಿ, ಕಲಿಸಂದ ೪೮೭೨ ನೇ ವಿಕೃತಿ ಸಂವತ್ಸರವಲ್ಲಿ ಬಿಟ್ಟುಕೊಟ್ಟರು. ಆ ಬಳಿಕ ಉಭಯ ಕಡೆಯಿಂದಲು ದೋಸ್ತಿಯಿಂದ ನಡೆದು ಬರುತ್ತ ಇದ್ದರು. ಆ ತರುವಾಯದಲ್ಲಿ ಕೊಡಗಿನ ಸಂಸ್ಥಾನ ವಿಚಾರಿಸಿಕೊಂಡು ಹಾಲೇರಿ ಅರಮನೆಯಲ್ಲು ಇದ್ದ ಮುದ್ದರಾಜ ಅರಸುಗಳು, ಹೊರಮಲೆ ಅರಮನೆಯಲ್ಲು ಇದ್ದ ನಂದರಾಜರುಗಳ ಮಗ ಮುದ್ದಯ್ಯರಾಜರು ಸಹ, ಎರಡು ವರುಷದೊಳಗೆ ಮೃತವಾಗಿ ಹೋದರು.

ಆ ಬಳಿಕ ಕಲಿಸಂದ ೪೮೭೨ ನೇ ವಿಕೃತಿ ಸಂವತ್ಸರದಲ್ಲು ಕೊಡಗಿನ ಸಂಸ್ಥಾನದ ಪಟ್ಟವಾಗಬೇಕಾದರೆ, ಹಾಲೇರಿ ಅರಮನೆಯಲ್ಲಿ ಲಿಂಗರಾಜವೊಡೆಯರು ತಮ್ಮ ಅಣ್ಣನ ಮಗನಿಗೆ ಪಟ್ಟವಾಗಬೇಕೆಂಬದಾಗಿಯೂ, ಹೊರಮಲೆ [ಯಲ್ಲು] † ಮಲ್ಲಯ್ಯ ಅರಸುಗಳು ತಮ್ಮ ಮಗನಿಗೆ ಪಟ್ಟವಾಗಬೇಕೆಂಬುದಾಗಿಯೂ ಸಂವಾದಗಳ ಮಾಡಿ, ಗೃಹಛಿದ್ರದಿಂದ ಇವರು ಜಗಳ ಮಾಡಿದಲ್ಲಿ, ಹೊರಮಲೆ ಮಲ್ಲಯ್ಯರಾಜರ [ಬಲ] * ಹೆಚ್ಚಾಗಿ ಬಲಾತ್ಕಾರದಿಂದ ತಮ್ಮ ಮಗನಾದ ದೇವಪ್ಪರಾಜರಿಗೆ ಮಡಿಕೇರಿಯಲ್ಲಿ ಪಟ್ಟವನ್ನು ಕಟ್ಟಿ, ಕೊಡಗಿನ ರಾಜ್ಯದ ಆಳಿಕೆಯನ್ನು ಮಾಡಿಕೊಂಡು, ಆ ಬಳಿಕ ಹಾಲೇರಿಯಲ್ಲು ಇದ್ದ ಲಿಂಗರಾಜೇಂದ್ರ ಒಡೆಯರಿಗೆ ಹೇರಳ ಕಿರುಕುಳ ಮಾಡಿದ್ದರಿಂದ, ಇವರ ಕಿರುಕುಳದಲ್ಲಿ ನಿಸ್ತರಿಸಲಾರದೆ ಲಿಂಗರಾಜೇಂದ್ರ ಒಡೆಯರವರು ತಮ್ಮ ಕುಮಾರರಾದ ವೀರರಾಜೇಂದ್ರ ಒಡೆಯರನ್ನು, ತಮ್ಮ ಅಣ್ಣನ ಮಗ ಅಪ್ಪಾಜಿರಾಜರು, ಅವರ ಮಕ್ಕಳು

± ಬ ಬಿಟ್ಟು ಕೊಡುತ್ತೇವೆ. ಇನ್ನು ಮುಂದೆ ನಾವು ನೀವು ದೋಸ್ತಿಯಿಂದ ಇರಬೇಕು'' ಎಂಬದಾಗಿ ಕಾಗದ ಬರೆದು ಕಳುಹಿಸಿ, ಅದೇ ಮೇರೆ ಪಂಜಬೆಳ್ಳಾರೆಯೆಂಬ ಎರಡು ಮಾಗಣೆಯನ್ನು ನಗರದ

† ಬ ಅರಮನೆಯಲ್ಲು

* ಬ ಕಡೆ ಬಲ

ಇಬ್ಬರ (ನ್ನು) ಸಹ ಕರೆದುಕೊಂಡು ಐಗೂರು ಸೀಮೆಗೆ ಹೋಗಿ, ಅಲ್ಲಿ ಇದ್ದು,— ''ಹೈದರಲ್ಲಿ ಕಾನರು ನಮ್ಮ ಸಂಸ್ಥಾನದ ದೋಸ್ತಿ ಇರಬೇಕು ಎಂಬದಾಗಿ ಪಂಜ ಜೆಳ್ಳಾರೆ ಎರಡು ಮಾಗಣೆಯನ್ನು ತಮ್ಮ ಕಡೆಯಿಂದ ನಮ್ಮ ಸೀಮೆಗೆ ಬಿಟ್ಟುಕೊಟ್ಟು ದೋಸ್ತಿ ಇಟ್ಟು ಇದ್ದಾರೆ. ಈ ಸಮಯದಲ್ಲಿ ನಮ್ಮ ದಾಯಾದ್ಯರು ನಮ್ಮ ರಾಜ್ಯ ಆಶ್ರಯಿಸಿಕೊಂಡು ಇರುವಂತ (ಹ) ವಿವರ ಇವರಿಗೆ ಹೇಳಿದರೆ ನಮಗೆ ಕುಮ್ಮಕ್ಕು ಮಾಡಿ ಆ ದಾಯಾದ್ಯರ ಕಯ್ಯಿಂದ ನಮ್ಮ ರಾಜ್ಯ ಬಿಡಿಸಿಕೊಟ್ಟಾರು" ಎಂಬದಾಗಿ ಗ್ರಹಿಸಿ, ಈ ವಿವರವನ್ನು ಹೈದರಲ್ಲಿ ಕಾನರಿಗೆ ಕಾಗದ ಬರೆದು [ಮುತ್ತನ] * ಹಳ್ಳಿ ಬಸವನ ಕಯ್ಯ ಕೊಟ್ಟು, ಅವನ ಸಂಗಡ ಹರಿಕಾರರ ಕೂಡಿಸಿ ಕಳುಹಿಸಿದಲ್ಲಿ, ಹೈದರಲ್ಲಿ ಕಾನರು ಆ ಕಾಗದವನ್ನು ನೋಡಿ ಬಹಳ ಸಂತೋಷಪಟ್ಟು— "ಯಾವ ಬಗ್ಗು ಚಿಂತೆಮಾಡಬೇಡಿ. ಬೇಕಾದ ಕುಮ್ಮಕ್ಕು ಮಾಡಿ ನಿಮ್ಮ ಮನಸ್ಸಿನಲ್ಲು ಇರುವ ಪ್ರಕಾರ ಮಾಡಿಕೊಡುವಲ್ಲಿ ಅಂತರವಿಲ್ಲ"— ಎಂಬದಾಗಿ ನಂಬಿಗೆ ಭಾಷೆಯಿಂದ ಜವಾಬು ಬರೆದು ಕಳುಹಿಸಿದ್ದರಿಂದ, ಆವಾಗ್ಗೆ ಲಿಂಗರಾಜೇಂದ್ರ ಒಡೆಯರು ಆ ಮಾತು ನಂಬಿ ನವಾಬ ಹೈದರಲ್ಲಿ ಕಾನರ ಬಳಿಗೆ ಹೋಗಿ ಬೇಟಿ ಆದಲ್ಲಿ— "ನಿಮ್ಮ ರಾಜ್ಯಬಿಟ್ಟು ಏನು ಉದ್ದಿಶ್ಯ ನಮ್ಮ ಬಳಿಗೆ ಬಂದಿರಿ?"— ಎಂಬದಾಗಿ ಹೈದರಲ್ಲಿ ಕಾನರು ಕೇಳಿದಲ್ಲಿ, ಸದರಿ ಬರೆದ ವಿವರ ಯಾವತ್ತು ಹೇಳಿದರು. ''ಆ ಬಗ್ಗೆ ಚಿಂತೆ ಏನಿದೆ? ನಿಮ್ಮ ದೇಶವನ್ನು ನಾವು ಬಿಡಿಸಿ [ಕೊಟ್ಟೇವು] § ಎಂಬದಾಗಿ ನಂಬಿಗೆ ಭಾಷೆ ಕೊಟ್ಟು, ಬಹಳ ಬಗೆ ಹೇಳಿ ತಮ್ಮ ಬಳಿ ಇಟ್ಟುಕೊಂಡು ಇದ್ದಲ್ಲಿ, ಕಲಿಸಂದ ೪೮೭೩ನೇ ಖರ ಸಂವತ್ಸರದಲ್ಲಿ ಮಹಾರಾಷ್ಟ್ರದಿಂದ ತ್ರಿಯಂಬಕ ಮಾಮನು ಹೇರಳ ಪವುಜು ತೆಗೆದುಕೊಂಡು, ನವಾಬ ಹೈದರಲ್ಲಿ ಕಾನರ ಮೇಲೆ ಜಗಳಕ್ಕೆ ಬಂದು, ಮೈಸೂರು ಸಂಸ್ಥಾನದ ಸೀಮೆ ಯಾವತ್ತು [ದೌಡಾ ಮಾಡಿ] ± ಪಾಳು ಮಾಡುತ್ತ ಇದ್ದಲ್ಲಿ, ನವಾಬ ಹೈದರಲ್ಲಿ ಕಾನರಿಗೂ ತ್ರಿಯಂಬಕಮಾಮಗೂ ಚಿನಕುಳ್ಳಿಯ ಬಳಿಯ ಹೇರಳ ಲಡಾಯಿವಾಗಿ, ಹೈದರಲ್ಲಿ ಕಾನರ ದಂಡು ಯಾವತ್ತೂ ಮುಳುಗಿ ಹೋಗಿ, ಒಂದು ಕುದುರೆ ಮೇಲೆ ಹತ್ತಿಕೊಂಡು

---

* ಬ ಮುಟ್ಟಿನ

§ ಬ ಕೊಟ್ಟೇವು. ನೀವು ಚಿಂತೆ ಮಾಡಬೇಡಿ.

± ಬ ದೌಡು ದಾಳಿ ಮಾಡಿ.

ಹೈದರಲ್ಲಿ ಕಾನರು ಪಟ್ಟಣಕ್ಕೆ ಹೊಕ್ಕರು. ಆ ಬಳಿಕ ತ್ರಿಯಂಬಕಮಾಮನ ದಂಡು ಖರ ನಂದನ ಸಂವತ್ಸರದಲ್ಲಿ ಎರಡು ವರ್ಷ, ಹೈದರಲ್ಲಿ ಖಾನರ ಸೀಮೆ ಯಾವತ್ತೂ ಸೂರೆ ಮಾಡುತ್ತ ಇದ್ದದ್ದರಿಂದ, ನವಾಬ ಹೈದರಲ್ಲಿ ಕಾನರು ತ್ರಿಯಂಬಕ ಮಾಮನ ಸಂಗಡ ಸಲ್ಲಾದ ಸವಾಲು ಜವಾಬು ಮಾಡಿಕೊಂಡು, ಹೇರಳ ದ್ರವ್ಯ ಕೊಟ್ಟದ್ದರಿಂದ, ಅವರು ತಮ್ಮ ಫವುಜು ಯಾವತ್ತು ತೆಗೆದುಕೊಂಡು, ಹೈದರಲ್ಲಿ ಕಾನರಿಗೆ ಸೇರಿದ ಸೀಮೆ ಬಿಟ್ಟು, ಮಹಾರಾಷ್ಟ್ರಕ್ಕೆ ಹೋದರು.

ಈ ತ್ರಿಯಂಬಕ ಮಾಮನ ಅತಂತ್ರದಿಂದ ಹೈದರಲ್ಲಿ ಕಾನರ ಸೀಮೆ ಯಾವತ್ತು ಬರ ಹತ್ತಿ, ಸೀಮೆ ರೈತರಿಗೂ ದಂಡಿನ ಮಂದಿಗೂ ತಿನ್ನೋದಕ್ಕೆ ಅನ್ನವಿಲ್ಲದೆ, ಹೇರಳ ಜನ ಸಾಯುತ್ತ ಇದ್ದಲ್ಲಿ, ಲಿಂಗರಾಜೇಂದ್ರ ಒಡೆಯರು ಹೈದರಲ್ಲಿ ಕಾನರ ಸಂಗಡ ಹೇಳಿದ್ದು ಏನೆಂದರೆ:— "ತ್ರಿಯಂಬಕ ಮಾಮನ ಅತಂತ್ರದಿಂದ ತಮ್ಮ ಸೀಮೆ ಯಾವತ್ತೂ ಕೆಟ್ಟುಹೋಗಿ ಬರ ಹತ್ತಿ, ಹೇರಳ ಜನ ಅನ್ನವಿಲ್ಲದೆ ಮೃತವಾಗುತ್ತ ಇದೆ. ಈ ಸಮಯದಲ್ಲಿ ನಮ್ಮ ಕೊಡಗಿನ ಸೀಮೆಗೆ ದಂಡು ತೆಗೆದುಕೊಂಡು ಹೋದುದೇ ಉಂಟಾದರೆ ಆ ಸೀಮೆಯಲ್ಲಿ ಹೇರಳದ ದವಸ ಧಾನ್ಯ ಸಿಕ್ಕುತ್ತದೆ. ನಿಮ್ಮ ಸೀಮೆ ಜನಕ್ಕೆ ಅನ್ನವಾಗುತ್ತದೆ. ಈ ಬರಗಾಲವು ಕಳೆದುಹೋಗುತ್ತದೆ."— ಎಂದು ಹೇಳಿದಲ್ಲಿ, ಆ ಮಾತಿಗೆ ಹೈದರಲ್ಲಿ ಕಾನರು ಒಡಂಬಟ್ಟು, ತಮ್ಮ ದಂಡನ್ನು ತೆಗೆದುಕೊಂಡು, ಲಿಂಗರಾಜೇಂದ್ರ ಒಡೆಯರನ್ನು ಕರೆದುಕೊಂಡು, ಕಲಿಸಂವ ೪೮೭೫ ನೆ ವಿಜಯ ಸಂವತ್ಸರದಲ್ಲಿ ಅರಕಲಗೋಡು ಬಳಿಯಿಂದ ಕೊಡಗು ಸೀಮೆ ವಳಿತವಾದ ಬೆಟ್ಟಕಣಿವೆ ಮಾರ್ಗವಾಗಿ ಕೊಡಗಿನ ಸೀಮೆವೊಳಗೆ ಬಂದಲ್ಲಿ, ಎಡವನಾಡು ಬಳಿಯ ಹೈದರಲ್ಲಿ ಖಾನ ಬಹದರವರ ದಂಡಿಗೂ ಕೊಡಗ ಜನಕ್ಕೂ ಜಗಳವಾಗಿ ಹೈದರಲ್ಲಿ ಕಾನರ ದಂಡಿಗೆ ಬಹಳ ಪೆಟ್ಟಾಗಿ, ಮುರಿದು, ಹಿಂದಕ್ಕೆ ಹೋಗಿ, ಅರಕಲಗೋಡು ಬಳಿಯಲ್ಲು ಇಳಿದುಕೊಂಡು,:— "ಈ ಮೇರೆ ನಮ್ಮ ದಂಡು ಒಳನುಗ್ಗುವುದಕ್ಕೆ ಕೊಡಗರು ಅಪ್ಪದ ಕೊಡದೆ ಹೋದರು. ನಿಮ್ಮ ಸೀಮೆ ಮಾರ್ಗವಾದರೆ ಬಹಳ ಇಕ್ಕಟ್ಟು. ಇನ್ನು ಮುಂದೆ ಏನು ಉಪಾಯ?"— ಎಂತ ಹೈದರಲ್ಲಿ ಕಾನರು ಲಿಂಗರಾಜೇಂದ್ರ ಒಡೆಯರವರ ಕೇಳಿದಲ್ಲಿ ಅವರು ಹೇಳಿದ್ದು— "ನಮ್ಮ ಕೊಡಗಿನ ಸೀಮೆಯಲ್ಲಿ ಬಹಳ ಜನ ಕೊಡಗರು ನಮಗೆ ಆಪ್ತರಿದ್ದಾರೆ. ಅವರಿಗೆಲ್ಲಾ

ನಾವು ಅಂತರಂಗದಲ್ಲಿ ಬರೆದು ಕಳುಹಿಸಿ, ಕೆಲವು ಕೊಡಗು ಜನರ ನಮ್ಮ ಕಡೆ ಸಹಾಯ ಮಾಡಿಕೊಂಡು, ಹೇರಳ ಲಡಾಯಿ ಬೀಳದಂತೆ, ಸರಾಗ ಮಾರ್ಗದಲ್ಲಿ ಕೊಡಗಿನ ಸೀಮೆವೊಳಗೆ ದಂಡನ್ನು ತೆಗೆದುಕೊಂಡು ಹೋಗುತ್ತೇವೆ."— ಎಂಬದಾಗಿ ಹೇಳಿದಲ್ಲಿ, 'ಅದೇ ಮೇರೆ ಮಾಡಿ' ಎಂಬದಾಗಿ ಹೇಳಿದರು. ಆ ಬಗ್ಗೆ ತಮಗೆ ಆಪ್ತರಾದಂತ (ಹ) ಕೊಡಗರಿಗೆ ಬರೆಸಿ ಕಳುಹಿಸಿದ ವಿವರ— "ನಮ್ಮ ನಮ್ಮ ಗ್ರಹಚ್ಛಿದ್ರವಾಗಿ ಅಣ್ಣ ತಮ್ಮಂದಿರು ಜಗಳ ಮಾಡಿಕೊಂಡು, ನಾವು ನವಾಬ ಹೈದರಲ್ಲಿ ಕಾನರ ಬಳಿಗೆ ಹೋಗಿ ಹೇಳಿದಲ್ಲಿ ನಿಮ್ಮ ಅಣ್ಣತಮ್ಮಂದಿರ ನ್ಯಾಯ ತೀರಿಸಿ, ನಿಮ್ಮ ರಾಜ್ಯ ನಿಮಗೆ ದಾಯಾದ್ಯರ ಕೈಯಿಂದ ಬಿಡಿಸಿಕೊಡುತ್ತೇವೆಂಬದಾಗಿ ಹೇಳಿ, ಭಾರಿ ದಂಡು ತೆಗೆದುಕೊಂಡು ಬಂದು ಇದ್ದಾರೆ. ಆದ್ದರಿಂದ ನಮ್ಮ ದಾಯಾದ್ಯರ ಮಾತಿನ ಮೇಲೆ ನೀವು ನಮ್ಮ ಸಂಗಡ ಜಗಳ ಮಾಡಿದ್ದುಂಟಾದರೆ ನಿಮಗೆ ಬಹಳ ದಣು ತೋರೀತು."— ಎಂದು ನಯ ಭಯ ತೋರಿ ಬರೆದು ಕಳುಹಿಸಿದಲ್ಲಿ, ಆ ಮಾತಿಗೆ ಕೆಲವು ಕೊಡಗರು, ರಾಜರಿಗೆ ಆಪ್ತರಾದಂತ (ಹ) ವರು, ಒಡಂಬಟ್ಟು— "ನೀವು ಬಾಳೆಲೆ ಮಾರ್ಗವಾಗಿ ಬಂದರೆ ನಾವು ಅಲ್ಪ ಸ್ವಲ್ಪ ಲಡಾಯ ಮಾಡಿ ನಿಮ್ಮ ಸಂಗಡ ಕೂಡುತ್ತೇವೆ"— ಎಂಬದಾಗಿ ಬರೆಸಿ ಕಳುಹಿಸಿದ್ದರಿಂದ, ಈ ವಿವರ ಲಿಂಗರಾಜೇಂದ್ರ ವೊಡೆಯರು ನವಾಬ ಹೈದರಲ್ಲಿ ಖಾನರಿಗೆ ಹೇಳಿದಲ್ಲಿ, ಆ ಮಾತಿಗೆ ಒಡಂಬಟ್ಟು, ಬಾಳೆಲೆ ಮಾರ್ಗವಾಗಿ ದಂಡು ತೆಗೆದುಕೊಂಡು ಬಂದಲ್ಲಿ, ಅಲ್ಲಿ ಇದ್ದಂತ (ಹ) ಕೊಡಗರು, ಆಪ್ತರಾದಂಥವರು ಸ್ವಲ್ಪ ಲಡಾಯ ಮಾಡಿ, ಲಿಂಗರಾಜೇಂದ್ರ ಒಡೆಯರವರ ಕಡೆಗೆ ಬಂದು ಕೂಡಿ, ದಂಡನ್ನು ಒಳಕ್ಕೆ ಬಿಟ್ಟುಕೊಂಡ ಕಾರಣ, ಆ ದೇವಪ್ಪರಾಜರು ಈ ಸೀಮೆಯಲ್ಲು ನಿಲ್ಲಲಾರದೆ ಗಟ್ಟ ಇಳಿದು ಮಲೆಯಾಳಕ್ಕೆ ಹೋದರು. ಆ ಬಳಿಕ ಆ ದೇವಪ್ಪರಾಜರ ಕುಟುಂಬ ಮಕ್ಕಳು ಅವರ ಸಂತತಿ ಯಾವತ್ತು, ಪಟ್ಟಣಕ್ಕೆ ಹಿಡಿದುಕೊಂಡು ಹೋಗಿ ಸೆರೆ ಹಾಕಿದರು. ಮಲೆಯಾಳಕ್ಕೆ ಹೋದ ದೇವಪ್ಪ ರಾಜರ (ನ್ನು) ಕೋಟೆ ಅರಸುಗಳು ನಂಬಿಗೆ ಕೊಟ್ಟು ಕರೆಸಿ—" [ನಿಮ್ಮ] ± ದೊಡ್ಡ ವೀರಪ್ಪ ಒಡೆಯರವರು ನಮ್ಮ ಕಾರಣವರ (ನ್ನು) ತೋಮರದಲ್ಲು ತಲೆ ಒಡೆದು ಹಾಕಿ ಇದ್ದಾರೆ. ಅದರ ಬದಲಿಗೆ ನಿಮ್ಮ

± ಬ ನಿಮ್ಮ ಹಿರಿಯರಾದ

ತಲೆ ಕೊಡಿ. ಅಲ್ಲದಿದ್ದರೆ ತಲೆ ಬೆಲೆ ದ್ರವ್ಯ ಕೊಡಿ ಎಂಬುದಾಗಿ ಕೇಳಿದ್ದ ರಿಂದ, ಅವರು ಲಾಚಾರಾಗಿ ೪೦,೦೦೦ ಸಾವಿರ [ವರಹಾ] * ತಲೆ ಬೆಲೆ ಕೊಟ್ಟು, ಅಲ್ಲಿ ನಿಲ್ಲಲಾರದೆ, ಸಂಗಡ ಇದ್ದ ಜನವನ್ನೆಲ್ಲ ಅಲ್ಲಿ ಬಿಟ್ಟು, ಬದಲು ವೇಷ ಹಾಕಿಕೊಂಡು, ನಾಲ್ಕು ಜನರ ಮಾತ್ರ ಕೂಡ ಕರೆದು ಕೊಂಡು, ಮರಾಟೆ ಸೀಮೆಗೆ ಓಡಿ ಹೋಗುತ್ತಿದ್ದಲ್ಲಿ ಹರಿಹರದಲ್ಲಿ ಹೈದ ರಲ್ಲಿ ಕಾನರ ಕಡೆಯವರು ಹಿಡಿದು ಶ್ರೀರಂಗಪಟ್ಟಣಕ್ಕೆ ಕಳುಹಿಸಿ ಕೊಟ್ಟ ದ್ದರಿಂದ, ಆ ದೇವಪ್ಪರಾಜರ (ನ್ನು) ಪಟ್ಟಣದಲ್ಲು ಸೆರೆ ಹಾಕಿ, ಇವರನ್ನೂ ಇವರ ಕುಟುಂಬ ಮಕ್ಕಳು ಹೊರಮಲೆ ಸಂತತಿ ಯಾವತ್ತನ್ನೂ ಕೊಂದು ಹಾಕಿ ಬಿಟ್ಟದ್ದರಿಂದ, ದೊಡ್ಡವೀರಪ್ಪ ಒಡೆಯರ ಎರಡನೆ ಚಿಕ್ಕ ತಮ್ಮಂದಿ ರಾಗಿ ಹೊರಮಲೆಯಲ್ಲು ಇದ್ದ ನಂದರಾಜ ಅರಸುಗಳ ಸಂತಾನ ಯಾವತ್ತೂ ಇವರ ಮಗನಾದ ದೇವಪ್ಪ ರಾಜರ ಕಾಲಕ್ಕೆ ಕಲಿಸಂದ ೪೮೭೬ ನೆ ಜಯ ಸಂವತ್ಸರಕ್ಕೆ ಸಮಾಪ್ತವಾಯಿತು.

ಆ ಬಳಿಕ ನವಾಬ ಹೈದರಲ್ಲಿ ಖಾನರು ಲಿಂಗರಾಜೇಂದ್ರ ಒಡೆಯರ ಸಂ ಗಡ ಹೇಳಿದ್ದು:—"ನಿಮ್ಮ ಸೀಮೆ ನಿಮ್ಮ ದಾಯಾದ್ಯರ ಕಯ್ಯಿಂದ ತಪ್ಪಿತು. [ಆ] || ದೇವಪ್ಪರಾಜರು ನಮ್ಮ ಕೈಗೆ ಸಿಕ್ಕಿದರು. ಸೀಮೆ ಬಿಡಿಸಿ ಕೊಡುವ ಬಗ್ಗೆ ನಮ್ಮ ದಂಡು ತೆಗೆದುಕೊಂಡು ಬಂದದ್ದರಿಂದ, ನಮ್ಮ ದಂಡುಗಳಲ್ಲಿ ಹೇರಾಳ ಮಂದಿ ಸತ್ತರು. ಇದಕ್ಕೆ ಕರ್ಚು ಹೇರಾಳ ಮುಟ್ಟಿಯಿದೆ. ಕರಾರು ಮೇರೆ ನಿಮ್ಮ ಸೀಮೆಯುನ್ನು ನಿಮ್ಮ ವಶ ಮಾ ಡಿಕೊಂಡು, ಸದರಿ ಬರೆದ ಮೇರೆ ಕರ್ಚು ಆಗಿ ಇರುವ ದ್ರವ್ಯ ನಮಗೆ ಕೊಡಬೇಕು"— ಎಂಬದಾಗಿ ಹೇಳಿದಲ್ಲಿ, ಲಿಂಗರಾಜೇಂದ್ರರು ಹೇಳಿದ್ದು ಏನೆಂದರೆ:— "ಈ ಪರಿಯಂತರ ನಮ್ಮ ದಾಯಾದಿ ದೇವಪ್ಪರಾಜರು ದೊರೆತನ ಮಾಡಿಕೊಂಡು ನಮ್ಮ ಸಂಸ್ಥಾನದ ದ್ರವ್ಯ ಯಾವತ್ತೂ ಕೊಂಡು ಹೋದರು. ನಮಗೆ ಈಗ ಹಣ ಎಲ್ಲಿ ಇದೆ?"— ಎಂತ ಹೇಳಿದಲ್ಲಿ, ಆ ಬಗ್ಗೆ ಹೈದರಲ್ಲಿ ಕಾನರು ಹೇಳಿದ್ದು:— "ನಿಮ್ಮ ಸೀಮೆ ನಿಮಗೆ ಬಿಟ್ಟು ಕೊಡುತ್ತ ಇದೇವೆ. ನಮ್ಮ ದಂಡಿನ ಕರ್ಚಿನ ಉದ್ದಿಶ್ಯವಾಗಿ ಕಾಲಂ ಪ್ರತಿಯಲ್ಲು ೨೪ ಸಾವಿರ ರೂಪಾಯಿ ಕೊಡುತ್ತ ಬರಬೇಕು"— ಎಂದು ಹೇಳಿದಲ್ಲಿ, ಲಿಂಗರಾಜೇಂದ್ರ ಒಡೆಯರವರು ಹೇಳಿದ್ದು— "ನಮ್ಮ ಸಂಸ್ಥಾ

---

* ಬ ಹಣ

|| ಬ ನಿಮ್ಮ ದಾಯಾದ್ಯರಾದ

ನಕ್ಕೆ ಪ್ರಾಕು ಕಲ್ಪಾತಿ ಪರಿಯಂತರಕ್ಕೂ ಕೆಲವು ಬಯನಾಡು ಸೀಮೆಗೆ ಸೇರಿತ್ತು. ಈಚೆಗೆ ಕೆಲವು ದಿವಸದಿಂದ ಅದನ್ನು ಕೋಟೆ ಅರಸುಗಳು ಆಕ್ರಮಿಸಿಕೊಂಡು ಇದ್ದಾರೆ. ಅವರ ಕಯ್ಯಿಂದ ಬಿಡಿಸಿ ನಮಗೆ ಕೊಟ್ಟು, ಕಲ್ಪಾತಿ ಪರಿಯಂತರ ನಮ್ಮ ರಾಜ್ಯ ಮಡಗಿ ಕೊಟ್ಟರೆ, ಸದರಿ ಹೇಳಿದ ಮೇರೆ ಹಣವನ್ನು ಕಾಲಂಪ್ರತಿಯಲ್ಲು ತಮ್ಮ ಸರಕಾರಕ್ಕೆ ಸಂದಾಯ ಮಾಡಿ ಕೊಟ್ಟೇವು. ನಾವು ಕುಶಿಯಿಂದ ನಮ್ಮ ಸೀಮೆಯಲ್ಲು ಇದ್ದೇವು"— ಎಂದು ಹೇಳಿದಲ್ಲಿ, ಆ ಮಾತಿಗೆ ಹೈದರಲ್ಲಿ ಕಾನರು ಹೇಳಿದ್ದು— "ಕೊಡಗಿನ ಸೀಮೆಯಲ್ಲು ಬಂದೋಬಸ್ತು ಮಾಡಿಕೊಂಡು ಇರತಕ್ಕ ಬಗ್ಗೆ ಮಡಿಕೇರಿಯಲ್ಲಿ ನಿಮ್ಮ ಅಣ್ಣನ ಮ (ಗ) ನ ಮಡಿಗಿ, ನೀವು ನಮ್ಮ ಸಂಗಡ ಪಟ್ಟಣಕ್ಕೆ ಬಂದರೆ ಕಲ್ಪಾತಿ ಪರಿಯಂತರ ನಿಮ್ಮ ಸೀಮೆ ಕೋಟೆ ಅರಸುಗಳು ಈಗ ಆಕ್ರಮಿಸಿಕೊಂಡು ಇರುವಂತಾದ್ದು ವಿಚಾರಿಸಿ, ಕೊಡಗಿನ ಸೀಮೆಗೆ ಸೇರಿದ್ದು ತಾರ್ಕಣ್ಯ ಹೌದಾದರೆ, ಅಲ್ಲಿ ನಿಮ್ಮ ರಾಜ್ಯ ಇಡಿಸಿಕೊಡಲಾದೀತು"—ಎಂಬದಾಗಿ ಹೇಳಿದಲ್ಲಿ, ಆ ಮಾತಿಗೆ ಒಡಂಬಟ್ಟು, ಲಿಂಗರಾಜೇಂದ್ರ ಒಡೆಯರವರು ತಮ್ಮ ಅಣ್ಣನ ಮಗನಾದ ಅಪ್ಪಾಜಿರಾಜರಿಗೆ ಪಟ್ಟಕಟ್ಟಿ, ಮಡಿಕೇರಿಯಲ್ಲಿ ಇಟ್ಟು, ನವಾಬ ಹೈದರಲ್ಲಿ ಕಾನರ ಸಂಗಡ ಪಟ್ಟಣಕ್ಕೆ ಹೋದಲ್ಲಿ, ಆ ನವಾಬರು ಕಲ್ಪಾತಿ ಸಮೀಪದಲ್ಲು ಇರುವಂತ ಹಳಬರನ್ನು ಕರೆಸಿ ವಿಚಾರಿಸಿದಲ್ಲಿ, ಆ ಜನರು ಹೇಳಿದ್ದು—"ಅತಃ ಪ್ರಾಕು ಕಲ್ಪಾತಿ ಪರಿಯಂತರಕ್ಕೂ ಕೊಡಗಿನ ಸಂಸ್ಥಾನಕ್ಕೆ ಸೇರಿಯಿತ್ತು. ಈಚೆಗೆ ಕೆಲವು ಕಾಲದಿಂದ ಕೋಟೆ ಅರಸುಗಳು ಆಕ್ರಮಿಸಿಕೊಂಡು ಇದ್ದಾರೆ" ಎಂಬುದಾಗಿ ಆ ಜನರು ಹೇಳಿದಲ್ಲಿ ಈ ವಿವರ ಹೈದರಲ್ಲಿ ಕಾನರು ತಿಳಿದು ಲಿಂಗರಾಜೇಂದ್ರ ವಡೆಯರಿಗೆ ಹೇಳಿದ್ದು—"ನೀವು ಕೊಡಗಿನ ರಾಜ್ಯಕ್ಕೆ ಹೋಗಿ ಅದಕ್ಕೆಸೇರಿದ ಕಲ್ಪಾತಿ ಹತ್ತಿರ ನಿಮ್ಮ ರಾಜ್ಯ ಇಟ್ಟು ಬಂದೋಬಸ್ತು ಮಾಡಿಕೊಳ್ಳಿ"— ಎಂದು ಹೇಳಿದ ಕಾರಣ *[ಲಿಂಗರಾಜರು ತಮ್ಮ ಸ್ಥಳಕ್ಕೆ]ಬಂದು, ೩೦೦೦ ಕೊಡಗು ಮಂದಿ ಕೂಡ ತೆಗದುಕೊಂಡು ಹೋಗಿ, ಕಲ್ಪಾತಿ ಸರಹದ್ದಿನಲ್ಲಿ ಲಕಡಿ ಕೋಟೆ ತಯಾರುಮಾಡಿಸಿ, ಒಂದು ವರುಷ ಅಲ್ಲಿ ಇದ್ದು ಆಬಳಿಕ ಆ ಕೋಟೆಯಲ್ಲಿ ೨೦೦೦ ಮಂದಿಯನ್ನು ಗಡಿ ಬಂದೋಬಸ್ತು ಬಗ್ಗೆ ಇಟ್ಟು, ಸದರಿ ಜನಕ್ಕೆ ಸರದಾರು ±[ಕಗ್ಗೊಡು] ನಾಡು ಅಣ್ಣಪ್ಪನ ಅಪ್ಪಯ್ಯ

---

* ಅದೇಮೇರೆ ಲಿಂಗರಾಜೇಂದ್ರ ಒಡೆಯರವರು ಕೊಡಗಿನ ಸೀಮೆಗೆ

± ಕಗ್ಗೊಡಲ

ನೇಮಿಸಿ ಇಟ್ಟು ಆ ಲಕಡಿ ಕೋಟೆ ಕಿಲ್ಲೇದಾರಿಕೆಯನ್ನು ಎಡೆನಾಲ್ಕು ನಾಡು [ಮಂಜುಡ]* ಅಪ್ಪಯ್ಯಗೆ ನೇಮಿಸಿ, ಉಳಿದ ಒಂದುಸಾವಿರ ಕೊಡಗರನ್ನು ಕರೆದುಕೊಂಡು ಕೊಡಗಿನ ಸೀಮೆಗೆ ಬಂದು ಇರುತ್ತ ಇದ್ದಲ್ಲಿ, ಕಲಿಸಂದ ೪೯೩೬ ನೇ ಮನ್ಮಥ ಸಂವತ್ಸರದಲ್ಲಿ ಈ ರಾಜ್ಯಭಾರ ಮಾಡುತ್ತ ಇದ್ದ ಅಪ್ಪಾಜಿ ರಾಜರು ಮೃತವಾದ್ದರಿಂದ, ಆ ಬಳಿಕ ಲಿಂಗರಾಜೇಂದ್ರ ಒಡೆಯರು, ತಮ್ಮ ಮಕ್ಕಳು, ತಮ್ಮ ಅಣ್ಣನ ಮಗ ಅಪ್ಪಾಜಿರಾಜರ = [ಮಗ ಈ ೩ ಜನ] ಸಹ ಸಲಹಿಕೊಂಡು ರಾಜ್ಯಭಾರ ಮಾಡುತ್ತ ಇದ್ದಲ್ಲಿ, ಕಲ್ಪಾತಿ ಲಕ್ಕಡಿ ಕೋಟೆಯಲ್ಲಿ ಕೊಡಗು ಜನ ಆ ಸರದಾರ ಕಿಲ್ಲೇದಾರ ಸಹವಾಗಿ ಕಲಿಸಂದ ೪೯೩೫ ನೇ ಜಯ ಸಂವತ್ಸರದಾರಭ್ಯ ಕಲಿಸಂದ ೪೯೩೯ ನೇ ವಿಳಂಬಿ ಸಂ। ದ ವರೆಗೆ ೫ ವರ್ಷ ಆ ಕಲ್ಪಾತಿಯನ್ನು ಬಲಕಾಯಿಸಿಕೊಂಡು ಇರುತ್ತ ಇದ್ದಲ್ಲಿ, ಆ ಕೋಟೆಯಲ್ಲು ಇದ್ದಂತಾ ರಸ್ತು ಮುಸ್ತೈದು ಯಾವತ್ತು ಮುಗಿದು ಹೋದ್ದರಿಂದ, ಕೋಟೆ ಅರಸುಗಳು ಆ ಕೋಟೆ ಒಳಗೆ ಠಾಣ್ಯ ಇರುವ ಜನಕ್ಕೆ ರಸ್ತು ಬರುವಂತಾ † [ಮಾರ್ಗ ಮುಟ್ಟಿಸಿ] ಬಹಳ ಕಿರುಕುಳ ಮಾಡಿದರಿಂದ, ಕೊಡಗು ಮಂದಿಗೆ ಸಾಮಾನು ಸಿಕ್ಕದೆ ಬೇಜಾರಾಗಿ, ಆ ಕಲ್ಪಾತಿ ಲಕ್ಕಡಿಕೋಟೆಯಲ್ಲು ‖ [ಇದ್ದ ಠಾಣ್ಯ] ಎಬ್ಬಿಸಿಕೊಂಡು, ಇಬ್ಬರು ಕೊಡಗು ಸರದಾರರು ಕಲಿಸಂದ ೪೯೪೦ ನೇ ವಿಕಾರಿ ಸಂ। ದ ಚೈತ್ರಮಾಸದಲ್ಲಿ ಕೊಡಗಿನ ಸೀಮೆಗೆ ಬಂದು ಈ ವಿವರ ಯಾವತ್ತು ಲಿಂಗರಾಜೇಂದ್ರರಿಗೆ ಅರಿಕೆ ಮಾಡಿದಲ್ಲಿ, ಅದ ಕೇಳಿದ ಬಳಿಕ ಅವರು ತಮ್ಮ ಅಣ್ಣನ ಮಗ ಅಪ್ಪಾಜಿರಾಜ ಅರಸುಗಳ ಮಕ್ಕಳು ಇಬ್ಬರ ಸಂಗಡ ೨೦೦೦ ಸಾವಿರ ಕೊಡಗು ಮಂದಿಯನ್ನ ಕೂಡಿಸಿ, ಕಲ್ಪಾತಿ ಗಡಿ ಬಂದೋಬಸ್ತು ಮಾಡಿಕೊಂಡು [ಇರು] § ವದಕ್ಕೆ ಕಳುಹಿಸಿದಲ್ಲಿ, ಈ ಮಂದಿ ಹೋಗುವಂತ (ಹ) ಮಾರ್ಗವನ್ನು ಕೋಟೆ ಅರಸು ಮಂದಿ ± [ಇಟ್ಟು] ರಾತ್ರೆ ಕಾಲದಲ್ಲಿ ಮರೆ ಮೋಸದಿಂದ ಬಿದ್ದು, ಈ ಕೊಡ (ಗರ) × ಕಡಿದು ಹಾಕಿ, ಒಬ್ಬ ದೊರೆಮಗನನ್ನು ಕಡಿದು, ಮತ್ತೊಬ್ಬ

* ಬ ಮಂಜುರ

= ಬ ಮಕ್ಕಳು ಮೂವರ

† ಬ ಪಥಮಾರ್ಗ ಮುಟ್ಟಿಸಿ, ಆ ಸೀಮೆಯಲ್ಲಿ

‖ ಬ ಠಾಣ್ಯಯಿದ್ದ ಮಂದಿ

§ ಬ ಠಾಣ್ಯಯಿರು

± ಬ ಇಟ್ಟು ಕಟ್ಟು

× ಬ ಗು ಜನರ ಯಾವತ್ತು

[ನ] || ಕೈಸೆರೆ ಹಿಡಿದುಕೊಂಡು ಹೋಗಿ, ತದನೂರ ತೂಲಾ ಎಂಬಲ್ಲಿ ಸೆರೆಹಾಕಿ ಕೊಂದು ಬಿಟ್ಟರು.

ಆ ಬಳಿಕ ಇದೇ ಮಾಘ ಬ. ೧೦ ಬುಧವಾರ ಮಹಾದೇವಪುರ ದಲ್ಲಿ ಲಿಂಗರಾಜರು ಶಿವಾಧೀನರಾದರು. ಆ ಮೇಲೆ ಉಳಿದ ದೊರೆ ಮಕ್ಕಳು ಚಿಕ್ಕವರಾದ್ದರಿಂದ ನವಾಬ ಹೈದರಲ್ಲಿ ಖಾನರು ಹೇಳಿದ್ದು— "ಈ ಸೀಮೆ ಬಂದೋಬಸ್ತು ಮಾಡುವ ಬಗ್ಗೆ ನೀವು ಚಿಕ್ಕವರು. ನಿಮ್ಮಿಂದ ತೀರದು. ನೀವು ದೊಡ್ಡವರಾದ ಮೇಲೆ ನಿಮ್ಮ ರಾಜ್ಯ ನಿಮಗೆ ಕೊಡ ತೇವೆ"— ಎಂಬದಾಗಿ ಹೇಳಿ, ಕೊಡಗಿನ ರಾಜ್ಯವನ್ನು ಅಪಹರಿಸಿಕೊಂಡು, ಮೊದಲು [ಇಲ್ಲಿ] * ಕರಣಿಕನಾಗಿ ಇದ್ದ ಸುಬ್ಬರಸಯ್ಯಗೆ ಕೊಡಗಿನ ಸೀಮೆ [ಮಾಮಿಲೆಯನ್ನು] † ಕೊಟ್ಟು, ಕಲಿಸಂದ ೪೮೮೨ ನೇ ಶಾರ್ವರಿ ಸಂವ ತ್ಸರದಲ್ಲಿ ನವಾಬ ಹೈದರಲ್ಲಿ ಖಾನರು ದಂಡು ತೆಗೆದುಕೊಂಡು ಆರಕಾ ಡಿಗೆ ಹೋದರು. ಆಗ ಈ ಸೀಮೆಯಲ್ಲಿ ಇರುವ ಕೊಡಗ ಜನರು ಮನ ಸೂಬ ಮಾಡಿದ್ದು:— "ಕೊಡಗಿನ ಸಂಸ್ಥಾನದ ದೊರೆ [ಮಗನಿಗೆ] ± ರಾಜ್ಯಕೊಡದೆ ಹೈದರಲ್ಲಿ ಕಾನರು ಒಬ್ಬ ಬ್ರಾಹ್ಮಣನಿಗೆ ಅಮಲು ಕೊಟ್ಟು ಇವನ ಕೈಕೆಳಗೆ ನಮ್ಮ ಇಟ್ಟನಲ್ಲಾ! ದೊರೆ ಕುಮಾರರು ಇದ್ದ ಹಾಗೆ ಈ ಬ್ರಾಹ್ಮಣನ ಕೈ ಕೆಳಗೆ ಇರುವದು ಯುಕ್ತವಲ್ಲ"— ಎಂದು ಕೊಡಗು ಜನ ಈ ಅಮಲ್‌ದಾರನ ಮೇಲೆ ಕಲಿಸಂದ ೪೮೮೪ ನೇ ಶುಭಕೃತು ಸಂವ ತ್ಸರದ ಜ್ಯೇಷ್ಠ ಮಾಸದಲ್ಲಿ ತಿರುಗಿ ಬಿದ್ದು ಶರಾರತ್ತು ಮಾಡಿದರು. ಈ ವಿವರವನ್ನು ಈ ಅಮಲ್ ಮಾಡುವವನು ನವಾಬ ಹೈದರಲ್ಲಿ ಖಾನರಿಗೆ ಬರೆದು ಕಳುಹಿಸಿದಲ್ಲಿ, ಅದಕ್ಕೆ ಜವಾಬು ಅವರು ಬರೆದು ಕಳುಹಿ ಸಿದ್ದು:— "ಕೊಡಗಿನ ದೊರೆ ಮಕ್ಕಳು ಮಹಾರಾಜನ ದುರ್ಗ ತಾಲೂಕು ಗೋರೂರಲ್ಲಿ ಇರಲಿ. ನಾವು ಆರಕಾಡಿಂದ ಪಟ್ಟಣಕ್ಕೆ ಬಂದ ಮೇಲೆ ಕೊಡ (ಗ) ರ ತುಂಟತನ ನಿಲ್ಲಿಸಿ ಅವರ ಸೀಮೆ ಅವರಿಗೆ ಕೊಟ್ಟು ಅಲ್ಲಿಗೆ ಕಳುಹಿಸಬಹುದು"— ಎಂಬದಾಗಿ ಬರೆದು ಕಳುಹಿಸಿದ್ದರಿಂದ, ಆ ಅಮಲ್‌ದಾರನು ಅದೇ ಹುಕ್ಕುಂ ಮೇರೆ ಇದೇ ಸಂವತ್ಸರದ ಭಾದ್ರಪದ ಮಾಸದಲ್ಲಿ [ಕುಟುಂಬ] § ಮಕ್ಕಳು ಸಹವಾಗಿ ಗೋರೂರಲ್ಲಿ ಮಡಗಿಸಿ

---

|| ಬ ದೊರೆಮಗನ್ನ
* ಬ ಈ ಕೊಡಗಿನ ಸಂಸ್ಥಾನದ
† ಬ ಅಮಲು
± ಬ ಮಕ್ಕಳಿಗೆ
§ ಬ ಅರಮನೆ ಕುಟುಂಬ

ದನು. [ಅದೇ ಸಮಯದಲ್ಲಿ] = ಕೊಡಗರು ಯಾವತ್ತೂ ಪುಂಡು ಎದ್ದು, ಕೊಡಗಿನ ಸೀಮೆಯಲ್ಲಿ ಇರುವಂತಾ ಹೈದರಲ್ಲಿ ಖಾನರ ಠಾಣ್ಯಾದ ಮಂದಿ ಯಾವತ್ತೂ ಹೊರಡಿಸಿ ಬಿಟ್ಟು, ಕೋಟೆ ಕೊತ್ತಳ ಯಾವತ್ತನ್ನೂ ತೆಗೆದು ಕೊಂಡು, ಈ ಕೊಡಗ [ರು] || ಸೀಮೆಯನ್ನು ಕಟ್ಟಿಕೊಂಡು ಇರುತಿರು ವಲ್ಲಿ, ಇದೇ ವರುಷ ನವಾಬ ಹೈದರಲ್ಲಿ ಖಾನರು ಬೆನ್ನಿನಲ್ಲಿ ರಾಜಹುಣ್ಣು ಎದ್ದು ಆರಕಾಡಿನ [ಮೇಲೆ] * ಮೃತವಾದರು.

ಈ ಸಮಾಚಾರ ಕೇಳಿ, ಬೊಂಬಾಯಿಯಿಂದ ಇಂಗ್ರೇಜಿ ಬಹದ್ದರರ ಪವುಜು ತೆಗೆದುಕೊಂಡು ಜನರಲ್ [ಮತ್ತಿ ಸಾಹೇಬ] ± ರವರು ಬಂದು, ನಗರದ ಕೋಟೆ ಕೊಡಿಯಾಲದ ಕೋಟೆ ಮುಂತಾಗಿ ತೆಗೆದು ಕೊಂಡು, ಕೊಡಿಯಾಲದ ಕೋಟೆಯಲ್ಲು ಒಬ್ಬ ಸರದಾರ ಕೆಲವು ಪವುಜು ಸಹ ಠಾಣ್ಯ ಇಟ್ಟು, ನಗರದ ಕೋಟೆಯಲ್ಲಿ ಖಾಸ ಜನರಲ್ ಮತ್ತಿಸಾ ಹೇಬರವರು ಪವುಜು ಸಮೇತ ಇರುತ್ತ ಇದ್ದಲ್ಲಿ, ಈ ಸಮಾಚಾರವನ್ನು ನವಾಬ ಹೈದರಲ್ಲಿ ಖಾನರ ಮಗ ಟೀಪುಸುಲ್ತಾನರು ಕೇಳಿ, ತಮ್ಮ ಪವುಜು ಯಾವತ್ತೂ ತೆಗೆದುಕೊಂಡು ಆ ಇಂಗ್ರೇಜಿ ಬಹದ್ದರವರ ಪವುಜಿನ ಮೇಲೆ ಜಗಳಕ್ಕೆ ಹೋಗುವಾಗ್ಗೆ, ಗೋರೂರಲ್ಲಿ ಇದ್ದ ಕೊಡಗಿನ ಸಂಸ್ಥಾ ನದ ದೊರೆಮಕ್ಕಳ ಕುಟುಂಬ ಯಾವತ್ತನ್ನೂ ಇದೇ ಸಂವತ್ಸರದ ಪುಷ್ಯ ಮಾಸದಲ್ಲಿ ಪಿರಿಯಾ ಪಟ್ಟಣದ ಕೋಟೆ ಒಳಗೆ ಮಡಗಿಸಿ, ಕೋಟೆಗಾವ ಲನ್ನು ಮಾಡಿಸಿದರು.

ಆ ಬಳಿಕ ಅರಮನೆ ಕುಟುಂಬ ಮಕ್ಕಳು ಯಾವತ್ತೂ ಸಿಡಿಬಿನ ಹುಣ್ಣಾಗಿ ರಸ್ತು ಮುಸ್ತೈದಿಯು ಇಲ್ಲವಾಗಿ ಬಹಳ [ಜನ] × ಮೃತ ವಾಗಿ ಹೋದರು. ಆವಾಗ್ಗೆ ವೀರರಾಜರ ಮಾತು ಶ್ರೀ ದೇವಾಂಬಿಕೆ ಅಮ್ಮನವರು ಇದೇ ಸಂವತ್ಸರದ ಪುಷ್ಯ [ಮಾಸದಲ್ಲಿ] † ಶಿವಾಧೀನವಾ ದರು. ಅದರಲ್ಲಿ ವೀರ [ರಾಜರವರ] § ಬಲ ಅಣ್ಣನ ಚಿಕ್ಕ ಕುಮಾರರು

---

= ಬ ಈ ತದನಂತರ

|| ಬ ರೈತರೇ

* ಬ ಲ್ಲೇ

± ಬ ಮೆತ್ಯೂಸ

× ಬ ಕುಟುಂಬ ಮಕ್ಕಳು

† ಬ ತು ೧೪ ಯು ಭಾನುವಾರ ಗಳಿಗೆ ೨೫ಕ್ಕೆ

§ ಬ ರಾಜೇಂದ್ರ ಒಡೆಯುರವರು, ಇವರ

೨೧೯. ಕಾಯ ವಿಡಿದಿಹನ್ನಕ್ಕ ಕಾಮವೇ ಮೂಲ. ಜೀವ ವಿಡಿದಿಹನ್ನಕ್ಕ ಕ್ರೋಧವೇ ಮೂಲ. ವ್ಯಾಪ್ತಿಯುಳ್ಳನ್ನಕ್ಕ ಸಕಲ ವಿಷಯಕ್ಕೆ ಆಶೆಯೇ ಮೂಲ. ಎನ್ನೆ ಆಶೆಯು ಪಾಶ ಗಾಸಿ ಮಾಡುತ್ತಿದೆ. ಶಿವ ಯೋಗದ ಲೇಸಿನ ಠಾವ ತೋರು ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೨೦. ನೀರ ಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲದಲ್ಲದೆ ನಾನೆತ್ತ ಬಲ್ಲೆನಯ್ಯಾ. ನೀನಿಕ್ಕಿದ ತೊಡಕ ಬಿಡಬಾರದು. ನೀವು ಬಿಡಿಸಿದ ತೊಡಕನಿಕ್ಕಬಾರದು. ಕಪಿಲಸಿದ್ಧಮಲ್ಲಿನಾಥಯ್ಯ ನೀನೆನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ.

೨೨೧. ಅಯ್ಯಾ ಮನದ ರಜವ ಮಣ್ಣಾ ಕಳೆದು ಶಾಂತಿಯ ಉದಕದಲ್ಲಿ ತೆಗೆವೆನಯ್ಯ. ಜಳಕವನೇ ಮಾಡಿ ಯೋಗ ಕಂಪನಿಕ್ಕಿ ಹೋದಿಹೆನಯ್ಯ. ಅದನೊಂದು ಎಡೆಗೆ ತಂದು ಒಟ್ಟಿ ಗಾಣದಲಿಕ್ಕಿ ಹಿಳಿವೆನಯ್ಯ. ಹಿಳಿದ ರಸದ ಕಂಪಕೊಡುವ ಒಡೆಯ ನೀನೆ ಕಪಿಲಸಿದ್ಧಮಲ್ಲಿನಾಥಯ್ಯ.

೨೨೨. ಮನವೆಂಬ ಸಂಕಲ್ಪವನರಿಯೆನು ಸಂಕಲ್ಪ ಸಿದ್ಧಿಯಾಯಿತ್ತಾಗಿ. ಸಂಕಲ್ಪವೆಂಬ ಸಂಬಂಧವ ನರಿಯೆನು ನಿಮ್ಮ ವಿಚಾರ ವೆಡೆಗೊಂಡಿತ್ತಾಗಿ. ನಿಮ್ಮ ವಿಚಾರವೇ ಅಂತರಂಗದೊಳಗೆ ತುಂಬಿತ್ತಾಗಿ ಎನ್ನ ಮನದ ಮುಂದೆ ಎಲ್ಲ ನೀನೆಯಾಗಿ ದೆಯಯ್ಯ ಕಪಿಲಸಿದ್ಧಮಲ್ಲಿನಾಥಯ್ಯ.

೨೨೩. ವಿವೇಕವೆಂಬುದು ಬೇರಿಲ್ಲ ಕಂಡಯ್ಯ. ವಿವೇಕ ನವನಾಳದ ಸುಳುಹ ತೊಡೆದು ಸುನಾಳವ ಶುದ್ಧವ ಮಾಡುವೆ. ಅಷ್ಟದಳ ಕಮಲವನು ಉರ್ಧ್ವಮುಖವಾಗಿ ನಿಜಪದದಲ್ಲಿ ನಿಲಿಸಿದೆ. ಐವತ್ತೆರಡಕ್ಷರವ ತಿಳಿದು ನೋಡಿ ಏಕಾಕ್ಷರದಲ್ಲಿ ನಿಲಿಸುವೆ ಕಪಿಲಸಿದ್ಧಮಲ್ಲಿನಾಥ ಎನ್ನ ವಿಚಾರದ ಹವಣ ನೀನೆ ಬಲ್ಲೆ.

೨೨೪. ಅಂತರಂಗದಲ್ಲಿ ನಿಮ್ಮ ನೋಡುವವನಲ್ಲ ಕೇಳು ಕಂಡಾ ಎಲೆ ಅಯ್ಯ. ಬಹಿರಂಗದಲ್ಲಿ ಬಳಸುವವನಲ್ಲ ಕೇಳು ಕಂಡಾ. ಸುಷುಮ್ನಾ ಬಟ್ಟೆಯ ತುದಿಯನಡರಿ ಸಾವಿರ ದಳದ ಮಂಟಪದಲ್ಲಿ ನಿಮ್ಮ ನೆಲೆಗೊಂಡಿಪ್ಪೆ ನೋಡಾ ಕಪಿಲಸಿದ್ಧಮಲ್ಲಿನಾಥಯ್ಯ.

೨೨೫. ನಾ ನಿಮ್ಮ ರೂಪ ವಿಚಾರಿಸುವವನಲ್ಲ ಕೇಳಾ. ನಿನ್ನ ಧ್ಯಾನದಲ್ಲಿ ಇಟ್ಟಾತನಲ್ಲ ಕೇಳಾ. ಅತ್ಯತಿಷ್ಠದ್ದ ಶಾಂಗುಲದಲ್ಲಿ ನಿಮ್ಮ ನಿಲಿಸಿ ನಾನೊಂದೆಡೆಯಲ್ಲಿ ಇಪ್ಪಾತನಲ್ಲ ಕೇಳಾ. ಓಂಕಾರವೆಂಬ ಪೀಠಕ್ಕೆ ನಾನಾಗಿ ನಿಃಶಬ್ದವೆಂಬ ಲಿಂಗವ ನೆಲೆಗೊಳಿಸಿ ಬೆರಿಸಿ ಬೇರಿಲ್ಲದೆ ಇಪ್ಪೆ ನೋಡಯ್ಯ, ಕಪಿಲಸಿದ್ಧಮಲ್ಲಿನಾಥಯ್ಯನೇ ನೀನು ಪ್ರಣಮರೂಪಾಗಿ.

೨೨೬. ನಾದ ಬಿಂದು ಎಂಬಲ್ಲಿ ಅಂಗ ಸಂಬಂಧವೆಂಬೆನಯ್ಯ. ನಾದ ಪ್ರಾಣ ಬಿಂದು ಕಾಯವಾದ ಕಾರಣ ನಾದ ಸ್ವರವಲ್ಲ ಬಿಂದು ಕಾಯವಲ್ಲ. ಉಭಯ ಸೂತಕ ರಹಿತನ ಮಾಡಯ್ಯ. ನಾದ ಬಿಂದುವಿನ ವರ್ಮತೋರಿ ಮನ ಮಗ್ನವಾದ ನಿಲವ ಕಪಿಲಸಿದ್ಧಮಲ್ಲಿಕಾರ್ಜುನ ನೀನೆ ಬಲ್ಲೆ.

೨೨೭. ಎನ್ನ ಮನದಲ್ಲಿ ಮತ್ತೊಂದಕ್ಕೆ ಇಂಬಿಲ್ಲ ಕಂಡಯ್ಯ. ನಿನ್ನ ನೆನವೇ ನಾನು. ನೀನು ಎನ್ನ ನೆನವೆ ಕಂಡಯ್ಯ. ನಿನಗೆಯೂ ಎನಗೆಯೂ ಒಮ್ಮನ ನೋಡಯ್ಯ. ನೀ ಮನ ಮುಕ್ತನಾದ ಕಾರಣ ನಿನ್ನೊಡನೆ ಎನ್ನ ಮನ ಮುಕ್ತನ ಮಾಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೨೨೮. ಮನ ಮಗ್ನವಾದ ಯೋಗವೆಂದಡೇನು ಕೊರತೆ ಹೇಳಾ ಎಲೆ ಅಯ್ಯ. ಮನವಿಲ್ಲದ ಬಚ್ಚಬರಿಯ ಬೊಮ್ಮವೆಂದಡೇನು ಹೇಳಾ ಎಲೆ ಅಯ್ಯ. ನುಡಿದ ಮಾತಿನಲ್ಲಿ ವಿವರ ತೋರುತ್ತಿದೆ ಎಂದಡೆ ತಾತ್ಪರ್ಯವಂತಪ್ಪುದೆ ಕಪಿಲಸಿದ್ಧಮಲ್ಲಿನಾಥ.

೨೨೯. ಅಂಗದಂತೆ ಲಿಂಗ ಲಿಂಗದಂತೆ ಅಂಗವಾದ ಬಳಿಕ ಅಂಗದಂತೆ ಲಿಂಗೈಕ್ಯ ಲಿಂಗದಂತೆ ಅಂಗೈಕ್ಯ. ಮನವೇ ಲಿಂಗ ಲಿಂಗವೇ ಮನವಾದ ಬಳಿಕ ಮಾತುಮಾತುಗಳೆಲ್ಲ ಹೊಳಹಿದ ಕಾರಣ ಮೇಲೆ ಲಿಂಗೈಕ್ಯ ಲಿಂಗೈಕ್ಯವೇ ಸ್ವರಶಬ್ದ. ಸಂದಣಿಗೆ ಇನ್ನು ತೆರಹುಂಟೆ ಕಪಿಲಸಿದ್ದಮಲ್ಲಿನಾಥಯ್ಯ?

೨೩೦. ಅಯ್ಯಾ, ನಿಮ್ಮ ದೇವರೆಂದು ಭಾವಿಸಲರಿಯೆನು ಕೇಳು ಕಂಡಾ. ಎನ್ನ ಮನವ ನುಂಗಿದೆ ಎಂದು ಹಿಂದೆ ನಿಮಗಾನು ಬಿನ್ನಹ ಮಾಡಿದ ಕಾರಣ ಎನ್ನ ಒಳ ಹೊರಗೆಲ್ಲಾ ನೀನೆ ಕಂಡಯ್ಯ. ನಿಮ್ಮೊ.

ಳಗೆ ಅಡಗಿದ ನಾಡಿಯ ಒಳಕೊಂಡ ಅರಿವು ಅರಿದರಿದು ಮರೆದ ಪರಿ ಎಂತಯ್ಯ ಕಪಿಲಸಿದ್ಧಮಲ್ಲಿನಾಥಯ್ಯ ?

೨೩೧. ಅಯ್ಯ ಕಬ್ಬುನ ನೀರೊಳಕೊಂಬಂತೆ ಶಬ್ದ ನಿರಾಳವನೊಳಕೊಂಬಂತೆ ಮರೀಚಿಯ ಬಯಲೊಳಕೊಂಬಂತೆ ಎನ್ನನೆಂದೊಳಕೊಂಬೆ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ?

೨೩೨. ಕೆರೆ ತೊರೆ ದೇಗುಲಂಗಳ ಕಡೆಯಿಂದ ನಿಮ್ಮ ಕಂಡೆ. ಎಡಹುವಕಲ್ಲ ಮರೆಯಲ್ಲಿ ನಿಧಾನವ ಕಂಡಂತೆ ಎನ್ನ ಮರವೆಯ ತಮದ ಅದ್ರಿಗೆ ದಿನಮಣಿ ಜನಿಸಿದಂತೆ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೆಂಬ ಭ್ರಾಂತು ಸ್ವಯವಾಯಿತ್ತು ಪ್ರಭುದೇವರ ಕಾರುಣ್ಯದಿಂದ.

೨೩೩. ಅಯ್ಯ ನಿಮ್ಮ ಅರಸು ಉಂಡ ಶಬ್ದವೆನ್ನ ಮನಕ್ಕೆ ವೇದ್ಯವಾಯಿತ್ತು. ನಿಮ್ಮ ನಿಜ ಉಂಡ ಉಲುಹು ಎನ್ನ ಮತಿಗೆ ವೇದ್ಯವಾಯಿತ್ತು. ನಿಮ್ಮ ಕರುಣ ಪ್ರಸಾದವೆನ್ನ ಸರ್ವಾಂಗಕ್ಕೆ ವೇದ್ಯವಾಯಿತ್ತು. ನಿಮ್ಮ ಕಾಯವಿಡಿದಿಪ್ಪ ಕರಸ್ಥಲದ ಕಾರಣ ಹೇಳಾ ಕಪಿಲಸಿದ್ಧಮಲ್ಲಿನಾಥಾ.

೨೩೪. ಕಾಯವೇ ಪೀಠಿಕೆ, ಪ್ರಾಣವೇ ಲಿಂಗವಾಗಿರಲು ಬೇರೆ ಮತ್ತೆ ಕುರುಹು ಏಕಯ್ಯ? ಕುರುಹುವಿಡಿದು ಕೂಡುವ ನಿರವಯಲುಂಟೆ ಜಗದೊಳಗೆ? ನಷ್ಟವ ಕೈಯ್ಯಲ್ಲಿ ಹಿಡಿದು ದೃಷ್ಟವ ಕಂಡಿಹೆನೆಂದರೆ ಕಪಿಲಸಿದ್ಧಮಲ್ಲಿನಾಥಯ್ಯನು ಸಾಧ್ಯವಹ ಪರಿಯ ಹೇಳಾ ಪ್ರಭುವೆ.

೨೩೫. ಅಯ್ಯಾ ನಿಮ್ಮ ಕರಸ್ಥಲದ ಘನಲಿಂಗವನ್ನು ಸಮೀಪಿಸಬಲ್ಲವರಿಲ್ಲವಯ್ಯ. ನಿಮ್ಮ ಮಹಿಮೆಯನರಿವರೆ ನಾನೇತರೊಳಗೆ ಅಯ್ಯಾ? ಆ ಇಷ್ಟಲಿಂಗದೊಳಗೆ ಮುಟ್ಟಿದ ಶರಣನೊಳಗೆ ಮುಟ್ಟಿದ ಕರಸ್ಥಲವೇ ಇಷ್ಟವೆಂಬುದ ತಿಳುಹಿ ಎನ್ನನುಳುಹಿಕೊಳ್ಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೩೬. ಅಯ್ಯ, ನಿಮ್ಮ ಕರಸ್ಥಲದ ಘನ ನಿಮ್ಮಲ್ಲಿರಲಿ. ಕರಸ್ಥಲವನೊಲ್ಲೆ, ಪರಸ್ಥಲವನೊಲ್ಲೆ, ಆವುದನೊಲ್ಲೆ, ನೋಡಯ್ಯ. ಕಪಿಲಸಿದ್ಧಮಲ್ಲಿನಾಥಯ್ಯ ನೀ ಒಲಿದು ಸಂಗನಬಸವಣ್ಣನ ಶ್ರೀಪಾದವ ತೋರಿಹೆನೆಂಬ ಮಾತಿಂಗೆ ಮಾರುವೋದೆನು. ಇನ್ನು ತೋರಿ ಎನ್ನನುಳುಹಿಕೊಳ್ಳಾ ಎನ್ನ ದೇವರ ದೇವಾ.

೨೩೭. ಯತ್ರಯತ್ರ ಮಾಹೇಶ್ವರರಿರ್ನಗ್ರಾಮ ತತ್ರತತ್ರ ಶಿವಲೋಕ ನೋಡಾ. ಎಲೆ ಅಯ್ಯ, ಸತ್ಯವಚನವು ತಪ್ಪುವದೆ ಎಲೆ ಅಯ್ಯ? ಕಪಿಲಸಿದ್ಧಮಲ್ಲಿನಾಥಾ ನಿಮ್ಮ ಶರಣರು ಮೆಟ್ಟಿ ನಿಂದ ಧರೆ ಪಾವನವೆಂಬುದು ಇಂದೆನಗೆ ಅರಿಯ ಬಂದಿತ್ತಯ್ಯ.

೨೩೮. ಜಗದಲ್ಲುದಯಿಸಿ ಮತ್ತೆ ಜಲವು ತಾನಲ್ಲ. ಜಲವೆಂದಿಪ್ಪರು ಲೋಕದವರು. ಪರಮಗುರು ಚನ್ನಬಸವಣ್ಣಾ ಜಗವ ಪಾಲಿಸ ಬರಲು ಎನ್ನ ಪರಿಭವದ ದಂದುಗ ಹರಿಯಿತ್ತಯ್ಯ. ಆ ಸುದ್ದಿಯಾನರಿಯ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲರು ನುಡಿವುತ್ತಿಹರು. ಸತ್ತ ಪ್ರಾಣವ ನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೆ. ಶಿವಂಗಲ್ಲದೆ? ಶಿವಗುರು ಬಸವಣ್ಣ ಬಸವಗುರು ಶಿವನಾಗಿ ದೆಸೆಗೆಟ್ಟ ದೇವತಾ ಪಶುಗಳಿಗೆ ಪತಿಯಾದನು. ಬಸವಣ್ಣನ ನೆನಹು ಸುಖಸಮುದ್ರವಯ್ಯ ಕಪಿಲಸಿದ್ಧಮಲ್ಲಿನಾಥ ಬಸವಣ್ಣನ ತೋರಿದನಾಗಿ ಬದುಕಿದೆನು.

೨೩೯. ನಿಶ್ಚಲ ಶರಣರ ಮನೆಯ ಅಂಗಳದಲ್ಲಿ ಅಷ್ಟಷಷ್ಟಿ ತೀರ್ಥಂಗಳು ನೆಲಸಿಪ್ಪವಯ್ಯ. ನೀನು ಇಸಿಸುವೆರಸಿ ಒಲಿದಲ್ಲಿ ನಿಲಸಿಪ್ಪವಯ್ಯ ಕಪಿಲಸಿದ್ಧಮಲ್ಲಿಕಾರ್ಜುನ ಪ್ರಭುವೆ.

೨೪೦. ಬಸವಣ್ಣನ ಮನೆಯ ಸ್ವಾನಂದ ನೋಡಿದರೆ ಎನ್ನ ಮನ ಬೇಸರವೋಗದೆ ಶಿವದಾಸನೆಂದು ಜೀವನ್ಮುಕ್ತನೆಂದು ಹೊಗಳುವೆನಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನ ಪ್ರಭುವೆ.

೨೪೧. ಅಯ್ಯಾ, ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯ. ನಿಮ್ಮ ಶರಣರ ಮನೆ ನೆರೆವನೆ ನೋಡಾ. ಎನಗೆ ಶಿರಿಯಾಳ ಮನೆಗಟ್ಟಿ ಬೇರೂರಿಗೆ ಒಕ್ಕಲು ಹೋದ. ದಾಸಿಮಯ್ಯ ಮನೆಗಟ್ಟಿ ವ್ಯವಹಾರ ನಾಡಿ ಹೋದ. ಸಿಂಧು ಬಲ್ಲಾಳ ಮನೆಗಟ್ಟಿ ಕೈಕೂಲಿಗಾರನಾಗಿ ಹೋದ. ಗಂಗೆ ವಾಳುಕರು ಮನೆಗಟ್ಟಿ ಲಿಂಗದ ಹೊಲಬನರಿಯದೆ ಹೋದರು. ಇವರೆಲ್ಲರು ಮನೆಯ ಮಾಡಿ ಮಹವ್ವಸ್ತುವ ನರಿಯದೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಪದವಿಗೊಳಗಾದರು. ನಿಮ್ಮ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ ಮರ್ತ್ಯ ಲೋಕವೆಲ್ಲವು ಭಕ್ತಿಸಾಮ್ರಾಜ್ಯವಾಯಿತ್ತು. ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜಲಿಂಗ ಫಲವ ಪಡೆದರು. ಆ ಗ್ರಹವ ನೋಡಬೇಕೆಂದು

ನಾನು ಹಲವು ಕಾಲ ತಪಸಿದ್ದೆನು. ಕಪಿಲಸಿದ್ಧಮಲ್ಲಿನಾಥಾ ನಿಮ್ಮ ಶರಣ ಸಂಗನಬಸವಣ್ಣನ ಮಹಾ ಮನೆಗೆ ನಮೋ ನಮೋ ಎಂದು ಬದುಕಿದೆನು.

೨೪೨. ಮನೆಯು ನೋಡಿ ಮನ ಹೊಗುವಂತಾಗಬೇಕು. ಜನ ನೋಡಿದರೆ ಘನಕೀರ್ತಿವಂತರಾಗಬೇಕು. ನಮ್ಮ ಸಂಗನ ಮನೆ ಹೊಕ್ಕರೆ ಮನವಳಿದು ಮನೋರಥ ಬಸವಣ್ಣನಂತಾಗಬೇಕು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೪೩. ಮನೆ ನೋಡಿ ಮರೆದೆನಯ್ಯ ಮಹತ್ವಗಳ. ಮನೆ ನೋಡಿ ಮರೆದೆನಯ್ಯ ಎನ್ನ ಮನೆ. ಮನೆ ನೋಡಿ ಮರೆದೆನಯ್ಯ. ಕಪಿಲಸಿದ್ಧಮಲ್ಲಿಕಾರ್ಜುನ ನಡಿಸಿದ ಹೋಮ ನೇಮ ಕೆರೆದೋಟ ಕೆಲಸಗಳು.

೨೪೪. ನಿಮ್ಮ ಶಕ್ತಿ ಆತನಲ್ಲಿಪ್ಪುದು. ಆತನ ಪ್ರಾಣ ನಿಮ್ಮಲ್ಲಿಪ್ಪುದು. ನಿಮ್ಮ ತಮ್ಮ ಭೇದವನಾರುಬಲ್ಲರು ಹೇಳಯ್ಯ? ಕಪಿಲಸಿದ್ಧ ಮಲ್ಲಿನಾಥಯ್ಯ ನಿಮ್ಮ ಶರಣ ಬಸವಣ್ಣನ ಅನುವ ನೀವೆ ಬಲ್ಲಿರಿ.

೨೪೫. ಕೇಳು ಕೇಳು ಅಯ್ಯ ಆದಿ ಅನಾದಿಯಿಲ್ಲದಂದು ಬಸವಣ್ಣನೆ ಭಕ್ತ. ಸುರಾಳ ನಿರಾಳವೆಂಬ ಶಬ್ದ ಹುಟ್ಟದ ಮುನ್ನ ನೀನೆ ಜಂಗಮ. ಈ ಉಭಯಭಾವದಲ್ಲಿ ಭೇದ ಉಂಟೆ ಕಪಿಲಸಿದ್ಧಮಲ್ಲಿನಾಥಯ್ಯ? ಬಸವಣ್ಣನ ನೆರೆ ನಂಬುದ ನಿಮ್ಮಲ್ಲಿ ನೀವೆ ತಿಳಿದು ನೋಡಿ ಕೃಪೆ ಮಾಡಾ ಪ್ರಭುವೆ.

೨೪೬. ಆದಿಯು ಮೂರ್ತಿಯಲ್ಲ. ಅನಾದಿಯು ಬಚ್ಚ ಬರಿಯ ಶೂನ್ಯವಲ್ಲ. ಅಂಗವಿದ್ದು ಅಂಗವಿಲ್ಲ. ಸಂಗ ಘನಪದದಲ್ಲಿ ವೇದ್ಯವಾದ ಮರುಳ ಶಂಕರ ದೇವರ ನಿಲವ ಪ್ರಭು ಬಸವಣ್ಣನಿಂದೆ ಕಂಡು ಬದುಕಿದೆನು.

೨೪೭. ಜ್ಞಾನವೆಂದು ವಿವಾದಿಸುವ ಅಣ್ಣಗಳಿರಾ, ಕೇಳಿರಯ್ಯ. ಜ್ಞಾನವೆಂದರೆ ಮಹತ್ವಗಳ ಮಾಡಿ ಮೆರೆದುದು ಜ್ಞಾನವೇ? ಅಲ್ಲಲ್ಲ. ಜ್ಞಾನವೆಂದರೆ ಸ್ವರ್ಗದ ವಾರ್ತೆಯ ಕೇಳಿ ಕೀರ್ತಿಯ ಹಬ್ಬಿದುದು ಜ್ಞಾನವೇ? ಅಲ್ಲಲ್ಲ. ಜ್ಞಾನವೆಂದರೆ ತತ್ಕಾಲಕ್ಕಾಗುವ ಸುಖದುಃಖಗಳ ಹೇಳಿದುದು ಜ್ಞಾನವೇ? ಅಲ್ಲಲ್ಲ. ಇವೆಲ್ಲ ಸಾಧನೆಯ ಮಾತು. ಅಘೋರಮುಖದಿಂದ ಹುಟ್ಟಿದ ಮಂತ್ರಗಳೆಲ್ಲ ಜಪಿಸಿದಲ್ಲಿ ಮಹತ್ವಗಳಾದವು. ಸೂಕ್ಷ್ಮ

ತಂತ್ರ ಗಣಿಸಿದಲ್ಲಿ ಸ್ವರ್ಗದ ವಾರ್ತೆಯ ಹೇಳಿದನು. ಪ್ರಸಂಗ ಚಿಂತಾ ಮಣಿಯ ನೋಡಿ ಸುಖದುಃಖಂಗಳ ಹೇಳಿದನು. ಇವೆಲ್ಲ ಪರಸಾಧನೆ ಯಯ್ಯಾ. ನಿನ್ನರಿವು ಕೈಕರಣವಾಗಿರೆ ದೇಹ ವಳಿದರೇನು, ದೇಹ ಧರಿಸಿ ಬಂದರೇನು ಎಲೆ ಅಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ?

೨೪೮. ವಾಕ್ಸಿದ್ಧಿಯುಳ್ಳವರು ಕೋಟಾನುಕೋಟಿ. ಮನೋರಥ ಸಿದ್ಧಿಯುಳ್ಳವರು ಕೋಟಾನುಕೋಟಿ. ಭಾವಸಿದ್ಧಿಯುಳ್ಳವರು ಕೋಟಾ ನುಕೋಟಿ. ನಿಮ್ಮ ಸಿದ್ಧಿಯುಳ್ಳವರು ಇಲ್ಲ ಕಂಡಯ್ಯಾ ಕಪಿಲಸಿದ್ಧಮಲ್ಲಿ ಕಾರ್ಜುನಾ.

೨೪೯. ವಾಕ್ಸಿದ್ಧಿಯಿಂದ ದೋಷ ಉಂಟು. ವಾಕ್ಸಿದ್ಧಿಯಿಂದ ಪುಣ್ಯ ಉಂಟು. ದೋಷದಿಂದ ಭವಕ್ಕೆ ಬೀಜ. ಪುಣ್ಯದಿಂದ ಪದಕ್ಕೆ ಬೀಜ. ಇವೆಲ್ಲ ಪ್ರಳಯದಲ್ಲಿ ನಿತ್ಯ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೫೦. ಚರಿತ್ರಗಳೋದುವದೇ ವಾಕ್ಸಿದ್ಧಿ. ಭವವಳಿದು ಭಾಷಣೆಯ ಮಾಡುವುದೇ ವಾಕ್ಸಿದ್ಧಿ. ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಪಾದೋ ದಕ ಪ್ರಸಾದವ ಸ್ವೀಕರಿಸುವದದೆ ವಾಕ್ಸಿದ್ಧಿ ಕಂಡಯ್ಯಾ ಅಣ್ಣ ಮಡಿವಾಳ ಮಾಚಯ್ಯಾ.

೨೫೧. ಆತನ ಸುಖದುಃಖವೀತಗೇನು? ಈತನ ಸುಖದುಃಖವಾ ತಗೇನು? ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಅರುವ ಸಂತೈಸಿಕೊಳ್ಳಿ. ರಂಭೆ ಎಂದರೆ ನಿನ್ನಂಗನೆಯಾಗಲಿಲ್ಲವು. ಒಂದು ದಿನ ಸ್ವಪ್ನದಲ್ಲಾದರೂ ರತಿಸಲಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೫೨. ಕಲ್ಪವೃಕ್ಷಕ್ಕೆ ಸಮ ಮಾಡಿ ಹೇಳಿದೆನಯ್ಯಾ. ಕರಸ್ಥಲದ ಮಹಾ ಲಿಂಗ ಮೂರ್ತಿಗೆ ಅಲ್ಲಲ್ಲಿ ಕಲ್ಪಿಸಿ ಬೇಡಿದರೆ ಕೊಡುವದದು ಸುರಾವೃತವ. ವೃತ ಬೇಡಿದಡೆ ಕೊಡುವದಯ್ಯಾ ಭವದ ಗೋಳಾಟ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೫೩. ನುಡಿದ ನಡೆ ಸಮನಿಸಿತ್ತಯ್ಯಾ ಸಂಗನಬಸವಣ್ಣಂಗೆ. ನುಡಿದ ನಡೆ ಸಮನಿಸಿತ್ತಯ್ಯಾ ಪ್ರಭುವಿಂಗೆ. ನಡಿಸಿದ ನಡೆ ಸಮನಿಸದಯ್ಯಾ ನಿಮ್ಮಾತ್ರಂಗಲ್ಲದೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೫೪. ಬ್ರಹ್ಮನ ಪೂಜಿಸಿ ಸೃಷ್ಟಿಗೊಳಗಾಗುವದು ಬಲ್ಲೆ. ರುದ್ರನ ಪೂಜಿಸಿ ಲಯಕ್ಕೊಳಗಾಗುವದ ಬಲ್ಲೆ. ನಮ್ಮಿಷ್ಟಲಿಂಗ ಮೂರ್ತಿಯ

ಪೂಜಿಸಿ ಲಿಂಗವಾಗಿ ಸರ್ವವಳಿವುದ ಬಲ್ಲೆ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೨೫೫. ನಾಲ್ಕು ಯುಗಂಗಳು ಸಹಸ್ರ ವೇಳೆ ತಿರುಗಿದರೆ ಬ್ರಹ್ಮಗೊಂದು ದಿನ. ಬ್ರಹ್ಮನಂದು ಸಹಸ್ರ ವೇಳೆ ತಿರುಗಿದರೆ ವಿಷ್ಣುವಿಂಗೊಂದು ಗಳಿಗೆ. ವಿಷ್ಣು ತಾನು ಹನ್ನೆರಡು ಲಕ್ಷ ತಿರುಗಿದರೆ ಮಹೇಶ್ವರನಿಗೊಂದು ನಿಮಿಷ. ಅಂತಪ್ಪ ಮಹೇಶ್ವರರನೇಕ ಲೀಲೆ ಧರಿಸಿದಲ್ಲಿ ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಪೂಜೆ ಸಮಾಪ್ತಿ ನೋಡಯ್ಯ ಬಾಚರಸರೆ.

೨೫೬. ಹಸಿವು ತೃಷೆಯುಳಿದಡೇನು? ಭಕ್ತನಪ್ಪನೆ? ಅಲ್ಲಲ್ಲ. ಅಷ್ಟ ಮಹಾ ಸಿದ್ಧಿಯುಳ್ಳಡೇನು? ಭಕ್ತನಪ್ಪನೆ? ಅಲ್ಲಲ್ಲ. ತನು ಬಯಲಾಗಿ ಚತುರ್ವಿಧ ಪದಸ್ಥನಾಗಿ ಕೈಲಾಸದಲ್ಲಿದ್ದಡೇನು? ಭಕ್ತನಪ್ಪನೆ? ಅಲ್ಲಲ್ಲ. ಗಿಡಗಳ ತಿಂದ ಬಳಿಕ ಹಸಿವು ತೃಷೆದೋರದು. ಯೋಗವಂಗವಾದ ಬಳಿಕ ಸ್ವೇಚ್ಛಾಚಾರ ಬಿಡದು. ಅಘೋರ ತಪ ಮಾಡಿದ ಬಳಿಕ ಮಹಾ ಸಿದ್ಧಿಗಳು ಬಿಡವು. ಒಂದೊಂದರಿಂದೊಂದು ಸಿದ್ಧಿ. ಅಂಗ ಮೂರರಲ್ಲಿ ಲಿಂಗ ಸಂಬಂಧವಾಗಿ ಲಿಂಗ ಮೂರರಲ್ಲಿ ವಸ್ತುತ್ರಯವ ಪೂಜಿಸಿ ತತ್ಪ್ರಸಾದ ಗ್ರಾಹಕ ಭಕ್ತನಲ್ಲದೆ ಬಾಲಬ್ರಹ್ಮಿಗೆ ಭಕ್ತನೆನ್ನಬಹುದೇನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೨೫೭. ತನು ಕೊಡುವಡೆ ಗುರುವಿನದು. ಮನ ಕೊಡುವಡೆ ಲಿಂಗದ್ದು. ಧನ ಕೊಡುವಡೆ ಜಂಗಮದ್ದು. ಅವರ ಪದಾರ್ಥವ ಅವರಿಗೆ ಕೊಟ್ಟು ಭಕ್ತನಾದೆವೆಂಬವರ ಹಿರಿಯತನದ ಕೇಡು ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೨೫೮. ತನು ಕೊಟ್ಟ ಬಳಿಕ ದೇಹವೆಲ್ಲಿಹದೊ? ಧನ ಕೊಟ್ಟ ಬಳಿಕ ಭೋಗಗಳೆಲ್ಲಿಹವೊ? ಇವೆಲ್ಲ ಬರಿಯ ಭ್ರಮೆ. ಕೊಟ್ಟೆವೆಂಬವರ ಮುಖವ ನೋಡಲಾಗದು. ಕೊಟ್ಟು ಭಕ್ತನಾದೆನೆಂಬ ನುಡಿ ಸಮನಿಸದಯ್ಯ ಗುರುವೆ ನಿಮ್ಮ ಶರಣರ ಬುದ್ಧಿಗೆ ಕಪಿಲಸಿದ್ಧಮಲ್ಲಿಕಾರ್ಜುನಾ.

೨೫೯. ಜಲದಲ್ಲಿ ನೊರೆ ತೆರೆ ಬುದ್ಬುದವಿದ್ದಂತೆ, ಕನಕದಲ್ಲಿ ಅಲಂಕಾರವಿದ್ದಂತೆ ಬೀಜದಲ್ಲಿ ಎಲೆ ಶಾಖೆ ಬೀಜವಿದ್ದಂತೆ ಒಂದೇ ವಸ್ತುವಿನಲ್ಲಿ ಗುಣತ್ರಯವಾದವು. ಗುಣತ್ರಯದಿಂದ ಮಲತ್ರಯಂಗಳಾದವು. ಮಲ

ತ್ರಯಂಗಳಿಂದೆ ಲೋಕ ರಚನೆ ಹೆಚ್ಚಿತ್ತು. ಲೋಕ ರಚನೆ ಹೆಚ್ಚಿದಲ್ಲಿ ಪಾಪ ಪುಣ್ಯಗಳಾದವು. ಪಾಪ ಪುಣ್ಯಗಳಿಂದೆ ಸ್ವರ್ಗ ನರಕವೆಂದಾ ಯಿತ್ತು. ಸ್ವರ್ಗ ನರಕದಿಂದ ಬೇಧವಾಗಿ ಕೆಟ್ಟ ಕೇಡು ನೋಡಿ ತನ್ನ ಮಾಯೆ ಸೆಳೆದನು. ಸೆಳೆವಲ್ಲಿ ಸರ್ವವು ಲಯವಾಗಿ ನೀನೊಬ್ಬನೆ ಉಳಿದೆ. ಉಳಿದೆ ಎಂಬುದು ಶಾಸ್ತ್ರಪ್ರಸಿದ್ಧ. ಸಮುದ್ರದ ನೀರು ಮೇಘವಾಗಿ ಮೇಘದ ನೀರು ಹಳ್ಳ ಕೊಳ್ಳವಾಗಿ ಮತ್ತೆ ಸಮುದ್ರವಾದಂತೆ ನೀನಾ ದರೂ ಆದರಂತೆ ಒಂದೇ ಸ್ಥಲದಲ್ಲಿ ನಿಂತು ನೋಡಲೊಲ್ಲದೆ ಅನೇಕ ಸ್ಥಾನಗಳ ಧರಿಸಿ ಹೋಗುವುದದು ಉಚಿತವಲ್ಲ, ಎಲೆ ಜೀವನೆ ಎಂದು ಬೋಧಿಸಿದ ಸದ್ಗುರು ಚನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೬೦. ನಿನ್ನ ದೇಹ ನೋಡುವಡೆ ಪಂಚ ಭೌತಿಕ. ನೀ ನೋಡು ವಡೆ ಜೀವಾಂಶಿಕ. ನಿನ್ನ ಧನ ನೋಡುವಡೆ ಕುಬೇರನದು. ನಿನ್ನ ಮನ ನೋಡುವಡೆ ವಾಯುವ ಕೂಡಿದ್ದು ವಿಚಾರಿಸಿ ನೋಡಿದರೆ ಬ್ರಹ್ಮನದು. ನಾ ಮಾಡುವೆನೆಂದಡೆ ಅದು ಆದಿಶಕ್ತಿ ಚೈತನ್ಯ. ನಾ ತಿಳಿದಿಹೆನೆಂದಡೆ ಅದು ಜ್ಞಾನದ ಬಲ. ಆ ಜ್ಞಾನವು ನಾ ಎಂದಡೆ ಇದಿರಿಟ್ಟು ತೋರುತ್ತಿದೆ. ತೋರುವ ಆನಂದ ಮೂರ್ತಿ ನಾ ಎಂದಡೆ ಅದು ಸಾಕ್ಷಿಯಾಗಿ ನಿಂದಿತ್ತು. ಸಾಕ್ಷಿ ಎಂಬುದದು ತಿಳಿದು ತಿಳಿಯದೆಂಬುದಕ್ಕೆ ಬಯಲಾದ ನಮ್ಮ ಕಪಿಲ ಸಿದ್ಧಮಲ್ಲಿಕಾರ್ಜುನ ತಂದೆ.

೨೬೧. ತಿಳಿದು ತಿಳಿದು ಸಾಕ್ಷಿಯಾದರೆ ತಾ ಉಳಿಯಲಿಲ್ಲ ನೋಡ ಯ್ಯ. ಉಳಿಯಲಿಲ್ಲ ಉಳಿಯಲಿಲ್ಲವೆಂದಡೆ ಈ ಶಬ್ದವೆಲ್ಲಿಹುದಯ್ಯ? ವಿಚಾ ರದಿಂದೊಳಗಾಗುವದು ಅವಿವೇಕದಿಂದ ದೂರಾಗುವದು. ಸರ್ವ ಜಗ ದ್ರೂಪು ನಿಮ್ಮದೆಂದು ನಂಬಿ ಸಕಲ ಲೋಕಾಲೋಕಕ್ಕೆ ಕೈ ಮುಗಿದೆ ನೋಡಾ ಕಪಿಲಸಿದ್ಧಮಕಾರ್ಜುನಾ.

೨೬೨. ಉಪದೇಶ ಮಾಡಿದಲ್ಲಿ ಗುರುವೆನಿಸಿದನು. ಕಾಮಿತ ಫಲಂ ಗಳ ಕೊಟ್ಟಲ್ಲಿ ಲಿಂಗಮೂರ್ತಿ ಎನಿಸಿದನು. ನಿತ್ಯ ನಿರ್ವಾಣದ ಸಕೀಲವ ತೋರಿದಲ್ಲಿ ಜಂಗಮವೆನಿಸಿದನಯ್ಯ, ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೬೩. ಲಿಂಗ ನೋಡಿದಡೆ ಮೈಗೊಟ್ಟದಯ್ಯ ಷೋಡಶೋಪಚಾ ರಗಳಿಗೆ. ಜಂಗಮ ನೋಡುವಡೆ ಮೈಗೊಟ್ಟನಯ್ಯ ನಿರಾಕಾರಕ್ಕೆ. ಗುರು

ನೋಡುವಡೆ ಭವದ ಬೇರು ಅಳಿಯಬೇಕೆಂದು ಸಾಕಾರವಾಗಿ ನಿಂದು ನೋಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

೨೬೪. ಗುರುವಿನಿಂದ ಲಿಂಗವ ಕಂಡೆನಲ್ಲದೆ ಲಿಂಗದಿಂದ ಲಿಂಗವ ಕಾಣಲಿಲ್ಲಯ್ಯಾ. ಲಿಂಗದಿಂದ ಫಲಪದವಿಗಳ ಕಂಡೆನಲ್ಲದೆ ಫಲಪದಂಗಳಿಂದೆ ಫಲಪದವಿಗಳ ಕಾಣಲಿಲ್ಲವಯ್ಯಾ. ಜಂಗಮದಿಂದ ಮೋಕ್ಷವ ಕಂಡೆನಲ್ಲದೆ ಮೋಕ್ಷದಿಂದ ಮೋಕ್ಷವ ಕಾಣಲಿಲ್ಲಯ್ಯ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೬೫. ಕೆರೆಯ ನೀರು ಮರದಲ್ಲಿಯ ಪುಷ್ಪವ ಧರಿಸಿದರೇನು ಅಯ್ಯಾ? ಆಗುವದೆ ಆಗುವದೇ ಲಿಂಗಾರ್ಚನೆ? ನೀರನೆರಿಯಲಿಕ್ಕಾತನೇನು ಬಿಸಿಲಿನಿಂದ ಬಳಲಿದನೆ? ಪುಷ್ಪದಿಂದ ಧರಿಸಲಿಕ್ಕಾತನೇನು ವಿಟರಾಜನೆ? ನಿನ್ನ ಮನನೆಂಬ ನೀರಿಂದ ಜ್ಞಾನವೆಂಬ ಪುಷ್ಪದಿಂದ ಪೂಜಿಸಬಲ್ಲರೆ ಭಕ್ತನೆಂಬೆ ಮಹೇಶ್ವರನೆಂಬೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೬೬. ದೇಹ ಕಂದಿದರೇನು? ದೇಹ ಇಂದುವಿನಂತಾದರೇನು? ದೇಹ ಬಾತುಬಿದ್ದರೇನು? ದೇಹ ಇದ್ದ ಯೋಗ್ಯತೆಗೆ ವೈಗೊಟ್ಟರೇನಯ್ಯಾ? ಅಂತರಂಗ ಶುದ್ಧವಾದ ಬಳಿಕ ಹೇಗಿದ್ದರೇನಯ್ಯಾ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೬೭. ದೇಹ ಸಿದ್ದೇಹಿಗೊಪ್ಪಿಸಿದಲ್ಲಿ ದೇಹ ನಿರ್ದೇಹವಾಯಿತ್ತು. ಮನ ಲಿಂಗಕ್ಕರ್ಪಿಸಿದಲ್ಲಿ ಮನ ಲಿಂಗವಾಗಿ ಮನ ಲಯವಾಯಿತ್ತು. ಭಾವ ತೃಪ್ತಿಗರ್ಪಿಸಿ ಭಾವ ಬಯಲವಾಯಿತ್ತಯ್ಯಾ. ದೇಹ ಮನ ಭಾವವಳಿದಲ್ಲಿ ಕಾರಣ ಕಾಯ ಅಕಾಯವಾಯಿತ್ತು. ಎನ್ನ ದೇಹದ ಸುಖವ ಲಿಂಗ ಭೋಗಿಸುವದಾಗಿ ಶರಣ ಸತಿ ಲಿಂಗ ಪತಿ ಎಂಬ ಭಾವ ಅಳವಟ್ಟಿತ್ತಯ್ಯಾ ಎಲೆ ಕಪಿಲಸಿದ್ಧಮಲ್ಲಿಕಾರ್ಜುನ.

೨೬೮. ಗಂಧ ವೃಕ್ಷವ ಕಡಿದಲ್ಲಿ ನೊಂದೆನೆಂದು ಗಂಧವ ಬಿಟ್ಟಿತ್ತೆ ಅಯ್ಯಾ? ಚಂದ ಸುವರ್ಣವ ತಂದು ಕಾಸಿಬಡಿದೊಡೆ ನೊಂದೆನೆಂದು ಕಳಂಕ ಹಿಡಿಯಿತ್ತೆ ಅಯ್ಯಾ? ಸಂದು ಸಂದು ಕಡಿದ ಕಬ್ಬು ಯಂತ್ರದಲ್ಲಿಟ್ಟು ತಿರುಹಿ ಕಾಸಿದರೆ ನೊಂದೆನೆಂದು ಸಿಹಿಯಾಗುವದ ಬಿಟ್ಟಿತ್ತೆ ಅಯ್ಯಾ? ತಂದು ತಂದು ಭವಕಟ್ಟಿ ಬಿಟ್ಟರೆ ನಿಮ್ಮರಿವು ಬಿಟ್ಟನೆ ಅಯ್ಯಾ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

೨೬೯. ಎಂದಿಪ್ಪೆನಯ್ಯ ಲಿಂಗ ಪೂಜೆಯ ಮಾಡುತ್ತ ಎಂದಿಪ್ಪೆನಯ್ಯ ಜಂಗಮವನರ್ಚಿಸುತ್ತ ಎಂದಿಪ್ಪೆನಯ್ಯ? ಪ್ರಮಥ ಭೋಜನ ಪಂಕ್ತಿಯಲ್ಲಿ ಎಂದಿಪ್ಪೆನಯ್ಯ ನಮ್ಮ ಚನ್ನಬಸವಣ್ಣನ ಪಾದೋದಕ ಪ್ರಸಾದವ ಸೇವಿಸುತ್ತ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ?

ಪ್ರಭುದೇವರು ಸಿದ್ಧರಾಮದೇವರನು ಕಲ್ಯಾಣಕ್ಕೆ ಕರಕೊಂಡು ಹೋಗಿ ಕೆಲವು ವಚನಗಳಿಂದ ತಾನು ಸಿದ್ಧರಾಮೇಶ್ವರನಿಗೆ ಲಿಂಗ ವಿರಹಿತ ಅಂಗಕ್ಕೆ ಮೋಕ್ಷವಿಲ್ಲೆಂದು ಹೇಳಿ ಬಸವಣ್ಣ ಚನ್ನಬಸವಣ್ಣ ಮಡಿವಾಳ ಮಾಚಿ ಮೊದಲಾದ ಶರಣರಿಂ ಧಿಕ್ಕರಿಸಿ ನುಡಿಸಿದಲ್ಲಿ ಸಿದ್ಧರಾಮೇಶ್ವರ ದೇವರು ತಮ್ಮ ಜ್ಞಾನದೃಷ್ಟಿಯಿಂದರಿದರಿದು ಅವರೊಡನೆ ಎನಗೆ ಇಷ್ಟಲಿಂಗವ ಸಂಬಂಧವ ಮಾಡಬೇಕೆಂದು ಹಾಡಿದ ವಚನಗಳು ಅದೆಂತೆಂದೊಡೆ

೨೭೦. ಸ್ಥೂಲವಾದಡೇನು ಸೂಕ್ಷ್ಮವಿಲ್ಲದನ್ನಕ್ಕರ? ಕಳೆಯುಳ್ಳವರಾದರೇನು ಕುಲವಿಲ್ಲದನ್ನಕ್ಕರ? ಜಲವಾದರೇನು ಸ್ಥಲ ಯೋಗ್ಯವಲ್ಲದನ್ನಕ್ಕರ? ಆ ಕಲಿ ಮಹಿಮನಾದರೇನು ಕಲಾಮೂರ್ತಿ ಇಷ್ಟಲಿಂಗವಿಲ್ಲದನ್ನಕ್ಕರ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೨೭೧. ಎಂದಿಪ್ಪೆನಯ್ಯ ಲಿಂಗ ಪೂಜೆಯ ಮಾಡುತ್ತ? ಎಂದಿಪ್ಪೆನಯ್ಯ ಜಂಗಮವನರ್ಚಿಸುತ್ತ? ಎಂದಿಪ್ಪೆನಯ್ಯ ಪ್ರಮಥ ಸಹಭೋಜನ ಪಂಕ್ತಿಯಲ್ಲಿ? ಎಂದಿಪ್ಪೆನಯ್ಯ ನಮ್ಮ ಚನ್ನಬಸವಣ್ಣನ ಪಾದೋದಕ ಪ್ರಸಾದವ ಸೇವಿಸುತ್ತ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

ಸಿದ್ಧರಾಮೇಶ್ವರನ ಭಕ್ತಿಭಾವಕ್ಕೆ ಮೆಚ್ಚಿ ಸರ್ವರೂಪಾಗಿ ನಿಂದ ಚನ್ನಬಸವಣ್ಣ ತಾನು ಉಪದೇಶಮಾಡಿ ದೀಕ್ಷಾತ್ರಯಂಗಳಿಂ ಲಿಂಗಧಾರಣ ಮಾಡಲಾ ಸಮಯದೊಳು ಹಾಡಿದ ವಚನ.

೨೭೨. ನಂಬಿದೆನಯ್ಯ ಲಿಂಗವ ನೋಡಿ. ನಂಬಿದೆನಯ್ಯ ಲಿಂಗದೊಡಗೂಡಿ. ನಂಬಿದೆನಯ್ಯಾ ನಾನೆ ಚನ್ನಬಸವಣ್ಣನೆಂದು ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೭೩. ಇನ್ನು ಹೊಗಳುವೆನಯ್ಯ ಲಿಂಗದ ಕುಲಾವಳಿಗಳನೆತ್ತಿ. ಇನ್ನು ಹೊಗಳುವೆನಯ್ಯ ಜಂಗಮದ ಜ್ಞಾನವ ಕಂಡು. ಇನ್ನು ಹೊಗ

ಳುವೆನಯ್ಯ ಚೆನ್ನಬಸವಣ್ಣನೆಂಬ ಪರಾತ್ಪರ ಗುರು ಮೂರ್ತಿಯ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೭೪. ಮಾಡಬೇಕು ಮಾಡಬೇಕು ಮನ ಒಲಿದು ಲಿಂಗಪೂಜೆಯ. ನೋಡಬೇಕು ನೋಡಬೇಕು ಮನ ಒಲಿದು ಲಿಂಗ ಸಂಭ್ರಮವ. ಹಾಡಬೇಕು ಹಾಡಬೇಕು ಮನ ಒಲಿದು ಲಿಂಗಸ್ತೋತ್ರವ. ಕೂಡಬೇಕು ಕೂಡಬೇಕು ಕಪಿಲಸಿದ್ಧ ಮಲ್ಲಿಕಾರ್ಜುನ ಎನ್ನ ಗುರು ಚೆನ್ನಬಸವಣ್ಣ ಕೊಟ್ಟ ಇಷ್ಟಲಿಂಗದ ಅಡಿಯಲ್ಲಿ.

೨೭೫. ಮಾಡುವೆನಯ್ಯ ಪೂಜೆಗೆಂದು ದ್ರವ್ಯನಾಶವನು. ನೋಡುವೆನಯ್ಯ ಲಿಂಗ ಸಂಭ್ರಮಕೆಂದು ಪೂದೋಟಗಳ. ಹಾಡುವೆನಯ್ಯ ನಾಟರಚನೆಗೆಂದು ಗಾನವ. ಕೂಡುವೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಇಷ್ಟಲಿಂಗದಲ್ಲಿ.

೨೭೬. ಮದ್ದು ತಿಂದ ಮನುಜನಂತೆ ವ್ಯರ್ಥ ಹೋಗದಿರಾ ಮನವೆ. ವರ್ಷದಲಾದರೂ ಒಂದು ದಿವಸ ಶಿವರಾತ್ರಿಯ ಮಾಡು ಮನವೆ ಕಪಿಲಸಿದ್ಧಮಲ್ಲೇಶನೆಂಬ ಇಷ್ಟಲಿಂಗಕ್ಕೆ

೨೭೭. ಲೋಕದಲ್ಲಿ ಸಾರ್ವಭೌಮರು ತಮ್ಮ ರಾಣಿಯರಿಗೆ ಮೈಗೊಟ್ಟರಲ್ಲದೆ ಮೂಲೋಕದರಸ ಎನ್ನ ಕಪಿಲಸಿದ್ಧಮಲ್ಲೇಶನೆಂಬ ಇಷ್ಟಲಿಂಗಕ್ಕೆ ಮೈಗೊಡದೆ ಭವಕ್ಕೀಡಾದರು ಮನವೇ ತಿಳಿ ನೀನು ಕಂಡ್ಯಾ.

೨೭೮. ನೋಡಯ್ಯ ನೋಡಯ್ಯ ಲಿಂಗದ ಮಹಿಮೆಯ. ತಾನು ಸೋಂಕಿ ಎನ್ನ ಕಳೆದ. ಎನ್ನ ಸೋಂಕಿ ತಾನೆ ಉಳಿದ ನೋಡಯ್ಯ. ನೋಡಯ್ಯ ಲಿಂಗದ ಮಹಿಮೆಯ. ತಾನೆಂಬುದನುಳುಹದೆ ನಿಃಶೂನ್ಯನಾಗಿ ನಿಂದ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

೨೭೯. ಲೋಕದಲ್ಲಿ ವಿಟರೆಲ್ಲ ವಾರಾಂಗನೆಯ ನೋಡಿದರಲ್ಲದೆ ನಮ್ಮ ವಾರಾಂಗನನೊಬ್ಬರು ನೋಡಲಿಲ್ಲಯ್ಯ. ಲೋಕದಲ್ಲಿಹ ಕುಶಲರೆಲ್ಲ ಜಂಗಮದೊಂದಿಗೆ ನುಡಿದರಲ್ಲದೆ ಎಮ್ಮ ಲಿಂಗನನೊಂದಿ ಒಬ್ಬರು ನುಡಿದವರಿಲ್ಲ ಕಂಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನ ನಾನೊಬ್ಬನೆ ಪ್ರಮಥರ ಮುಂದೆ.

೨೮೦. ಲಿಂಗಾರ್ಚನಾತ್ಪರಂ ಪೂಜ್ಯಮೆಂಬ ಶಾಖೆಯು ಇಂದನು ಭವಕ್ಕೆ ಬಂದಿತ್ತಯ್ಯ. ಲಿಂಗಾಗೀ ಪರಮೋ ಶುಚಿಃ ಎಂಬ ಸಾಮವೇದ

ಶಾಖೆ ಸಮನಿಸಿತ್ತಯ್ಯಾ. ಮುನ್ನ ಮಾಡಿದ್ದೇ ಮಾಡಿವೆ ಹೋಮವನಿನ್ನು ಮಾಡಿದಡೆ ತಲೆದಂಡ ಕಪಿಲಸಿದ್ಧಮಲ್ಲಿಕಾರ್ಜುನಾ.

೨೮೧. ಲಿಂಗಬಂದು ಲಿಂಗಗಳಳಿಯಿತ್ತಯ್ಯಾ. ಲಿಂಗವೆ ಲಿಂಗ ಬಂದು ಲಿಂಗಗಳೀಡಾಡಿತ್ತಯ್ಯಾ. ಲಿಂಗವೆ ಲಿಂಗಬಂದು ಲಿಂಗ ಉಳಿಯಿತ್ತಯ್ಯ ಲಿಂಗವೆ ಗುರು ಲಿಂಗವೆ ಜಂಗಮ ಲಿಂಗವೆ ನಾನು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೮೨. ದರ್ಪಣದಲ್ಲಿ ಮುಖವ ನೋಡುವರಲ್ಲದೆ ದರ್ಪಹರನಲ್ಲಿ ಮುಖವ ನೋಡುವರೊಬ್ಬರು ಇಲ್ಲ ನೋಡಯ್ಯಾ. ನ್ಯಾಯದಲ್ಲಿ ದ್ರವ್ಯವ ಕೊಡುವರಲ್ಲದೆ ನ್ಯಾಯಾತೀತನ ಪೂಜೆಗೆ ಒಬ್ಬ ಭಂಡಾರವೀಡಾಡಲಿಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನಗಳ್ಳರೂ.

೨೮೩. ಪುಣ್ಯಪಾಪಗಳೆಂಬುವ ದಾರಿಗರಿಕೆಯುಂಟಯ್ಯ? ಪುಣ್ಯವಂತಿರಲಿ, ಪಾಪವಂತಿರಲಿ, ಪೂಜಿಸಿ ಪಡೆವುದದು ಪುಸಿಯಲ್ಲ. ಇದು ಕಾಕು ಭಾಷೆ ಎಂದಲ್ಲಿ ಪೂಜಿಸಿದವಂಗೆ ಸಂಪದಾದಿಶಕ್ತಿ ಮುಕ್ತಿ ಬರುವದೇನಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೮೪. ಆಗುವದಾದರೆ ನಿನ್ನ ಪೂಜೆಯದೇಕೊ ಲಿಂಗ ಲಿಂಗಯ್ಯ? ಯಥಾ ಭಾವಸ್ತಥಾ ದೇವ ಎಂಬ ಭಾವವಿದ್ದೆಡೆಯಲ್ಲಿ ಆದಂತಾಗಲಿ ಹೋದಂತೆ ಹೋಗಲಿ. ನಿಮಗೆ ಪೂಜಿಸಿದವರಿಗೆ ಸಂಪದಾದಿ ಮಹದೈಶ್ವರ್ಯ ತಪ್ಪದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೮೫. ಅಂಗಕ್ಕೆ ಕೊಡುವ ಭೋಗಂಗಳ ಲಿಂಗಕ್ಕೆ ಕೊಟ್ಟು ನೋಡಿರಯ್ಯ. ಲಿಂಗಕ್ಕೆ ಕೊಟ್ಟ ಭೋಗಂಗಳು ಅಂಗಂಗಳಾದವು. ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎನ್ನ ಭೋಗಂಗಳು ಲಿಂಗಭೋಗಂಗಳು.

೨೮೬. ಅಂಗವೆಂದರೆ ಅಜ್ಞಾನ, ಲಿಂಗವೆಂದರೆ ಸುಜ್ಞಾನ. ಲಿಂಗ ವಿಡಿದು ಆಚರಿಸುವದಲ್ಲದೆ ಅಂಗವಿಡಿದು ಆಚರಿಸಬಾರದು ಬಸವಾದಿ ಪ್ರಮಥರು.

೨೮೭. ಲಿಂಗದಲ್ಲಿ ಬೆರೆದಲ್ಲಿ ಬೆರೆದ ಬಳಿಕ ಅಂಗದಲ್ಲಿ ಬೆರೆಯಲುಂಟೆ ದೇವಾ? ಎಲೆ ಅಲ್ಲಲ್ಲ. ಅಂಗದಲ್ಲಿ ಬೆರೆದ ಬಳಿಕ ಲಿಂಗ ಬೆರೆಯಲುಂಟೆ

ದೇವಾ ಕಪಿಲಸಿದ್ಧಮಲ್ಲಿಕಾರ್ಜುನಾ ನಿಮ್ಮ ಪೂಜಿಸಿದ ಫಲ ಪಕ್ವವಾಗ ದನ್ನಕ್ಕ?

ಪ್ರಭುದೇವರ ಸನ್ನಿಧಿಯಲ್ಲಿ ಬಿನ್ನೈಸಿದ ವಚನ.

೨೮೮. ಭೂಮಿ ಒಂದಾದರೆ ಬೆಳೆವ ವೃಕ್ಷ ಹಲವು ತೆರನುಂಟು. ಉದಕ ಒಂದಾದಡೆ ಸವಿ ಸಾರ ಸಂಪದ ಬೇರುಂಟು. ನಿನ್ನೊಳಗೆ ನಾನಾ ದಡೆ ತಾಮಸದ ರಾಗ ವಿರಾಗವಾಗದು. ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗ ವೆಂಬ ಪುರುಷ ರತಿ ಕೂಟಸ್ಥವಿಲ್ಲ.

ಕಲ್ಯಾಣದ ಮಹಾ ಮನೆಯಲ್ಲಿ ಹಾಡಿದ ವಚನ॥

೨೮೯. ಎಲೆ ದೇವಾ ಒಂದು ಹೋಗಿ ಎರಡಾದುದು, ಎರಡು ಹೋಗಿ ಮೂರಾದುದು, ಮೂರು ಹೋಗಿ ಮೂವತ್ತಾರಾದುದು, ಮೂವ ತ್ತಾರಾಗಿ ಮೂರರಲ್ಲಿ ಆಡಿದುದು ಆಡಿ ಆಡಿ ಅರೆ ಲಿಂಗವಾಯಿತ್ತು. ನಮ್ಮ ಗುರು ಚನ್ನಬಸವಣ್ಣನೊಂದು ಕೊಟ್ಟಲ್ಲಿ ಎಲ್ಲ ಒಂದೇ ಆಯಿತ್ತು ಕಪಿಲಸಿದ್ಧಮಲ್ಲಿಕಾರ್ಜುನಾ.

೨೯೦. ಅಂಗ ಒಂದಾದ ಬಳಿಕ ಲಿಂಗೇಂದ್ರಿಯಂಗಳಾಚರಿಸಲಾ ಗದು. ಅಂಗೇಂದ್ರಿಯಂಗಳು ಹೋಗಿ ಲಿಂಗೇಂದ್ರಿಯಂಗಳಾಗಿ ಆಚರಿ ಸುವದು. ಘೃತೋ ಭೂತ್ವಾ ಕಥಂ ಕ್ಷೀರಂ ಭವತ್ಯೇವಂ ವರಾನನೆ ಎಂಬಾ ಗಮೋಕ್ತ ಪುಸಿಯಾಯಿತ್ತೆ ಆಗಿ ಆಚರಿಸಿದರೆ ಭವ ಹಿಂಗದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೯೧. ವೀರನಾದರೆ ವೈರಿಗಳ ಕಾಟ ಬಹಳವಯ್ಯ. ದಾನ ಶೂರ ನಾದರೆ ಯಾಚಕರ ಗೋಳು ಬಹಳವಯ್ಯ. ಅತಿ ರೂಪನಾದರೆ ಅಂಗ ನೆಯರ ಕಾಟ ವಿಶೇಷವಯ್ಯ. ಮೂರರಲ್ಲಿ ನಿಂತರೆ ಮಲತ್ರಯಂಗಳ ಘೋರ ಹೆಚ್ಚಾಯಿತ್ತಯ್ಯ. ಅಂಗದಲ್ಲಿ ಲಿಂಗಸಂಬಂಧವಾಗಬಾರದು. ಆದ ಬಳಿಕ ವೀರನಾಗಿ ವಿಷಯಗಳಳಿವುದು ಬಹುಘೋರವು ಬಹು ಘೋರವು ನೋಡಯ್ಯ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೯೨. ಮರ್ಮವನರಿಯದವರಿಗೆ ನಿಮ್ಮವರು ಸುಲಭವೇ ಅಯ್ಯ? ಲೋಕದಲ್ಲಿ ಲಿಂಗಭಕ್ತಿ ಜಂಗಮಭಕ್ತಿ, ಗುರುಭಕ್ತಿ ಸುಲಭವೇ ಅಯ್ಯ? ಲಿಂಗಭಕ್ತ ಪ್ರಭುದೇವರು ಜಂಗಮ ಭಕ್ತ ಬಸವಣ್ಣ ಗುರು ಮೊದ

ಲಾದ ಸರ್ವ ಪ್ರಸಾದಕ್ಕೆ ಅನುಭಾವಿ ಚನ್ನಬಸವಣ್ಣ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

೨೯೩. ಇಂತೀ ಭಕ್ತಿಸ್ಥಲದ ವರ್ಮವನು ಲೋಕಕ್ಕೆ ನಿಶ್ಚಿಂತವಮಾಡಿ ತೋರಿದ ತನ್ನ ಪದದುನ್ನತವಹ ಏಕೈಕಸದ್ಭಾವರಿಗಿತ್ತ ಎನ್ನ ಗುರು ಚನ್ನಬಸವಣ್ಣನು ಬಸವ ಚನ್ನಬಸವನೆಂಬ ಮಹಾ ಸಮುದ್ರದೊಳಗೆ ಹರುಷಿತನಾದೆನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೨೯೪. ಮೂರಕ್ಕೆ ಮೂರಾಗಿ ಮೂರು ತನ್ನಯ ಸೀಮೆ ಮೂರೊಂದಾದನಯ್ಯ ಬಸವಣ್ಣನು. ಅರಮನೆಯಲ್ಲಿದ್ದು ಆರರ ಮೇಲೆ ಮೀರಿಪ್ಪ ಭಕ್ತಿಯಲ್ಲಿ ತೋರಿಸ್ಪುದೀಗ ತನ್ನಯ ರೂಪು. ರೂಪಾರೂಪಂ ಚನ್ನಬಸವಣ್ಣನಿಂದ ಆನು ನೀನಾದೆನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೨೯೫. ಗುರುಲಿಂಗ ಬಸವಣ್ಣ ಚರಲಿಂಗ ಬಸವಣ್ಣಾ ಕರುಣಾಕರ ಚನ್ನಬಸವಣ್ಣ ಆ ಬಸವಣ್ಣನ ಕೃಪೆಯಿಂದ ಆದಿ ಅಕ್ಷರವರಿದು ಭೇದಿಸಿದೆ ನಿಮ್ಮುವನು ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೨೯೬. ಯೋಗ ಭೂಷಣ ನಿಮ್ಮ ಆದಿ ಅಕ್ಷರ ಭೇದ ಆದಿ ಆಧಾರಗಳಿಲ್ಲದಂದು ಆನಂದಸ್ಥಾನದಲ್ಲಿಪ್ಪ ಗುರು ಬಸವಣ್ಣ ತಾನೆನ್ನ ಕರುಣದಿಂ ನಿತ್ಯನೆನಿಸಿ ಯೋಗ ಸಿದ್ಧಾಂಗದಲ್ಲಿ ಆದ ಪಂಚಬ್ರಹ್ಮದಿಂದ ಆಗೊರೆದೆನಯ್ಯ ಚನ್ನಬಸವ ತಂದೆ ಯೋಗ ಮೂರುತಿ ನೀನೆನ್ನ ಗುರುವಾಗಿ ಶಿವಯೋಗಿಯಾನಾದೆನಯ್ಯ. ನಿನ್ನವರ ಹೊರಗೆಯಿದ್ದೆ ಯೋಗಿಗುರು ಪ್ರಭುರಾಯ ನಾ ನಿಮ್ಮ ಕರುಣದಿಂದ ಶಿವಯೋಗಮುದ್ರೆಯ ನೆನೆದು ಸುಖಿಯಾದೆನು. ಆಗಮುಕ್ಕೊಳಗಾದ ಆಗಮಕ್ಕೆ ಹೊರಗಾದ ಆನಂದ ಸ್ಥಾನದಲ್ಲಿ ಸ್ವಯುವಾದನಯ್ಯ ದೇವಾ. ಯೋಗ ಜ್ಞಾನ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ ಕರುಣ ನಿಮಗಾಯಿತ್ತಯ್ಯ ಶ್ರೀಗುರು ಚನ್ನಬಸವಣ್ಣ ತಂದೆ.

೨೯೭. ಸ್ಫಟಿಕದ ಮಾಟದೊಳಗಿನ ನಿಟಿಲಾಕ್ಷನ ಮಾಟ ಸ್ಫಟಿಕದಲ್ಲಿ ದೀಪ್ತಿಸಿತ್ತಯ್ಯ. ದೇಶಿಯು ದೇಶಿಗಾಗಿಯೂ ಶಿಸುವಿನ ಮಸ್ತಕದಲ್ಲಿ ಒಸರುತ್ತಿರ್ದುದು ಭಕ್ತಿಸ್ಥಲ. ದೆಸೆದೆಸೆಯಲ್ಲಿ ಬಸವಾ ಚನ್ನಬಸವಾ ಎಂದು ದೆಸೆಗೆಟ್ಟೆ ನಾನೀಗ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೨೯೮. ಕುಂಬಾರರೆಲ್ಲರು ಗುಂಡಯ್ಯನಾಗಬಲ್ಲರೆ? ಮಡಿವಾಳರೆಲ್ಲರು ಮಾಚಯ್ಯನಾಗಬಲ್ಲರೇನಯ್ಯ? ಜೇಡರೆಲ್ಲರು ದಾಸಿಮಯ್ಯನಾಗಬಲ್ಲರೆ?

ಎನ್ನ ಗುರು ಕಪಿಲಸಿದ್ಧಮಲ್ಲೇಶ್ವರಯ್ಯ ಪ್ರಾಣಿಗಳ ಕೊಂಬು ಪರಿಹರಿಸಬಲ್ಲರೆ ತೆಲಗು ಜೊಮ್ಮಯ್ಯನಾಗಬಲ್ಲರೆ?

೨೯೯. ಶುದ್ಧ ಗುರು ಬಸವಣ್ಣ, ಸಿದ್ಧ ಗುರು ಚನ್ನಬಸವಣ್ಣ ಪ್ರಸಿದ್ಧ ಗುರು ಪ್ರಭುರಾಯನು. ತನುತ್ರಯ ಮಲತ್ರಯ ಆರನತಿಗಳೆದು ಲಿಂಗತ್ರಯ ಪ್ರಸಾದ ಮೂರನು ಪರಿಭವಿಸಿ ವಶಮಾಡಿ ಎನ್ನ ರಕ್ಷಿಸಿದ ಬಸವಪ್ರಭು ಶರಣೆಂದು ಬದುಕಿದೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೩೦೦. ಆದಿ ಆಧಾರದಲ್ಲಿ ಆದಿ ಇಲ್ಲದ ಮುನ್ನ ಅನಾದಿ ಸಂಸಿದ್ಧನಯ್ಯ ಬಸವಣ್ಣನು. ಲೋಕವೀರೇಳರ ಆಕಾರವಿಲ್ಲದಲ್ಲಿ ಏಕೈಕ ರೂಪನಯ್ಯ ಚನ್ನಬಸವಣ್ಣನು. ಸಾಕಾರದಿಂದಿತ್ತ ಸಿವರ್ಮಾಯ ಬಂದನು. ಲೋಕಪಾವನ ಮೂರ್ತಿ ಪ್ರಭುರಾಯನು ಇಂತೆನ್ನ ಭವದ ಬೇರು ಹರಿದು ಪದುಳ ಮಾಡಿ ಶರಣರೊಳಗಿರಿಸಿದ ಗುರುವಿಂತು ಮೂವರೈ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೩೦೧. ಇರುವರಯ್ಯ ಒಂದು ಲಕ್ಷ ಶೀಲಸಂಪನ್ನರು. ಇರುವರಯ್ಯ ಒಂದು ಲಕ್ಷ ವ್ರತಸಂಪನ್ನರು. ಇರುವರಯ್ಯ ಒಂದು ಲಕ್ಷ ಅರ್ಥಸಂಪನ್ನರು ಪ್ರಾಣಾಭಿಮಾನ ವೈರಾಗ್ಯದಿಂದ ಕೊಟ್ಟವರು. ಇವರೆಲ್ಲರು ಫಲಸಮರ್ಥರಲ್ಲದೆ ಲಿಂಗಸಮರ್ಥರು ಒಬ್ಬರೂ ಇಲ್ಲ ನೋಡಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನ ತಂದೆ

೩೦೨. ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು. ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು. ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು. ವ್ಯವಹಾರಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು. ಇವೆಲ್ಲ ಭವಕ್ಕೆ ಕಾರಣವಲ್ಲದೆ ಭವ ರಹಿತ ಜ್ಞಾನವು ಸಾಧ್ಯವಾಗುವದು ದುರ್ಲಭವಯ್ಯ. ಕಪಿಲಸಿದ್ಧ ಮಲ್ಲಿಕಾರ್ಜುನಾ.

೩೦೩. ಅರಿವೆನೆಂದರೆ ಸತ್ಯಜ್ಞಾನಮನಂತ ಬ್ರಹ್ಮವೆಂಬ ಶೃತಿ ಸಾರುತ್ತಿದೆ. ಮರೆದೆನೆಂದರೆ ಸಾಕ್ಷಾತ್ಸಚ್ಚಿದಾನಂದ ಭವವೆಂಬ ಕರವಲ್ಯುಪನಿಷದ್ಘೋಷಿಸುತ್ತಿದೆ. ಅರಿವು ವಸ್ತುಸ್ವರೂಪ, ಮರವು ಮಾಯಾಸ್ವರೂಪವೆಂದರಾನು ನಿರ್ಮಯಲ ಸ್ವರೂಪನಾದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೩೦೪. ಒಂದೇ ವಸ್ತು ಭೇದವಾಗಿ ಕಾಡಿತ್ತಯ್ಯ. ಎನ್ನ ದೇಹವಸ್ತುವೆಂದಡೆ ಹಲವು ರೂಪಾಗಿ ತೋರಿತ್ತು. ಕಾರಣ ವಸ್ತುವೆಂದಡೆ

ಸ್ಥೂಲಸೂಕ್ಷ್ಮ ತಿಳಿಯದೆ ಹೋಯಿತ್ತು ಕಾರಣಾತೀತವೆಂದಡೆ ಸಾಕ್ಷಿಯಾಗಿ ಕ್ರಿಯಂಗಳ ಮಾಡಿಸಿತ್ತು. ಸಾಕ್ಷಿಯಾಗಿ ನಿಂದರುವೆ ವಸ್ತುವೆಂದರೆ ಚೇತನವಾಗಿ ನಿಂದಿತ್ತು. ಇದಿರಿರವು ಬಲ್ಲಾತನೆ ಭಕ್ತ. ನೋಡಿ ಬಯಲಾದಾತನೆ ಜಂಗಮ ಬಯಲಾಗಿ ರೂಪಕ್ಕೆ ಬಂದಾತನೆ ಪ್ರಾಣಲಿಂಗಿ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೩೦೫. ತನು ಕೊಟ್ಟು ಭಕ್ತನಾಗಿಹೆನೆಂದರೆ ತನು ಮಲ ಭಾಂಡವಯ್ಯ. ಮನ ಕೊಟ್ಟು ಭಕ್ತನಾಗಬೇಕೆಂದರೆ, ಮನ ವಾಯುಮಿತ್ರನಯ್ಯ. ಧನ ಕೊಟ್ಟು ಭಕ್ತನಾಗಿಹೆನೆಂದರೆ ಎನ್ನ ಬಂಧಗಳ ಭಾವ ಅದರಲ್ಲಯ್ಯ. ಇವೆಲ್ಲ ಅಶುದ್ಧ ಪದಾರ್ಥಗಳ ಕೊಟ್ಟು ಭಕ್ತನಾಗುವೆನೆ? ಆಗಲರಿಯೆನು. ಮಾಡಿ ಮಾಡಿ ಭಕ್ತನಾಗಿಹೆನೆಂಬವರಿಗೆ ಕೊಟ್ಟು ಭಕ್ತನಾಗುವೆನೆಂದರೆ, ನೀವೆಯಾಗಿ ನಿಂದಲ್ಲಿ ಕೊಡಲಿಕ್ಕಿಂಬಿಲ್ಲ. ತೆಗೆದುಕೊಂಬುವರೆ ಹಸ್ತವಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ.

೩೦೬. ಭೂಷಣವುಳ್ಳ ಜಂಗಮವ ಭೂಪಾಲ ಪೂಜಿಸುವ. ವೇಷವುಳ್ಳ ಜಂಗಮವ ವೇಶಿ ಪೂಜಿಸುವಳು. ವೇಷಧಾರಿ ಜಂಗಮವ ಲೋಕವೆಲ್ಲ ಪೂಜಿಸುವುದು. ಜ್ಞಾನವುಳ್ಳ ಜಂಗಮವನಾರು ಪೂಜಿಸರು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ?

೩೦೭. ಗುಣವ ನೋಡದೆ ಹೊಗಳುವ ಜಂಗಮವು ಬ್ರಹ್ಮನ ಸಂತತಿ, ಕಾಡಿ ಬೇಡುವ ಜಂಗಮವು ನಾರಾಯಣನ ಸಂತತಿ, ವ್ಯಾಪಾರಿಕ ಜಂಗಮ ಈಶ್ವರನ ಸಂತತಿ, ಹೊಗಳದೆ ಕಾಡದೆ ಬೇಡಿ ಬಲಾತ್ಕಾರದಿಂದುಣ್ಣದೆ ವ್ಯವಹರಿಸದೆ ಭಿಕ್ಷ ಮುಖದಿಂದುಂಬ ಜಂಗಮವ ನೋಡಿ ಎನ್ನ ಮನ ನೀವೆಂದು ನಂಬಿತ್ತಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

೩೦೮. ವೇಷಧಾರಿ ಜಂಗಮರನಂತರುಂಟು. ವೇಷವಳಿನವರನೊಬ್ಬರನು ಕಾಣೆ. ಬಿಂದು ನಿಗ್ರಹದ ಜಂಗವ.ರನಂತರುಂಟು, ಬಿಂದುರಹಿತ ಜಂಗಮವನೊಬ್ಬರನು ಕಾಣೆ. ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ ಜಂಗಮವೆನ್ನಬೇಕು ಪ್ರಭುವೇ, ಜಂಗಮವೆನ್ನಬೇಕು. ವೇಷಧಾರಿ ಎಂದು ಇನ್ನುಳಿದವರೊಪ್ಪಚ್ಚಿ ಅಳವಡೆಂದರೆ ಅಳವಡದು ನೋಡಾ ನಿನ್ನ ಮುಂದೆ.

೩೦೯. ಸುವರ್ಣಕ್ಕೆ ಅಲಂಕಾರಕ್ಕೆ ಭೇದ ಉಂಟೆ ಅಯ್ಯ? ಜ್ಯೋತಿಗೆ ಪ್ರಕಾಶಕ್ಕೆ ಭೇದ ಉಂಟೆ ಅಯ್ಯ? ನೂಲಿಂಗೆ ಪಟಕ್ಕೆ ಭೇದ ಉಂಟೇ

ದಲೂ ಭೀ ಹಾಕುವನು. ಹೊರಗೊಂದು ಒಳಗೊಂದು ತೋರಿಸುವ ಡಾಂಭಿಕರ ನಿಷೇದಾರ್ಥವಾಗಿ ಮಹಾ ಶಿವಶರಣರು ಅನೇಕ ವಚನಗಳನ್ನು ಹೇಳಿದ್ದಾರೆ.

ಮಹೇಶನು ಸೂತಕ ಶಕುನ ತೀರ್ಥಯಾತ್ರೆ ಮುಂತಾದವುಗಳನ್ನು ನಂಬುವದಿಲ್ಲ. ವೀರಶೈವರು ಇವುಗಳನ್ನು ಮೆಚ್ಚಬಾರದೆಂದೇ ಆತನು ಸಾರುವನು. ಮನೆಯಲ್ಲಿ ಕೂಸು ಹುಟ್ಟಿದರೆ ಮುಡಿಚಟ್ಟು, ಹೆಂಡತಿಯು ರಜಸ್ವಲೆಯಾದರೆ ಮುಡಿಚಟ್ಟು, ಯಾರಾದರೂ ಸತ್ತು ಕೆಟ್ಟರೆ ಮುಡಿಚಟ್ಟು ಈ ಮೊದಲಾದ ಸೂತಕಗಳನ್ನು ಮಹೇಶ್ವರನು ಮನ್ನಿಸುವದಿಲ್ಲ. ಸತಿ-ಪತಿಗಳಿಬ್ಬರೂ ಸದೈವ ಶುಚಿರ್ಭೂತರಾಗಿ ಕ್ರಮಬದ್ಧವಾದ ನಿತ್ಯವ್ಯವಹಾರಗಳನ್ನು ನಡೆಯಿಸುವದರಿಂದ ಆ ಸೂತಕಗಳ ಪರಿಣಾಮವು ಅವರ ಮೇಲೆ ಸ್ವಲ್ಪೂ ಆಗುವದಿಲ್ಲ. ಮಹೇಶ್ವರನು ಪಂಚಾಂಗ ಮುಹೂರ್ತ ಮುಂತಾದವುಗಳನ್ನು ಲೆಕ್ಕಿಸುವದಿಲ್ಲ. ಶುಭಕಾರ್ಯಮಾಡುವುದಕ್ಕೆ ಪ್ರತಿದಿನವೂ ಶಿವಯೋಗವೇಂದೇ ಭಾವಿಸುವನು. ಮಹೇಶನು ಹಿಡಿದ ಕಾರ್ಯದಲ್ಲಿ ಜಯವು ದೊರೆಯದಿದ್ದರೆ ಆತನು ಮುಹೂರ್ತಕ್ಕೆ ದೋಷ ಕೊಡದೆ ತನ್ನ ಕರ್ತೃತ್ವಶಕ್ತಿಯನ್ನು ಹಳಿದುಕೊಳ್ಳುವನು. ಮಹೇಶನು ತೀರ್ಥ ಯಾತ್ರೆ ಕ್ಷೇಂದ್ರಗಳಿಗೆ ಹೋಗಿ ದೇವರಿಗೆ ಕಾಯಿ ಕಪ್ಪುರಗಳನ್ನು ಕೊಡಲಾರನು. ತೀರ್ಥಯಾತ್ರೆಗಳೆಲ್ಲವೂ ತನ್ನ ಇಷ್ಟಲಿಂಗದಲ್ಲಿಯೇ ಉಂಟೆಂದು ಭಾವಿಸುವನು. "ಯಾಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು ಸಾಕು ಬಿಡು ತನ್ನೊಳೀ ಗುಣಗಳಿರುತಿರಲು" ಎಂಬುದಾಗಿ ಶ್ರೀ ಸರ್ಪಭೂಷಣ ಶಿವಯೋಗಿಗಳು ಹಾಡಿಕೊಂಡಿರುವರು. ಅಂದಮೇಲೆ ದೇವಸ್ಥಾನಗಳಿಗೆ ಹೋಗಿ ರುದ್ರಾಭಿಷೇಕಾದಿ ಕಾರ್ಯಗಳನ್ನು ಮಾಡಿಸುವದೂ ಮಾಡುವದೂ ಮಹೇಶಸ್ಥಲದ ಲಕ್ಷಣವಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಈ ವಿಷಯವಾಗಿ ಮಹಾ ಶಿವಶರಣರ ವಚನಗಳನೇಕವಿರುವವು.

ಮಹೇಶನು ಪರರ ಹೊನ್ನು ಹೆಣ್ಣು ಮಣ್ಣುಗಳಿಗೆ ಎಷ್ಟು ಮಾತ್ರವೂ ಹಂಬಲಿಸಲಾರನು. ಅಂತೆಯೇ ಭಕ್ತಾದಿಗಳು ಅವರನ್ನು ತಮ್ಮ ಮನೆಗೆ ಕರೆಯಿಸಿ ಊಟೋಪಚಾರಗಳನ್ನು ಮಾಡಿಸುವರು. ವಿಷಯಾಸಕ್ತರೂ ಆಶೆಬುರುಕರೂ ಮಹೇಶ್ವರರಲ್ಲ. ಅಂಥವರನ್ನು ಮನೆಗೆ ಕರೆದುಕೊಂಡು ಬಂದು ತೀರ್ಥ-ಪ್ರಸಾದಗಳನ್ನು ತೆಗೆದುಕೊಳ್ಳುವದು ಪಾಪವು ಪುಣ್ಯ ಪಡೆಯಬೇಕೆಂದು ಇಂಥ ಆಶೆಬುರುಕರಿಗೆ ಅನ್ನ ಹಾಕಿ ಪಾಪವನ್ನು

ಮಾತ್ರ ಮಡಲಲ್ಲಿ ಕಟ್ಟಿಕೊಂಡಂತಾಗುತ್ತದೆ 'ಪರಸ್ತ್ರೀ ಪರಧನದಾಶೆಯ ಬಿಟ್ಟು ಶುದ್ಧವಾಗಿ ಲಿಂಗನಿಷ್ಠೆಯುಳ್ಳಾತನು ಮಹೇಶ್ವರ ಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ." ಎಂದು ಶ್ರೀ ಬಸವಣ್ಣನವರು ಹೇಳಿದ್ದಾರೆ. ಪರರ ಸೊತ್ತಿಗೆಳಸುವ ದುರುಳರನ್ನು ಕಂಡರೆ ಮಹೇಶನು ಸಿಟ್ಟುಬೆಂಕಿಯಾಗುವನು. ಈ ಮೂರು ವಿಷಯಗಳ ಆಶೆಯನ್ನು ತೊರೆದಾತನೇ ಮಹೇಶ.

ನಿಷ್ಠೆಯುಳ್ಳ ಮಹೇಶನು ತನ್ನ ವ್ರತನಿಯಮಗಳಿಗೆ ಭಂಗವುಂಟಾದರೆ ಪ್ರಾಯಶ್ಚಿತ್ತವನ್ನೇನೂ ತೆಗೆದುಕೊಳ್ಳುವದಿಲ್ಲ. ಹಾಗೆ ಪ್ರಾಯಶ್ಚಿತ್ತಹೊಂದುವವರನ್ನು ಕಂಡರೆ ಸಿಂಹದಂತೆ ಗರ್ಜಿಸುವನು, ಗುಡುಗಿನಂತೆ ಗುಡುಗುಡಿಸುವನು. ಹಿಡಿದ ವ್ರತನೇಮಗಳಿಗೆ ಭಂಗವಾದರೆ ಪುನಃ ಅವುಗಳನ್ನು ಮತ್ತಿಷ್ಟು ಛಲದಿಂದಲೇ ಸಾಗಿಸುವನು. ವ್ರತತಪ್ಪಿತಲ್ಲ ಏನು ಮಾಡಲಿ, ಹೇಗೆ ಮಾಡಲಿ ಎಂದು ನಿರಾಶೆಯುಳ್ಳವನಾಗಿ ಜೋಲು ಮೋರೆ ಹಾಕಿಕೊಂಡು ಕೂಡ್ರುವದಿಲ್ಲ. ಯಾವದಾದರೊಂದು ಪ್ರಾಯಶ್ಚಿತ್ತದಿಂದ ತಮ್ಮ ಪಾಪಗಳನ್ನು ಕಳೆದುಕೊಳ್ಳಲಿಕ್ಕೆ ಬರುತ್ತದೆನ್ನುವದು ಅಸಂಬದ್ಧವಾದುದು. ಪಾಪವನ್ನು ಕಳೆದುಕೊಳ್ಳಲಿಕ್ಕೆ ಬರುತ್ತದೆಂದ ಬಳಿಕ ಪಾಪವನ್ನು ಮಾಡಬೇಕೆಂಬ ಕಲ್ಪನೆಗೆ ಅವಕಾಶಕೊಟ್ಟಂತಾಗುತ್ತದೆ. ಹಿಡಿದ ವ್ರತಗಳನ್ನು ಬಿಡದಿರುವದೇ ಅದಕ್ಕೆ ಪ್ರಾಯಶ್ಚಿತ್ತ. ಉದಾಹರಣಾರ್ಥವಾಗಿ ೨ ಹೊತ್ತು ಸ್ನಾನಮಾಡಿಯೇ ಊಟಮಾಡುವೆನೆಂದು ವ್ರತಹಿಡಿದ ಮನುಷ್ಯನು ಕದಾಚಿತ್ ಆ ವ್ರತವನ್ನು ಅನಿವಾರ್ಯಹದಿಂದ ಮುರಿಯುವಂಥ ಪ್ರಸಂಗ ಬಂದರೆ ಆತನು ತನ್ನ ಅಪರಾಧಕ್ಕಾಗಿ ಪರಮಾತ್ಮನಿಗೆ ಮರೆಹೊಕ್ಕು ಪಶ್ಚಾತ್ತಾಪದಿಂದ ಪುನೀತನಾಗಿ ಇನ್ನು ಮುಂದೆ ೨ ಸಾರೆ ತಪ್ಪದೆ ಸ್ನಾನಮಾಡುವೆನೆಂಬ ಗಡಚಾದ ವ್ರತವನ್ನು ಕೈಕೊಳ್ಳಬೇಕೇ ವಿನಾ ತನ್ನ ತಪ್ಪಿಗಾಗಿ ಕಾಯಿಕ ಪ್ಪುರಗಳನ್ನು ದೇವರಿಗೆ ಕೊಡುವದಾಗಲಿ ಗಣಾರಾಧನೆ ಮಾಡಿಸುವದಾಗಲಿ ತಪ್ಪುದಂಡವನ್ನು ಕೊಡುವದಾಗಲಿ ಆತನ ಆಧ್ಯಾತ್ಮಿಕೋನ್ನತಿಗೆ ಸಹಾಯಕಾರಿಯಾಗಲಾರವು.

ಭಕ್ತ ಮಹೇಶ್ವರರಲ್ಲಿರುವ ವ್ಯತ್ಯಾಸವೇನು ? ಭಕ್ತನಿಗೆ ನೇಮ ವ್ರತಗಳ ಪ್ರತಿಬಂಧವಿಲ್ಲ. ಆದರೆ ಮಹೇಶನು ಅವುಗಳನ್ನು ಅವಶ್ಯವಾಗಿ ಪಾಲಿಸಬೇಕಾಗುತ್ತದೆ. ಭಕ್ತನಿಗೆ ಉಪದೇಶ ಮಾಡುವ ಅಧಿಕಾರವಿಲ್ಲ.

ಮಹೇಶನಿಗೆ ಆ ಅಧಿಕಾರವುಂಟು. ವೀರಶೈವ ಮತತತ್ವಗಳನ್ನು ಅರಿದು ಆಚರಿಸಿ ಅವುಗಳನ್ನುಪದೇಶಿಸುವ ಸಾಮರ್ಥ್ಯವು ಯಾರಿಗಿದ್ದರೂ ಆತನಿಗೆ ಮಹೇಶಸ್ಥಲದವನೆಂದೇ ತಿಳಿಯಬೇಕು. ಷಟ್‌ಸ್ಥಲಗಳು ಆಧ್ಯಾತ್ಮಿಕೋನ್ನತಿಯ ಪ್ರಶ್ನೆಗಳೇ ಹೊರತು ಕುಲಗೋತ್ರಗಳ ಪ್ರಶ್ನೆಗಳಲ್ಲವೆಂಬದನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳತಕ್ಕದ್ದು. ಭಕ್ತನ ಮನಸ್ಸು ನಾನಾ ದೈವಂಗಳ ಕಡೆಗೆ ಹರಿಯುತ್ತಿದ್ದು ಆದನ್ನು ಇಷ್ಟಲಿಂಗದ ಮೇಲಿನ ವಿಶ್ವಾಸದಿಂದ ಆದನ್ನು ಆತನು ಒತ್ತಟ್ಟಿಗೆ ತರುವ ಪ್ರಯತ್ನದಲ್ಲಿರುತ್ತಾನೆ. ಆದರೆ ಮಹೇಶನ ಮನಸ್ಸು ಅಸ್ಥಿರವಾಗಿ ಅತ್ತಿತ್ತ ಚಲಿಸದೆ ಒತ್ತಟ್ಟಿಗೆ ದೃಢವಾಗಿ ನೆಲಿಸಿ ಬಿಟ್ಟಿರುತ್ತದೆ. ಇಷ್ಟಲಿಂಗದಲ್ಲಿ ಬಂಧುರವಾದ ನಿಷ್ಠೆಯಿರುತ್ತದಲ್ಲದೆ ಬೇರಾವ ದೇವರುಗಳ ಕಡೆಗೂ ಆತನು ಗಮನಿಸಲಾರನು. ಗಂಡಾಂತರ ಪ್ರಸಂಗಗಳಲ್ಲಿ ಭಕ್ತನು ಧೈರ್ಯಗುಂದಿ ದೈನ್ಯದಿಂದ ಪರಮಾತ್ಮನನ್ನು ಮರೆಹೊಗುವನು. ಮಹೇಶನು ಗಂಡಾಂತರಕ್ಕೆ ಎದೆಗೊಟ್ಟು ತನ್ನ ನಿಷ್ಠೆಯ ಬಲದಿಂದ ಆ ಗಂಡಾಂತರವನ್ನು ನೀಗಿಕೊಳ್ಳುವನು. ವಿಘ್ನಗಳುಂಟಾಗಲು ಭಕ್ತನು ಒಮ್ಮೊಮ್ಮೆ ತಾನು ಹಿಡಿದ ಕಾರ್ಯವನ್ನು ಬಿಟ್ಟುಬಿಡಬಹುದು. ಆದರೆ ಮಹೇಶನು ಎಷ್ಟೇ ವಿಘ್ನಗಳು ಬಂದರೂ ಮುಂದೆಯಿಟ್ಟ ಹೆಜ್ಜೆಯನ್ನೆಂದಿಗೂ ಹಿಂದಕ್ಕೆ ಇಡಲಾರನು. "ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ ನಾಯಾತ್ಪಥಃ ಪ್ರವಿಚಲಂತಿ ಪದಂ ಸ ಧೀರಾಃ" ಎಂಬ ಭರ್ತೃಹರಿಯ ನೀತಿ ವಾಕ್ಯವು ಮಹೇಶನಿಗನ್ವಯಿಸುತ್ತದೆ. ಭಕ್ತನಿಗೆ ಲಿಂಗಧಾರಣ ದೀಕ್ಷೆಯೊಂದೇ ಆಗಿರುತ್ತದೆ; ಆದರೆ ಮಹೇಶನಿಗೆ ಕ್ರಿಯಾಚಾರ ದೀಕ್ಷೆಯಾಗಿರುತ್ತದೆ. ಭಕ್ತನು ಯಾವದಾದರೊಂದು ಕಾಯಕವನ್ನು ಕೈಕೊಂಡು ತನ್ನ ಪ್ರಪಂಚವನ್ನು ಸಾಗಿಸುತ್ತ ಗುರುಲಿಂಗ ಜಂಗಮ ದಾಸೋಹಮಾಡುತ್ತಾನೆ. ಮಹೇಶನು ತನ್ನ ಸರ್ವಸ್ವವನ್ನೆಲ್ಲ ಗುರುಲಿಂಗ ಜಂಗಮಕ್ಕೆ ಧಾರೆಯೆರೆದು ತಾನು ಪವಿತ್ರಕಾಯಕದಿಂದುಪಜೀವಿಸಿ ಪ್ರತಿಫಲಾಪೇಕ್ಷೆಯಿಲ್ಲದೆ ಭಕ್ತಾದಿಗಳಿಗೆ ಬೋಧೆಮಾಡುವನು. ಭಕ್ತನು ಪಂಚಾಂಗ ಮುಹೂರ್ತ ತೀರ್ಥಯಾತ್ರೆ ದೇವರುದಿಂಡರು ಈ ಮುಂತಾದ ರೂಢಾಚಾರಗಳ ಮೇಲಿನ ವಿಶ್ವಾಸವನ್ನು ಒಮ್ಮೆಲೆ ತೆಗೆದು ಹಾಕದೆ ಸಾವಕಾಶವಾಗಿ ಕಡಿಮೆ ಮಾಡಿಕೊಳ್ಳುತ್ತ ಹೋಗುವನು. ಆದರೆ ಮಹೇಶನು ಇವುಗಳ ಮೇಲಿನ ವಿಶ್ವಾಸವನ್ನು ಸಂಪೂರ್ಣವಾಗಿ ತ್ಯಜಿಸಿ ಬಿಡುವನು.

ಭಕ್ತನು ಹಸುಗೂಸಾಗಿ ತನ್ನ ಇಷ್ಟಲಿಂಗವನ್ನು ಮಾತೆಯೋಪಾದಿಯಲ್ಲಿ ಭಾವಿಸುವನು. ಮಹೇಶನು ಇಷ್ಟಲಿಂಗವು ತನ್ನನ್ನು ಸನ್ಮಾರ್ಗಕ್ಕೆ ಹಚ್ಚುವ ತಂದೆಯೆಂದು ತಿಳಿಯುವನು. ಭಕ್ತನ ಮನಸ್ಸು ತಿಳಿಯಾಗಿ ಹರಿಯುತ್ತಿರುತ್ತದೆ. ಮಹೇಶನ ಮನಸ್ಸು ಗಟ್ಟಿಯಾಗಿ ಹೆಪ್ಪುಗೊಂಡಿರುತ್ತದೆ. ಭಕ್ತಸ್ಥಲವು ಆಧ್ಯಾತ್ಮಿಕೋನ್ನತಿಯ ಪ್ರಥಮ ಸೋಪಾನವು, ಮಹೇಶಸ್ಥಲವು ೨ ನೇಯ ಸೋಪಾನವು. ಭಕ್ತನಿಗೆ ಶ್ರದ್ಧೆಯೇ ಮುಖ್ಯ ಗುಣವು, ಮಹೇಶನಿಗೆ ನಿಷ್ಠೆಯೇ ಮೂಲಾಧಾರವು.

ಭಕ್ತ ಮಹೇಶ್ವರರು ಲಿಂಗವಂತರಾಗಿರುವದರಿಂದ ಇಬ್ಬರೂ ಒಂದೇ ಅನ್ನಪಾನಾದಿಗಳೂ ಲಗ್ನ ಮುಹೂರ್ತಗಳೂ ಪರಸ್ಪರ ಕೂಡಿಯೇ ನಡೆಯಬೇಕು. ಆದರೆ ಆಧ್ಯಾತ್ಮಿಕೋನ್ನತಿಯ ದೃಷ್ಟಿಯಿಂದ ಮಹೇಶನು ಭಕ್ತನಿಗಿಂತಲೂ ಅಧಿಕ. ಭಕ್ತ ಮಹೇಶ್ವರರೆಂಬ ಬೇರೆ ಬೇರೆ ಕುಲಗಳಿಲ್ಲ. ಆದರೆ ಒಂದು ಪ್ರತಿಷ್ಠಿತ ವರ್ಗವು ತನ್ನ ವರ್ಚಸ್ಸನ್ನು ಅಜ್ಞಾನಿಗಳ ಮೇಲೆ ಕಾಯ್ದುಕೊಳ್ಳಬೇಕೆಂಬ ಉದ್ದೇಶದಿಂದ ಬೇರೆ ಜಂಗಮ ಅಥವಾ ಮಹೇಶ್ವರ ಎಂಬದೊಂದು ವರ್ಗವನ್ನೇ ಕಲ್ಪಿಸಿಕೊಂಡಿರುವದು. ಶಾಸ್ತ್ರ ದೃಷ್ಟಿಯಿಂದ ಭಕ್ತ ಮಹೇಶ ಎಂಬೆರಡು ಜಾತಿಗಳಲ್ಲ. ಅವು ಆಧ್ಯಾತ್ಮಿಕ ತರಗತಿಗಳು.

---

## ಹಂತಿಯ ಹಾಡು.

**ಓರ್ವ ವಿದ್ಯಾಭ್ಯಾಸಿ**

---

ಹರನಿಗೆ ದಯಹುಟ್ಟಿ। ಬರುವ ಪಾರ್ವತಿ ಬಿಟ್ಟು। ನರಲೋಕಕ್ಕಿಳಿದು ಬಂದಾನು-ನೋ। ನರಲೋಕಕಿಳಿದು ಬಂದಾನು ಆ ಹರನು। ಗುರುಕಾಯ ತೊಟ್ಟು ಮೆರೆದಾನು-ನೋ ॥೧॥

ಗುರುವು ಎಂದರೆ ಜನ್ಮ। ಸರವನು ಹರಿವಂಥ। ದೊರೆಯು ಅವನಯ್ಯ ನೆಲದೊಳಗೆ-ಗೋ ॥ ದೊರೆಯು ಅವನಯ್ಯ ನೆಲದೊಳಗೆ ಆತಗೆ। ಶಿರಬಾಗಿ ವರವ ಪಡಿಬೇಕು-ಕೋ ॥೨॥

ಗುರುವು ತಾನೊಲಿದೊಮ್ಮೆ। ಕರೆದು ಲಿಂಗವಕೊಡಲು। ಹರಿಯಿತು ಪಾಪದ ಪರಿಯಾಗ-ಗೋ ॥ ಹರಿಯಿತು ಪಾಪದ ಪರಿಯಾಗ ತನ್ನಲ್ಲಿ ಅರಿವು ಹುಟ್ಟಿತು ಪರವೆಂದು-ದೋ ॥೩॥

ಲಿಂಗದ ಜೀವಾಳ। ಜಂಗಮನೆನ್ನುತ। ಮಂಗಲವೇದ ನುಡಿ ದಾವು-ವೋ॥ ಮಂಗಲವೇದ ನುಡಿದಾವು ಜಂಗಮ। ದಿಂಗಿತ ತಿಳಿದು ನಡಿಯೀರಿ-ರೋ ॥೪॥

ವಿಭೂತಿಯಿಂದಲಿ। ಶೋಭೆಯುಂಟಾಗುದು। ಲಾಭವದರಿಂದ ಜನ ಕೆಲ್ಲ-ಲ್ಲೋ॥ ಲಾಭವದರಿಂದ ಜನಕೆಲ್ಲ ಹಿಂದಾದ। ಲೋಭವಳಿವುದು ನಿಜವಾಗಿ-ಗೋ ॥೫॥

ರುದ್ರಾಕ್ಷಿ ಎಂಬುದು। ರುದ್ರನ ಕಣ್ಣಂತೆ। ರುದ್ರನ ಕರುಣವದ ರಿಂದ-ದೋ॥ ರುದ್ರನ ಕರುಣವದರಿಂದ ಬಲುಬೇಗ। ಬುದ್ಧಿಬರುವುದು ನರನಿಗೆ-ಗೋ ॥೬॥

ಐದು ಅಕ್ಷರಮಂತ್ರ। ವೈದು ತೋರುವದೀಗ। ಐದು ಮೋರೆಯು ಶಿವನನ್ನು-ನ್ನೋ॥ ಐದು ಮೋರೆಯು ಶಿವನನ್ನು ಅದನೊಮ್ಮೆ। ಓದಿ ನೋಡಣ್ಣಾ ಗಿಣಿರಾಮ-ಮೋ ॥೭॥

ಜಂಗಮದ ತೀರ್ಥವ। ಲಿಂಗ ಕೆರಿಯಲಿಬೇಕು। ಲಿಂಗ ತಣಿವುದು ಅದರಿಂದ-ದೋ॥ ಲಿಂಗ ತಣಿವುದು ಅದರಿಂದ ತಾ ಹಿಂದೆ। ಮಾಡಿದ ಪಾಪ ಹಿಂಗೀತು-ತೋ ॥೮॥

ಕರುಣ ಪ್ರಸಾದವು। ಹರನ ಮನೆಗೊಯ್ವುದು। ಸರಸಾಗಿ ತಾನು ಕೊಂಬುದು-ದೋ॥ ಸರಸಾಗಿ ತಾನು ಕೊಂಬುದು ಪರಿಪರಿ। ಶರಣರ ಪದವ ಪಡೆವುದು-ದೋ ॥೯॥

ಅವನಿಯ ಮೇಲೆಲ್ಲಾ। ಶಿವಯೋಗದನುಭವವು। ಭವಹಾರಿ ಯೆಂದು ಮೆರೆದೀತು-ತೋ॥ ಭವಹಾರಿಯೆಂದು ಮೆರೆದೀತು ಶಿವಭಕ್ತ। ರಿದನೊಮ್ಮೆ ನೋಡಿ ನಲಿಯುವದು-ದೋ ॥೧೦॥



# ವೀರಶೈವ ವರ್ಣಭೇದ ವಿದಾರಿಕಾ.

ಲೇಖ ೯

ಲೇಖಕಃ-ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ



ಸಿದ್ಧಾಂತ ಶಿಖಾಮಣಿಯನ್ನು ಮತ್ತು ಕ್ರಿಯಾಸಾರವನ್ನು ನೋಡಿದೆವು. ಮುಂದೆ ಸಾಗುವಣ--ನಮ್ಮ ವೇದಮೂರ್ತಿ ಜಗದೀಶ ಶಾಸ್ತ್ರಿಗಳು ಭಾರತಃ ಪಂಚಮೋ ವೇದಃ ಎಂದು ವೇದದಂತಿರುವ ಮಹಾಭಾರತದ ನೆರವಿನಿಂದ ಲಿಂಗಸ್ವಾಯತರಾದ ವೀರಶೈವರಲ್ಲಿ ವರ್ಣಭೇದವನ್ನು ಪ್ರತಿಷ್ಠಿಸಲು ಅದೆನಿತು ಸಮರ್ಥರೋ ನೋಡುವ!

ಕಿಮಾಹುರ್ಭರತ ಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಮ್।
ಬ್ರಾಹ್ಮಣಂ ಲಿಂಗಿನಂ ಶೈವ ಬ್ರಾಹ್ಮಣಂ ವಾಪ್ಯ ಲಿಂಗಿನಮ್॥
ಭೀಷ್ಮಃ— ಸ್ವವೃತ್ತಿ ಮಭಿಪನ್ನಾಯ ಲಿಂಗಿನೇ ಚೇತರಾಯಚ।
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ॥

ನಾನು ನೋಡಿದ ಮಹಾಭಾರತದ ಪ್ರತಿಯಲ್ಲಿ ಚೈವ ಎಂದು ಪಾಠವಿದೆ. ವೀರಶೈವ ಗ್ರಂಥಕಾರರು ಉದಾಹರಿಸಿದಲ್ಲೆಲ್ಲವು ಅದೇ ಪಾಠವುಂಟು. ವೇದಮೂರ್ತಿಗಳು ಶೈವ ಎಂದು ಪಾಠವನ್ನು ಉದಾಹರಿಸಿರುವರು. ಈ ಶ್ಲೋಕದ್ವಯದ ಗತಿಯನ್ನು ನಾನು ಈ ಲೇಖದ ಹಿಂದಿನದೊಂದು ಅಂಕದಲ್ಲಿ ಪಂಚಾಕ್ಷರ ಶರ್ಮನವರ ಬರಹವನ್ನು ಸತ್ಕರಿಸುವಾಗ ವಿಚಾರಿಸುವೆನು. ಈಗ ಆದನ್ನೆಲ್ಲ ಇಲ್ಲಿ ಅನ್ವಯಿಸತಕ್ಕುದು.

ಮಹಾಭಾರತವು ಶತಸಹಸ್ರವೆಂದರೆ ಒಂದು ಲಕ್ಷ ಸಂಖ್ಯೆಯ ಶ್ಲೋಕಗಳನ್ನುಳ್ಳುದು. "ಇದಂ ಶತಸಹಸ್ರಂತು ಶ್ಲೋಕಾನಾಂ ಪುಣ್ಯಕರ್ಮಣಾಮ್। ಉಪಾಖ್ಯಾನೈಃ ಸಹಜ್ಞೇಯಂ ಶ್ರಾವ್ಯಂ ಭಾರತಮುತ್ತಮಮ್॥ ಚತುರ್ವಿಂಶತಿ ಸಾಹಸ್ರೀಂ ಚಕ್ರೇಭಾರತ ಸಂಹಿತಾಮ್। ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ॥ ಅನುಕ್ರಮಣಿಕಾ ಪರ್ವ ೭೭-೭೮ ಉಪಾಖ್ಯಾನಗಳನ್ನು ಬಿಟ್ಟು ಇಪ್ಪತ್ತುನಾಲ್ಕು ಸಹಸ್ರ ಶ್ಲೋಕಗಳು ಇದರಲ್ಲಿಹವು. ಈ ಎರಡು ಶ್ಲೋಕಗಳ ಹೊರತು ವೀರಶೈವ ವಿಷಯವು ದೊರೆಯದೆ ಇರುವುದು ಶಾಸ್ತ್ರಿಗಳ ದುರ್ದೈವವೊ ಅಥವಾ ಅವಶ್ಯ ವಿಷಯಕವಾದ ಶ್ಲೋಕಗಳನ್ನು ಬ್ರಾಹ್ಮಣ್ಯಲಾಲಸೆಯ, ಇತ್ತಿತ್ತ ವರ್ಣಭೇದಲಾಲಸೆಯ ಶಾಸ್ತ್ರಿಗಳು ಅಪಾರ್ಥ ಕಲ್ಪನೆಯಿಂದ

ದೂಷಿಸುತ್ತಿರುವರೋ ಸುಜ್ಞರು ಬಗೆಯ ನೋಡಲಿ. ಮತ್ತೊಂದು ಮಾತು. ಈ ಅಧ್ಯಾಯದಲ್ಲಿ ನಾಲ್ವತ್ತೊಂದು ಶ್ಲೋಕಗಳ ಸಂದರ್ಭವಿದೆ. ಅಲ್ಲಲ್ಲಿ ಒಮ್ಮೆಯಾದರು ಶಿವಲಿಂಗಧಾರಣ ಪ್ರಸಂಗವು ಬಂದಿಲ್ಲ. ಆದುದರಿಂದ ಮಹಾಭಾರತದ ಟೀಕಾಕಾರರು ಹೇಳುತ್ತಿರುವಂತೆ ಈ ಶ್ಲೋಕದಲ್ಲಿ ಲಿಂಗಿ ಎಂದರೆ ಬ್ರಹ್ಮಚಾರಿಯೆಂದೆ ಅರ್ಥವು.

ಮಹಾಭಾರತದಲ್ಲಿ ನೂರು ಪರ್ವಗಳಿರುವವು. "ಏತತ್ಪರ್ವಶತಂ ಪೂರ್ಣಂ ವ್ಯಾಸೇನೋಕ್ತಂ ಮಹಾತ್ಮನಾ" ಪರ್ವ ಸಂಗ್ರಹಪರ್ವ ೮೪. ಇವುಗಳೊಂದರಲ್ಲಿಯು ಶಿವಲಿಂಗ ಧಾರಣದ ಆಖ್ಯಾನವಾಗಲಿ, ಉಪಾಖ್ಯಾನವಾಗಲಿ ಇಲ್ಲ. ಸಾನತ್ಸುಜಾತ ಪರ್ವ, ಭಗವದ್ಗೀತಾಪರ್ವ, ಮೋಕ್ಷಧರ್ಮ ಪರ್ವ, ವೈಷ್ಣವಧರ್ಮ ಪರ್ವ, ಅನುಗೀತಾಪರ್ವ ಎಂಬ ಪರ್ವ ಪಂಚಕದಲ್ಲಿ ಆಧ್ಯಾತ್ಮಿಕ ಧರ್ಮರಹಸ್ಯಗಳನ್ನು ಹೇಳಿರುವನು. ಒಂದರಲ್ಲಾದರು ಶಿವಲಿಂಗಧಾರಣವನ್ನು ಹೇಳಿದಿಯೊ? ಎಲ್ಲಿಯು ಕಾಣದ ಲಿಂಗಧಾರಣವು ಈ ಪಾತ್ರಾಪಾತ್ರ ಶ್ಲೋಕದಲ್ಲಿಯೇ ಬಂದುದೇಕೆ? ಬಂದುದೆಂತು?

ವೀರಶೈವ ಸನಾತನವೆನ್ನುವಲ್ಲಿ ನನ್ನ ಆಕ್ಷೇಪವಿರಲಾರದು. ಆದರೆ ಈ ಧರ್ಮತತ್ವಗಳೂ ಅನುಷ್ಠಾನಗಳೂ ವೇದಕಾಲದಲ್ಲಾಗಲಿ ಉಪನಿಷತ್ಕಾಲದಲ್ಲಾಗಲಿ ಬಳಕೆಯಲ್ಲಿದ್ದುವೆಂದು ಹೇಳಲಾಗದು. ವೇದಮೂರ್ತಿ ಜಗದೀಶ ಶಾಸ್ತ್ರಿಗಳು " ಯುಧಿಷ್ಠಿರಾದಿಗಳ ಕಾಲದಲ್ಲಿಯೂ ದುರ್ವಾಸಾದಿ ವೀರಶೈವ ಬ್ರಹ್ಮರ್ಷಿಗಳು ಇದ್ದರೆಂಬುದಕ್ಕೆ ಭಾರತವೆ ಪ್ರಮಾಣವಾಗಿರುತ್ತದೆ. " ಎಂದು ಬರೆದಿರುವರುವರು. ಅಷ್ಟಾವರಣ ಪಂಚಾಚಾರಗಳು ವೀರಶೈವನಿಗೆ ಅಂಗ ಪ್ರಾಣಮಯವಾಗಿಹವೆಂದು ವೇದಮೂರ್ತಿಗಳು ಒಪ್ಪದಿರಲಿಕ್ಕಿಲ್ಲ. ಅವುಗಳ ಉಲ್ಲೇಖವನ್ನು ಮಹಾಭಾರತದಲ್ಲಿ ತೋರಬಲ್ಲರೊ? ಅದೇಕೆ? ದುರ್ವಾಸ ಮಹರ್ಷಿಯ ಉಲ್ಲೇಖವು ಮಹಾಭಾರತದಲ್ಲಿ ಬಂದ ಒಂದೆಡೆಯಲ್ಲಾದರು ಭಾರತಕಾರನು ಅವನನ್ನು ವೀರಶೈವನೆಂದು ವಿಶೇಷಿಸಿದುದನ್ನು ಆರಾದರು ತೋರಿಸಲಿ!

ಸತ್ಯವಿಂತಿಹುದು. ವೀರಶೈವವು ಆಧ್ಯಾತ್ಮಿಕ ಧರ್ಮಶಾಸ್ತ್ರವು ವೈದಿಕ ಧರ್ಮವು ಮೊತ್ತಮೊದಲು ಯಜ್ಞಮಯವು. ಹಿಂಸಾತ್ಮಕವಾದ ಯಜ್ಞಗಳನ್ನು ಮುಂಡಕಾದ್ಯುಪನಿಷತ್ತುಗಳಲ್ಲಿ ' ಪ್ಲವಾಹ್ಯೇತೇ ಅದೃಢಾಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ । ಏತಚ್ಛ್ರೇಯೋ

ಯೇಭಿನಂದಂತಿ ಮೂಢಾ ಜರಾಮೃತ್ಯುಂತೇ ಪುನರೇವಾಪಿಯಂತಿ" ಮುಂಡಕ ಎಂದು ಮೊದಲಾಗಿ ನಿಂದಿಸಿರುವುದಾದರು ಛಾಂದೋಗ್ಯಾದ್ಯುಪನಿಷತ್ತುಗಳು ಯಾಜ್ಞಿಕ ಉಪಾಸನಗಳಿಂದಲೆ ಪ್ರಾರಂಭವಾಗುತ್ತವೆ. ಛಾಂದೋಗ್ಯದಲ್ಲಿ ಉದ್ಗೀಥವಿದ್ಯೆಯನ್ನೂ ಬೃಹದಾರಣ್ಯಕವು ಅಶ್ವಮೇಧ ಯಜ್ಞಾಂಗವಾಗಿ ಮೇಧ್ಯಾಶ್ವದಲ್ಲಿ ಪ್ರಜಾಪತಿತ್ವಾರೋಪಣವನ್ನೂ ನೋಡಿರಿ. "ಓಮಿತ್ಯೇದಕ್ಷರ ಮುದ್ಗೀಥಮುಪಾಸೀತ" ಎಂದು ಛಾಂದೋಗ್ಯವೂ "ಉಷಾವಾ ಅಶ್ವಸ್ಯ ಮೇಧ್ಯಸ್ಯಶಿರ" ಎಂದು ಬೃಹದಾರಣ್ಯಕವೂ ಮೊದಲಾಗುತ್ತವೆ. ಇಷ್ಟ ಪ್ರಾಣ ಭಾವಲಿಂಗಗಳನ್ನು ಕಂಣಿನಲ್ಲಿ ಎಂಣೆ ಹಾಕಿಕೊಂಡು ಹುಡುಕಿದರೂ ದಶೋಪನಿಷತ್ತುಗಳಲ್ಲಿ ಕಾಣೆವು. ಅಂಗ ಷಟ್‌ಸ್ಥಲಗಳೂ ಲಿಂಗ ಷಟ್‌ಸ್ಥಲಗಳೂ ಉಪನಿಷತ್ತುಗಳಲ್ಲಿ ದೊರೆಯಲಾರವು. ಅಲ್ಲಿ ಯಜ್ಞಧರ್ಮದ ಉಲ್ಲೇಖಗಳೆ ತುಂಬಿವೆ. ಅಧ್ಯಾತ್ಮಶಾಸ್ತ್ರವು ಕರ್ಮಕಾಂಡದ ತೊಡಕಿನಿಂದ ಬಿಡುಗಡೆಯಾಗುವುದು ದುಸ್ತರವಾಗಿದ್ದಿತು. ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯ ಮತದರ್ಥಾನಾಂ" ಎಂದು ಜೈಮಿನಿಯು ಉಪನಿಷದ್ವಾಕ್ಯಗಳು ಕರ್ಮಾಂಗವೆಂದು ಸಾಧಿಸಿದನು. ವ್ಯಾಸನು ಉಪನಿಷತ್ತುಗಳು ಆತ್ಮಜ್ಞಾನವನ್ನು ಉಂಟು ಮಾಡುವುವೆಂದು ಪ್ರಸ್ಥಾಪಿಸಲು ಮೊದಲಿಗನು. ಅವನು ಬರೆದ ಉತ್ತರ ಮೀಮಾಂಸೆಯು ಉಪನಿಷದ್ವಾಕ್ಯಾರ್ಥವನ್ನು ಬಿತ್ತರಿಸುವುದು. ಆ ನಾಲ್ಕು ಅಧ್ಯಾಯಗಳನ್ನೊಳಗೊಂಡ ಪ್ರಬಂಧದಲ್ಲಿ ಒಂದು ಸೂತ್ರದಲ್ಲಾದರು ಅನನ್ಯ ಸಾಧಾರಣವಾಗಿ ವೀರಶೈವ ಬೋಧಕವಾದ ಗುರುಲಿಂಗಾದಿ ಶಬ್ದವನ್ನಾಗಲಿ, ಪ್ರಸಾದ ಪಾದೋದಕ ವಿಚಾರವನ್ನಾಗಲಿ, ಪಂಚಾಚಾರಗಳನ್ನಾಗಲಿ ನಾವು ಕಾಣೆವು.

ಆಧ್ಯಾತ್ಮಶೋಧಕರು ಹಿಂಸಾತ್ಮಕ ಯಜ್ಞಧರ್ಮಕ್ಕೆ ಹೆಚ್ಚೆಚ್ಚು ಹೇಸುತ್ತ ಯೋಗಮಾರ್ಗವನ್ನು ಕಂಡು ಹಿಡಿದು ಅವಲಂಬಿಸಹತ್ತಿದರು. ಯೋಗಮಾರ್ಗವು ಮುಂದರಿಯುತ್ತ ಭಕ್ತಿಮಾರ್ಗದಲ್ಲಿ ಪರಿಣಮಿಸಹತ್ತಿತು. ಇದರ ಹೆಜ್ಜೆಗಳನ್ನು ನಾವು ಅಥರ್ವಶಿಖಾದ್ಯುಪನಿಷತ್ತುಗಳಲ್ಲಿ ಮುಖ್ಯವಾಗಿ ಶ್ವೇತಾಶ್ವತರದಲ್ಲಿ ನೋಡುತ್ತೇವೆ. ಆತ್ಮಜ್ಞಾನ ಪ್ರದವಾದ ಉಪನಿಷತ್ತುಗಳ ಮಹಾವಾಕ್ಯಗಳನ್ನು ಚಿಂತಿಸುತ್ತ ಹೋಗುವ ಆಧ್ಯಾತ್ಮಯೋಗಿಗಳು ಕೆಲರು ಕರ್ಮಕಾಂಡದಿಂದ ಅತಿ ದೂರವಾಗಿಯು ಇನ್ನುಳಿದವರು ಅಷ್ಟೊಂದು ದೂರವಲ್ಲಾಗಿಯು ಸರಿದರು. ವ್ಯಾಸನಾದರೊ

ಅಷ್ಟುದೂರ ಸಾರದೆ, ಯಜ್ಞಗಳು ಆತ್ಮನಲ್ಲಿ ಅದೃಷ್ಟವೆಂಬ ಸಂಸ್ಕಾರ ವನ್ನುಂಟುಮಾಡಿ ಸ್ವರ್ಗಫಲವನ್ನು ಕೊಡುತ್ತವೆ ಯಜ್ಞಗಳಿಂದಲೆ ಫಲವು ಯಜ್ಞಫಲಪ್ರದನಾದ ಈಶ್ವರನನ್ನು ಅಂಗೀಕರಿಸುವುದು ಆವಶ್ಯಕವಲ್ಲ; ಧರ್ಮವು ವೇದವಿಧಿಮಾತ್ರ ರೂಪವಾದುದು ಈಶ್ವರಾಜ್ಞಾರೂಪವಾದು ದಲ್ಲ ಎಂದು ಜೈಮಿನಿಯು 'ಭಾವಾರ್ಥಾಃ ಕರ್ಮಶಬ್ದಾಸ್ತೇಭ್ಯಃ ಕ್ರಿಯಾ ಪ್ರತೀಯೇತೈಷಹ್ಯರ್ಥೋ ವಿಧೀಯತೇ' ಅಧ್ಯಾಯ ೨ ಪಾದ೧ ಸೂತ್ರ೧ ಚೋದನಾ ಪುನರಾರಂಭಃ ಅ ೨ ಪಾ ೧ ಸೂ ೫ ಸೂತ್ರಗಳಿಂದ ಹೇಳು ವನು. 'ಅಗ್ನಿಹೋತ್ರಂಜುಹುಯಾತ್ ಸ್ವರ್ಗಕಾಮಃ' ಉದ್ಭಿದಾಯ ಜೇತ ಪಶುಕಾಮಃ' ಮುಂತಾದ ವಿಧಿವಾಕ್ಯಗಳಿಂದ "ಯಜೇತ" ಎಂಬ ಆಖ್ಯಾತಪದವು ಧರ್ಮದಲ್ಲಿ ತ್ರೈವರ್ಣಿಕವನ್ನು ಪ್ರೇರಿಸುವುದು. ಅಗ್ನಿ ಹೋತ್ರಹೋಮದಿಂದ ಸ್ವರ್ಗವನ್ನು ಭಾವಿಸಬೇಕು. ಉದ್ಭಿದ್ಯಾಗದಿಂದ ಪಶುಗಳನ್ನು ಭಾವಿಸಬೇಕು ಎಂಬ ಅರ್ಥ. ಉತ್ತರಕ್ಷಣದಲ್ಲಿ ಉಳಿಯದ ಅಗ್ನಿಹೋತ್ರ ಹೋಮದಿಂದಲೂ ಉದ್ಭಿದ್ಯಾಗದಿಂದಲೂ ಕಾಲಾಂತರದಲ್ಲಿ ಸ್ವರ್ಗವೂ ಪಶುಗಳೂ ಎಂತು ಸಂಭವಿಸುವುವೆಂದರೆ ಜೈಮಿನೀಯ ಸಿದ್ಧಾಂ ತವು. ವಿಧಿವಾಕ್ಯಬಲದಿಂದ ಅಪೂರ್ವ ಅಥವಾ ಅದೃಷ್ಟವೆಂದು ಕಲ್ಪಿಸಿ ಅದೃಷ್ಟವು ಫಲವನ್ನು ಕೊಡುವುದೆಂಬುದು. ಆದರಿಂದ ಧರ್ಮಕ್ಕೆ ವಿಧಿ ವಾಕ್ಯವೆ ಪ್ರಮಾಣವು ಮತ್ತು ಪ್ರೇರಕವು ಎಂದು ತಾತ್ಪರ್ಯವು. ವೇದ ಶಬ್ದವೆ ಧರ್ಮಪ್ರೇರಕವೆಂಬರ್ಥ. ಈ ಮತವೆ ಮೊತ್ತ ಮೊದಲಿನ ವೈದಿಕ ಮತವು ಇಲ್ಲಿ ಈಶ್ವರಾಂಗೀಕಾರವಿಲ್ಲ.

ಏಷಹ್ಯೇವ ಸಾಧು ಕರ್ಮಕಾರಯತಿ ತಂಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ ಏಷಹ್ಯೇವಾ ಸಾಧು ಕರ್ಮ ಕಾರಯತಿ ತಂಯಮಧೋ ನಿನೀಷತೇ॥ ಕೌಷೀತಕೀ ಉಪನಿಷದ್ ೩।೮ ಯ ಆತ್ಮನಿ ತಿಷ್ಠನ್ನಾತ್ಮಾನ ಮಂತರೋಯಮಯತಿ। ಬೃಹದಾರಣ್ಯಕೆ ಎಂಬ ಮೊದಲಾದ ಉಪ ನಿಷದ್ವಾಕ್ಯಗಳೂ "ತತ್ಸವಿತು ರ್ವರೇಣ್ಯಂಭರ್ಗೋದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್" ಎಂಬ ಗಾಯತ್ರ್ಯಾದಿಋಕ್ಕು ಗಳೂ, ಅಷ್ಟರಲ್ಲಿ ಈಶ್ವರ ಪ್ರೇರಣೆಯಿಂದಲೆ ಸರ್ವ ಜಂತುಗಳು ತಮ್ಮ ತಮ್ಮ ಕಾರ್ಯ ಪ್ರವರ್ತಿಸುವರೆಂದು ಸಾರುವುವಾದುವು. ನಿರೀಶ್ವರನಾದ ಜೈಮಿನಿಯು ವೇದ ಶಬ್ದಗಳಲ್ಲಿಯ ಯಜೇತ್ ಎಂಬ ಆಖ್ಯಾತ ಪದವು ಧರ್ಮ ಪ್ರೇರಕವೆಂಬುದನ್ನಳಿದು ವ್ಯಾಸನು ಏಷಹ್ಯೇವ ಮುಂತಾದ ಶ್ರುತಿ

ಗಳಿಂದ ಈಶ್ವರನು ಜೀವಾತ್ಮರ ಹೃದಯದಲ್ಲಿ ಅವರವರವಾಸನಾನು ಗುಣವಾಗಿ ಪ್ರೇರಕವೆಂಬ ಸಿದ್ಧಾಂತವನ್ನು "ಪರಾತ್ತು ತಚ್ಛ್ರುತೇ" ೨-೩-೪೧ ಫಲ ಮತ ಉಪಪತ್ತೇಃ ೩-೨-೩೮ ಎಂಬ ಸೂತ್ರಗಳಿಂದ ಸ್ಥಾಪಿಸಿದನು.

ಇಲ್ಲಿ ಆಖ್ಯಾತ ಪದದಿಂದ ಬೋಧಿಸಲ್ಪಡುವುದೆಂದು ಜೈಮಿನಿಯು ಕಲ್ಪಿಸಿದ ಜಡವಾದ ಅದೃಷ್ಟವು ಸ್ವರ್ಗಾಧಿಪತಿಗಳನ್ನು ಕೊಡಲಾರದೆಂದು ಬಾದರಾಯಣನು ಪ್ರತಿಷ್ಠಿಸಿ ಈಶ್ವರಸಿದ್ಧಿಯನ್ನು ಮಾಡಿದನಾದರು, ಯಾಗವು ಹಿಂಸಾಮಯವಾದದರಿಂದ ಅದನ್ನು ಬಿಡಬೇಕೆಂದು ಹೇಳ ಹೋಗಲಿಲ್ಲ.– "ಅಶುದ್ಧ ಮಿತಿಚೇನ್ನ ಶಬ್ದಾತ್ ೩-೧-೨೫ ಈ ಸೂತ್ರವು "ಅಗ್ನೀಷೋಮೀಯಂ ಪಶುಮಾಲಭೇತ" ಎಂದು ಶ್ರುತಿಯು ಯಾಗದಲ್ಲಿ ಪಶುಹಿಂಸೆಯನ್ನು ಹೇಳುವುದರಿಂದ ಅಂತಪ್ಪ ವಧವು ಅಧರ್ಮವಲ್ಲ ವೆಂದು ಬೋಧಿಸುವುದು. ಅಂದರೆ ವ್ಯಾಸನು ಈಶ್ವರನು ಜೀವಪ್ರೇರಕ ನೆಂದು ಹೇಳಿದರು, ''ಆಲಭೇತ'' ಎಂಬ ಆಖ್ಯಾತ ಪದವು ಈಶ್ವರನ ಆಜ್ಞಾರೂಪವಾಗಿ ಮನುಷ್ಯನನ್ನು ಯಾಗದಲ್ಲಿ ಪ್ರೇರಿಸುವುದೆಂದು ಅಭಿ ಪ್ರಾಯವನ್ನು ತೋರಿಸಿದನು.

ಜೈಮಿನಿಯ ಮತವು ಮನುಷ್ಯನ ಅಂತಃಕರಣದ ಹಿಂಸಾಹಿಂಸೆ ಗಳ ವಿವೇಕಕ್ಕೆ ಆಸ್ಪದವನ್ನೀಯದೆ, ಆಲಭೇತ ಎಂಬ ಶ್ರುತಿಗೆ ಸರ್ವ ಸ್ವತಂತ್ರತೆಯನ್ನಿತ್ತು ಪಶುಹಿಂಸಾತ್ಮಕ ಯಾಗವನ್ನು ಮಾಡುವುದೆ ಧರ್ಮ ವೆಂದನು. ವ್ಯಾಸನು ಈಶ್ವರನೆ ಪ್ರೇರಕನೆಂದು ಹೇಳುತ್ತ ಆ ಶಬ್ದವೆ ಧರ್ಮಾಧರ್ಮನಿರ್ಣಾಮಕವೆಂದು ಸಾರಿದನು.

ಇಲ್ಲಿ ಸ್ವವಿಮರ್ಶೆಯು ಅಷ್ಟೊಂದು ಇಲ್ಲ. ಶ್ರುತಿಯು ಏನು ಹೇಳು ತ್ತಿದೆ ಎಂಬ ವಿಚಾರದ ಅಂಶವೆ ಅಧಿಕವಾಗಿದೆ. ಶ್ರುತಿಯ ಪದವಾಕ್ಯ ಗಳನ್ನು ವಿಸ್ತರಿಸಿ ತಿಳುಕೊಳ್ಳುವುದೇ ಜ್ಞಾನವು. ಆ ಪದ ವಾಕ್ಯಗಳನ್ನು ತಿಳಿಯಲಿಕ್ಕೆ ತಕ್ಕಷ್ಟು ತರ್ಕವು ಗ್ರಾಹ್ಯವು. ಶ್ರುತಿ ಪ್ರಮೇಯದ ಸದ ಸತ್ವವನ್ನು ವಿಚಾರಿಸುವ ತರ್ಕವು ಅಗ್ರಾಹ್ಯವು ಎಂದು ಉತ್ತರಮೀ ಮಾಂಸೆಯ ಅಂದರೆ ವ್ಯಾಸನ ಅಭಿಪ್ರಾಯವು.

ಈ ಮತದಿಂದ ಬರಬರುತ್ತ ಯಜ್ಞಗಳು ಶಿವಭಕ್ತಿಗೆ ಅಂಗವಾ ದುವು. ಯಜ್ಞಗಳಿಂದ ಶಿವನನ್ನು ಆರಾಧಿಸತಕ್ಕದೆಂದು ಮತವಾಯ್ತು. ಬರ ಬರುತ್ತ ಯಜ್ಞವು ಲಿಂಗಪೂಜೆಯಲ್ಲಿ ಪರಿಣಮಿಸಿತು. ಯಜ್ಞೇಶ್ವರಂ ಮಹಾ

ರುದ್ರಂ ಪೂಜಯಂತೋ ಧರೇಣತೇ। ಲಿಂಗೇಗ್ನಿ ಹೊತ್ರೇ ಸೂರ್ಯೇಚ ರುದ್ರಸೂಕ್ತ ಜಪಾದರುಃ॥ ಶಿವರಹಸ್ಯ ಪ್ರಥಮಾಂಶ ೪ ಎಂಬ ಶಿವ ರಹಸ್ಯ ಪ್ರಮಾಣವು ಯಜ್ಞಗಳಿಂದ ಹೇಗೊ ಹಾಗೆಯೆ ಲಿಂಗದಲ್ಲಿ, ಅಗ್ನಿ ಹೋತ್ರದಲ್ಲಿ, ಸೂರ್ಯ ಮಂಡಲದಲ್ಲಿ ಶಿವಪೂಜೆಯನ್ನು ವಿವರಿಸುತ್ತಿದೆ.

ದಕ್ಷಬ್ರಹ್ಮನು ಶಿವನನ್ನು ಧಿಕ್ಕರಿಸಿ ಯಜ್ಞವನ್ನು ಹೂಡಿ ಶಿವ ದ್ರೋಹಿಯೆನಿಸಿದನು. ಯಜ್ಞಗಳನ್ನು ಶಿವಾರಾಧನವಾಗಿ ಮಾಡುತ್ತ ಅನ್ಯ ಮತವನ್ನು ಖಂಡಿಸಿ ಧಿಕ್ಕರಿಸಿದವರು ವೀರಮಹೇಶ್ವರರೆನಿಸಿದರು.

ಯಜ್ಞ ಪ್ರಧಾನವಾದ ಶಿವಪೂಜೆಯುಳ್ಳನಕ ಶಿವಭಕ್ತನು ಶೈವ ನಿರಲಿ, ವೀರಶೈವನಿರಲಿ ಕರ್ಮಕಾಂಡ ವಿಹಿತ ವರ್ಣಭೇದವು ಅಪರಿ ಹಾರ್ಯವಾಗಿದ್ದಿತು. ಮುಂದೆ ಲಿಂಗಪೂಜೆಯು ಯಜ್ಞದ ಸ್ಥಳವಲ್ಲಿ ಬಂದು ದಾದರು, ಹೋಮ ಹವಿಸ್ಸುಗಳನ್ನೆ ಮುಂದುಗೊಂಡಿದ್ದಿತು. ಕಾಮಿಕಾ ದ್ಯಾಗಮಗಳಲ್ಲಿ ಲಿಂಗ ಪ್ರತಿಷ್ಠಾದಿ ವಿಷಯಗಳನ್ನು ನೋಡಿರಿ.

ಲಿಂಗಪೂಜಾವಿಧಿಯು ಶಿವಾಗಮಂಗಳಲ್ಲಿ ಪ್ರಾರಂಭಿಸಿತು. ಈ ಆಗಮಗಳು ವೇದಮಂತ್ರಗಳನ್ನು ಶಿವಾರ್ಚನಾಪರವಾಗಿಯೂ ಶಿವಲಿಂಗ ಶಿವಮೂರ್ತಿ ಪ್ರತಿಷ್ಠಾಪರವಾಗಿಯೂ ಬಳಸಹತ್ತಿದುವು— “ಅಗ್ನಿಹೋ ತ್ರಾಶ್ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ। ಶಿವಲಿಂಗಾರ್ಚನಸ್ಯೈತೇ ಕೋಟ್ಯಂಶೇನಾಪಿನೋಸಮಾಃ॥ ಕಾಮಿಕಾಗಮ ಶಿವಾರ್ಚನ ಪಟಲ ೧೧ ಎಂದು ಶಿವಲಿಂಗಾರ್ಚನವೆ ಅಧಿಕವಾದುದೆಂದು ಸಾರಿದುವು.

ಕೇವಲ ವೈದಿಕ ಸಂಸ್ಕಾರಗಳು ಈ ಲಿಂಗಪೂಜಾಧಿಕಾರವನ್ನು ಕೊಡಲಾರವು. ಅದಕ್ಕೆ ದೀಕ್ಷಾಸಂಸ್ಕಾರವು ಬೇಕು. ದೀಕ್ಷೆ ಇಲ್ಲದ ಲಿಂಗಪೂಜಾಧಿಕಾರವಿಲ್ಲೆಂದು ಆಗಮಗಳು ದೀಕ್ಷಾ ಸಂಸ್ಕಾರವನ್ನು ಬಳ ಕೆಯಲ್ಲಿ ತಂದುವು.

ಅದೀಕ್ಷಿತಶ್ವಯೋ ವಿಪ್ರಶ್ಚತುರ್ವೇದಧರೋಪಿವಾ।
ಸಂಸ್ಪೃಶೇದ್ಯದಿವಾಲಿಂಗಂ ಶುನಕಾತ್ಪರತೋ ಭವೇದ್॥
ಶೈವ ರತ್ನಾಕರದಲ್ಲುದಾಹರಿಸಿದ ಆಗುಮವಾಕ್ಯವು.

ಇಂತು ಶಿವಲಿಂಗಾರ್ಚನವು ಯಜ್ಞಾದಿಗಳಿಗಿಂತ ಅಧಿಕವಾದುದೆಂದು ಸಾರುವಲ್ಲಿ ಆಗಮಗಳು ಪೂರ್ವೋತ್ತರಮೀಮಾಂಸೆಗಳೆರಡನ್ನೂ ಮೀರಿ ದುವು. ಏಕೆಂದರೆ ಉತ್ತರ ಮೀಮಾಂಸೆಯು ಸಾಧನಾಧ್ಯಾಯವೆನಿಸಿದ

ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ವಿದ್ಯೆಯು ಪುರುಷಾರ್ಥಸಾಧಕವಹುದೊ, ಆಗದೋ ಎಂಬ ವಿಚಾರವಿದೆ. ಇದರಲ್ಲಿ ಬಾದರಾಯಣನು "ಪುರುಷಾರ್ಥೋ೯ ಅತಃ ಶಬ್ದಾತ್" ೧ ಎಂದು ಸೂತ್ರಿಸಿ ಆತ್ಮವಿದ್ಯೆಯು ಮೋಕ್ಷವೆಂಬ ಫಲವನ್ನು ನೀಡುವಲ್ಲಿ ಸ್ವತಂತ್ರವೆಂದು ಸ್ವಸಿದ್ಧಾಂತವನ್ನು ಹೇಳುವನು. ಎರಡನೆಯಿಂದ ಏಳನೆಯ ಸೂತ್ರದ ವರೆಗೆ ಜೈಮಿನಿಯು ಕರ್ಮಕಾಂಡ ಮತವನ್ನು ಅನುವಾದಿಸಿ ಉಪನಿಷದ್ವಾಕ್ಯಗಳು ಕರ್ಮಕಾಂಡಕ್ಕೆ ಅರ್ಥವಾದ ಮಾತ್ರವು ಕರ್ಮಕಾಂಡದ ವಿಧಿಗಳಿಂದಲೆ ಸ್ವರ್ಗವೆಂಬ ಪುರುಷಾರ್ಥವು ಎಂದು ಅವನ ಸಿದ್ಧಾಂತವನ್ನು ಸೂಚಿಸಿ ಎಂಟನೆಯಿಂದ ಹದಿನೇಳನೆಯ ತನಕ ಸೂತ್ರಗಳಲ್ಲಿ ಜೈಮಿನಿಯ ಮತವನ್ನು ಖಂಡಿಸಿ ಸ್ವಸಿದ್ಧಾಂತವನ್ನು ನೆಲೆಗೊಳಿಸುವನು.

ಹೀಗೆ ಸಾಧಿಸುವಲ್ಲಿ ಹದಿನೇಳನೆಯ ಸೂತ್ರವಿದು. "ಊರ್ಧ್ವರ್ದೇತಃಸುಚ ಶಬ್ದೇ ಹಿ" ಶ್ರುತಿಯಲ್ಲಿ ಸನ್ನ್ಯಾಸಾಶ್ರಮವು ಕಂಡುಬರುತ್ತಿದೆ. ಆಶ್ರಮದಲ್ಲಿ ಕರ್ಮಗಳು ನೋಂಕಿಗೆ ಇಂಬಿಲ್ಲ. ಸನ್ನ್ಯಾಸಿಗಳಿಗೆ ಬ್ರಹ್ಮವಿದ್ಯೆಯು ವಿಹಿತವಾಗಿದೆ. "ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ" ಬೃಹದಾರಣ್ಯಕ ೪-೪-೨೨. ಆದುದರಿಂದ ಬ್ರಹ್ಮಜ್ಞಾನವು ಸ್ವತಂತ್ರವಾಗಿ ಪುರುಷಾರ್ಥವನ್ನು (ಮೋಕ್ಷವನ್ನು) ಕೊಡಬಲ್ಲುದು ಎಂದು ಬಾದರಾಯಣನು ಹೇಳಿದುದಕ್ಕೆ ಜೈಮಿನೀಯರು ಪರಾಮರ್ಶಂ ಜೈಮಿನಿರಚೋದನಾ ಚಾಪವದತಿಹಿ" ೧೮ ಎಂಬ ಸೂತ್ರದಲ್ಲಿ ಸನ್ನ್ಯಾಸವು ಶ್ರುತಿವಿಹಿತವಾದುದಲ್ಲ. ಸ್ಮೃತ್ಯಾಚಾರಗಳಿಂದ ಲೋಕಪ್ರಸಿದ್ಧವಾದುದು. "ತ್ರಯೋಧರ್ಮಸ್ಕಂಧಾಃ" ಛಾಂದೋಗ್ಯ ಎಂಬ ಮುಂತಾದ ಶ್ರುತಿಗಳು ಈ ಲೋಕಪ್ರಸಿದ್ಧವಾದ ಸನ್ನ್ಯಾಸವನ್ನು ಪರಾಮರ್ಶಿಸುತ್ತವಲ್ಲದೆ ವಿಧಿಸುವುದಿಲ್ಲ. ಎನ್ನುತ್ತ ಸನ್ನ್ಯಾಸವು ವೈದಿಕವಲ್ಲೆಂದು ವಾದಿಸುವರು. (ಬಳಕೆಯಲ್ಲಿದ್ದುದನ್ನು ಮಾತ್ರ ಹೇಳುವುದು ಪರಾಮರ್ಶವು. ಲೋಕದ ಬಳಕೆಯಲ್ಲಿಲ್ಲುದನ್ನು ಆಜ್ಞಾಪಿಸುವುದು ವಿಧಿಯು ವೇದದಿಂದ ವಿಧಿಸಲ್ಪಟ್ಟುದೊಂದೆ ವೈದಿಕವು.)

ಇದಕ್ಕುತ್ತರವನ್ನು ೧೯ ನೆಯ ಮತ್ತು ೨೦ ನೆಯ ಸೂತ್ರಗಳಿಂದ ವಿವರಿಸಿ, ಆತ್ಮಜ್ಞಾನವು ಪುರುಷಾರ್ಥಕರವೆಂಬ ಸಿದ್ಧಾಂತವನ್ನು ದೃಢೀಕರಿಸುವನು. 'ಸ್ತುತಿಮಾತ್ರ ಮುಪಾದಾನಾದಿತಿ ಚೇನ್ನಾಪೂರ್ವತ್ವಾತ್'

೨೧ 'ಭಾವಶಬ್ದಾಚ್ಚ' ೨೨ ಎಂಬೀ ಸೂತ್ರಗಳಲ್ಲಿ "ಓಮಿತ್ಯೇತದಕ್ಷರಮು ದ್ಗೀತಮುಪಾಸೀತ" ಛಾಂದೋಗ್ಯ. ಎಂಬಿವಾದಿಯಾದ ಉಪನಿಷದ್ವಾ ಕ್ಯಗಳು ಉದ್ಗೀಥಾದ್ಯುಪಾಸನವನ್ನು ವಿಧಿಸುತ್ತವೆ, ಬರಿ ಹೊಗಳುವುದಿಲ್ಲ ಎಂದು ಸ್ಥಾಪಿಸುವನು.

'ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್' ೨೩ 'ತಥಾ ಚೈಕವಾಕ್ಯತೋಪಬಂಧಾತ್' ೨೪ ಎಂಬೀ ಸೂತ್ರದ್ವಯವು ಉಪನಿಷ ತ್ತುಗಳಲ್ಲಿ ಹೇಳಿದ ಆಖ್ಯಾನೋಪಾಖ್ಯಾನಗಳು ವಿದ್ಯಾಂಗವಾಗಿವೆ ಎಂದು ಸ್ಥಾಪಿಸುತ್ತಿವೆ. ಅತ ಏವಚ ಅಗ್ನೀಂಧನಾದ್ಯ ನಪೇಕ್ಷಾ ೨೫ ಈ ಸೂತ್ರವು ಪ್ರಥಮಸೂತ್ರದಲ್ಲಿ ಹೇಳಿದ ಸಿದ್ಧಾಂತವನ್ನು ಪುನಃ ಸ್ಮರಿಸಿ ಆಶ್ರಮಕ ರ್ಮಗಳು ಅಪೇಕ್ಷಿತ ವಿದ್ಯಾಸಿದ್ಧಿಗೆ ಹೇತುವಾಗಬಹುದೆಂದು ಸರ್ವಾ ಪೇಕ್ಷಾ ಚ ಯಜ್ಞಾದಿ ಶ್ರುತೇರಶ್ವವತ್' ೨೬ ಎಂಬೀ ಸೂತ್ರವು ಪ್ರತಿ ಷ್ಠಾಪಿಸುವುದು.

ಈ ಸೂತ್ರಗಳಲ್ಲಾಗಲಿ, ಅವುಗಳಿಗೆ ವಿಷಯವಾದ ಉಪನಿಷದ್ವಾಕ್ಯ ಗಳಲ್ಲಾಗಲಿ, ಲಿಂಗಪೂಜೆಯ ಆಧಿಕ್ಯವು ಕಂಡುಬರುವುದಿಲ್ಲ. ಈ ಉತ್ತರ ಮೀಮಾಂಸೆಗೆ ಶಕ್ತಿ ಶಿವಾದ್ವೈತ ಭಾಷ್ಯವನ್ನು ಬರೆದ ಶ್ರೀ ಕಂಠಾ ಚಾರ್ಯನು ಅತ್ಯಂತ ಶಿವಭಕ್ತನು. ಓಂ ನಮೋಹರಿ ಪದಾರ್ಥಾಯ ಲೋಕಾನಾಂ ಸಿದ್ಧಿಹೇತವೇ। ಸಚ್ಚಿದಾನಂದ ರೂಪಾಯ ಶಿವಾಯ ಪರ ಮಾತ್ಮನೇ॥ ಎಂದು ಆತನ ಭಾಷ್ಯವು ಪ್ರಾರಂಭವಾಗುವುದು. ವಯಂ ತುವೇದ ಶಿವಾಗಮಯೋರ್ಭೇದಂ ನ ಪಶ್ಯಾಮಃ ವೇದೇಪಿ ಶಿವಾಗಮ ಇತಿ ವ್ಯವಹಾರೋ ಯುಕ್ತಃ ತಸ್ಯ ತತ್ಕರ್ತೃಕತ್ವಾತ್ ಅತಃ ಶಿವಾಗಮೋ ದ್ವಿವಿಧಃ ತ್ರೈವರ್ಣಿಕ ವಿಷಯಃ ಸರ್ವವಿಷಯಶ್ಚೇತಿ ವೇದ ಸ್ತ್ರೈವರ್ಣಿಕ ವಿಷಯಃ ಸರ್ವವಿಷಯಃಶ್ಚಾನ್ಯಃ ಉಭಯೋರೇಕ ಏವಶಿವಃ ಕರ್ತಾ, 'ಈಶಾನಃ ಸರ್ವವಿದ್ಯಾನಾಂ' ಅಸ್ಯಮಹತೋ ಭೂತಸ್ಯ ನಿಶ್ವಸಿತಂ ಇತ್ಯಾ ದಿಶ್ರುತ್ಯ.

ಅಷ್ಟಾದಶಾನಾಮೇತಾಸಾಂ ವಿದ್ಯಾನಾಂ ಭಿನ್ನವರ್ತ್ಮನಾಂ।
ಆದಿಕರ್ತಾ ಶಿವಃ ಸಾಕ್ಷಾಚ್ಛೂಲ ಪಾಣಿರಿತಿ ಶ್ರುತಿಃ॥

ಇತಿ ಸ್ಮೃತ್ಯಾಚ ವೇದೇತಸ್ಯ ಕರ್ತೃತ್ವಮವಗತಮ ಅನ್ಯತ್ರಾಪಿ ತಸ್ಯೈವ ಪರಮೇಶ್ವರಸ್ಯ ಅತಃ ಕರ್ತೃಸಾಮಾನ್ಯದುಭಯ ಮಪ್ಯೇಕಾ ರ್ಥಪರಂ ಪ್ರಮಾಣಮೇವ. ಯದ್ವಾ ಪಂಚಬ್ರಹ್ಮ ಪ್ರಣವ ಪಂಚಾಕ್ಷರೀ

ಪ್ರಾಸಾದಾದಿ ಮಂತ್ರಾಣಾಂ ಪಶುಪತಿ ಪಾಶಾದಿವಸ್ತು ವ್ಯವಹಾರಾಣಾಂ ಭಸ್ಮೋದ್ಧೂಲನ ತ್ರಿಪುಂಡ್ರ ಧಾರಣ ಲಿಂಗಾರ್ಚನ ರುದ್ರಾಕ್ಷಧಾರಣಾದಿ ಪರಧರ್ಮಾಣಾಮನ್ಯೇಷಾಂಚ ಸರ್ವೇಷಾಂ ವ್ಯವಹಾರಾಣಾಂ ಮುಭಯತ್ರಾಪಿ ದರ್ಶನಾದುಃ ಭಾವಿಪಿ ಪ್ರಮಾಣಭೂತೌ ವೇದಾಗಮೌ.

ಅಂದರೆ ಭಾಷ್ಯದ ಪ್ರಾರಂಭದ ಮಂಗಲಶ್ಲೋಕದಿಂದ ಉಪನಿಷತ್ತುಗಳಲ್ಲಿ ವಿವರಿಸಿದ ಬ್ರಹ್ಮವು ಶಕ್ತಿ ವಿಶಿಷ್ಟ ಶಿವತತ್ವವೆಂದೂ ಆ ಶಿವತತ್ವವೆ, ಸರ್ವಲೋಕಸಿದ್ಧಿಹೇತುವೆಂದೂ, ಅದುವೆ ಉಪನಿಷತ್ತಿನಲ್ಲಿ ಬೋಧಿಸಿದ ದಹರಾದ್ಯುಪಾಸನಾವಿಷಯವೆಂದೂ ಶ್ರೀಕಂಠಾಚಾರ್ಯನು ಪ್ರತಿಷ್ಠಿಸುವನು.

ಅನ್ಯಮತನಿರಾಸಕವಾದ ಎರಡನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿಯ ಪಾಶುಪತಾಧಿಕರಣವನ್ನು ಶಂಕರಾದ್ಯಾಚಾರ್ಯರು ಶಿವಾಗಮಗಳು ಅಪ್ರಮಾಣವೆಂದು ಅನ್ವಯಿಸುವರು. ಶ್ರೀಕಂಠಾಚಾರ್ಯನು ಹಾಗೆ ಅನ್ನುವುದಿಲ್ಲ. ಅವನ ಮತವಿದು. ಶ್ರುತಿಯು ಬ್ರಹ್ಮವು ಜಗತ್ತಿಗೆ ನಿಮಿತ್ತ ಉಪಾದಾನವೆಂಬ ಎರಡೂ ತೆರನಾದ ಕಾರಣವೆಂದು ಹೇಳುತ್ತಿರುವಂತೆ ಶಿವಾಗಮಗಳೂ ಹೇಳುತ್ತಿರುವುವು. ಆಗಮಗಳ ಅಭಿಪ್ರಾಯವನ್ನರಿಯದ ಹಲವರು ಶಿವಾಗಮಗಳು, ಶಿವನು ನಿಮಿತ್ತ ಕಾರಣ ಮಾತ್ರವಲ್ಲದೆ ಉಪಾದಾನಕಾರಣವಲ್ಲೆಂದು ಹೇಳುವುವು ಎಂದು ತಿಳಿಯುವರು. ಅಂತ ಹರಮತವು ಅಪಸಿದ್ಧಾಂತವೆಂದು ಈ ಅಧಿಕರಣದ ತಾತ್ಪರ್ಯವನ್ನು ಹೇಳಿ ತನ್ನ ಮತವು ವೇದ ಶಿವಾಗಮಗಳು ಒಂದೆಯಾಗಿವೆ ಎಂದು ಹೇಳುವನು. ವೇದ ಶಿವಾಗಮವೆಂಬೆರಡಕ್ಕೂ ಶಿವನೆ ಕರ್ತನು. ಅದರಿಂದ ವೇದವಾದರು ಶಿವಾಗಮವೆನಿಸುವುದು. ವೇದವು ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ತ್ರೈವರ್ಣಿಕರಿಗೆ ಇನ್ನುಳಿದುದು ಎಲ್ಲ ವರ್ಣದವರಿಗೆ ಧರ್ಮ ಪ್ರಮಾಣವಾಗಿಹುದು. ಅಥವಾ ಪಂಚ ಬ್ರಹ್ಮ ಪ್ರಣವ ಪಂಚಾಕ್ಷರೀ ಪ್ರಸಾದಾದಿ ಮಂತ್ರಗಳೂ, ಪಶುಪತಿ ಪಾಶಾದಿ ಪದಾರ್ಥ ಜ್ಞಾನವೂ, ಲಿಂಗಾರ್ಚನ ಭಸ್ಮಧಾರಣ ರುದ್ರಾಕ್ಷಧಾರಣಾದಿಗಳೂ ವೇದಾಗಮಗಳೆರಡರಲ್ಲಿಯೂ ಪ್ರತಿಪಾದಿತವಾಗಿರುವುದರಿಂದ ವೇದಾಗಮಗಳೆರಡೂ ಪ್ರಮಾಣಭೂತವೆಂದು ಹೇಳುವನು.

ಇಂತು ಪರಮಶೈವನಾದ ಶ್ರೀಕಂಠಾಚಾರ್ಯನು ಆನಂದಮಯಾಧಿಕ ರಣವನ್ನು ಶಿವಚಿಚ್ಛಕ್ತಿ ಪರವಾಗಿಯೂ, ಸಮನ್ವಯಾಧಿಕರಣವನು

ಬ್ರಹ್ಮವು ಶಿವನೆಂದು ಸ್ಥಾಪಿಸುವ ಪರವಾಗಿಯೂ, ಅಂತರಧಿಕರಣವನ್ನು ಸೂರ್ಯಮಂಡಲಗತನು ಶಿವನೆನ್ನುವಲ್ಲಿಯೂ, ಮೊದಲಾಗಿ ಶ್ವೇತಾಶ್ವತರ ಜಾಬಾಲಾದ್ಯುಪನಿಷದ್ವಾಕ್ಯಗಳನ್ನುದಾಹರಿಸಿ ಸ್ಥಾಪಿಸಿರುವನು. ದಹರೋಪಾಸನಾಪರನಾಗಿ ದಹರಾಕಾಶದಲ್ಲುಪಾಸ್ಯವಾದ ಸ್ವರೂಪವು ಶಿವರೂಪವೆಂದು ಸಾರಿಹನು. ವಿಷ್ಣುವು ಶಿವಶಕ್ತಿಯ ಒಂದಂಶವು. ವಿಶ್ವಮಯನು. ಶಿವನು ವಿಶ್ವೋತ್ತೀರ್ಣನು ಎಂದು ಸಮರ್ಪಕವಾಗಿ ತೋರಿಸಿಹನು. ಆದರೆ ಈ ಸಾಧನಾಧ್ಯಾಯದಲ್ಲಿಯ ಸೂತ್ರಗಳು ಯಜ್ಞಾದಿಗಳಿಗಿಂತ ಶಿವಲಿಂಗಾರ್ಚನಾಪರವೆಂದು ತೋರಿಸಿಲ್ಲ. ಅಂದರೆ ಶಿವಾಗಮಗಳ ವಾಕ್ಯಗಳನ್ನುದಾಹರಿಸದೆ ಹಾಗೆ ತೋರಿಸುವುದು ಅಶಕ್ಯವಾಗಿದ್ದಿತು. ವೇದ ಶಿವಾಗಮಂಗಳಿಗೆ ಐಕ ಶಾಸ್ತ್ರವನ್ನು ಲಿಂಗಾರ್ಚನಾದಿ ವಿಷಯದಲ್ಲಿ ತಾನು ಮನಗಂಡಿದ್ದರು ಕೇವಲ ತ್ರೈವರ್ಣಿಕದವರನು ವಿಷಯೀಕರಿಸಿದ ಶ್ರುತ್ಯರ್ಥ ಮೀಮಾಂಸೆಯಲ್ಲಿ ಸರ್ವ ವರ್ಣ ವಿಷಯಕವಾದ ಆಗಮಶ್ರುತಿ ವಾಕ್ಯಗಳನ್ನುದಾಹರಿಸುವುದು ಅಸಾಂದ್ರತವಾದುದರಿಂದ ಶ್ರೀ ಕಂಠಾಚಾರ್ಯನು ಬಿಟ್ಟಿರುವನು.

ಇಂತು ಉತ್ತರಮೀಮಾಂಸಾ ಸೂತ್ರಗಳಲ್ಲಿ ಲಿಂಗಾರ್ಚನಾ ಭಸ್ಮ ರುದ್ರಾಕ್ಷಾದಿ ಧಾರಣಗಳು ಬ್ರಹ್ಮಜ್ಞಾನೋಪಾಯವಾಗಿ ಸೂತ್ರಿಸಲ್ಪಟ್ಟಿಲ್ಲ ಕೇವಲ ಪೂರ್ವಮೀಮಾಂಸೋಕ್ತವಾದ ಧರ್ಮಗಳೆ ಉದಾಹೃತವಾಗಿವೆ. ಸೂತ್ರಘಟಕ ಪದಗಳಲ್ಲಿ ಜೈಮಿನಿಯ ಪೂರ್ವಮೀಮಾಂಸಾಗತ ಶಬ್ದಗಳನ್ನೆ ಕಾಣುತ್ತೇವೆ.

ಕಾಮಿಕಾದ್ಯಾಗಮಗಳು ಲಿಂಗಾರ್ಚನವೆ ಮುಖ್ಯ ಧರ್ಮವೆಂದುವು. ಜಾತೇನಾತ್ಮಧೃಗ್ರಹಾಯೇನ ನಾರ್ಚಿತೋಭಗವಾನ್ ಶಿವಃ। ಸಚಿರಂ ಸಂಚರತ್ಯಸ್ಮಿನ್ ಸಂಸಾರೇ ದುಃಖಸಾಗರೇ ॥

ಜೈಮಿನಿಯ ಪೂರ್ವಕಾಂಡದಂತೆ ಯಾಗೀಯ ಧರ್ಮವೆ ಧರ್ಮವೆಂದು ಒಡಂಬಡುವರಿಗೆ ಅಂತಃಕರಣದ ಸಾತ್ವಿಕ ಪ್ರವೃತ್ತಿಯು ಮುಖ್ಯವಾಗಿರದೆ ವೈದಿಕ ಶಬ್ದವೆ ಮುಖ್ಯ ಧರ್ಮಪ್ರವರ್ತನವಾಗಿದ್ದಿತು. ಅದರಿಂದಲೆ ಜೈಮಿನಿಯು "ಚೋದನಾಲಕ್ಷಣೋಽರ್ಥೋ ಧರ್ಮಃ" ವೈದಿಕ ಶಬ್ದದಿಂದ ವಿಧಿಸಲ್ಪಟ್ಟುದಾಗಿ ಅರ್ಥ(ಪ್ರಯೋಜನಾ) ವುಳ್ಳದೆ ಧರ್ಮವೆಂದ ಲಕ್ಷಿಸಿದನು.

ಉಪನಿಷತ್ತುಗಳನ್ನು ಬಾದರಾಯಣ ಸೂತ್ರಗಳಿಂದ ಕಟ್ಟುವಡೆದು ಓದದೆ ಅವುಗಳನ್ನೆ ಓದಿದರೆ ಅವು ಯಾಜ್ಞಿಕ ಧರ್ಮದಲ್ಲಿಯೇ ಹುಟ್ಟಿದುವಾದರು, ಆ ಧರ್ಮಗಳಿಂದ ಪಾಠಕರನ್ನು ಬಿಡಿಸಿ ಶಮದಮಾದಿ ಸಾಧನಗಳನ್ನು ಮುಖ್ಯವಾಗಿರಿಸಿ ಆತ್ಮಚಿಂತನವನ್ನು ಬಲಿಸುತ್ತವೆಂದು ತೋರುವುದು. "ಸರ್ವಂ ಖಲ್ವಿದಂ ಬ್ರಹ್ಮತಜ್ಜಲಾನಿತಿ ಶಾಂತ ಉಪಾಸೀತ ಅಥ ಖಲು ಕ್ರತುಮಯಃ ಪುರುಷೋ ಯಥಾಕ್ರತುರಸ್ಮಿಲ್ಲೋಕೇತಥೇತಃ ಪ್ರೇತ್ಯ ಭವತಿ ಸಕ್ರತುಂ ಕುರ್ವೀತತ್ರಛಾಂದೋಗ್ಯ ೩—೧೪—೧ ಶಾಂತೋದಾಂತ ಉಪರತಸ್ತಿತಿಕ್ಷುಃಸಮಾಹಿತೋ ಭೂತ್ವಾತ್ಮನ್ಯೇವಾತ್ಮಾನಂ ಪಶ್ಯೇತ್ ಬೃಹದಾರಣ್ಯಕ ೧೪—೪—೨೩ ಎಂಬಿವೆ ಮೊದಲಾದ ಶ್ರುತಿಗಳು ಕರ್ಮಕಾಂಡದ ತೊಡಕಿನಿಂದ ದೂರ ದೂರ ಸರಿಯಲು ನೋಡುತ್ತಿರುವವು. ಬರಬರುತ್ತ ಕೈವಲ್ಯಾದ್ಯುಪನಿಷತ್ತುಗಳಲ್ಲಿ "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಎಂಬ ವಾಕ್ಯಗಳು ಭಕ್ತಿಮಾರ್ಗದ ಪ್ರಾಬಲ್ಯವನ್ನು ಸೂಚಿಸುತ್ತಿವೆ. ಪಂಡಿತೋ ಮೇಧಾವೀ ಆಚಾರ್ಯವಾನ್ ಪುರುಷೋವೇದ ವನು ೬—೧೪ "ಆಚಾರ್ಯದೇವೋಭವ" ಎಂಬಿವಿಕ್ಕೆ ಯಸ್ಯದೇವೇಪರಾಭಕ್ತಿರ್ಯಥಾದೇವೇತಥಾ ಗುರೌತಸ್ಯೈವಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ" ಶ್ವೇತಾಶ್ವತನ ಎಂಬಿವು ಮೊದಲಾದ ಶ್ರುತಿಗಳು ಪ್ರಚಲಿತವಾದುವು.

ಯಜ್ಞಾಂಗವಾದ ಉದ್ಗೀಥಾದಿಗಳಿಂದ ಪ್ರಾರಂಭಿಸದೆ ಶ್ವೇತಾಶ್ವತರವು "ಕಿಂಕಾರಣಂ ಬ್ರಹ್ಮಕುತಃ ಸ್ಮಜಾತಾಜೀವಾಮ ಕೇನ ಕ್ವಚ ಸಂಪ್ರತಿಷ್ಠಾಃ। ಅಧಿಷ್ಠಿತಾಃ ಕೇನ ಸುಖೇತರೇಷು ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಮ" ಎಂದು ಶಿವಜ್ಞಾನದಿಂದಲೇ ಪ್ರಾರಂಭಿಸುವುದು. ಈ ಜಗತ್ತಿಗೆ ಕಾರಣವು ಬ್ರಹ್ಮವೇ? ಬ್ರಹ್ಮದ ಸ್ವರೂಪವೇನು? ನಾವೆಲ್ಲಿಂದ ಹುಟ್ಟಿದೆವು. ನಾವೆಲ್ಲಿ ನಿಂದಿಹೆವು? ಆವುದರಿಂದ ಸುಖದುಃಖಗಳಲ್ಲಿ ವರ್ತಿಸುವೆವು? ಎಲೈ ಬ್ರಹ್ಮವಿತ್ತರೆ ವ್ಯವಸ್ಥೆಯನ್ನು ಹೇಳಿರಿ.

ಹೀಗೆ ಭಕ್ತಿ ಪ್ರಧಾನವಾದ ಮಾರ್ಗವನ್ನು ಆಧ್ಯಾತ್ಮಿಕ ವಿದ್ಯೆಯು ಹಿಡಿಯಹತ್ತುತ್ತಲೇ ಶಿವಾಗಮಗಳ ಪ್ರಾದುರ್ಭಾವವು. ಇದು ವರ್ಣಧರ್ಮದ ತೊಡಕಿನಿಂದ ಬಿಡಿಸಿಕೊಳ್ಳುವ ಮಾರ್ಗದಲ್ಲಿ ಆದಿಶೈವ, ಮಹಾಶೈವ, ಪ್ರವರಶೈವ, ಅನುಶೈವ, ಅಂತರಶೈವ ಎಂಬ ಮೊದಲಾದ ನಾನಾ ತರದ ರೂಪಗಳನ್ನು ಹೊಂದುತ್ತ ಶಿವೈಕತಾನತೆಯಿಂದ ಸರ್ವಾಧಿಕ

ವಾದ ವೀರಶೈವದಲ್ಲಿ ಪರಿಣಮಿಸಿತೆನ್ನುವಲ್ಲಿ ವೀರಾಗಮ, ಪಾರಮೇಶ್ವ ರಾಗಮ, ಸೂಕ್ಷ್ಮಾಗಮ ಮುಂತಾದುವು ಸಾಕ್ಷಿಗಳಾಗಿವೆ. ಇದಕ್ಕೆ ಕಾಲ ವಿಲಂಬವು ಬೇಕು. ಉಪನಿಷತ್ತುಗಳಲ್ಲಿಯೂ ಮಹಾಭಾರತದಲ್ಲಿಯೂ, ಮತ್ತೆಲ್ಲಿಯೂ ಇರುವ ಆಖ್ಯಾನಗಳೂ, ಉಪಾಖ್ಯಾನಗಳೂ ಆಯಾ ಕಾಲದ ಧರ್ಮಭಾವನೆಗಳು ಆವ ಪರಿಯಲ್ಲಿ ನಡೆವಳಿಯಲ್ಲಿದ್ದುವೆಂಬು ದಕ್ಕೆ ಪ್ರಮಾಣವಾಗಿಹವು. ಒಂದು ಆಖ್ಯಾನದಲ್ಲಾಗಲಿ ಉಪಾಖ್ಯಾ ನದಲ್ಲಾಗಲಿ ಲಿಂಗಧಾರಣವು ಬಂದಿಲ್ಲ. ವೀರಶೈವವು ಈ ಸ್ವರೂಪ ದಿಂದ ಆಗ ಇರಲಿಲ್ಲ.

ದೂರ್ವಾಸ ಋಷಿಯು ಶಿವೈಕತಾನತೆಯುಳ್ಳವನೆಂಬುದನ್ನು ನಾವು ಆತನ ಇತಿಹಾಸದಿಂದ ಕಾಣುವೆವು. ಆ ಶಿವೈಕತಾನತೆಯು ಆ ಕಾಲದ ಆಖ್ಯಾನ ಉಪಾಖ್ಯಾನಗಳಿಂದ ಕಂಡುಬರುವಷ್ಟರ ಅಳತೆಗಿಂತ ಹೆಚ್ಚಿರದು.

ದೂರ್ವಾಸ ಮಹರ್ಷಿಯ ಉಲ್ಲೇಖವು ಮಹಾಭಾರತದ ಸಂಭವ ಪರ್ವದ ೧೨೮ ನೆಯ ಅಧ್ಯಾಯದಲ್ಲಿಯೂ, ಹರಿವಂಶದಲ್ಲಿಯೂ, ವಿಷ್ಣು ಪುರಾಣದಲ್ಲಿಯೂ ಭಾಗವತದಲ್ಲಿಯೂ ಬಂದುದರಲ್ಲಿ ಮಹಾಭಾ ರತದಲ್ಲಿ "ನಿಗೂಢ ನಿಶ್ಚಯಂಧರ್ಮೇ" ಧರ್ಮದಲ್ಲಿ ರಹಸ್ಯಾರ್ಥವನ್ನು ತಿಳಿದವನೆಂತಲೂ ದುರ್ವಾಸಾಃ ಶಂಕರಸ್ಯಾಂಶಃ ವಿ. ಪುರಾಣ ೧—೯—೨ ಶಿವನ ಅಂಶವೆಂತಲೂ ಉಲ್ಲೇಖವಿದೆ. "ದುರ್ವಾಸೋಚ್ಛಿಷ್ಟಶೇಷಸ್ಯ ಪಾದಬಾಹ್ಯಾಂಗಲೇಪನಾತ್ ಸಹಸಾವಜ್ರಕಾಯತ್ವಮಾಪ್ತವಾನ್ ವಿಷ್ಣು ರವ್ಯಯಃ" ಎಂದು ದೂರ್ವಾಸ ಪ್ರಸಾದಮಹಾತ್ಮೆಯಾದರು ಮಹಾಭಾರ ತದಲ್ಲಿ ಕಂಡುಬರುತ್ತಿದೆ. ಆದರು ಆತನು ಲಿಂಗಧರನಾಗಿದ್ದನೆಂದು ಎಲ್ಲಿಯೂ ಕಂಡುಬಂದಿಲ್ಲ. ಆದುದರಿಂದ ಯಜ್ಞಯಾಗಗಳನ್ನು ಶಿವಾ ರಾಧನವಾಗಿ ನಡೆಯಿಸುವ ಮತ್ತು ಶಿವಲಿಂಗ ಸಮರ್ಚನವನ್ನು ಮಾಡುವ ಶಿವಧರ್ಮಿಯು ದುರ್ವಾಸನೆನ್ನುವಲ್ಲಿ ಸಂದೇಹವಿಲ್ಲ.

ಇಂತಹ ಶಿವನಿಷ್ಠಾಪರರು ನಮ್ಮ ಲಿಂಗಾಂಗ ಧರ್ಮದ ಉತ್ಕ್ರಾಂ ತಿಯಲ್ಲಿ ಮಹಿಮರಾಗಿ ಆದ್ಯಗುರುಗಳಾಗಿರುವರಾದರು. ಅಷ್ಟಾವರಣ ಪಂಚಾಚಾರಪರರು ಅಲ್ಲವೆಂಬುದನ್ನು ಮರೆಯಕೂಡದು.

ಇನ್ನು ನೀಲಕಂಠಚಂಪೂ ಪ್ರಬಂಧದಲ್ಲಿಯ "ವೀರಭದ್ರ ಇವಕ್ರುದ್ಧೇ ವೀರಮಹೇಶ್ವರೇ ಮುನೌ" ಎಂಬ ಶ್ಲೋಕದಲ್ಲಿ ವೀರಮಾಹೇಶ್ವರರೇ ಎಂಬ ವಿಶೇಷಣದಿಂದ ವೇದಮೂರ್ತಿ ಜಗದೀಶ ಶಾಸ್ತ್ರಿಗಳು ದೂರ್ವಾಸರ

ಹರ್ಷಿಯು ಈಗಿನ ವಾದ ವಿಷಯದಲ್ಲಿ ಸಮರ್ಪಕವಾಗಬಹುದಾದ ವೀರಶೈವ ಬ್ರಾಹ್ಮಣವೆಂದು ಹವಣಿಸುವರು. ಅದನ್ನಿಷ್ಟು ಪರೀಕ್ಷಿಸುವಣ! ಮಹಾಭಾರತದ ಶ್ಲೋಕದಲ್ಲಿ ಚೈವಕ್ಕೆ ಶೈವ ಎಂದು ಶಬ್ದಾಂತರವನ್ನು ಕಂಡ ಶಾಸ್ತ್ರಿಮಹಾಶಯರು ನೀಲಕಂಠಚಂಪುವಿನಲ್ಲಿ ೨೯ ನೆಯ ಶ್ಲೋಕಾನಂತರದ ಗಚ್ಛನ್ನೇವ ಸ ನಭಸಿ............ದುರ್ವಾಸಸ ಮುದ್ರಾಕ್ಷೀತ್ ಎಂಬೀ ಗದ್ಯವನ್ನು ಪರಾಮರ್ಶಿಸದಿರುವುದು ಆಶ್ಚರ್ಯವಲ್ಲ. ಆ ಗದ್ಯದಲ್ಲಿ ಕವಿಯು ದುರ್ವಾಸನನ್ನು ವರ್ಣಿಸುವಾಗ ಅವನ ಭಸ್ಮರುದ್ರಾಕ್ಷಗಳನ್ನೂ ಜಡೆಗಳನ್ನೂ ವರ್ಣಿಸುತ್ತ ಲಿಂಗಾಂಗಿಯನ್ನು ವರ್ಣಿಸುವಾಗ ಬಿಡಲುಬಾರದ ಶಿವಲಿಂಗಸೆಜ್ಜೆಯನ್ನು ಏಕೆ ವರ್ಣಿಸಲಿಲ್ಲವೆಂಬುದನ್ನು ಶಾಸ್ತ್ರಿಗಳು ಹೇಳಬಲ್ಲರೊ? ಹೃದಯಾರವಿಂದ ಕುಹರವಿಹರದುನ್ಮತ್ತಶೇಖರ ಭಾವನಾನೈರಂತರ್ಯಾದುನ್ಮತ್ತ ಮಿವ" ಎಂದು ಹೃದಯಕುಹರಸ್ಥನಾದ ಪರಮಾತ್ಮನನ್ನು ನಿರಂತರವಾಗಿ ಧ್ಯಾನಮಾಡುವದನ್ನು ಮಾತ್ರ ಕವಿಯು ಬಣ್ಣಿಸಿರುವನಲ್ಲದೆ ಲಿಂಗಧಾರಣವನ್ನು ಬಣ್ಣಿಸಲಿಲ್ಲ. ಈ ಕಥೆಗೆ ಮೂಲವಾದ ವಿಷ್ಣುಪುರಾಣದ ಆಖ್ಯಾನದಲ್ಲಿಯು ದುರ್ವಾಸನಿಗೆ ಲಿಂಗಧಾರಣವನ್ನು ವಿವರಿಸಿಲ್ಲ. ಅಂಶ ೧. ಅಧ್ಯಾಯ ೯.

ಶಾಸ್ತ್ರಿಗಳು ಯಶೋವಿಮಲರಾದ ಅಪ್ಪಯದೀಕ್ಷಿತರ ಹೆಸರುಗೊಳ್ಳುವಲ್ಲಿ ಅವರದೊಂದಾದರು ಪ್ರಬಂಧದಲ್ಲ ಲಿಂಗಧಾರಣ ಪ್ರಾಶಸ್ತ್ಯವನ್ನು ತೋರಿಸಲಿ. ಅಪ್ಪಯ್ಯದೀಕ್ಷಿತರು ಶಾಂಕರಮತವನ್ನು ಅವಲಂಬಿಸುವರು. ಆಗಮಗಳಲ್ಲಿ ಆಸ್ತಿಕ್ಯವನ್ನುಳ್ಳವರು ಶಿವೋಪಾಸಕರೆಂಬುದೇನೊ ನಿಜವು.

ಶ್ರೀ ಬಸವಾದಿ ಪ್ರಮಥರು ಆಚರಿಸಿದ ಅಂದರೆ ಕಾಮಿಕಾದ್ಯಾಗಮಗಳ ಉತ್ತರಭಾಗದಲ್ಲಿ ಉಕ್ತವಾದ ಲಿಂಗಾಂಗ ಧರ್ಮವು ಸನಾತನವಾದರು ಕ್ರಮಕ್ರಮೇಣ ಪ್ರಕಟವಾಯ್ತೆನ್ನುವಲ್ಲಿ ಪರಮೇಶ್ವರನ ಲೀಲೆಗಳು ಸಾಕ್ಷಿಯಾಗಿವೆ. ಮಹೇಶ್ವರನ ೨೫ ಲೀಲೆಗಳಲ್ಲಿ ಕಾಲಸಂಹರ ಚಂಡೇಶಾನುಗ್ರಹವೆಂಬಿವು. ಕಾಲಾರಿಶ್ಚಾಷ್ಟಮೋಭವೇತ್, ಚಂಡೇಶಾನುಗ್ರಹಶ್ಚೈವ ತಥಾ ಸಪ್ತದಶಂ ಭವೇತ್ ಎಂಟನೆಯ ಹಾಗು ಹದಿನೇಳನೆಯ ಲೀಲೆಗಳು. ಮೃಕಂಡು ಸುತನನ್ನು ಯಮನ ಬಾಯಿಂದ ಪೊರೆದುದು ಕಾಲಾರಿ ಲೀಲೆಯು. ಚಂಡೇಶನಿಗೆ ಮುಕ್ತಿಯನ್ನಿತ್ತುದು ಚಂಡೇಶಾನುಗ್ರಹವು. ಮಾರ್ಕಂಡೇಯನೂ ಚಂಡೇಶನೂ ಲಿಂಗಪೂಜಕರು, ಇಷ್ಟ ಲಿಂಗಪೂಜಕರಲ್ಲ, ಅವರವರ ಕಥೆಗಳನ್ನು ನೋಡಿರಿ.

ನೀಲಕಂಠ ಚಂಪೂ ಪ್ರಬಂಧದಿಂದ ದೂರ್ವಾಸ ಮಹರ್ಷಿಯ ಉದಾಹರಣವನ್ನೆತ್ತಿ ವರ್ಣ ಭೇದವನ್ನು ಸಾಧಿಸುವ ವೇದಮೂರ್ತಿಗಳಿಗೆ ಆ ಪ್ರಬಂಧದಿಂದಲೆ ಉತ್ತರವನ್ನೀಯುವೆಣ. ಸೂಕ್ಷ್ಮಾಗ್ರವು ಪ್ರಾಮಾಣ್ಯವನ್ನು ಶಾಸ್ತ್ರಿಗಳು ಒಪ್ಪುತ್ತಿದ್ದರೆ, ಶಿವೇತರ ದೇವತಾ ಸ್ತುತಿಯನ್ನು ವೀರಶೈವನು ಮಾಡನು. ಯತ್ರಾನ್ಯ ದೇವತಾ ಪೂಜಾ ತತ್ಸ್ಥಾನಂ ಪರಿವರ್ಜಯೇತ್॥ ೭-೯೭ ಆದರೆ ಇಂದ್ರನು ಪುನಃ ಪುನಃ ಪಾದದಲ್ಲಿ ಹೊರಳಿ ಅನುಗ್ರಹವನ್ನರ್ಥಿಸಲು ದೂರ್ವಾಸನು ಗೋವಿಂದನು ಕಲ್ಯಾಣ ಮಾಡುವನೆಂದು ವಿಷ್ಣುನಾಮ ಗ್ರಹಣ ಪೂರ್ವಕವಾಗಿ ಅನುಗ್ರಹಿಸಿದನು. "ಆಲಿಂಬ್ಯ ದೈನ್ಯಮುಸಕೃತ್ಪದಯೋರ್ನಿ ಪತ್ಯ । ಸಂಪ್ರಾರ್ಥಿತೋ ಮಘವತಾ ಸ್ತುವತಾ ತತೋಯಂ॥ ಶಾಪಾಂತಮಾಹ ಕಥಯನ್ನಿವ ಲೋಕನೀತ್ಯಾ। ಗೋವಿಂದ ಏವ ಕುಶಲಾನಿ ಕರಿಷ್ಯತೀತಿ" ೧-೩೮.

ಆದುದರಿಂದ ದುರ್ವಾಸೋದಾಹರಣವು ಶಾಸ್ತ್ರಿಗಳಿಗೆ ಸಾಧಕವಲ್ಲ.

ವೈದಿಕ ಕಾಲದಲ್ಲಿ ಮತ್ತು ಔಪನಿಷದ ಕಾಲದಲ್ಲಿ ವ್ಯಕ್ತವಾಗಿಲ್ಲದ ವೀರಶೈವ ಮತವು ಸನಾತನವೆಂತು? ಸನಾತನವಲ್ಲದಿದ್ದರೆ ಮುಕ್ತಿದಾಯಕವಹುದೆಂತು?

ಸ್ವೈ. ಇದೊಂದು ಬಿಗಿಯಾದ ಪ್ರಶ್ನವು. ಆದರೆಯು ಸಮಾಧಾನವಿಹುದು. ಸನಾತನವೆಂದರೆ ಎಂದೆಂದಿಗೂ ಉಳ್ಳುದೆಂಬರ್ಥ. ಎಂದೆಂದಿಗೂ ಉಳ್ಳುದೆಲ್ಲ ಎಂದೆಂದಿಗು ಪ್ರಕಟವಾಗಿರಬೇಕೆಂದು ಅಲ್ಲ. ಬೀಜದಲ್ಲಿ ವೃಕ್ಷವಿದೆ. ಆದರೆ ಪ್ರಕಟವಾಗಿಲ್ಲ. ಬೀಜದಲ್ಲಿಲ್ಲದು ಪ್ರಕಟವಾಗದು. ವೃಕ್ಷವು ನಾಶವಾಗುವ ಪದಾರ್ಥವು. ಅದೆಂತು ಬೀಜದಲ್ಲಿ ತೋರಿದುದೊ ಅಂತು ಅಡಗುವುದು. ಅದರ ಹಾಗೆಯೆ ಧರ್ಮವಾದರೆ ಸನಾತನವೆನಿಸಲಾರದು. ದೃಷ್ಟಾಂತವನ್ನು ಅಷ್ಟು ಜಗ್ಗಬಾರದು. ವ್ಯಕ್ತವಾಗಿ ತೋರದ ಮಾತ್ರದಿಂದ ಪದಾರ್ಥವು ಇಲ್ಲೆನಲಾಗದೆಂಬುದರ ಮಟ್ಟಿಗೆ ಉದಾಹರಣವದು. ಪ್ರಕಾಶವು ಇರುವಾಗಲು ಕಣ್ಣಿನದೊಂದು ದೋಷದಿಂದ ಕಾಣದಿರಬಹುದು. ಅಥವಾ ಮುಸಕು ಮುಸಕಾಗಿ ಕಾಣಬಹುದು. ಆ ಮುಸಕು ಹರಿಯಹತ್ತುತ್ತಲು, ಪ್ರಕಾಶವು ಕಣ್ಣ ಮುಂದೆ ಬೆಳಗತೊಡಗುವುದು.

ವೀರಶೈವ ಸಾಮರಸ್ಯ ಸಿದ್ಧಾಂತವಿಂತು. ಪರಿಪೂರ್ಣ ಮಂಗಲ ಸಚ್ಚಿದಾನಂದ ವಿಗ್ರಹ ಮೂರ್ತಿ ಘನವೆ ಶಿವನು. ಸರ್ವ ಸೃಷ್ಟಿ ಸ್ಥಿತಿ ಲಯ ತಿರೋಧಾನಾನುಗ್ರಹಂಗಳಿಗೆ ಕರ್ತೃವು. ಶಿವನ ಅಂಶವೆ

ಅಂಗನು. ಶಿವಾಂಶತ್ವವನ್ನು ಮರೆದುದೆ ಸಂಸೃತಿ. ಶಿವಾಂಶತ್ವವನ್ನರಿದು ಅಂಶಿಯಲ್ಲಿ ಸೇರುವುದೆ ಲಿಂಗಾಂಗ ಸಂಯೋಗ. ಈ ಸಿದ್ಧಾಂತಕ್ಕೆ ಪ್ರಮಾಣವಾಕ್ಯಗಳು ಅನುಭವ ಸೂತ್ರಾದಿಗಳಲ್ಲಿ ಹೇರಳವಾಗಿಹವು.

ಏಕಮೇವ ಪರಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ॥ ಶಿವತತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾದರಾತ್॥ ಸ್ವಶಕ್ತಿಕ್ಷೋಭ ಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್। ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗ ಸ್ಥಲಂ ಸ್ಮೃತಂ॥ ಲಿಂಗಸ್ಥಲಂ ಶಿವಃ ಸಾಕ್ಷಾಜ್ಜೀವಾತ್ಮಾಂಗಸ್ಥಲಂ ಭವೇತ್। ಲಿಂಗಾಂಗಸ್ಥಲಯೋರೈಕ್ಯಂ ಶಿವಜೀವೈಕ್ಯಮೇವಹಿ॥

ಲಿಂಗಸ್ಥಲವು ಉಪಾಸ್ಯವು ಅಂಗಸ್ಥಲವು ಉಪಾಸಕವು. ಉಪಾಸ್ಯೋಪಾಸಕತ್ವವನ್ನು ಮರೆದುದೆ ಸಂಸೃತಿ ಬಂಧವು. ಅದನ್ನರಿವುದೆ ಅರಿದಂದದಿಂದಾಚರಿಪುದೆ ಪಿಂಡಾದಿ ಜ್ಞಾನಶೂನ್ಯಾಂತವಾದ ಷಟ್ಸ್ಥಲಾಚರಣವು. ಅದುವೆ ಜೀವನ್ಮುಕ್ತಿ, ಅದುವೆ ಕೈವಲ್ಯ. ಅಂಶಾಂಶಿತ್ವವನ್ನಂಗೀಕರಿಸಿದರೆ ಐಕ್ಯವೆಂತು? ವೃಕ್ಷದ ಒಂದಂಶವಾದ ಶಾಖೆಯು ವೃಕ್ಷವಾಗಲಾರದು? ಎನಬೇಡ. ವೃಕ್ಷವು ಸಾಂಶವು ಆದರಿಂದ ಆದರ ಅಂಶವೂ ಸಾಂಶವು. ಆದರಿಂದ ಅವು ಅವಯಾವಯವಿಗಳಾಗಿ ಸಮವೇತವಾಗಿ ಒಂದೆನಿಸುವುವು. ಈ ಪರಬ್ರಹ್ಮವು ಸಾಂಶವಲ್ಲ. ದೃಶ್ಯಪದಾರ್ಥಗಳಲ್ಲಿ ಅಂಶಗಳನ್ನು ಕಂಡಿಹೆವಲ್ಲದೆ ದೃಕ್ಕಿನಲ್ಲಿ ಅಂಶಗಳನ್ನು ಕಂಡಿಲ್ಲ. ಜ್ಞಾನಸ್ವರೂಪವಾದ ಈ ಸ್ಥಲವು ಶಕ್ತಿಭಕ್ತಿಗಳಿಂದ ಅಂಶಾಂಶಿತ್ವವನ್ನು ಹೊಂದಿದುದು ಅಲ್ಲದೆ ಸ್ವಾಕಾರ ಘಟಕಗಳಾದ ಅಣುಗಳ ಸಂಸ್ಥಾನದಿಂದಲ್ಲ. ಶಕ್ತಿ ಭಕ್ತಿಗಳೂ ಜಡವಲ್ಲ. ಅಜಡವು. ಕಾರಣ ಅಂಶಾಂಶಿಗಳ ಸಾಮರಸ್ಯವನ್ನು ವೃಕ್ಷಶಾಖಾದಿ ದೃಷ್ಟಾಂತದಿಂದ ತಿಳಿದು ಜ್ಞಾನರೂಪವಾದ ಈ ಲಿಂಗಾಂಗಗಳ ಸಾಮರಸ್ಯದಲ್ಲಿ ಒಂದರೊಳಗೊಂದರ ಪರಿಪೂರ್ಣತ್ವವನ್ನು ಸಾಕ್ಷಾತ್ಕರಿಸುವನು. ಪರಬ್ರಹ್ಮವು ಪೂರ್ಣವು. ಪೂರ್ಣದಿಂದ ಪೂರ್ಣ ಅಂಶವಾಗುವುದು. ಪೂರ್ಣದಲ್ಲಿ ಪೂರ್ಣವು ಕೂಡಲು ಪೂರ್ಣವೆ ಉಳಿದಪುದು.

ಇದರಲ್ಲಿ ಶಿವನು ಉಪಾಸ್ಯನು ತಾನು ಉಪಾಸಕನೆಂಬುದಕ್ಕೆ "ಆವೋ ರಾಜಾನಮಮಧ್ವರಸ್ಯ ರುದ್ರಂ" ಎಂದೂ "ಗಾಥಪತಿಂ ರುದ್ರಂ" ಎಂದೂ ಕರ್ಮಕಾಂಡವು ರುದ್ರನೇ ಯಜ್ಞಕ್ಕೂ ಸ್ತೋತ್ರಕ್ಕೂ

ಅಧಿಪತಿಯು ಎಂಬ ಶ್ರುತಿಯಿಂದ ಸಾಕ್ಷಿಯಾಗಿದೆ. ಈ ಶ್ರುತಿಪ್ರಮಾಣವಾಗಿ ಕರ್ಮಕಾಂಡವು ವೀರಶೈವ ಪರವು.

"ಉಮಾಸಹಾಯಂ ಪರಮೇಶ್ವರಂ ಪ್ರಭುಂ" ಎಂದು ಉಪನಿಷತ್ತುಗಳಿಂದ ಧ್ಯೇಯವಾದ ಪರಬ್ರಹ್ಮವು ಶಿವನು. ಆದರಂತೆಯೆ, "ಯದಾಚರ್ಮವದಾಕಾಶಂವೇಷ್ಟಯಿಷ್ಯಂತಿ ಮಾನವಾಃ ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ" ಶಿವಏಕೋಧ್ಯೇಯಃ ಸರ್ವಮನ್ಯತ್ಪರಿತ್ಯಜ್ಯ ಎಂಬಿವೆ ಮೊದಲಾದ ಔಪನಿಷದ ಶ್ರುತಿಗಳು ಶಿವಜ್ಞಾನವೆ ಪರಮವೆಂದು ಹುಡುಕುವ ವಾಕ್ಯಗಳು ವೀರಶೈವವು. ಓಮ್ ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬುದು ಕರಸ್ಥಲಕ್ಕೆ ಸಾಕ್ಷಾತ್ಪರಬ್ರಹ್ಮಲಿಂಗವನ್ನು ಗುರುವಿತ್ತ ವಾಕ್ಯವು ವೀರಶೈವವು. ಆ ಬಳಿಕ "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಎಂದು ಸರ್ವ ವರ್ಣದವರಿಗೂ ಸಾಮಾನ್ಯವಾಗಿ ಶ್ರದ್ಧಾಭಕ್ತಿಜ್ಞಾನಗಳನ್ನು ಬೋಧಿಸಿದ ಉಪನಿಷದ್ವಾಕ್ಯವು ಎಲ್ಲರಿಗೂ ಮುಕ್ತಿದ್ವಾರವನ್ನು ತೆರೆದಿಟ್ಟುದು ವೀರಶೈವಪರವು.

ಹೀಗೆ ಬರಬರುತ್ತ ವಿಕಾಸಗೊಳ್ಳುತ್ತಿರುವ ವೀರಶೈವ ತತ್ವಗಳನ್ನು ಆಗಮ ಸಂಪ್ರದಾಯವು ವಿಸ್ತರಿಸುತ್ತ ಇಪ್ಪತ್ತೆಂಟು ದಿವ್ಯಾಗಮಗಳ ಉತ್ತರಭಾಗವಾಗಿ ವಿಕಾಸಗೊಂಡಿತು. ಇಷ್ಟಾಗುವಲ್ಲಿ "ಇತಿಹಾಸ ಪುರಾಣಾಭ್ಯಾಂ ಸಮುಪಬೃಂಹಯೇತ್" ಎಂದು ವೇದಾರ್ಥ ವಿವರಣಗಳೆನಿಸಿದ ಭಾರತ ಪುರಾಣಾದಿಗಳು ಕೆಲವು ಈ ವಿಕಾಸವನ್ನು ಅನುಮೋದಿಸುತ್ತ ಕೆಲವು ಪ್ರತಿಷೇಧಿಸುತ್ತ ಬಂದುವು. ಅನುಮೋದಿಸುವವು. ಈ ವಿಕಾಸವನ್ನು ವರ್ಣಧರ್ಮದಲ್ಲಿಯೆ ಶಕ್ಯವಿದ್ದಷ್ಟು ಸಮಾವೇಶಗೊಳಿಸುತ್ತ ಬಂದುವು. "ಭಕ್ತಿರಷ್ಟ ವಿಧಾಹ್ಯೇಷಾ ಯಸ್ಮಿನ್ಮ್ಲೇಚ್ಛೇಪಿ ವರ್ತತೇ। ಸವಿಪ್ರೇಂದ್ರೊಮುನಿಃ ಶ್ರೀಮಾನ್ ಸಯತಿಃ ಸಚ ಪಂಡಿತಃ" ಸಾರಸಂಹಿತಾ ೧೧-೧೮ ಮುಂತಾದುವು ಮೊದಲನೆಯ ವರ್ಗದವು. "ಶೈವಾನ್ಪಾಶುಪತಾಂಶ್ಚೈವ ಲಿಂಗಿನೋ ಪ್ರತಿನಸ್ತಥಾ। ಬಿಡಾಲ ವ್ರತಿನಶ್ಚೈವ ಪಾಷಂಡಾನ್ಪರಿವರ್ಜಯೇತ್" ಎಂಬಿದು ಮುಂತಾದುವು ಎರಡನೆಯ ವರ್ಗದುವು.

ಇವಾವನ್ನೂ ಲಕ್ಷಿಸದೆ ವೀರಶೈವಾಗಮವು ಮುಂದುವರಿದುದು. ಸೂಕ್ಷ್ಮಾಗಮದ ಸಿಂಹಗರ್ಜನವಿದು.

"ಅಥಶಿಷ್ಯ ಸ್ವರೂಪಂಚ ವಕ್ಷ್ಯೇ ಸಂಕ್ಷೇಪತಃ ಶೃಣು ।
ಶುಚಿಃ ಸುಶೀಲೋ ಧರ್ಮಿಷ್ಠಃ ಸತ್ಯವಾಗ್ವಿಜಿತೇಂದ್ರಿಯಃ ॥
ಅಹಂಕಾರ ವಿನಿರ್ಮುಕ್ತೋ ರಾಗದ್ವೇಷಾದಿವರ್ಜಿತಃ ।
ಗುರುಭಕ್ತೋ ಜಿತಕ್ರೋಧೋ ಗುರ್ವಾಜ್ಞಾಪರಿಪಾಲಕಃ ॥
ವಿಷಯಾಸಂಗ ನಿರ್ವಿಣ್ಣೋ ವಿನಿರ್ಜಿತ ಮದಾಷ್ಟಕಃ ।
ಕಾವಾಗತಿರ್ಮಮೇತ್ಯೇವಂ ಧ್ಯಾಯಮಾನೋದಿವಾನಿಶಂ ॥

ಸಂಸರಣಕ್ಕೆ ಬೇಸತ್ತು ತನ್ನ ಗತಿಯು ಏನೆಂದು ಹಗಲಿರುಳು ಚಿಂತಿಸುವನಾಗಿ ಶುಚಿತ್ವಾದಿಗುಣಗಳನ್ನು ಸಂಗ್ರಹಿಸಿದವನು ಶಿಷ್ಯನು. ಅವನು ಇಂತಹ ವರ್ಣದವನಿರಬೇಕೆಂಬ ನಿಯಮವಿಲ್ಲ. ಯೇಷುಯೇಷು ಮಹಾದೇವಿ ಭಕ್ತಿರವ್ಯಭಿಚಾರಿಣೀ। ಯೋಗ್ಯಾಸ್ತಏವ ಮಂತ್ರಸ್ಯ ಭಕ್ತಿರೇವಾತ್ರಕಾರಣಂ॥ ಇ-೨೫ ಭಕ್ತಿಯೆ ಮುಖ್ಯ ಗುಣವು ಜಾತಿಯಲ್ಲ.

ಇಂತಹ ಶಿಷ್ಯನಿಗೆ ಲಿಂಗಧಾರಣವಾಗುತ್ತಲೆ ಅಪ್ರಕೃತನಹನು. ಯಸ್ಯೈವಂಶಾಂಭವೀದೀಕ್ಷಾ ಸಂಜಾಯತಾ ಗುರುಕೃಪಾವಶಾತ್। ಪೂರ್ವಜಾತ್ಯಾದಿಕಂ ತಸ್ಯ ನ ಸ್ಮರೇತ್ ಪ್ರಾಕೃತಂ ಹಿ ತತ್॥ ಇತ್ಯಾದಿ ಈ ವಿಶಾಸವಾಗುತ್ತ ಆಚಾರ್ಯನಿಗೆ ಮಿಗಿಲಾಗಿ ಗುರುವು ತೋರಿದನು. ಧರ್ಮಕ್ಕೆ ಶಬ್ದರಾಶಿಯೆ ಮೊದಲು ಅನ್ನುವನಕ ಆ ಶಬ್ದರಾಶಿಯನ್ನು ಓದುವ ಮತ್ತು ಅದರ ಅರ್ಥವನ್ನು ಬಿಸ್ತರಿಸಬಲ್ಲ ಆಚಾರ್ಯನಿದ್ದನು. ಅದನ್ನು ಓದುವುದು ಮತ್ತು ಓದಿಸುವುದು ಬರಬರುತ್ತ ಒಂದು ವರ್ಣದವರ ಸೊತ್ತಾಯಿತು. "ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ" ಎಂಬೀ ಶ್ರುತಿಯು ಎಂಟು ವರ್ಷದ ಬ್ರಾಹ್ಮಣನಿಗುಪನಯನವನ್ನು ಮಾಡಿ ವೇದಾಧ್ಯಾಪನವನ್ನು ಮಾಡಬೇಕೆಂದು ಹೇಳಿತು. ಆಚಾರ್ಯನು ಈ ಅಧ್ಯಾಪನ ವಿಧಿಯಿಂದ ಪ್ರೇರಿತನಾಗಿ ಅಧ್ಯಯನವನ್ನು ಮಾಡಿಸುತ್ತಿರುವನಾದುದರಿಂದ ಆಚಾರ್ಯನಲ್ಲಿ ವೇದಾಧ್ಯಯನವನ್ನು ಮಾಡುವ ಶಿಷ್ಯನಿಗೆ ಬ್ರಹ್ಮಚಾರಿಗೆ ವೇದ ಪಾಠ ಮಾತ್ರವು ಅಧ್ಯಯನವು ಎಂದೂ, "ಸ್ವಾಧ್ಯಾಯಮಧೀಯೀತ" ಎಂಬೀ ವಿಧಿಪ್ರೇರಿತನಾಗಿ ಬ್ರಹ್ಮಚಾರಿಯು ಓದುತ್ತಿರುವದರಿಂದ ಅರ್ಥ ಜ್ಞಾನಕ್ಕಾಗಿಯೆ ಆದಾದರೆಯು ಓದುವನಾದುದರಿಂದ ಅರ್ಥಜ್ಞಾನಪರ್ಯಂತವು ಅಧ್ಯಯನವೆಂದೂ, ಜಿನುಗಾದ ಮೀಮಾಂಸೆಯನ್ನು ನಾವು ಕಾಣುತ್ತೇವೆ. ಅಂದರೆ ವೇದವನ್ನು ಓದಿಸಬೇಕೆಂದು ವಿಧಿಯಿಂದ ಆಚಾರ್ಯನು ಓದಿಸುತ್ತಿರುವದರಿಂದ ಪಾಠ

ಗ್ರಹಣಕ್ಕೆ ಅಧ್ಯಯನವು ಮುಗಿಯತಕ್ಕದೊ ಅಥವಾ ವೇದವನ್ನು ಓದಬೇಕೆಂಬ ವಿಧಿಯಿಂದ ಬ್ರಹ್ಮಚಾರಿಯು ಪ್ರವೃತ್ತನಾಗುವದರಿಂದ ಅರ್ಥವು ತಿಳಿಯದೆ ಓದುವುದು ಅಪ್ರಯೋಜಕವಾದುದರಿಂದ ಅರ್ಥ ಗ್ರಹಣವಾಗುವವರೆಗೆ ಅಧ್ಯಯನವೊ ಎಂದು ವಾದವನ್ನು ಮೀಮಾಂಸಾ ಗ್ರಂಥಗಳಲ್ಲಿ ನೋಡುತ್ತೇವೆ. "ಪಂಡಿತೋ ಮೇಧಾವೀ ಗಂಧಾರಾನೇವೋಪಸಂಪದ್ಯೇತೈವ ಮೇವೇಹಾಚಾರ್ಯವಾನ್ಪುರುಷೋವೇದ. ಛಾ. ೬-೧೪. ಪಾಂಡಿತ್ಯವೂ ಮೇಧಾವಿತ್ವವೂ, ಬ್ರಹ್ಮಚಾರಿಯಲ್ಲಿ ಗ್ರಂಥ ಗ್ರಹಣಕ್ಕೆ ಬೇಕಾದವುಗಳಾಗಿದ್ದವು.

ಅಧ್ಯಾತ್ಮ ಚಿಂತನವು ಬೆಳೆದಂತೆ ಆ ಗೂಢ ಚಿಂತನದಿಂದ ಅತಿ ರಹಸ್ಯಾರ್ಥಗಳನ್ನು ಕಂಡವನು ಗುರುವು ರಹಸ್ಯಾರ್ಥಬೋಧಕನಾದನು. ಈ ಬೋಧವು ಶಿವಭಕ್ತಿ ಶಿವಾಚಾರಗಳನ್ನು ಮುಂದು ಮಾಡಿ ಗುಣಗಳಿಗೆ ಪ್ರಧಾನ್ಯವನ್ನೊಪ್ಪಿ ನಿಜವಾದ ಅಧ್ಯಾತ್ಮಿಕ ವಿಕಾಸಕ್ಕಾಸ್ಪದವಾಯಿತು. ಜಾತಿಪ್ರಾಶಸ್ತ್ಯವು ಹಿಂದಾಯಿತು. ಇದುವೆ ವೀರಶೈವ ಧರ್ಮದ ತತ್ವವು. ಈ ತತ್ವವನ್ನು ತಿಳಿಯದ ಶಾಸ್ತ್ರಿ ವರ್ಗವು ಶಿವಾಗಮಗಳನ್ನು ಉಲ್ಲಂಘಿಸುತ್ತಲೂ ಪರಂಪರಾಗತ ಶರಣ ಮಾರ್ಗವನ್ನು ದಾಟುತ್ತಲೂ ಜಾತಿ ಬ್ರಾಹ್ಮಣ್ಯವನ್ನು ನಟಿಸಿ ಶರ್ಮರಾಗುತ್ತಲೂ ವೇದಮೂರ್ತಿಗಳಾಗುತ್ತಲೂ ನಡೆದಿದೆ.



# ಸರಳಜೀವಿಯು.

### ಒಂದು ಇಂಗ್ಲಿಷ ಕವಿತೆಯ ಅನುವಾದ.

---

ಜೊಳ್ಳು ಹೆಮ್ಮೆಯನ್ನು ತೊರೆದ,
ಸುಳ್ಳು ಕಳವುಗಳನು ಮರೆದ,
ಒಳ್ಳೆ ವಿಮಲ ಹೃದಯಿಯುವನೆ ಸರಳ ಜೀವಿಯು! ॥೧॥

ಮೌನವಾಗಿ ದಿನಗಳನ್ನು
ಶಾನೆ ಸಂತಸದಲಿ ಕಳೆದು,
ಹೀನ ಬಯಕೆ ದುಃಖಕಳುಕದವನೆ ಬಂಟನು ॥೨॥

ಬೇಡ ಕೋಟೆ, ಬೇಡ ಶಸ್ತ್ರ,
ಬೇಡ ಕವಚವವಗೆ, ಗುಡುಗ,
ಪೀಡೆಯಿಂದಲೋಡಲವಗೆ ಬೇಡ ಗುಹೆಗಳು! ॥೩॥

ಭೀತಿ ಬಿಟ್ಟ ನೋಟದಿಂದೆ
ವಾತ ಪಥದ ಯಾತನೆಗಳ
ಪ್ರೇತದೂರ ಭೀಕರತೆಯ ನಿಂತು ನೋಳ್ಪನು ॥೪॥

ಹೊತ್ತು ತರುವ ಚಿಂತೆಗಳನು
ಒತ್ತಿ, ಬುದ್ಧಿಜ್ಞಾನಗಳನು
ಎತ್ತಿ, ದಿವ್ಯಜ್ಯೋತಿಯೊಳಗೆ ಬೆಳಗುತಿರ್ಪನು ॥೫॥

ಅವನ ಗೆಳೆಯ ಸದ್ವಿಚಾರ
ಅವನ ಧನವು ಒಳ್ಳಿತನದಿ
ಸವೆಸಿದಾಯು! ಜಗವು ಶಾಂತ ಧರ್ಮಶಾಲೆಯು! ॥೬॥

ಇಂತು ನಡೆದು [illegible]ಂಹರನ
ಸಂತತದಲಿ ನೆನೆದು ಕೊನೆದು
ಶಾಂತಪಯಣವನ್ನು ಮುಗಿಸಿ ಮಲಗಿಬಿಡುವನು! ॥೭॥

ಈಶ್ವರ ಸಣಕಲ್ಲ—
ರಬಕವಿ.

# ಬಸವೇಶ್ವರನಿಗಿಂತಲೂ ಮೊದಲು ಯಾರಿದ್ದರು?

(ಲೇಖಕಃ— ಶ್ರೀ ಜೀರಿಗೆ ಬಸವಲಿಂಗಪ್ಪ ಅರಳೆಪೇಟೆ, ಬೆಂಗಳೂರಸಿಟಿ.)

ವೀರಶೈವ ಸಂಬಂಧವಾದ ಚಾರಿತ್ರಾಂಶಗಳೆಲ್ಲವೂ ಬಹುತರವಾಗಿ ಬಸವೇಶನ ಕಾಲದಿಂದಲೇ ನಡೆದುಬಂದಿರುತ್ತವೆ. ಎಷ್ಟು ಬಗೆಯಾಗಿ ಶೋಧನೆ ಮಾಡಿದರೂ ಈ ವಿಚಾರವು ಪ್ರಮುಖವಾಗಿ ಕಂಡು ಬರುತ್ತದೆ. ಬಸವನ ಹಿಂದಕ್ಕೆ ತಡಕಿ ನೋಡಿದರೆ ಶೈವವು ಹಿಡಿತಕ್ಕೆ ಶಿಕ್ಕುತ್ತದೆಯೇ ಹೊರ್ತು, ವೀರಶೈವವು ಶಿಗುವದು ಬಹಳ ಕಷ್ಟವಾಗಿದೆ.

ಆದರೂ ಲಿಂಗವಿಗ್ರಹವನ್ನೂ ಶರೀರದ ಮೇಲೆ ಧರಿಸುವ ಪದ್ಧತಿಯೂ ಆಥವಾ ಲಿಂಗಮುದ್ರೆಯನ್ನು ಶರೀರದ ಮೇಲೆ ಧರಿಸುವ ಪದ್ಧತಿಯೂ ಶ್ರೀ ಶಂಕರಾಚಾರ್ಯರ ಕಾಲದಿಂದಲೂ ಮತ್ತು ಒಂದಾನೊಂದು ಶಾಸನದಿಂದ ಕ್ರಿ. ಶ. ಐವನೆ ಶತಮಾನದಿಂದಲೂ ನಡೆದು ಬಂದಿರುವಂತೆ ಕೊಂಚಕೊಂಚ ಬೆಳಕು ಮಿನುಗುಟ್ಟುತ್ತದೆ. ಪುಷ್ಕಳವಾಗಿ ಚಾರಿತ್ರ ಪ್ರಮಾಣಗಳು ಸಿಕ್ಕುವದಿಲ್ಲ. ಆದರೂ ಲಿಂಗಧಾರಣವು ಬಸವೇಶನಿಗಿಂತ ಮೊದಲು ಯಾವುದೋ ಕಾಲದಿಂದ ಬಂದಂತೆ ಬಹಳ ಬಲವಾಗಿ ಮನಸ್ಸಿಗೆ ಹೊಳೆಯುತ್ತದೆ.

ಈ ಮೇಲ್ಕಂಡ ಲಿಂಗ ಧಾರಣವು ಬಹಳ ಮೊದಲಿಂದಲೂ ಬಂದಿರುವದಾದಾಗ್ಯೂ ಅದು ಹಿಂದೆ ಒಂದು ಭಿನ್ನ ಮತದವರಾಗಿರದೆ ಶೈವದಲ್ಲಿ ಅಡಗಿ ಅಗೋಚರವಾಗಿದ್ದಿತೆಂದು ಕಾಣುತ್ತದೆ. ಅದು ಶೈವದಲ್ಲಡಗಿದ್ದದ್ದರಿಂದ ಅದು ಪ್ರತ್ಯೇಕನಾಮದಿಂದ ಕರೆಯಲ್ಪಡದೆ ಹಿಂದಿನ ಪಾಶುಪತ ಮೊದಲಾದ ಶೈವಗಳಲ್ಲಿ ಯಾವದೊ ಒಂದು ಹೆಸರಿನಿಂದ ಕರೆಯಲ್ಪಡುತ್ತಿತ್ತೆಂದು ಕಾಣುತ್ತದೆ. ಏತಕ್ಕಂದರೆ— ಬಸವೇಶನಗಿಂತ ಹಿಂದೆ ಎಲ್ಲಾ ಶಾಸನಗಳಲ್ಲೂ ಪಾಶುಪತ ಶೈವ, ಕಾಶ್ಮೀರ ಶೈವ, ಕಾಳಾಮುಖ ಶೈವ, ಲಕುಲೀಶ ಶೈವ ಮೊದಲಾದವುಗಳು ಹೇಳಲ್ಪಟ್ಟಿರುತ್ತವೆಯೇ ಹೊರ್ತು, ಲಿಂಗವಂತ ಅಥವಾ ವೀರಶೈವ ನಾಮವು ಹೇಳಲ್ಪಟ್ಟಿಲ್ಲವೆಂದು ಡಾಕ್ಟರ ನಂದಿಮಠ ಇವರು ಶಿವಾನುಭವದಲ್ಲಿ ಚರ್ಚಿಸಿರುತ್ತಾರೆ.

ಡಾಕ್ಟರ್ ನಂದಿಮಠ ಇವರು ಹೇಳಿರುವದೇನಂದರೆ— "ವೀರಶೈವರ ಬಗ್ಗೆ ಕ್ರಿ. ಶ. ೧೧ ನೆ ಶತಮಾನಕ್ಕೆ ಪೂರ್ವದಲ್ಲಿ ಉಲ್ಲೇಖವಿರದೆ ಇರುವ

ದರಿಂದ, ವೀರಶೈವ, ಲಿಂಗವಂತ ಮೊದಲಾದ ಶಬ್ದಗಳು ೧೩ ನೆ ಶತಮಾನದಿಂದೀಚೆಗೆ ಬಂದಿರಬಹುದೆಂದು ಪ್ರಕೃತಕ್ಕೆ ಗ್ರಹಿಸುವ” ಎಂದು ಬರೆಯುತ್ತಾರೆ. ಲಿಂಗವಂತ ಅಥವಾ ವೀರಶೈವ ಎಂಬ ಹೆಸರುಗಳು ಬಸವೇಶನ ಕಾಲದಿಂದ ಹಿಂದಕ್ಕೆ ಏಕೆ ತಲೆದೋರವೊ ಶೋಧಿಸಬೇಕಾಗಿದೆ. ಇದರಿಂದ ಒಂದು ವಿಷಯವನ್ನು ಸರ್ವರೂ ಗ್ರಹಿಸಬಹುದಾಗಿದೆ. ಬಸವೇಶನ ಕಾಲಕ್ಕೆ ಹಿಂದೆ ಅತ್ಯಲ್ಪವಾಗಿ ಶೈವದಲ್ಲಡಗಿದ್ದ ಲಿಂಗಧಾರಣ ಸಂಪ್ರದಾಯವು ಬಸವನಿಂದ ಅತ್ಯಂತ ಪ್ರಬಲವಾಡಲ್ಪಟ್ಟು ಲಿಂಗಧಾರಣದ ಒಂದು ದೊಡ್ಡ ಸಮಾಜವು ರಚಿಸಲ್ಪಟ್ಟಿತಾದದರಿಂದ ಅದು ಲೋಕದ ಕಣ್ಣಿಗೆ ಕಾಣಿಸಿ ಸ್ವಾಭಾವಿಕವಾಗಿ ಲಿಂಗವನ್ನು ಧರಿಸುವದರಿಂದ ಲಿಂಗವಂತರೆಂದೂ, ಕಠಿಣಾಚಾರವುಳ್ಳವರಾದದರಿಂದ ವೀರಶೈವರೆಂದೂ ನಾಮ ಪ್ರಕಟನವಾಯಿತೆಂದು ಊಹಿಸಬೇಕಾಗಿದೆ.

ಇದು ತತ್ಕಾಲದಲ್ಲಿ ಕೆಲವು ಪಂಡಿತರಿಗೆ ಗ್ರಾಹ್ಯವಾದಂತೆ ಕಾಣುವದಿಲ್ಲ. ಏತಕ್ಕಂದರೆ ಡಾಕ್ಟರ್ ನಂದೀಮಠ ಇವರು ಹೇಳುವಂತೆ ವಿಜಯನಗರದ ಕಾಲದ ಮಾಧವಾಚಾರ್ಯನು ಕನ್ನಡ ಗ್ರಂಥದಲ್ಲಿ ವೀರಶೈವ ನಾಮವನ್ನು ಬರೆಯದೆ ಲಕುಲೀಶ ಪಂಥವನ್ನಷ್ಟೇ ಉಲ್ಲೇಖಿಸಿರುವನೆಂದು ಬರೆದಿರುತ್ತಾರೆ. ಲಿಂಗವಂತರನ್ನು ಲಕುಲೀಶಾದಿ ಶೈವರಲ್ಲೊಬ್ಬರೆಂದು ಮೇಲ್ಕಂಡ ಮಾಧವಾಚಾರ್ಯರು ತಿಳಿದು ಹಾಗೆ ಬರೆದಿರಬಹುದೆಂತಲೂ ಹೇಳುತ್ತಾರೆ.

ಈ ವಿಚಾರಗಳೆಲ್ಲದರ ಮಥನದಿಂದ ಲಿಂಗವಂತ ಧರ್ಮವು ಬಸವನಗಿಂತ ಮೊದಲು ಕ್ವಚಿತ್ತಾಗಿ ಶೈವದಲ್ಲಡಗಿರಬಹುದಾದರೂ ತದ್ಧರ್ಮವು ಒಂದು ನೂತನ ಧರ್ಮದಂತೆ ಬಸವನಿಂದ ವರ್ಧಿಸಲ್ಪಟ್ಟು ತದ್ಧರ್ಮವು ಒಂದು ಪ್ರತ್ಯೇಕ ಧರ್ಮವೆನಿಸುವಷ್ಟು ಪ್ರಬಲಪಡಿಸಲ್ಪಟ್ಟಿತೆಂಬುದು ದೃಢವಾದ ವಿಷಯವಾಗಿರುತ್ತದೆಂಬುದನ್ನು ಸರ್ವರೂ ತಿಳಿಯಬೇಕು.

ಈ ಕಾರಣದಿಂದಲೇ ಪೂರ್ವದ ಪಂಡಿತರು ಬಸವೇಶನನ್ನು ವೀರಶೈವ ಮತಸ್ಥಾಪಕನೆಂದು ಕರೆದಂತೆ ಕಾಣುತ್ತದೆ.

ಇನ್ನು ವೀರಶೈವ ಅಥವಾ ಲಿಂಗವಂತ ಸಮಾಜದ ವಿಚಾರವು ಬಸವೇಶನಿಗಿಂತಲೂ ಮೊದಲು ಮೇಲ್ಕಂಡಂತೆ ಎಷ್ಟರ ಮಟ್ಟಿಗಿತ್ತೆಂದು

ಮೇಲ್ಕಂಡ ಚರ್ಚೆಯಿಂದ ಗೊತ್ತಾಯಿತಷ್ಟೆ. ವೀರಶೈವ ಮಹಾಪುರುಷರು ಯಾರಾದರೂ ಬಸವನಿಗಿಂತ ಮೊದಲು ಇದ್ದರೇ ಹೇಗೆಂಬ ವಿಚಾರವನ್ನು ಮಾಡೋಣ. ಈಗಿನ ಕೆಲವು ಶೋಧನಗಳಿಂದ ಬಸವೇಶನಿಗಿಂತ ಕೊಂಚ ಮೊದಲು ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಸಕಳೇಶ ಮಾದರಸರು ಇದ್ದಂತೆ ಕಾಣುತ್ತದೆ. ಇವರು ವರ್ಷಗಳಲ್ಲಿ ಬಸವನಿಗಿಂತಲೂ ಕೊಂಚ ಮೊದಲಾದರೂ ಬಸವನ ಜತೆಯಲ್ಲೇ ಕೇವಲ ವೃದ್ಧರಾಗಿ ಕೆಲಸಮಾಡಿದಂತೆ ಕಾಣುತ್ತವೆ. ಏತಕ್ಕೆಂದರೆ ಇವರು ತಮ್ಮ ವಚನಗಳಲ್ಲಿ ಬಸವಾದಿಗಳನ್ನು ಸ್ತೋತ್ರಮಾಡಿರುತ್ತಾರೆ. ಸಕಳೇಶ ಮಾದರಸರು ಹೀಗೆ ಹೇಳುತ್ತಾರೆ.

"ಭಕ್ತನೆಂಬೆನು ಬಸವಣ್ಣನ, ಶರಣನೆಂಬೆನು ಪ್ರಭುದೇವರ, ಐಕ್ಯನೆಂಬೆನು ಅಜಗಣ್ಣನ. ಹಿಂದೆ ಆದವರಿಲ್ಲ ಇನ್ನು ಮುಂದೆ ಆವರಿಲ್ಲ ಸಕಲೇಶ್ವರದೇವ ನಿಮ್ಮ ಶರಣರು ಮೂವರೆ" ಎಂದು ಹೇಳಿರುತ್ತಾರೆ.

ಶಂಕರದಾಸಿಮಯ್ಯನವರು "ಶೂನ್ಯಸಂಪಾದನೆ" ಯಲ್ಲಿ ಅಲ್ಲಮನನ್ನು ಸ್ತುತಿಸಿರುತ್ತಾರೆ. ಹೇಗೆಂದರೆ:—

"ಹರನಿರೂಪದಿಂದ ಧರೆಗೆ ಬಸವಣ್ಣನವತರಿಸಿದ ಕಾರಣ...... ಸಂಗನಬಸವಣ್ಣನ ಕರುಣದಿಂದ ಪ್ರಭುವೆಂಬ ನಿರಾಳವಕಂಡು ಬದುಕಿದೆನು ಕಾಣಾ ನಿಜಗುರುಶಂಕರದೇವಾ" ಎಂದು ಹೇಳಿರುತ್ತಾನೆ.

ಇವರ ವಿಚಾರ ಹೀಗಾದ ಮೇಲೆ ಬಸವೇಶನಿಗಿಂತ ಮುಂಚೆ ಇನ್ನಾರಾದರೂ ಚರಿತ್ರ ಪುರುಷರುಂಟೆ ಎಂದು ವಿಚಾರಮಾಡಿ ನೋಡಿದರೆ, ರೇವಣಸಿದ್ಧರು, ಮರುಳಸಿದ್ಧರು, ಪಂಡಿತಾರಾಧ್ಯರು, ಏಕೋರಾಮರು ಬಸವನಿಗಿಂತ ಮೊದಲಿದ್ದರೆ ಎಂಬುದನ್ನು ವಿಮರ್ಶೆಮಾಡೋಣ. ಇವರುಗಳು ಬಸವೇಶನಿಗಿಂತಲೂ ಮೊದಲಿನವರೆಂದು ಹೇಳುವದಕ್ಕಾಗುವದಿಲ್ಲ. ಬಸವೇಶನು ತನ್ನ ವಚನದಲ್ಲಿ ಇವರುಗಳ ಹೆಸರನ್ನು ಎತ್ತಿರುವದಿಲ. ಬಸವೇಶನು ಕೆಲ ನೂತನ ಪುರಾತನರನ್ನೂ ಕೆಲ ಪ್ರಾಚೀನ ಪುರಾತನರನ್ನೂ ತನ್ನ ವಚನದಲ್ಲಿ ಬರೆದಿರುತ್ತಾನೆ. ರೇವಣಸಿದ್ಧ ಮೊದಲಾದವರು ಬಸವನಿಗಿಂತಲೂ ಮುಂಚೆ ಇದ್ದಿದ್ದ ಪಕ್ಷದಲ್ಲಿ ಅವರ ಹೆಸರುಗಳನ್ನೇಕೆ ಎತ್ತಬಾರದಾಗಿತ್ತು? ಬಸವನೊಬ್ಬನೇ ಅಲ್ಲ, ಸಕಲೇಶಮಾದರಸರೂ, ಶಂಕರದಾಸಿಮಯ್ಯನವರೂ, ಮಹಾದೇವಿಯಕ್ಕನೂ, ಮೊದ

ಲಾದ ಶರಣರು ರೇವಣಸಿದ್ಧ ಮೊದಲಾದವರ ಸುದ್ದಿಯನ್ನೆತ್ತಿರುವದಿಲ್ಲ. ಇದನ್ನು ನೋಡಿದರೆ ರೇವಣಸಿದ್ಧಾದಿ ಚತುರಾಚಾರ್ಯರು ಬಸವನು ಕೆಲಸಮಾಡಿದ ಪ್ರಥಮಕಾಲಮಾನದಲ್ಲಿ ಸುಪ್ರಸಿದ್ಧವಾಗಿರಲಿಲ್ಲವೆಂದು ಕಾಣುತ್ತದೆ. ಈ ನಾಲ್ಕು ಜನ ಆಚಾರ್ಯರಲ್ಲಿ ರೇವಣಸಿದ್ಧರು ಬಸವನಿಗಿಂತಲೂ ಕೇವಲ ವೃದ್ಧರಾಗಿರುತ್ತಾರೆ. ಏತಕ್ಕೆಂದರೆ ಸೊನ್ನಲಾಪುರದಲ್ಲಿ ರೇವಣಸಿದ್ಧರು ಮೊರಡಿಯ ಮುದ್ದುಗೌಡ ಸುಗ್ಗಾಯಿಗಳ ಗರ್ಭದಲ್ಲಿ ಸಿದ್ಧರಾಮಶಿವಯೋಗಿ ಹುಟ್ಟುವನೆಂದು ಭವಿಷ್ಯವನ್ನು ಹೇಳಿದರು. ಸಿದ್ಧರಾಮನು ಬಸವನ ಜತೆಗೆ ಕೆಲಸಮಾಡಿದವನಾದಾಗ್ಯು ಬಸವನಿಗಿಂತ ಕಿರಿಯನಾಗಿರಬೇಕು.

ಶ್ರೀ ಬಸವನು ಮೊದಲಾದವರು ಆದಿಕಾಲಮಾನದಲ್ಲಿ ವಚನಬೋಧೆ ಮಾಡಿದಾಗ್ಗೆ ಅವರಿಗೆ ರೇವಣಾದಿ ನಾಲ್ಕು ಜನರ ವಿಷಯ ಗೊತ್ತಿದ್ದಿಲ್ಲವೆಂದು ಕಾಣುತ್ತದೆ ಆದದರಿಂದಲೇ ಅವರು ನಾಲ್ಕುಜನ ಆಚಾರ್ಯರ ಹೆಸರನ್ನು ತಮ್ಮ ವಚನದಲ್ಲಿ ಎತ್ತಲಿಲ್ಲ. ಈಚೆಗೆ ಅಂದರೆ ಬಸವನು ದ್ವಿತೀಯಕಾಲಮಾನದಲ್ಲಿ ಕೆಲಸಮಾಡಿದಾಗ್ಗೆ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮರು ಕಲ್ಯಾಣಪಟ್ಟಣದಲ್ಲಿ ಶಿವಾನುಭವ ಮಂಟಪಕ್ಕೆ ಬಸವನನ್ನು ದರ್ಶಿಸುವದಕ್ಕೆ ಅನ್ಯ ದೇಶಗಳಿಂದ ಬಂದರು. ಆಗ್ಗೆ ಮತಪ್ರಸರಣಕ್ಕೆ ಬಸವನಿಂದ ಪ್ರಾರ್ಥಿತರಾದಂತೆ ಕಾಣುತ್ತದೆ. ಆದರೆ ಐದನೆ ಆಚಾರ್ಯರು ಬಸವನನ್ನು ಮೊದಲ್ಗೊಂಡ ನಾಲ್ಕು ಜನರ ಜತೆಗೆ ಕಾಣಲಿಲ. ಅವರು ಈಚೆಗಾದವರೆಂದು ಕಾಣುತ್ತದೆ. ಏತಕ್ಕಂದರೆ ಪಂಚಾಚಾರ್ಯರೆನ್ನುವದಕ್ಕೆ ಬದಲು ಚತುರಾಚಾರ್ಯರೆಂದು ಕೆಲ ಗ್ರಂಥಗಳಲ್ಲಿ ಬರೆಯುವ ವಾಡಿಕೆಯುಂಟು.

ಇದಕ್ಕನುಸಾರವಾಗಿ ಡಾಕ್ಟರ ನಂದಿಮಠ ಇವರು ಶೋಧಿಸಿದ ಶಿಲಾಶಾಸನವೊಂದರಿಂದ ತಿಳಿಯುವ ಅಂಶವೇನಂದರೆ:—

“ಹತ್ತನೇ ಶತಮಾನದ ಅಂತ್ಯದಲ್ಲಿ ಮಧ್ಯಪ್ರಾಂತದಲ್ಲಿ ದೂರ್ವಾಸನ ಸಂತತಿಯ ಶೈವಾಚಾರ್ಯನ ವಂಶವೊಂದುಂಟು. ಈ ವಂಶದ ಸದ್ಭಾವಶಂಭು ಅಥವಾ ಭಾವಶಂಭು ಎಂಬವನು ಕಲಚುರಿವಂಶದ ಯುವರಾಜದೇವನೆಂಬವನಿಗೆ ಗುರುವಾಗಿದ್ದನು. ಇವನು ಗೋಲಗಿರಿ ಮಠವೆಂಬುದನ್ನು ಸ್ಥಾಪಿಸಿದನು. ಈ ಆಚಾರ್ಯವಂಶದಲ್ಲಿ ಸೋಮಶಂಭುವು ಉದ್ಭವಿಸಿದನು. ಅನಂತರ ವಿಮಲ ಶಿವನು ಆಚಾರ್ಯನಾ

ದನು. ಕಾಲಾನಂತರ ಶಕ್ತಿ ಶಂಭುವು, ಆ ಮೇಲೆ ಕೀರ್ತಿಶಂಭುವು, ಆ ಮೇಲೆ ವಿಮಲಶಿವನು, ಅನಂತರ ಧರ್ಮಶಿವ ಮುನೀಂದ್ರನು. ಇದೇ ವಂಶದಲ್ಲಿ ವಿಶ್ವೇಶ್ವರಾಚಾರ್ಯ ವಿಶ್ವೇಶ್ವರಶಿವ ಅಥವಾ ವಿಶ್ವೇಶ್ವರಶಂಭು ಪ್ರಸಿದ್ಧನಾದನು. ಈ ವಿಶ್ವೇಶ್ವರ ಶಿವಾಚಾರ್ಯನು ಕ್ರಿ. ಶ. ೧೨೬೧ ರಲ್ಲಿ ವೀರಶೈವರಿಂದ ಕೂಡಿಕೊಂಡಿದ್ದನೆಂದು ಶಾಸನದಿಂದ ತಿಳಿಯುಬರುತ್ತದೆ" ಇದರಿಂದ ಮೊದಲು ಶೈವ ಮತವಾಗಿದ್ದದ್ದು ವಿಶ್ವೇಶ್ವರಾಚಾರ್ಯನ ಕಾಲಕ್ಕೆ ವೀರಶೈವ ಮತವಾದಂತೆ ಊಹೆ ಮಾಡುವದಕ್ಕೆ ಅವಕಾಶವಿದೆ. ಇದು ನಡೆದದ್ದು ಕ್ರಿ. ಶ. ೧೨೬೧ ಎಂದು ಗೊತ್ತಾಗುವದರಿಂದ ಮೊದಲು ನಾಲ್ಕು ಆಚಾರ್ಯರಿಗಿಂತ ಈಚಿನದೆಂದು ಗೊತ್ತಾಗುತ್ತದೆ.

ಆಗಮುಗಳಲ್ಲಿ ಐದು ಜನ ಆಚಾರ್ಯರು ನಾಲ್ಕು ಯುಗಗಳಲ್ಲೂ ಅವತರಿಸಿರುವದಾಗಿ ಬರೆದಿರುವದರಿಂದ ಅವರು ಯುಗಯುಗಾದಿಗಳಿಂದಲೂ ಬಂದವರೆಂದು ಕೆಲವರು ಹೇಳಬಹುದು. ಇದು ಕಥಾರೂಪವೇ ಹೊರ್ತು ಚಾರಿತ್ರಸಂಗತಿ ಎಂದು ಹೇಳುವದಕ್ಕಾಗುವದಿಲ್ಲ. ಪಂಚಾಚಾರ್ಯರು ನಾಲ್ಕು ಯುಗಗಳಲ್ಲಿ ಅವತರಿಸಿದರೆಂದು ಯಾವ ಆಗಮುದಲ್ಲಿ ಬರೆದಿರುತ್ತದೆಯೋ ಅದೇ ಆಗಮುದಲ್ಲಿ ಅಲ್ಲಮಪ್ರಭುದೇವರೂ ನಾಲ್ಕು ಯುಗಗಳಲ್ಲು ಅವತರಿಸಿದರೆಂದು ಬರೆದಿರುತ್ತದೆ. ಒಂದನ್ನು ಪುರಸ್ಕರಿಸಿದರೆ ಮತ್ತೊಂದನ್ನೂ ಪುರಸ್ಕರಿಸಬೇಕು. ಇವುಗಳೆಲ್ಲವೂ ಚಾರಿತ್ರಸಿದ್ಧಗಳಲ್ಲ. ಆಗಮುಗಳಲ್ಲಿ ಬರೆದಿದ್ದ ಮೇಲೆ ಬಸವ ಮೊದಲಾದ ಶರಣರು ಆಗಮುಗಳನ್ನು ನೋಡಿದ್ದಿಲ್ಲವೆ?

ಕೆಲವು ಆಗಮುಗಳು ಬಸವೇಶನಿಂದೀಚಿಗಾದವುಗಳೆಂದು ನನ್ನ ಅಭಿಪ್ರಾಯವು. ಎಲ್ಲಾ ಆಗಮುಗಳೂ ಬಸವೇಶನಿಗೆ ಮೊದಲಿನವುಗಳೆಂದು ಹೇಳುವದಕ್ಕಾಗುವದಿಲ್ಲ. ಕೆಲವು ಬಸವೇಶನಿಗೆ ಮೊದಲವುಗಳು. ಕೆಲವು ಬಸವೇಶನ ಕಾಲದವುಗಳು. ಕೆಲವು ಬಸವೇಶನ ಈಚಿನವುಗಳು.

ಮಿ. *Vincent Smith* ಸಾಹೇಬರು ಮಹಾಭಾರತದ ವಿಚಾರದಲ್ಲೂ ಅದು ಆಗಿಂದಾಗ್ಯೆ ಹೆಚ್ಚುವರಿ ಮಾಡಲ್ಪಟ್ಟಿರುತ್ತದೆಂದು ಬರೆಯುತ್ತಾರೆ. ಹೀಗೆ ಹೇಳುತ್ತಾರೆ.

"Probably the greatest part of the existing text of the Mahabharata was complete by A. D. 200, but

the work as a whole cannot be said to belong to any one era..............."
ಎಂದು ಹೇಳಿರುತ್ತಾರೆ.

ಪುರಾಣಗಳಿಗೂ ಆಗಮುಗಳಿಗೂ ಕಾಲನಿಯಾಮುವನ್ನು ಗೊತ್ತು ಮಾಡುವದಕ್ಕಾಗುವದಿಲ್ಲ. ಅವುಗಳಲ್ಲಿ ಕೆಲವು ಮೊದಲಿನವಿರುತ್ತವೆ. ಕೆಲವು ಕೇವಲ ಈಚಿನವಿರುತ್ತವೆ. ಕೆಲವು ಮಧ್ಯ ಮಧ್ಯ ಸೇರಿಸಲ್ಪಟ್ಟವುಗಳಾಗಿರುತ್ತವೆ. ಇವುಗಳಲ್ಲಿ ಚಾರಿತ್ರಾಂಶವನ್ನು ಹಿಡಿಯಬೇಕಾದರೆ ಬಹಳ ಶೋಧನ ಮಾಡಬೇಕಾಗುತ್ತದೆ.

ಚಾರಿತ್ರದೃಷ್ಟಿಯಿಂದ ಬಸವೇಶನಿಗೆ ಮೊದಲು ವೀರಶೈವ ಪ್ರಸಿದ್ಧ ಚರಿತ್ರಪುರುಷರು ಈ ವರೆಗೂ ಶೋಧನಮಾಡಿದ್ದರಲ್ಲಿ ಯಾರೂ ಕಂಡು ಬರುವದಿಲ್ಲ.

ಆರುವತ್ತು ಮೂರು ಪುರಾತನರಲ್ಲಿ ಕಲಿಗಣನಾಥರು, ಸಿರಿಯಾಳ ಸೆಟ್ಟಿ, ಬೇಡರ ಕನ್ನಪ್ಪ ಮೊದಲಾದ ಕೆಲರು ವೀರಶೈವ ಶರಣರೆಂದು ಚೆನ್ನಬಸವಪುರಾಣದಲ್ಲಿ ಹೇಳಿರುವದು. ಅವರ ಕಠಿಣ ಶೀಲಕ್ಕಾಗಿ ಹೇಳಿರುವಂತೆ ಕಾಣುತ್ತದೆ. ಅವರಿಗೆ ಲಿಂಗಧಾರಣವಿತ್ತೆಂದು ತಮಿಳಿನ ಪೆರಿಯಪುರಾಣದಲ್ಲಿ ಕಂಠೋಕ್ತವಾಗಿ ಹೇಳಿರುವದಲ್ಲ. ಕಲಿಗಣನಾಥನ ವಿಚಾರದಲ್ಲಿ ಇಲ್ಲಿನವರು ಲಿಂಗವಿಲ್ಲದೆ ಬಂದ ಶಿವನಿಗೆ ಲಿಂಗ ಕಟ್ಟಿ ಪುರಸ್ಕರಿಸಿದನೆಂದು ಬರೆಯುತ್ತಾರೆ. ಪೆರಿಯ ಪುರಾಣದಲ್ಲಿ ಭಸ್ಮವಿಲ್ಲದೆ ಬಂದ ಶಿವನಿಗೆ ಭಸ್ಮಧರಿಸಿ ಪುರಸ್ಕರಿಸಿದನೆಂದು ಬರೆದಿರುತ್ತದೆ.

ಈ ಎಲ್ಲ ವಿಚಾರಗಳನ್ನು ಪರಿಶೋಧಿಸಿ ವೀರಶೈವ ವಿಚಾರದಲ್ಲಿ ಶಿಕ್ಷಿಪ್ತ ಸತ್ಯಾಂಶವನ್ನು ವಿದ್ವಾಂಸರು ಕಂಡುಹಿಡಿಯುವ ಯತ್ನಮಾಡಬೇಕು.

ಯಾವದು ಹೇಗೇ ಇರಲಿ, ವೀರಶೈವ ಮಹಾಜನಾಂಗದ ವಿಚಾರದಲ್ಲಿ ಶ್ರೀ ಕಲ್ಯಾಣದ ಬಸವ ಮಹಾಪ್ರಭುವೇ ಅಧಿನಾಯಕನಾಗಿರುತ್ತಾನೆ. ವೀರಶೈವದ ಯಾವ ವಚನವನ್ನು ನೋಡಿದರೂ, ವೀರಶೈವದ ಯಾವ ಸ್ವತಂತ್ರ ಗ್ರಂಥವನ್ನು ನೋಡಿದರೂ ಬಸವನ ಹೆಸರು ಮೊದಲು ಬರುತ್ತದೆ. ಬಸವಸ್ತುತಿ ರೂಪಗ್ರಂಥಗಳು ಅನಂತವಾಗಿರುತ್ತವೆ. ತೆಲುಗಿನಲ್ಲಿ, ತಮಿಳಿನಲ್ಲಿ, ಕನ್ನಡದಲ್ಲಿ, ಸಂಸ್ಕೃತದಲ್ಲಿ ಬಸವಪು

ರಾಣಗಳು ಅನೇಕರಿಂದ ಬರೆಯಲ್ಪಟ್ಟಿವೆ. ವ್ಯಾಸರಿಂದಲೂ ಕೂಡ ಭವಿಷ್ಯೋತ್ತರರೂಪವಾಗಿ ಬರೆಯಲ್ಪಟ್ಟಂತೆ ಬಸವಚರಿತ್ರವಿರುತ್ತದೆ. ಬಸವನು ವೀರಶೈವ ಸಮಾಜ ಪ್ರಕಾಶಕನೆಂದು ನಾನು ಹೇಳುತ್ತೇನೆ.

ವೀರಶೈವರೆಲ್ಲರೂ ಸತ್ಯಾಂಶವನ್ನು ತಿಳಿಯುವವರಾಗಬೇಕು. ನನಗೆ ತಿಳಿದ ಮಟ್ಟಿಗೆ ಚಾರಿತ್ರ್ಯದೃಷ್ಟಿಯಿಂದ ಈ ಲೇಖನವನ್ನು ಬರೆದೆನು. ಇದರಲ್ಲಿ ಹೇಳಿರುವಂತಲ್ಲದೆ ಇನ್ನೂ ಬೇರೆ ಬೇರೆ ಪುರಾತನ ನೂತನ ವಿಚಾರಗಳನ್ನು ಹೊರದೆಗೆದು ಪ್ರಕಾಶಗೊಳಿಸಿ ವೀರಶೈವ ಚರಿತ್ರೆಗೆ ಸಹಾಯಮಾಡಿದರೆ ಅಂತವರಿಗೆ ನಾನು ಆಭಾರಿಯಾಗಿರುತ್ತೇನೆ.

---

# ಶೈವಾಗಮಗಳು.

(ಡಾ. ನಂದೀಮಠ ಇವರ ನಿಬಂಧದ ವಿಮರ್ಶಾತ್ಮಕ ನಿರೂಪಣೆ— ಸಂಪಾದಕ)

---

ಶೈವಾಗಮಗಳ ಪದ್ಧತಿಯು ಯಾವ ಬಗೆಯಾಗಿದೆಂಬದು ನಾವು ಹಿಂದಿನ ಸಂಚಿಕೆಗಳಲ್ಲಿ ಕೊಟ್ಟ ವಿವರಣೆಗಳಿಂದ ವಾಚಕರ ನಿದರ್ಶನಕ್ಕೆ ಚನ್ನಾಗಿ ಬಂದಿರಬಹುದು. ಇವುಗಳಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ, ಜ್ಞಾನಪಾದ ಎಂಬ ನಾಲ್ಕು ಭಾಗಗಳಿದ್ದು ಅವುಗಳಲ್ಲಿ ಮೊದಲನೆಯ ಮೂರು ಭಾಗಗಳ ಸಾಮಾನ್ಯ ಸ್ವರೂಪವನ್ನು ನಾವು ಡಾ. ನಂದೀಮಠ ಇವರ ಲೇಖದ ಆಧಾರದ ಮೇಲಿಂದ ಹಿಂದೆ ವಿವರಿಸಿದೆವು. ಇನ್ನು ಮುಂದೆ ಕಡೆಯ ಪಾದವಾದ ಜ್ಞಾನಪಾದದ ವಿಷಯವನ್ನು ವಿವರಿಸಿ ಈ ಲೇಖಮಾಲೆಯನ್ನು ನಾವು ಮುಗಿಸುತ್ತೇವೆ.

ವೀರಶೈವ ಧರ್ಮಕ್ಕೆ ಆಗಮಗಳು ಮುಖ್ಯ ಆಧಾರ ಗ್ರಂಥಗಳೆಂದು ವಾಡಿಕೆಯಾಗಿ ಭಾವಿಸಲ್ಪಟ್ಟಿರುವದರಿಂದ ಈ ವಿಷಯವನ್ನು ಕುರಿತು ನಾವು ಹೆಚ್ಚಿಗೆ ವಿಸ್ತಾರವಾಗಿ ನಿರೂಪಿಸಬೇಕಾಗಿದೆ. ಡಾ. ನಂದೀಮಠ ಇವರು ಈ ಗ್ರಂಥಗಳನ್ನು ಉಪಲಬ್ಧ ಮಾಡಿಕೊಂಡು ಅವುಗಳನ್ನೋದಿ ಆಧುನಿಕ ಪದ್ಧತಿಯಿಂದ ಅವುಗಳನ್ನು ತಮ್ಮ ಲೇಖದಲ್ಲಿ ವಿವರಿಸಿರುವದರಿಂದ, ನಾವು ಅದಕ್ಕೆ ಹೆಚ್ಚಿಗೆ ಮಹತ್ವ ಕೊಡಬೇಕಾಗುತ್ತದೆ.

ಆಗಮ ಗ್ರಂಥಗಳು ವೈಷ್ಣವ ಸಂಹಿತೆಗಳಂತೆ ಜ್ಞಾನಪಾದಕ್ಕೆ ಬಹಳ ಮಹತ್ವದ ಸ್ಥಾನವನ್ನು ಕೊಟ್ಟಿರುವದಿಲ್ಲೆಂದು ಡಾ. ನಂದೀಮಠ ಇವರ ಅಭಿಪ್ರಾಯವಾಗಿದೆ. ಆದ್ದರಿಂದ ಈ ಬಗ್ಗೆ ನಿರೂಪಿತವಾದ ವಿಷಯಗಳು ಮೊದಲಿನ ಪಾದಗಳಂತೆ ವಿಸ್ತಾರವಾಗಿರುವದಿಲ್ಲ. ಉದಾಹರಣಾರ್ಥ ವಾಗಿ ಸುಪ್ರಭೇದಾಗಮುದಲ್ಲಿ ಜ್ಞಾನಪಾದ ವಿಷಯುಗಳು ೩ ಅಧ್ಯಾಯ ಗಳು ಮಾತ್ರ ಬಂದಿವೆ. ಆದರೆ ಇವುಗಳ ಬಗ್ಗೆ ಈ ಗ್ರಂಥಗಳಲ್ಲಿ ವಿಶೇಷ ಸಂಗತಿಗಳು ತಿಳಿದುಬರುವದಿಲ್ಲ. ಆದರೆ ಉಪಾಗಮುಗಳಾದ ಮೃಗೇಂದ್ರ ಮತ್ತು ಪೌಷ್ಕರ ಇವುಗಳಲ್ಲಿ ನಿರೂಪಿತವಾದ ಜ್ಞಾನಪಾದ ಭಾಗಗಳು ನಮಗೆ ಉಪಲಬ್ಧವಿವೆ. ಹಾಗೆಯೇ ಮಾತಂಗ ಪಾರಮೇಶ್ವರ ಗ್ರಂಥವು ಅಪೂರ್ಣವಾಗಿ ಸಿಕ್ಕಿದ್ದರೂ ಅದರಲ್ಲಿಯ ವಿಷಯುಗಳು ಉಪಯುಕ್ತವಾಗಿವೆ. ಇವುಗಳಲ್ಲಿ ಶೈವ ಸಿದ್ಧಾಂತದ ತತ್ವಗಳು ಚನ್ನಾಗಿ ನಿರೂಪಿತವಾಗಿದ್ದು, ಇವುಗಳ ಟೀಕೆಗಳೂ ಸಹ ನಮಗೆ ದೊರತಿರುತ್ತವೆ.

ಜ್ಞಾನಪಾದದಲ್ಲಿ ಮುಖ್ಯವಾಗಿ ಮೂರು ವಿಷಯುಗಳು ವಿವೇಚಿಸ ಲ್ಪಡುತ್ತವೆ. ಅವು ಯಾವವೆಂದರೆ, ಪತಿ, ಪಶು, ಮತ್ತು ಪಾಶ. ಆದರೆ ಕೆಲವು ಗ್ರಂಥಗಳಲ್ಲಿ ಬಿಂದು, ಮಾಯೆ, ಮೊದಲಾದ ವಿಷಯುಗಳನ್ನು ತೆಗೆದುಕೊಂಡು ಈ ಪದಾರ್ಥಗಳಲ್ಲಿ ಪುನಃ ಭೇದ ವಿಭೇದಗಳನ್ನು ಮಾಡು ವದುಂಟು. ಇವುಗಳು ೩ ರಿಂದ ೭ ೮ ವರೆಗೆಯೂ ಪದಾರ್ಥಗಳನ್ನು ತೆಗೆದುಕೊಂಡು ಆ ರೀತಿ ಅವುಗಳನ್ನು ನಿರೂಪಿಸಿದ್ದು ತೋರಿಬರುತ್ತದೆ.

## ಪತಿ, ಪದಾರ್ಥ

ಶೈವಾಗಮುಗಳಲ್ಲಿ ಪತಿ ಎಂದರೆ ವಿಶ್ವದ ಕರ್ತನು ಮತ್ತು ಪಶು ಎಂದರೆ ವಿಶ್ವದಲ್ಲಿರುವ ಜೀವಿಗಳು ಎಂದು ಹೇಳುವದುಂಟು.

ಶೈವಾಗಮುಗಳಲ್ಲಿ ಪರಮಾತ್ಮನ ಸ್ವರೂಪು ಅತ್ಯಂತ ತಾತ್ವಿಕ ರೀತಿ ಯಿಂದ ವಿವೇಚಿಸಲ್ಪಟ್ಟಿರುತ್ತದೆ. ಆತನು, ಸಕಲ, ಸಕಲನಿಷ್ಕಲ ಮತ್ತು ನಿಷ್ಕಲನಾಗಿರುವನು. ಅವನು ನಿರಾಕಾರನಾಗಿದ್ದರೂ ಅಜ್ಞಾನ ಜೀವಿ ಗಳಿಗೋಸ್ಕರ ಆಕಾರಯುಕ್ತನಾಗಬಹುದು. ಹೀಗೆ ಆಕಾರಯುಕ್ತನಾದಾಗ್ಗೆ ಶೈವಾಗಮುಗಳು ಅವನನ್ನು ಈಶ್ವರ ಸದಾಶಿವ, ಮತ್ತು ಶಿವನೆಂದು ಕರೆ ಯುವದುಂಟು. ಅವನಲ್ಲಿ ಯಾವಾಗಲೂ ಶಕ್ತಿಯು ಇರುತ್ತದೆ. ಶಕ್ತಿಯು ಆಗಮ ಧರ್ಮಗಳ ವಿಶಿಷ್ಟತೆಯಾಗಿದ್ದು ಇದರ ಸಂಬಂಧವು

ಧರ್ಮ ಧರ್ಮಿ, ಮತ್ತು ಸೂರ್ಯ ಪ್ರಕಾಶ ಇವುಗಳ ಮಧ್ಯಲ್ಲಿ ಯಾವ ಬಗೆಯು ಸಂಬಂಧವಿದೆಯೋ ಹಾಗೆಯೇ ಇವುಗಳ ಸಂಬಂಧ ವಿದೆ. ಅವು ಒಂದನ್ನೊಂದು ಅಗಲಲಾರವು. ಮತ್ತು ಅವುಗಳು ಪಂಚ ಕ್ರಿಯೆಗಳನ್ನು ಅಂದರೆ ಸೃಷ್ಟಿ, ಸ್ಥಿತಿ, ಲಯ, ತಿರೋಭಾವ, ಮತ್ತು ಅನು ಗ್ರಹ ಇವುಗಳನ್ನು ಉಂಟುಮಾಡುತ್ತವೆ. ಇವೆರಡೂ ಒಂದುಗೂಡ ದಿದ್ದರೆ ಕ್ರಿಯೆಯು ಆಗುವದಿಲ್ಲ. ಅವು ಸಚ್ಚಿದಾನಂದ ಸ್ವರೂಪವುಳ್ಳವೂ ನಿತ್ಯವೂ ಪರಿಪೂರ್ಣವೂ ಆಗಿ ಅನಾದಿಯಿಂದಲೂ ಇರುತ್ತವೆಂದು ಆಗ ಮಗಳು ಹೇಳುತ್ತವೆ.

ಪೌಷ್ಕರ ಮತ್ತು ಮೃಗೇಂದ್ರದಲ್ಲಿ ಪತಿ ಮತ್ತು ಪದಾರ್ಥ ಇವು ಗಳ ವಿವೇಚನೆಯಲ್ಲಿ ಪರಮಾತ್ಮನ ಸ್ವರೂಪ ಮತ್ತು ಅವನ ಕ್ರಿಯೆ ಇವುಗಳ ವರ್ಣನೆಯು ಬರುತ್ತಿದ್ದು ಶುದ್ಧಾಧ್ವಗಳ ವಿಚಾರಗಳೂ ಬರುತ್ತವೆ.

## ಪಶು, ಪದಾರ್ಥ

ಪಶುಗಳು ಎಂದರೆ, ಆತ್ಮರುಗಳು ಎಂದು ಹೇಳಬಹುದು. ಇವರು ಅನೇಕರಿದ್ದು ಅವರ ಉತ್ಪತ್ತಿಯು ಮಲಸಂಬಂಧವಾದದ್ದು. ಅವರು ಶಿವನಿಂದ ಭಿನ್ನರು ಆದರೆ ಚೈತನ್ಯಯುಕ್ತರು. ಈ ಅವರ ಚೈತ ನ್ಯವು ಮಲದಿಂದ ಬದ್ಧವಾಗಿರುತ್ತದೆ. ಈ ಮಲವು ಒಂದು, ಅಥವಾ ಎರಡು ಅಥವಾ ಮೂರು ಇದ್ದ ಹಾಗೆ ವಿಜ್ಞಾನಕಲ, ಪ್ರಳಯಕಲ, ಸಕಲ ಎಂದು ಮೂರು ವಿಧವಾಗಿರುವದು. ಈ ಮಲಗಳಿಗೊಳಪಟ್ಟದ್ದರಿಂದ ಈ ಆತ್ಮರುಗಳು ತಮ್ಮ ನಿಜಸ್ಥಿತಿಯನ್ನು ಮರೆತಿರುತ್ತಾರೆ. ಇಂಥ ಸ್ಥಿತಿಯನ್ನು ಹೋಗಲಾಡಿಸಿಕೊಳ್ಳಲಿಕ್ಕೆ ಈ ವಿಶ್ವವು ನಿರ್ಮಿಸಲ್ಪಟ್ಟಿರು ತ್ತದೆ. ಈ ಸಂಸಾರದಲ್ಲಿ ಆತ್ಮರುಗಳಿಗೆ ಅನೇಕ ಕ್ಲೇಶಗಳುಂಟಾಗು ತ್ತವೆ. ಆದರೂ ಇದು ಅವರ ಹಿತಕ್ಕೋಸ್ಕರವಾಗಿದ್ದು, ಇದರಿಂದ ಅವರ ಕರ್ಮಫಲಗಳು ನಾಶಹೊಂದುತ್ತವೆ. ಕರ್ಮದ ಮೂಲಕ ಆತ್ಮರುಗಳು ೮೪ ಲಕ್ಷ ಜೀವರಾಶಿಗಳಲ್ಲಿ ಜನ್ಮತಾಳಿ ಕಡೆಗೆ ಈ ಜಗ ತ್ತಿನಲ್ಲಿ ಇಲ್ಲವೆ ಬೇರೆ ಜಗತ್ತಿನಲ್ಲಿ ಹುಟ್ಟುತ್ತಾರೆ. ಈ ಜಗತ್ತುಗಳು ೨೨೪ ಇವೆ. ಹೀಗೆ ಆತ್ಮರುಗಳು ಪರಿಶುದ್ಧರಾದ ಬಳಿಕ ಪರಮಾತ್ಮನ ಅನುಗ್ರಹದಿಂದ ಕಡೆಗೆ ಮುಕ್ತರಾಗುತ್ತಾರೆ.

ಆದರೆ ಆತ್ಮರು ಅಸಂಖ್ಯ ಜನ್ಮಗಳನ್ನು ತಾಳಿ ಮುಕ್ತರಾಗುವ ತನ್ನ ಅವಧಿಯನ್ನು ದೀಕ್ಷೆಯ ಮೂಲಕ ಕಡಿಮೆಮಾಡಿಕೊಳ್ಳಬಹುದು. ಈ ದೀಕ್ಷೆಯ ಮೂಲಕ ಗುರುವು ಆತ್ಮನ ಕರ್ಮಗಳನ್ನು ನಾಶಮಾಡಿ ಮುಂದಿನ ಜನ್ಮಗಳನ್ನು ಹೋಗಲಾಡಿಸುವನು.

## ಪಾಶ ಪದಾರ್ಥ

ಪಾಶವೆಂದರೆ ಹಗ್ಗ. ಆತ್ಮರುಗಳನ್ನು ಬಂಧನಕ್ಕೊಳಗುಮಾಡಲಿಕ್ಕೆ ಕಾರಣವಾಗಿರುವದೆಂದು ಲಾಕ್ಷಣಿಕ ರೀತಿಯಿಂದ ಹೀಗೆ ಇದನ್ನು ಹೇಳು ವದುಂಟು. ಈ ಪಾಶಗಳು ಆಣವ, ಕಾರ್ಮಿಕ ಮತ್ತು ಮಾಯಿಕ ಎಂದು ಮೂರು ವಿಧವಾದವುಗಳು. ಆಣವ ಮಲವು ಹ್ಯಾಗೆ ಬತ್ತಕ್ಕೆ ಗೊಳ್ಳು ಮತ್ತು ತಾಮ್ರಕ್ಕೆ ಜಂಗು ಆರಂಭದಿಂದ ಅವುಗಳೊಡನೆ ಹುಟ್ಟಿರುತ್ತವೋ ಹಾಗೆಯೇ ಆತ್ಮರುಗಳಿಗೆ ಆರಂಭದಿಂದಲೂ ಇದು ಸಂಬಂಧವಾಗಿರುತ್ತದೆ. ಆದರೆ ಕರ್ಮ ಮತ್ತು ಮಾಯೆಗಳು ಈ ಆಣವಮಲವನ್ನು ಆತ್ಮನಿಂದ ದೂರ ಮಾಡಬಲ್ಲವು. ಮಾಯೆಯು ಪ್ರಕಾಶಮಯವಾದದ್ದು, ಆತ್ಮರುಗಳಿಗೆ ಭೋಗ್ಯ ವಸ್ತುವನ್ನು ಒದಗಿಸಿಕೊಡುವಂಥಾದ್ದು ಇರುತ್ತದೆ. ಆದರೆ ಈ ಮಾಯೆಯು ಆತ್ಮರುಗಳಲ್ಲಿ ಭೋಗ್ಯವಸ್ತುಗಳೆಂದರೆ ತಾನೇ ಎಂಬ ಭಾವ ವನ್ನು ಹುಟ್ಟಿಸುತ್ತದೆ. ಆದ್ದರಿಂದ, ಅದು ಭ್ರಾಂತಿಕಾರಕವಾಗಿರುತ್ತದೆ.

ಮೃಗೇಂದ್ರ ಮತ್ತು ಪೌಷ್ಕರಾಗಮಗಳು ತತ್ವಗಳಾವವೆಂಬವನ್ನು ವಿಸ್ತಾರವಾಗಿ ನಿರೂಪಿಸುತ್ತವೆ. ಈ ತತ್ವಗಳು ಪಾಶಪದಾರ್ಥಗಳ ಮೂಲಕ ಈ ಜಗತ್ತನ್ನು ಹುಟ್ಟಿಸುತ್ತವೆ. ಈ ತತ್ವಗಳು ೩೬ ಇವೆ. ಇವುಗಳಲ್ಲಿ ಶಿವತತ್ವದಿಂದ ವಿದ್ಯಾತತ್ವದ ವರೆಗೆ ಇರುವ ೫ ತತ್ವಗಳು ಶುದ್ಧಾಧ್ವ ಗಳೆನ್ನಿಸಿಕೊಳ್ಳುತ್ತವೆ. ಮಾಯಾ ತತ್ವದಿಂದ ಪುರುಷ ತತ್ವದ ವರೆಗೆ (ಕೆಲವು ಗ್ರಂಥಗಳ ಪ್ರಕಾರ ಪ್ರಕೃತಿ ತತ್ವದ ವರೆಗೆ) ಇರುವ ತತ್ವಗಳು ಮಿಶ್ರಾಧ್ವ ಎಂದರೆ ಶುದ್ಧ ಮತ್ತು ಅಶುದ್ಧ ಇವೆರಡೂ ಕೂಡಿದವುಗಳು, ಮತ್ತು ಮುಂದಿನವುಗಳೆಲ್ಲ ಅಶುದ್ಧಾಧ್ವಗಳೆನ್ನಿಸಿಕೊಳ್ಳುವವು.

ಶೈವಾಗಮಗಳು ಪ್ರಕೃತಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ನಿರೂಪಿಸುವದುಂಟು. ಈ ಪ್ರಕೃತಿಯು ಶಿವ ಮತ್ತು ಆತ್ಮ ಇವರಿಂದ ಭಿನ್ನವಾಗಿರುವದು.

ಬಿಂದು ಇದು ಕೆಲವು ಆಗಮಗಳಲ್ಲಿ ಹೇಳಿದಂತೆ ಪ್ರಕೃತಿಯು ಗರ್ಭಿತ ಚೈತನ್ಯವೆಂದು ಹೇಳಬಹುದು. ಆಗಮಗಳು ಇದು ಪಾಶ ವೆಂತಲೂ ಹೇಳುವದುಂಟು. ಪೌಷ್ಕರವು ಇದನ್ನು ಪಾಶದಲ್ಲಿ ಎಣಿಸು

ವದಿಲ್ಲ. ಈ ಆಗಮವು ಬಿಂದುವೆಂದರೆ ಮೇಲೆ ಹೇಳಿದಂತೆ ಪದಾರ್ಥದ ಒಂದು ಚೈತನ್ಯವಾಗಿದ್ದು ಈ ಚೈತನ್ಯದೊಳಗಿಂದಲೇ ನಾದವು ಮತ್ತು ಆರು ಅಧ್ವಗಳು ಹೊರಬೀಳುತ್ತವೆಂದು ಹೇಳುತ್ತದೆ. ಆದರೆ ಸುಪ್ರಭೇದದ ಅಭಿಪ್ರಾಯವು ಬೇರೆಯಾಗಿರುತ್ತದೆ. ಅದು ನಾದವು ಮೊದಲಿಗೆ ಉತ್ಪನ್ನವಾಗಿ ಆ ಮೇಲೆ ಈ ನಾದದಿಂದ ಬಿಂದುವು ಉತ್ಪನ್ನವಾಗುತ್ತದೆಂದು ಹೇಳುತ್ತದೆ.

ಮೃಗೇಂದ್ರ ಮತ್ತು ಪೌಷ್ಕರಗಳು ತತ್ವಗಳಿಗೆ ಮಹತ್ವದ ಸ್ಥಾನವನ್ನು ಕೊಡುತ್ತವೆ. ಆದರೆ ಸುಪ್ರಭೇದವು ಅಧ್ವಗಳಿಗೆ ಮಹತ್ವವನ್ನು ಕೊಡುತ್ತಿದೆ. ತತ್ವಗಳೆಂದರೆ ಅಧ್ವಗಳ ಒಂದು ಭಾಗವಾಗಿ ಅದು ಎಣಿಸುತ್ತದೆ. ಸುಪ್ರಭೇದವು ಮೃಗೇಂದ್ರ ಮತ್ತು ಪೌಷ್ಕರಾಗಮಗಳಂತೆ ಹೀಗೆ ವಿಚಾರಗಳನ್ನು ಪ್ರಕಟಿಸಿದರೂ, ಅದರಲ್ಲಿಯ ಜ್ಞಾನಪಾದದ ವಿವೇಚನೆಯು ಉಳಿದ ಎರಡು ಆಗಮಗಳಿಗಿಂತ ಭಿನ್ನವಾಗಿರುತ್ತದೆ. ಅದರಲ್ಲಿ ಹಿಂದೆ ಹೇಳಿದಂತೆ ಕೇವಲ ಮೂರು ಅಧ್ಯಾಯಗಳು ಮಾತ್ರ ಇದ್ದು, ಮೊದಲನೇ ಅಧ್ಯಾಯದಲ್ಲಿ ಶಿವಸೃಷ್ಟಿ, ಎರಡನೇ ಅಧ್ಯಾಯದಲ್ಲಿ ಪಶುಸೃಷ್ಟಿ, ಮತ್ತು ಮೂರನೇ ಅಧ್ಯಾಯದಲ್ಲಿ ಅಧ್ವಗಳು ಹೀಗೆ ವಿವರಣೆಗಳು ಇರುತ್ತವೆ.

ಇವರಲ್ಲಿ ಶಿವಸೃಷ್ಟಿ ಮತ್ತು ಪಶುಸೃಷ್ಟಿ ಎಂದು ಎರಡು ಸೃಷ್ಟಿಗಳು ವರ್ಣಿಸಲ್ಪಟ್ಟಿವೆ. ಮೊದಲನೆಯ ಸೃಷ್ಟಿಯಲ್ಲಿ ಮೃಗೇಂದ್ರ ಮತ್ತು ಪೌಷ್ಕರದಲ್ಲಿ ಹೇಳಿದ ಎಲ್ಲ ವಿಷಯಗಳಿವೆ. ಆದರೆ ವಿವೇಚನಾ ಪದ್ಧತಿಯು ಬೇರೆಯಾಗಿರುತ್ತದೆ.

ಶಿವಸೃಷ್ಟಿಯಲ್ಲಿ ಶಿವಸಂಬಂಧದ ವಿಚಾರಗಳು ಬರುತ್ತಿದ್ದು ಇವು ಈ ಎಲ್ಲ ಆಗಮಗಳಲ್ಲಿ ಒಂದೇ ವಿಧವಾಗಿವೆ. ಎಂದರೆ ಆತನು ನಿಷ್ಕಲ, ಸಕಲ ನಿಷ್ಕಲ, ಮತ್ತು ಸಕಲ ಎಂದು ಮೂರು ವಿಧವಾಗಿರುವನೆಂದು ಹೇಳುತ್ತವೆ. ಚನ್ನಬಸವನು ನಿಷ್ಕಲಲಿಂಗ, ಮಹಾಲಿಂಗ ಮುಂತಾಗಿ ಹೇಳಿದ ಲಿಂಗ ವಿಚಾರದಂತೆಯೇ ಈ ನಿಷ್ಕಲ ಲಿಂಗದ ವಿಚಾರಗಳು ಇವೆ. ನಿಷ್ಕಲ ಶಿವನು ಶಿವತತ್ವನಾಗಿರುವನು. ಈ ತತ್ವದಿಂದ ಶಾಂತಿ, ವಿದ್ಯೆ, ನಾದ ಮತ್ತು ಬಿಂದುಗಳು ಉತ್ಪನ್ನವಾಗುತ್ತವೆ. ಇವೆಲ್ಲವು ಕೂಡಿ ಲಿಂಗವಾಗುವವು. ಈ ಲಿಂಗವೇ ಮುಂದೆ ಸದಾಶಿವನೆನಿಸಿಕೊಂಡು ಸಕಲ ನಿಷ್ಕಲ ಶಿವನಾಗುವನು. ಆ ಮೇಲೆ ಸಾದಾಖ್ಯಗಳು ಉತ್ಪನ್ನವಾಗುವವು. ಲಿಂಗದ ಮೇಲ್ಭಾಗದಿಂದ ಶಿವನೂ ಕೆಳಭಾಗ ಎಂದರೆ ಪೀಠದಿಂದ ಶಕ್ತಿಯೂ ಉತ್ಪನ್ನವಾಗುತ್ತನೆ. ಅಗ್ನಿ ಮತ್ತು ಉಷ್ಣ ಹ್ಯಾಗೆ

ನಿಕಟ ಸಂಬಂಧವುಳ್ಳವಾಗಿರುವವೋ ಹಾಗೆಯೇ ಇವು ನಿಕಟ ಸಂಬಂಧವುಳ್ಳವಾಗಿರುವವು. ಅವುಗಳಿಂದಲೇ ಗಣೇಶ್ವರರು ಉತ್ಪನ್ನರಾಗುತ್ತಾರೆ. ಮತ್ತು ಈ ಗಣೇಶ್ವರರಲ್ಲಿ ಅವರ ರೂಪ ಮತ್ತು ಗುಣಗಳು ಹ್ಯಾಗೆ ಇರುತ್ತವೋ ಹಾಗೆಯೇ ಸ್ತ್ರೀ ಪುರುಷರು ಉತ್ಪನ್ನರಾಗುತ್ತಾರೆ.

ಶಿವ ಮತ್ತು ಶಕ್ತಿ ಇವರು ವಿದ್ಯಾತತ್ವದ ಅಧಿ ದೇವತೆಗಳಾಗಿ ಈಶ್ವರ ಮತ್ತು ಪಾರ್ವತಿ ಈ ಸ್ವರೂಪವನ್ನು ಹೊಂದುತ್ತಾರೆ. ಇವರು ಶಿವನ ಸಕಲ ಸ್ವರೂಪರು. ಇವರಿಂದ ರುದ್ರನು ಉತ್ಪನ್ನನಾಗುತ್ತಾನೆ. ಈ ರುದ್ರನಿಂದ ವಿಷ್ಣುವು ಈ ವಿಷ್ಣುವಿನಿಂದ ಜಗತ್ತಿನ ಕರ್ತಾರನಾದ ಬ್ರಹ್ಮನು ಉತ್ಪತ್ತಿಯನ್ನು ಹೊಂದುತ್ತಾರೆ. ಇದು ಶಿವಸೃಷ್ಟಿಯು.

ಆತ್ಮನ ಮತ್ತು ಮಲಗಳ ವಿಚಾರವು ಎಲ್ಲ ಆಗಮಗಳಲ್ಲಿ ಬಹುತರವಾಗಿ ಒಂದೇ ವಿಧವಾಗಿರುತ್ತದೆ.

ಸುಪ್ರಭೇದದಲ್ಲಿಯ ಅಧ್ವ ಪಟಲದಲ್ಲಿ ಜಗತ್ತಿನ ಸೃಷ್ಟಿಯ ಉತ್ಪತ್ತಿ ಮತ್ತು ರಚನೆ ಇವುಗಳ ವಿಚಾರಗಳೂ ಜಂಬೂದ್ವೀಪದ ಭೂಗೋಲ ಮತ್ತು ಬೇರೆ ಲೋಕಗಳ ವಿವರಣೆಗಳೂ ಬರುತ್ತಿದ್ದು ಇವುಗಳು ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿ ಅಧ್ಯಾಯ ೩ ಮತ್ತು ೪ ಇದರಲ್ಲಿ ಹೇಳಿದಂತೆಯೇ ಇವೆ.

ಸುಪ್ರಭೇದಾಗಮದಲ್ಲಿ ಆತ್ಮ ಮತ್ತು ಪರಮಾತ್ಮ ಇವರಲ್ಲಿಯ ಪರಸ್ಪರ ಸಂಬಂಧವು ಪೂರ್ಣವಾಗಿ ವಿಶದೀಕರಿಸಲ್ಪಟ್ಟಿಲ್ಲ. ಆದರೆ ಅದರಲ್ಲಿ ಆತ್ಮನು ಗ್ರಹಣಹೊಂದಿದ ಸೂರ್ಯನಂತೆ ಇದ್ದಾನೆಂದು ಅಂದಿರುವದರಿಂದ ಮತ್ತು ಸೋಹಂ ಜ್ಞಾನವೆಂಬ ಮೊದಲಾದ ಶಬ್ದಗಳು ಬರುತ್ತಿರುವದರಿಂದ ಈ ಆಗಮವು ಅದ್ವೈತವನ್ನು ಸಾಧಿಸುತ್ತದೆಂದು ಊಹಿಸಬಹುದಾಗಿದೆ.

ಇದರಲ್ಲಿ ಪೌಷ್ಕರ ಮತ್ತು ಮೃಗೇಂದ್ರದಲ್ಲಿಯಂತೆ ಆತ್ಮರು ಅನೇಕರಾಗಿರುವರೆಂದು ಸ್ಪಷ್ಟ ಉಲ್ಲೇಖವಿಲ್ಲ.

ಸರ್ವ ಜ್ಞಾನೋತ್ತರವು ಅದ್ವೈತ ಪ್ರತಿಪಾದಕವಾಗಿರುತ್ತದೆಂದು ನಿಶ್ಚಯಪೂರ್ವಕವಾಗಿ ಹೇಳಬಹುದಾಗಿದೆ. ಅದು ಶಿವಜೀವರು ಒಂದೇ ಎಂಬ ವಿಚಾರವನ್ನು ಸಿದ್ಧಗೊಳಿಸುತ್ತದೆ.

ಈ ಶಿವಾಗಮಗಳ ತಾತ್ವಿಕ ಭಾಗಗಳಲ್ಲಿ ಸಿದ್ಧಾಂತ ವಿಷಯಗಳು ಬರುವವಲ್ಲದೆ ಚರ್ಯಾ ಮತ್ತು ಕ್ರಿಯಾಪಾದಗಳು ಉಪಲಬ್ಧವಿದ್ದ ಆಗಮ ಭಾಗಗಳನ್ನು ನೋಡಿದರೆ, ಅವುಗಳ ಆಚಾರ ಭಾಗಗಳಲ್ಲಿಯೂ

ಕೂಡ ತಾತ್ವಿಕ ವಿಚಾರಗಳು ಬರುತ್ತವೆ. ಉದಾಃ— ಕಾಮಿಕ ಮತ್ತು ಕಾರಣಾಗಮಗಳು. ಪೌಷ್ಕರಾಗಮದ ತಾತ್ವಿಕ ಮುಖ್ಯ ಭಾಗದಲ್ಲಿ ಈ ಸಿದ್ಧಾಂತದ ವಿವರಣೆಗಳು ನಿಂಬಾರ್ಕನ ದ್ವೈತಾದ್ವೈತಮತದಂತೆ ಇವೆ. ಎಂದರೆ ಪರಮಾತ್ಮನು ಮತ್ತು ಆತ್ಮರು ಭಿನ್ನರಿದ್ದಾರೆ. ಆದರೆ ಪರಮಾತ್ಮನ ಮೇಲೆ ಅವಲಂಬಿಸಿದ್ದರ ವಿಷಯದ ಪೂರ್ತೆ ಆತ್ಮರುಗಳು ಏಕತ್ವವಾಗಿರುವರು ಎಂಬ ಭಾವಗಳು ಬಂದಿವೆ.

ಕಾಮಿಕ ೧—೪—೨೯೦, ೨—೨೦—೪೯ ಮತ್ತು ಸುಪ್ರಭೇದ ಪಾದ ೨ ಅಧ್ಯಾಯ ೬—೧೮, ೩—೫—೧೯೭, ಇವುಗಳನ್ನು ನೋಡಿದರೆ ಅವು ಅದ್ವೈತವನ್ನು ಸಾಧಿಸುವದಾಗಿ ತೋರಿಬರುತ್ತದೆ. ಈಶಾನ ಶಿವನು ಅದ್ವೈತವನ್ನು ಖಂಡಿಸುತ್ತಾನೆ. ಅಂದರೆ ಶಿವಜೀವರು ಭಿನ್ನರಾಗಿದ್ದು ಅವರಲ್ಲಿ ಶಿವನು ಶುದ್ಧನೂ ಜೀವನು ಆರಂಭದಲ್ಲಿ ಅಶುದ್ಧನೂ ಎಂದು ಸಾಧಿಸುತ್ತಾನೆ. ಶಿವತತ್ವವು ಮೋಕ್ಷದಲ್ಲಿ ಪರಿಣಮಿಸುವ ಬಗ್ಗೆ ಅವನ ವಿಚಾರಗಳು ಮಾಯಾಕಂಡ ದೇವನಂತೆ ಇವೆ. ಎಂದರೆ ಆತ್ಮನು ಶಿವಸ್ವರೂಪವನ್ನು ಹೊಂದಿದರೂ ಕೂಡ ಶಿವನ ಸೇವಕನಂತೆ ಅವನಿಂದ ಭಿನ್ನನಾಗಿಯೇ ಇರುವನೆಂದು ಅವನ ವಿಚಾರವು. ಇದು ವಿಶಿಷ್ಟಾದ್ವೈತದ ವಿಚಾರಸರಣಿಯಾಗಿದೆ. ಮುಕ್ತಿಯನ್ನು ಹೊಂದಿದ ಪಶುಗಳು ಶೋಕರಹಿತರಾಗಿರುವರು. ಆದರೆ ಅವರು ಶಿವನನ್ನು ಪೂಜಿಸುತ್ತ, ಪತಿಯ ಭಾವವನ್ನು ಹೊಂದಿರುವರು. ಇದಕ್ಕೆ ಅವನು ಚಿದಚಿದ್ವಿಶಿಷ್ಟಾದ್ವೈತವೆಂದು ಕರೆಯುತ್ತಾನೆ.

ಅವನ ಮುಂದಿನ ವಿಚಾರಗಳನ್ನೂ ಟೀಕೆಗಳನ್ನೂ ನೋಡಿದರೆ, ಅವು ಶಿವಾಗಮಗಳನ್ನು ಅವಲಂಬಿಸಿದ್ದರೂ ಅವು ಶುದ್ಧಾದ್ವೈತವನ್ನು ಅನುಸರಿಸುವದಾಗಿ ತೋರಿಬರುತ್ತದೆ.

ಶಿವಾಗಮಗಳಲ್ಲಿ ಬರುವ ಈ ಎಲ್ಲ ವಿಚಾರಗಳನ್ನು ನಾವು ನೋಡಿದರೆ ಅವುಗಳಲ್ಲಿ ಹಿಂದುಸ್ತಾನದಲ್ಲಿರುವ ಮುಖ್ಯ ಮತಗಳಲ್ಲಿರುವ ಎಲ್ಲ ವಿಚಾರಗಳೂ ಬಂದಿರುವದಾಗಿ ತೋರಿಬರುತ್ತದೆ, ಮತ್ತು ಅವು ಸಮರ್ಥಿಸಲ್ಪಡುತ್ತವೆ. ಎಂದರೆ ಹ್ಯಾಗೆ ಉಪನಿಷತ್ತುಗಳಲ್ಲಿ ಇದೇ ಬಗೆಯ ಸ್ಥಿತಿಯು ಇದೆಯೋ ಹಾಗೆಯೇ ಆಗಮಗಳಲ್ಲಿಯೂ ಇರುವದಾಗಿ ಕಂಡು ಬರುತ್ತದೆ.

---

# ವೀರಶೈವ ಮಠಗಳು.

(ಲೇಖಕ:— ಸಂಪಾದಕರು.)

---

ವೀರಶೈವ ಮಠಗಳು ನಾವು ಹಿಂದಿನ ಸಂಚಿಕೆಯಲ್ಲಿ ವಿವರಿಸಿದಂತೆ ವೀರಶೈವ ಸಮಾಜದಲ್ಲಿ ಅತ್ಯಂತ ಮಹತ್ವದ ಸಂಸ್ಥೆಗಳಾಗಿರುತ್ತವೆ. ಇವುಗಳ ಬೆಳವಣಿಗೆ, ಇತಿಹಾಸ, ಮತ್ತು ಪದ್ಧತಿಗಳನ್ನು ಶೋಧಿಸುವದರಿಂದ ವೀರಶೈವ ಧರ್ಮದ ಸಂಸ್ಕೃತಿ ಮತ್ತು ಅದರ ಪ್ರಗತಿ ಇವುಗಳ ಮೇಲೆ ಬಹು ಮಹತ್ವದ ಪ್ರಕಾಶವು ಬೀಳದೆ ಇರಲಾರದು. ಇವುಗಳ ಬಗ್ಗೆ ವೀರಶೈವ ಗ್ರಂಥಗಳಲ್ಲಿ ಅಲ್ಲಲ್ಲಿ ಉಲ್ಲೇಖಗಳು ಸಿಗುತ್ತವೆ. ಅವುಗಳನ್ನು ನಾವು ಪರಸ್ಪರ ಹೋಲಿಸಿ ನೋಡಿದರೆ ಭಿನ್ನತೆಗಳು ತೋರಿಬರುತ್ತವೆ. ಆದರೆ ಈ ಮಠಗಳು ಬಹು ಕಾಲದಿಂದ ನಡೆದು ಬಂದಿರುವದರಿಂದ ಮತ್ತು ಈ ಅವಧಿಯಲ್ಲಿ ಸಮಾಜದಲ್ಲಿ ಅನೇಕ ರಾಜಕೀಯ ಮತ್ತು ಸಾಮಾಜಿಕ ಕ್ರಾಂತಿಗಳು ಬಹುಸಾರೆ ಆಗುತ್ತ ಬಂದಿರುವದರಿಂದ ಅವುಗಳ ಸ್ವರೂಪದಲ್ಲಿ ಮತ್ತು ಕಾರ್ಯಗಳಲ್ಲಿ ಅನೇಕ ಭಿನ್ನತೆಗಳುಂಟಾಗುವದು ಸ್ವಾಭಾವಿಕವದೆ. ಆದರೂ ಅವುಗಳನ್ನು ನಾವು ಇದ್ದಕ್ಕಿದ್ದ ಹಾಗೆ ಪ್ರಕಾಶಿಸುತ್ತ ಹೋದರೆ ಬರಬರುತ್ತ ಅವುಗಳ ಮಹತ್ವದ ಇತಿಹಾಸವು ಹೊರಬೀಳಬಹುದೆಂದು ನಮಗೆ ತೋರುತ್ತದೆ. ಈ ಉದ್ದೇಶದಿಂದ ನಾವು ಮುಂದಿನ ಎರಡು ವಿಷಯಗಳನ್ನು ಈ ಸಂಚಿಕೆಯಲ್ಲಿ ಪ್ರಸಿದ್ಧಿಸಿರುತ್ತೇವೆ.

---

# ಭೃತ್ಯಾಚಾರ್ಯರು.

[ಈ ಕೆಳಗಿನ ವಿಷಯಗಳು "ಮಂಠಸ್ಥಲ" ವೆಂಬ ಕನ್ನಡ ಗ್ರಂಥದಲ್ಲಿ ಉಪಲಬ್ಧವಿರುತ್ತವೆ. ಈ ಗ್ರಂಥವ ಒಂದು ಹಸ್ತಲಿಖಿತ ಪ್ರತಿಯನ್ನು ನಾನು ಶಿರಸಿಗೆ ಒಂದು ಖಟ್ಲೆಗೆ ಹೋದ ಕಾಲಕ್ಕೆ ಒಬ್ಬ ಸಭ್ಯ ಗೃಹಸ್ಥರು ನನಗೆ ತಂದು ಕೊಟ್ಟರು. ಅದನ್ನು ನಾನು ಬರೆಯಿಸಿ ಮೂಲಗ್ರಂಥವನ್ನು ಅವರ ಮಾಲಕರಿಗೆ ತಿರುಗಿ ಕಳಿಸಿದ್ದೇನೆ. ಇದರಲ್ಲಿ ಪಂಚಾಚಾರ್ಯರ ವಿವರಣೆ, ಅವರ ಗೋತ್ರ ಸೂತ್ರಗಳ ವರ್ಣನೆ, ಕಟ್ಟೇಮನೆಗಳು, ದೀಕ್ಷಾವಿಧಾನ ಅಯ್ಯಾಚಾರ ವಿಧಾನ, ಎಡೆ ಕಾಸು ಹಂಚುವ ನಿರ್ಣಯ ಈ ಮೊದಲಾದ ವಿಷಯಗಳು ಹೇಳಲ್ಪಟ್ಟಿವೆ. ಈ ಗ್ರಂಥದಲ್ಲಿ ಭೃತ್ಯಾಚಾರ್ಯರ ಕಾರ್ಯಗಳು ಕೆಳಗೆ ಹೇಳಿದ ಪ್ರಕಾರ ವಿವರಿಸಲ್ಪಟ್ಟಿವೆ. (ಸಂಪಾದಕ) ]

"ಇನ್ನು ಮಹದಾಚಾರ್ಯರೆಂದು ಎರಡುತೆರನಾಯಿತು. ಅದೆಂತೆನೆ ರೇವಣಸಿದ್ಧ ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮಿತಂದೆ, ವಿಶ್ವಾರಾಧ್ಯರೆಂಬವರೆ ಮಹದಾಚಾರ್ಯರೆನಿಸುವರು.

ಇನ್ನು ಭೃತ್ಯಾಚಾರ್ಯರೆಂದೊಡೆ, ರೇವಣಸಿದ್ಧೇಶ್ವರ ದೇವರ ಸೂತ್ರಿಗನೇ ಮಠದ ದೇವರು. ಮರುಳಸಿದ್ಧೇಶ್ವರ ದೇವರ ಸೂತ್ರಿಗನೇ ಸ್ಥಾವರ ದೇವರು. ಪಂಡಿತಾರಾಧ್ಯರ ಸೂತ್ರಿಗನೇ ಮಠಪತಿಗಳು. ಏಕೋರಾಮಿತಂದೆಗಳ ಸೂತ್ರಿಗನೇ ಗಣಾಚಾರ್ಯರು. ವಿಶ್ವಾರಾಧ್ಯರ ಸೂತ್ರಿಗನೇ ಗಣಕುಮಾರರೆನಿಸುವರು. ಇವರು ಭೃತ್ಯಾಚಾರ್ಯರು.

ಇವರು ಮಾಡುವ ಕೃತ್ಯಂಗಳಾವಾವೆಂದೊಡೆ, ಶುದ್ಧತೆಯಾದ ಲಿಂಗವನು ಶುದ್ಧವಾದ ಭಕ್ತನಿಗೆ ಸಿದ್ಧಮಾಡಿ ಧರಿಸಿ ಮಂತ್ರೋಪದೇಶಮಂ ಮಾಡಿ ಪ್ರಸಿದ್ಧಮಾಡುವಂಥಾದ್ದೇ ಮಠದ ದೇವರ ವರ್ತನೆಯು.

ಅದೆಂತೆನೆ, ಇನ್ನು ಸ್ಥಾವರದೇವರು ಲಿಂಗವನ್ನು ಪಂಚಸೂತ್ರ ಶಿಲಾಪರೀಕ್ಷೆಯ ಮಾಡುವುದು. "ಲಿಂಗವೃತಾಸಮಪೀಠ ದೀರ್ಘವಿಸ್ತಾರಮೇವಚ ತದರ್ಧ ಗೋಮುಖಂಚೈವ ಗೋಮುಖಾಗ್ರೆ ತದರ್ಧಕಂ॥ ತದರ್ಧ ನಾಳವಿಸ್ತಾರಂ ಪಂಚಸೂತ್ರ ಪ್ರಕೀರ್ತಿತಃ" ಎಂದು ಈ ತೆರದಿಂ ವಿಚಾರ ಮಾಡಿ ಪೀಠಿಕೆಯ ಗಟ್ಟಿಗೊಳಿಸುವಂಥಾದ್ದೇ ಸ್ಥಾವರದೇವರ ಪ್ರವರ್ತಕವು.

ಇನ್ನು ಮಠಪತಿಯು ಕಲಶಪೂಜೆ ಲಿಂಗಪೂಜೆ ಹಸ್ತಪೂಜೆ ಮಸ್ತಕದಪೂಜೆ ೧೨ ಪೂಜೆಮಾಡಿ ಲಿಂಗಶುದ್ಧಮಾಡಿ ಗುರುವಿನ ಹಸ್ತದಲ್ಲಿ ಕೊಡುವಂಥಾದ್ದೇ ಮಠಪತಿಯ ಕೃತ್ಯಂಗಳು.

ಇನ್ನು ಗಣಾಚಾರ್ಯನು ಪಂಚವಿಧ ಸಿಂಹಾಸನ ಸ್ಥಾಪನೆ ಕಲಶಸ್ಥಾಪನೆ ಮಾಡುವುದು. ಐಯ್ಯಾಚಾರವಾಗುವ ಮರಿದೇವರ ತಾಯಿ ಕಡೆ ಹತ್ತು, ತಂದೆಯ ಕಡೆ ಹನ್ನೊಂದು ಪೂರ್ವಾಶ್ರಯುವ ವಿಚಾರ ಮಾಡುವುದು. ದೀಕ್ಷೆಯಾಗುವ ಭಕ್ತನ ಕುಲಗೋತ್ರ ವಿಚಾರಿಸುವುದು. ಆಚಾರವರ್ಧನ ದುರಾಚಾರಮರ್ದನ ಎಂಬುದನು ಪ್ರತಿ ಪಾಲನಮಾಡುವುದೇ ಗಣಾಚಾರ್ಯನ ಕೃತ್ಯಂಗಳು.

ಗಣಕುಮಾರರು ಎಡೆಕಾಸು ಹಂಚುವದು, ಅವರವರ ಕಳಸ ಮೊದಲಾದ ಕಾಣಿಕೆಯನು ಹಂಚಿಕೊಡುವದು, ಸಮಸ್ತರ ಪರಾಮರಿಕೆ ಮಾಡುವದು, ಇಂತು ಗಣಕುಮಾರನ ಕೃತ್ಯಂಗಳು.

ಇನ್ನು ಶೈವದೇವರ ಸ್ಥಾಪಿಸುವ ಕ್ರಮಃ— ಮಠದದೇವರು ಸ್ಥಾವರದ ಮಸ್ತಕದ ಮೇಲೆ ಪಾದವಿಟ್ಟು ಪೂಜೆಗೊಂಬುವುದು.

ಲಿಂಗ, ಬಸವಣ್ಣ, ವೀರಭದ್ರ ವಿಘ್ನೇಶ್ವರ, ಷಣ್ಮುಖ ಈಶ್ವರ ಪಾರ್ವತಿ ಮೊದಲಾದ ಶೈವಶಿಲಾಪರೀಕ್ಷೆಯಮಾಡಿ ಅವಯವಂಗಳನು ವಿಚಾರಮಾಡಿ ತಿದ್ದಿನೋಡಿ ಸ್ಥಾಪನೆಯ ಮಾಡುವದೇ ಸ್ಥಾವರದಯ್ಯನವರ ವರ್ತನವು.

ದೇವರ ಮಸ್ತಕದ ಮೇಲೆ ಪಾದವಿಡಿಸಿ ಪಾದೋದಕದಿಂದೆ ಪರಶುದ್ಧವಾಗುವ ನಿಮಿತ್ಯದಿಂ ಆ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರದಿಂ ಸಿದ್ಧಾಂತ ಸ್ಥಾಪ್ಯಮಾಡುವಂಥಾದ್ದೇ ಮಠಪತಿಗಳ ನಿರ್ಣಯವು.

ಪಶುಗಳಿಗೆ ಬಸವಿಗಳಿಗೆ ಭೂಮಿಲಿಂಗಮುದ್ರೆ ಸ್ಥಾಪನೆಗೆ ಶಿವಾಲಯದೇವರ ಸ್ಥಾಪನೆ ಮೊದಲಾದವನು ವಿಚಾರಮಾಡಿ ಸ್ಥಾಪನಗೊಳಿಸುವಂಥಾದ್ದೇ ಗಣಾಚಾರ್ಯರ ವರ್ತನೆಯು,

ತೆಂಗಿನ ಹೋಳು ಕಾಣಿಕೆ ಮೊದಲಾದವೆಲ್ಲವನು ಸಮಸ್ತರಿಗೆ ಸಲಿಸುವಂಥಾದ್ದೇ ಗಣಕುಮಾರರ ವರ್ತನವು."

ಮೇಲ್ಕಂಡ ವಿವರಣೆಯು ಮೇಲಿಂದ ಈ ಐದು ಭೃತ್ಯಾಚಾರ್ಯರ ಕಾರ್ಯಗಳಾವವೆಂಬುದರ ಸಾಮಾನ್ಯ ಸ್ವರೂಪವನ್ನು ನಾವು ಕಂಡುಹಿಡಿಯಬಹುದಾಗಿದೆ.

ಮಠದದೇವರು ವಿಧಾನಗಳಿಗೆ ಮುಖ್ಯ ಅಧಿಪತಿಗಳಾಗಿ ಕಾರ್ಯಗಳನ್ನು ನಿರ್ವಹಿಸತಕ್ಕವರಾಗಿರುವರು. ಸ್ಥಾವರನ ಕಾರ್ಯವು ವಿಧಾನಗಳಿಗೋಸ್ಕರ ಬೇಕಾಗುವ ಸಲಕರಣೆಗಳನ್ನು ಸರಿಯಾಗಿ ಸಿದ್ಧಗೊಳಿಸುವದು ಇರುತ್ತದೆ. ಮಠಪತಿಯು ವಿಧಿವಿಧಾನಗಳನ್ನು ಮುಖ್ಯ ಅಧಿಪತಿಗಳಿಗೋಸ್ಕರ ಜರಗಿಸುವದು ಇರುತ್ತದೆ. ಗಣಾಚಾರಿಯು ವಿಧಿವಿಧಾನಗಳನ್ನು ಜರಗಿಸಬೇಕಾದರೆ ಗೋತ್ರಾಚಾರ ಮೊದಲಾದ ವಿಷಯಗಳಲ್ಲಿ ಶುದ್ಧತೆಯು ಇರಬೇಕಾದುದು ಅವಶ್ಯವಿದ್ದು ಇವನ್ನು ಪರೀಕ್ಷಿಸುವುದೇ ಇವನ ಕಾರ್ಯವಾಗಿರುತ್ತದೆ. ಗಣಕುಮಾರನು ಸಮಾಜದವರನ್ನು ಕರೆಯುವದು, ಅವರನ್ನು ಪರಾಮರಿಸುವದು, ಅವರಿಗೆ ಕಾಣಿಕೆ ಕೊಡುವದು ಮೊದಲಾದ ಕಾರ್ಯಗಳನ್ನು ಮಾಡತಕ್ಕದ್ದು. ಈ ಪ್ರಕಾರ ಭೃತ್ಯಾಚಾರ್ಯರ ಕಾರ್ಯಗಳಿರುವದಾಗಿ ತೋರಿಬರುತ್ತದೆ. ಮತ್ತು ವಾಡಿಕೆಯಲ್ಲಿ ಇವರಿಗೆ "ಪಂಚಾಚಾರ" ದವರೆಂತಲೂ ಕರೆಯುವದುಂಟು.

---

# ವೀರಶೈವ ಮಠಗಳು ಮತ್ತು ಕಾಯದೆಯಲ್ಲಿ ಅವುಗಳ ಸ್ಥಾನ.

(ಲೇಖಕ:— ಶ್ರೀಯುತ ವಿರಕ್ತಪ್ಪ ವಿರೂಪಾಕ್ಷಪ್ಪ ಮುಧೋಳಕರ ಬಿ. ಏ. ಎಲ್. ಎಲ್. ಬಿ. ವಕೀಲ ವಿಜಾಪುರ)

---

## ಮಠಗಳಿಗೆ ದಾನಕೊಡುವ ಉದ್ದೇಶ.

ಹೋದ ದಿಸೆಂಬರ ತಿಂಗಳಿನ ಸಂಚಿಕೆಯಲ್ಲಿ "ಮಠಗಳ ಸಂಬಂಧದ ಪ್ರಶ್ನೆಗಳು" ಎಂದು ೪೦ ಪ್ರಶ್ನೆಗಳು ಪ್ರಸಿದ್ಧಿಸಲ್ಪಟ್ಟಿವೆ. ಇವುಗಳ ಯೋಗ್ಯ ಉತ್ತರವನ್ನು ಕೊಡುವದು ಬಹಳ ಅವಶ್ಯವಿರುತ್ತದೆ. ಇದು ಕಠಿಣ ವಾದ ಕಾರ್ಯವಿದೆ. ಆದರೂ ಮಠಗಳ ಕಾಯದೆ ಮತ್ತು ಅವುಗಳ ನಿಯಮಗಳನ್ನು ಗೊತ್ತುಪಡಿಸುವ ಉದ್ದಿಶ್ಯವಾಗಿ ನನಗೆ ತಿಳಿದಷ್ಟರಮಟ್ಟಿಗೆ ನಾನು ಪ್ರಸ್ತುತ ಮತ್ತು ಮುಂದಿನ ಲೇಖಗಳಲ್ಲಿ ವಿವೇಚಿಸಲು ಪ್ರಯತ್ನಿಸುತ್ತೇನೆ.

ಬ್ರಿಟಿಶ್ ಇಂಡಿಯನ್ ಕೋರ್ಟುಗಳಲ್ಲಿ ಈವರೆಗೆ ಆದ ನಿರ್ಣಯಗಳನ್ನೂ ರಿಪೋರ್ಟುಗಳನ್ನೂ ನೋಡಿದಲ್ಲಿ ವೀರಶೈವ ಮಠಗಳ ಸಂಬಂಧವಾಗಿ ವಿವರಣೆಗಳು ಅವುಗಳಲ್ಲಿ ಉಪಲಬ್ಧವಿರುವದಿಲ್ಲ. ಆದ್ದರಿಂದ ಇವುಗಳ ಸಹಾಯದಿಂದ ಮಠಗಳ ದರ್ಜೆಯು ಪ್ರಸ್ತುತ ಕಾಯದೆಗನುಸರಿಸಿ ಹ್ಯಾಗೆ ಮತ್ತು ಯಾವುದು ಇದೆ ಎಂಬದನ್ನು ನಿರ್ಣಯಿಸಲಿಕ್ಕೆ ಬರದಂತೆ ಆಗಿರುತ್ತದೆ. ಆದ್ದರಿಂದ ವೀರಶೈವ ಧರ್ಮಶಾಸ್ತ್ರಗಳನ್ನೂ ಸಾಂಪದ್ರಾಯಗಳನ್ನೂ ನೋಡಿ ಇದನ್ನು ದೃಢಪಡಿಸಬೇಕಾಗಿರುತ್ತದೆ.

ಹಿಂದೂ ಜನರು ದೇವಾಲಯಗಳಿಗೆ ದೇಣಿಗೆಗಳನ್ನೂ ನೇಮಣೂಕುಗಳನ್ನೂ ಹಾಕಿಕೊಡುವ ಪದ್ಧತಿಯು ಬಹು ದಿವಸಗಳಿಂದಲೂ ಉಂಟು. ಇವುಗಳ ಉದ್ದೇಶವು ಧಾರ್ಮಿಕ ಪುಣ್ಯಸಂಪಾದನೆ ಪಾಪಕ್ಷಾಲನೆ ಅಥವಾ ಪರಲೋಕ ಸುಖಸಂಪಾದನೆ ಇವುಗಳೇ ಇರುತ್ತವೆಂದು ಹೇಳಬಹುದು. ಆದರೆ ವೀರಶೈವರಲ್ಲಿ ಇಷ್ಟಲಿಂಗವೇ ಮುಖ್ಯ ದೇವತೆಯಾಗಿ ಭಾವಿಸಲ್ಪಟ್ಟದ್ದರಿಂದ ಸ್ಥಾವರ ದೇವತೆಗಳ ಪೂಜೆಯು ನಿಷಿದ್ಧವಾಗಿರುತ್ತದೆ. ಅವರ ಧರ್ಮ ಶಾಸ್ತ್ರದ ಪ್ರಕಾರ ಲಿಂಗಾಂಗ ಸಾಮರಸ್ಯದ ಅನುಭವದಿಂದ ಜೀವನ್ಮುಕ್ತ ಸ್ಥಿತಿಯನ್ನು ಹೊಂದತಕ್ಕದ್ದಾಗಿದೆ. ಅವರಲ್ಲಿ ಪರಲೋಕದಲ್ಲಿ ಹೊಂದತಕ್ಕ ಸುಖೋಪಭೋಗದ ವಿಚಾರಗಳಿರುವದಿಲ್ಲ. ಆದ್ದ

ರಿಂದ ಅವರಲ್ಲಿ ದಾನದ ಉದ್ದೇಶವು ಆದರಿಂದ ಪ್ರತ್ಯಕ್ಷ ಜೀವನ್ಮುಕ್ತಿ ಸ್ಥಿತಿಯನ್ನು ಹ್ಯಾಗೆ ಹೊಂದತಕ್ಕದ್ದು, ಇದನ್ನು ಅತಿ ತೀವ್ರವಾಗಿ ಹ್ಯಾಗೆ ಪಡೆಯತಕ್ಕದ್ದು, ಯಾವ ಸಾಧನೆಯಿಂದ ಯಾರಿಂದ ಹೊಂದತಕ್ಕದ್ದು ಎಂಬದರ ಕಡೆಗೆ ವಿಶೇಷವಾಗಿ ಇರುತ್ತದೆ. ಆದ್ದರಿಂದ ಇದನ್ನು ದೊರಕಿಸಬಹುದಾದ ಸಾಧನೆಗೋಸ್ಕರ ಅಥವಾ ಇಂಥ ಸಾಧಕನಿಗೆ ಅಥವಾ ಇದರ ಚಾಲಕನಿಗೆ ಸಹಾಯ ಮಾಡುವದಕ್ಕೋಸ್ಕರ ದಾನ, ದಕ್ಷಿಣೆ, ಕಾಣಿಕೆ, ವೃತ್ತಿ, ದೇಣಿಗೆ, ನೇಮಣೂಕು ಇವುಗಳನ್ನು ಹಾಕಿ ಕೊಡುವ ರೂಢಿಯು ವೀರಶೈವರಲ್ಲಿ ಉಂಟಾಗಿರಬಹುದು. ವೀರಶೈವರಲ್ಲಿ ಈ ಬಗೆಯ ಕಾರ್ಯಗಳನ್ನು ಮಾಡುವವರು ಮಠಾಧಿಕಾರಿಗಳೇ ಇದ್ದಾರೆ. ಮಠಗಳ ಸ್ಥಾಪನೆಯು ಭಕ್ತರ ಉದ್ಧಾರಕ್ಕೋಸ್ಕರ ಮತ್ತು ಧರ್ಮರಕ್ಷಣ, ಧರ್ಮಪ್ರಸಾರ ಇವುಗಳಿಗೋಸ್ಕರ ಇದ್ದದರಿಂದ ಅವುಗಳ ವ್ಯವಸ್ಥಾಪಕರಾದ ಮಠಾಧಿಕಾರಿಗಳೇ ದಾನಾರ್ಹರೆಂಬ ಭಾವನೆಯು ಅವರಲ್ಲಿ ರೂಢವಾಗುವದು ಸಹಜಿಕವಿರುತ್ತದೆ.

ಋಗ್ವೇದ ೧—೧೨೫—೫—೬ ಇದರ ಭಾಷಾಂತರವನ್ನು ಮ್ಯಾಕ್ಸಮುಲ್ಲರರು ಮಾಡಿದ್ದು ಏನೆಂದರೆ:— "ದಾನ ಕೊಡುವವನು ಸ್ವರ್ಗದಲ್ಲಿಯ ಶ್ರೇಷ್ಠ ಸ್ಥಳಕ್ಕೆ ಹೋಗುತ್ತಾನೆ." ಋಗ್ವೇದದ ಭಾಷಾಂತರದ ಎರಡನೇ ಭಾಗದಲ್ಲಿ (ಲಂಡನ ೧೮೫೪—ಪುಟ ೧೫ ೧೬) ವಿಲ್ಸನ್ನಸಾಹೇಬರು ಇದೇ ಅರ್ಥವನ್ನು ಇವಕ್ಕೆ ಮಾಡಿರುವರು. ವೀರಶೈವ ಧರ್ಮದ ಪ್ರಕಾರ ಇಷ್ಟಲಿಂಗ ಧಾರಣವಾದ ಶರೀರವು ಸಾಕಾರ ಶಿವನೆಂತಲೇ ಭಾವಿಸಲ್ಪಡುತ್ತಿದೆ. ಆದ್ದರಿಂದ ಇದಕ್ಕೆ ಸಹಾಯ ಮಾಡುವದು ವೀರಶೈವರ ಸದ್ಗುಣವು ಮತ್ತು ಅದೇ ಅವರಿಗೆ ಪಾರಿತೋಷಕವಾಗಿರುತ್ತದೆ.

ಈ ಸಂದರ್ಭದಲ್ಲಿ ಹೀಗೆ ಕೊಡುವ ದಾನವು ಕೇವಲ ಭಿಕ್ಷೆಯೋ ಅಥವಾ ಧರ್ಮೋದ್ಧಾರಕ್ಕೋಸ್ಕರ ಕೊಡುವ ದೇಣಿಗೆಯೋ ಎಂಬ ವಿಚಾರವು ಹೊರಡುತ್ತದೆ. ಆದರೆ ಹೀಗೆ ಕೊಟ್ಟ ದೇಣಿಗೆಗಳು ಮಠಗಳ ವಿಶಿಷ್ಟ ಕಾರ್ಯಗಳನ್ನು ಮಾಡಲಿಕ್ಕೆ ಮತ್ತು ಅವುಗಳ ವ್ಯವಸ್ಥೆ ಮಾಡಲಿಕ್ಕೆ ಕೊಟ್ಟವುಗಳೆಂಬುದು ಸ್ಪಷ್ಟವಾಗಲು ಅನೇಕ ಆಧಾರಗಳು ಧರ್ಮಗ್ರಂಥಗಳಲ್ಲಿ ಸಿಕ್ಕುತ್ತವೆ.

ಪಾರಮೇಶ್ವರಾಗಮ ಪಟಲ ೧೦ ಶ್ಲೋಕ ೭೫ ರಲ್ಲಿ "ಪರಂಕರ್ಮದಯ್ಯೈಕಾ ವೀರಶೈವಿನಃ" ಎಂದು ಹೇಳಲ್ಪಟ್ಟಿದೆ. ಅಂದರೆ ಸಹಾನು

ಭೂತಿ, ಪ್ರೇಮ ಅಥವಾ ದಯೆಯೇ ವೀರಶೈವನಿಗೆ ಕರ್ತವ್ಯವು ಎಂಬ ಭಾವವಿರುತ್ತದೆ. ಅದೇ ಆಗಮದ ಪಟಳ ಶ್ಲೋಕ ೭೫ ಇದರಲ್ಲಿ "ದಯಾಭೂತೇಷು ಸರ್ವೈಕಂಸಾಧನಂ ಪ್ರಾಪ್ತಯೇಃಮಮ" ಎಂದು ಹೇಳಲ್ಪಟ್ಟಿದೆ. ಅದೇ ಪ್ರಕಾರ ೭ ನೇ ಪಟಲ ೫೨—೫೩ ಶ್ಲೋಕಗಳಲ್ಲಿ ಇದೇ ಭಾವವು ವ್ಯಕ್ತವಾಗಿದೆ. ಇವುಗಳೆಲ್ಲ ಎಲ್ಲ ಪ್ರಾಣಿಮಾತ್ರದಲ್ಲಿಯೂ ಭೂತದಯೆಯನ್ನು ವಹಿಸಿ ಶಿವಭಾವದಿಂದ ಪರಮೇಶ್ವರ ಪ್ರಾಪ್ತಿಯನ್ನು ವೀರಶೈವನು ಹೊಂದಬೇಕೆಂದು ಬೋಧಿಸುತ್ತವೆ. ಹೀಗೆ ವೀರಶೈವರಲ್ಲಿ ಧರ್ಮಾದಾಯದ ಕಾರ್ಯಗಳು ಧರ್ಮಕ್ಕೋಸ್ಕರವಾಗಿಯೇ ಇರುತ್ತವೆಂಬದು ಸ್ಪಷ್ಟವದೆ.

ದಾನದ ವಿಚಾರಗಳು ಪಾಶ್ಚಿಮಾತ್ಯಶಾಸ್ತ್ರಜ್ಞರಲ್ಲಿಯೂ ರೂಢವಾಗಿವೆ. ಈ ಬಗ್ಗೆ ಪ್ರೊ॥ ಮೆಕೆಂಜೀ, ಡ್ಯೂಯಿ, ಅರಿಸ್ಟಾಟಲ್ ಇವರ ಗ್ರಂಥಗಳನ್ನು ನೋಡಬೇಕು. ಆದರೆ ಇವುಗಳಿಂದ ಅವರ ಅಂತಿಮಧ್ಯೇಯಗಳು ಭೋಗವಿಲಾಸ ಅಥವಾ ವಿಷಯಸುಖ ಇವುಗಳಿಗೋಸ್ಕರ ಇರುತ್ತವೆಂಬದು ಗೊತ್ತಾಗುತ್ತದೆ. ಇದಕ್ಕೆ *Psychological Hedonism* ಎಂಬ ಹೆಸರು. ಉಪಯುಕ್ತತಾ ವಾದಕ್ಕೆ *Utilitarianism* ಎಂಬ ಹೆಸರು. ಆದರೆ ಸಕಲ ಬ್ರಹ್ಮಾಂಡದಲ್ಲಿ ಈಶತತ್ವದ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕೆಂಬ ಧ್ಯೇಯವುಳ್ಳ ವೀರಶೈವ ಸಿದ್ಧಾಂತಕ್ಕೆ ಇವು ಎಷ್ಟು ಅಸಮ್ಮತವಾದವುಗಳೆಂಬದನ್ನು ವಾಚಕರೇ ವಿಚಾರಮಾಡತಕ್ಕದ್ದು.

ಸೂಕ್ಷ್ಮಾಗಮ ಪಟಲ ೭ ಶ್ಲೋಕ ೮೫ ಇದರಲ್ಲಿ "ನ ವಸ್ತು ಸಂಗ್ರಹಂ ಕುರ್ಯಾದ್ಯಚ ಕುತ್ರಾಪಿ ಜಂಗಮಃ। ದತ್ತಂ ದದ್ಯಾಚ್ಚ ಭಕ್ತೇಭ್ಯೋ ದರಿದ್ರೇಭ್ಯೋ ದಯಾನ್ವಿತಃ" ಎಂದು ಹೇಳಲ್ಪಟ್ಟಿದೆ. ಎಂದರೆ ಭಕ್ತನಿಗೋಸ್ಕರ ಮತ್ತು ದರಿದ್ರನಿಗೋಸ್ಕರ ಹಣದ ವಿನಿಯೋಗವಾಗತಕ್ಕದ್ದು ಎಂದು ಇದರ ಭಾವವು. ಹೀಗೆಯೇ ಸ್ಮೃತಿಸಂಹಿತೆ ಶ್ಲೋಕ ೧೩, ಮತ್ತು ಮನು ೧-೮೮ ಇದರಲ್ಲಿಯೂ ಇದೇ ಅಭಿಪ್ರಾಯವು ಇದೆ.

ಮ್ಯಾಕ್ಸಮುಲ್ಲರರು ತಮ್ಮ *Sacred Books of the East vol 12 pages 190-191* ಇದರಲ್ಲಿ "ಅತಿಥ್ಯವನ್ನು ಮಾಡಲೇಬೇಕು, ಇದು ಮನುಷ್ಯನ ಋಣ" ಎಂದು ಹೇಳಿರುವರು. ನಂಜಣಾಚಾರ್ಯನು ತನ್ನ ವೇದಾಂತಸಾರ ಚಿಂತಾಮಣಿಯ ಉತ್ತರಖಂಡ ೧೦೦ ಪ್ರಕರಣ ೪೨—೪೮ ನೇ ಶ್ಲೋಕದಲ್ಲಿ ಆತಿಥ್ಯವು ವೀರಶೈವನು ಮಾಡತಕ್ಕ ಮಹಾ

ಯಜ್ಞಗಳಲ್ಲಿ ಒಂದಾಗಿದೆ ಎಂದು ಹೇಳಿರುವನು. ಇದೇ ಅರ್ಥವು ಆಪಸ್ತಂಭ ಧರ್ಮಸೂತ್ರಗಳಲ್ಲಿ ಸೂಚಿಸಲ್ಪಟ್ಟದೆ (ಮ್ಯಾಲ್ಲರರ ಸೇಕ್ರೆಡ್ ಬುಕ್ಸ ಆಫ ದಿ ಈಸ್ಟ ಭಾಗ ೨ ಪುಟ ೧೧೬—೧೧೭ ನೋಡಿರಿ). ಮನುವು—"ಆಸನಾಶಯನಯಾಭಿರದ್ಭಿರ್ಮೂಲಫಲೇನವಾ। ನಾಸ್ಯಕಶ್ಚಿದ್ವಸೇದ್ಗೇಹೇ ಶಕ್ತಿನೋನರ್ಚಿತೋತಿಥಿಃ॥ ಎಂದು ಹೇಳಿದ್ದಾನೆ.

ನಂಜಣಾಚಾರ್ಯನು ಹೇಳಿರುವದೇನೆಂದರೆಃ—

ಗೃಹಮಾಯಾಂತ ಮಾಲೋಕ್ಯ ಗುರುಂ ವಾ ಗುರುಮೇವ ಚ।
ಭೋಗ್ಯೃಹೇ ಭವತಿ ನಮಃ ಸಗುರುರ್ನೇತರಃ ಕ್ವಚಿತ್॥೪೫॥
ತದಾಗತಂ ಗೃಹೇವೀಕ್ಷ್ಯ ಪ್ರತ್ಯುತ್ಥಾಯಾಭಿವಾದಯೇತ್।
ಶ್ರಮಾಪನೋದನಂ ಕುರ್ಯಾದ್ವ್ಯಜನಾದಿಭಿರಾದರಾತ್॥೪೬॥
ಪ್ರಣಮ್ಯಸ್ವಾಗತಂ ಬ್ರೂಯಾತ್ ಪಾದಪ್ರಕ್ಷಾಳನಂ ಚರೇತ್।
ಪ್ರಥಮಂ ಪೂಜಯೇದ್ಗಂಧ ಪುಷ್ಪೈಃ ಸಂಕ್ಷಾಲಯೇತ್ತತಃ॥೪೭॥

ಇದರಲ್ಲಿರುವ 'ಪೂಜಯೇತ್' ಮತ್ತು 'ಸಮರ್ಚಯೇತ್' ಎಂಬ ಶಬ್ದಗಳಿಂದ ಅತಿಥಿಯು ಈಶ್ವರನೇ ಎಂದು ಭಾವಿಸಲ್ಪಟ್ಟಿದ್ದು ತಿಳಿದುಬರುವದು. ಮತ್ತು ಅತಿಥಿ ಪೂಜೆಯು ವೀರಶೈವರಲ್ಲಿ ಒಂದು ದೈವಿಕ ಕ್ರಿಯೆಯೂ ಆಗಿರುತ್ತದೆ.

ವೀರಶೈವ ಸಮಾಜದ ರಚನೆ, ಅದರಲ್ಲಿಯ ರೂಢಿಗಳು, ಸಾಂಪ್ರದಾಯಗಳು, ಆಚಾರವಿಚಾರಗಳು ಮತ್ತು ಉಪಲಬ್ಧವಿರುವ ಗ್ರಂಥಗಳು ಇವುಗಳನ್ನು ನೋಡಿದರೆ, ಮಠಗಳು ಪ್ರಾಚೀನಕಾಲದಲ್ಲಿಯೂ ಕೂಡ ಅತಿಥಿ ಗ್ರಹಗಳೆಂದು ಅವರಲ್ಲಿ ಭಾವಿಸಲ್ಪಟ್ಟಿದ್ದು ತೋರಿಬರುತ್ತದೆ. ವಿರಕ್ತೋತ್ಪತ್ತಿ ಕ್ರಿಯಾ ಲಕ್ಷಣ ಗ್ರಂಥದ ಮೊದಲನೇ ಪುಟದಲ್ಲಿಯ ಉತ್ತರವಾತುಳಾಗಮ ಶ್ಲೋಕ ೮—೨೧ ಇದರಿಂದ ಈ ಮಠಗಳು ಯುಗಯುಗಾಂತರದಿಂದಲೂ ಇದ್ದದ್ದು ತಿಳಿಯುತ್ತದೆ. ಮತ್ತು ಇವುಗಳು ಅತಿಥ್ಯಕ್ಕೋಸ್ಕರ ಹ್ಯಾಗೆ ಉಪಯೋಗಿಸಲ್ಪಡುತ್ತಿದ್ದವೆಂಬುದು ಸದಾಚಾರ ಸಂಗ್ರಹದ ಪುಟ ೧೩೦ ಇದರಲ್ಲಿ ಕೊಟ್ಟ ಸುಪ್ರಭೇದಾಗಮದ ೧೯—೨೧ ಶ್ಲೋಕದಿಂದ ತಿಳಿದುಬರುವದು. ಹೀಗೆ ಅನೇಕ ಮಹತ್ವದ ಧಾರ್ಮಿಕ ಅಥವಾ ಅಧ್ಯಾತ್ಮಿಕ ಕಾರ್ಯಗಳಿಗೋಸ್ಕರ ಹ್ಯಾಗೆ ಮಠಾಧಿಕಾರಿಗಳು ಉದ್ಯುಕ್ತರಾಗಿರುತ್ತಿದ್ದರೆಂಬುದಾದರೂ ಮೇಲ್ಕಂಡ ಅವತರಣಗಳಿಂದ ತಿಳಿದುಬರುತ್ತದೆ.

ಸಿದ್ಧಾಂತಶಿಖಾಮಣಿ ಭಾಗ ೧ ಪರಿಚ್ಛೇದ ೯ ಶ್ಲೋಕ ೬ ಪುಟ ೧೬೩ ಇದರಲ್ಲಿ ಹೇಳಲ್ಪಟ್ಟಿರುವದೇನೆಂದರೆ:—

"ಸಹಜಂ ದಾನಮುತ್ಕೃಷ್ಟಂ ಸರ್ವ ದಾನೋತ್ತಮೋತ್ತಮಂ ।
ಶಿವಜ್ಞಾನಪ್ರದಂ ಪುಂಸಾಂ ಜನ್ಮರೋಗ ನಿವರ್ತಕಂ ॥

ಇದರಲ್ಲಿ ಸಹಜ ದಾನವು ಅತ್ಯುತ್ತಮತರದ್ದೆಂದು ಹೇಳಿದೆ. ಅದೇ ಗ್ರಂಥದ ಭಾಗ ೧, ಪರಿಚ್ಛೇದ ೯ ಪುಟ ೧೬೪ ಶ್ಲೋಕ ೧೧ ವೀರಶೈವರಲ್ಲಿ ಜಂಗಮನೇ ದಾನಕ್ಕೆ ಯೋಗ್ಯನೆಂದು ಹೇಳಿದೆ. ಅವನೇ ಅವರಿಗೆ ಆಧ್ಯಾತ್ಮಿಕ ಗುರುವು ಆಗಿರುವನು. (ವೇದಾಂತಸಾರ ವೀರಶೈವ ಚಿಂತಾಮಣಿ ಉತ್ತರಖಂಡ ಪ್ರಕರಣ ೧೨ ಶ್ಲೋಕ ೧೩—೧೪ ಪುಟ ೨೪೦ ನೋಡಿರಿ.)

ಜಂಗಮನ ಅಧಿಕಾರ ಮತ್ತು ಅವನ ಕಾಯಕ ಹ್ಯಾಗೆ ಇರಬೇಕೆಂಬ ಬಗ್ಗೆ ಸೂಕ್ಷ್ಮಾಗಮ ಪಟಲ ೫, ಶ್ಲೋಕ ೬ ನೋಡಿರಿ.

ಅಧೀತವೇದ ವೇದಾಂಗಃ ಸರ್ವಸ್ಮೃತಿಷು ಕೋವಿದಃ ।
ಪುರಾಣ ಸಂಹಿತಾವಕ್ತಾ ತದರ್ಥ ಪ್ರತಿಪಾದಕಃ ॥

ಈ ಅವತರಣದಿಂದಲೂ ಅದೇ ಗ್ರಂಥದ ೭೦ ನೇ ಪಟಲ ೮೫ ನೇ ಶ್ಲೋಕ,

ನವಸ್ತು ಸಂಗ್ರಹಂ ಕುರ್ಯಾತ್ರ ಕುತ್ರಾಪಿ ಜಂಗಮಃ ।
ದತ್ತಂ ದದ್ಯಾಚ್ಚ ಭಕ್ತೇಭ್ಯೋ ದರಿದ್ರೇಭ್ಯೋ ದಯಾನ್ವಿತಃ ॥

ಇದರಿಂದಲೂ ಸಮಾಜಕ್ಕೆ ಧಾರ್ಮಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಕೊಡುವ ಸಲುವಾಗಿ ಜಂಗಮನ ಉಪಯೋಗವಾಗಬೇಕೆಂದು ಅವನಿಗೆ ದಾನ ಮತ್ತು ನೇಮಣೂಕುಗಳನ್ನು ಕೊಡುವ ಪದ್ಧತಿಯು ಉಂಟಾಗಿರಬೇಕೆಂಬುದು ವ್ಯಕ್ತವಾಗುತ್ತದೆ. ಧಾರವಾಡ ಗ್ಯಾಜೀಟಿಯರ್ ಪುಟ ೧೧೦ ಇದರಲ್ಲಿಯೂ ಹೀಗೆಯೇ ಉಲ್ಲೇಖವಾಗಿರುತ್ತದೆ.

ಇವೇ ಅಭಿಪ್ರಾಯಗಳು ನಂದೀ ಪುರಾಣದಲ್ಲಿ ಮತ್ತು ವಿರಕ್ತೋತ್ಪತ್ತಿ ಕ್ರಿಯಾಲಕ್ಷಣ ಈ ಗ್ರಂಥದಲ್ಲಿಯ ಪುಟ ೧ ಇದರಲ್ಲಿ ಉದಹರಿಸಿದ ಉತ್ತರ ವಾತುಳಾಗಮ ೧೨—೧೩ ಶ್ಲೋಕ ಇವುಗಳಲ್ಲಿಯೂ ವ್ಯಕ್ತವಾಗುತ್ತವೆ. ಹಾಗೆಯೇ ಚರಜಂಗಮನು ಪಟ್ಟಾಭಿಷೇಕ ಹೊಂದುವ ವೇಳೆಯಲ್ಲಿ ಅವನಿಗೆ ಶಿವಾನುಭವಶಾಸ್ತ್ರ ಗ್ರಂಥಗಳ ದೇಣಿಗೆಯನ್ನು

ಕೊಡುವ ಸಾಂಪ್ರದಾಯವೂ ಇದ್ದದ್ದು ಸುಪ್ರಭೇದಾಗಮದಿಂದಲೂ ತಿಳಿದುಬರುತ್ತದೆ (ಸದಾಚಾರಸಂಗ್ರಹ ಪುಟ೧೩೪ ಶ್ಲೋಕ ೫೪ ನೋಡಿರಿ)

ಹೀಗೆ ದಾನ ಕೊಡುವದರ ಉದ್ದೇಶವು ದಾನ, ದಾನಕೊಡುವವ ದಾನಸ್ವೀಕರಿಸುವವ ಇವರಲ್ಲಿ ಸಾಮರಸ್ಯದ ಸಾಕ್ಷಾತ್ಕಾರಕ್ಕೋಸ್ಕರ ಆತ್ಮಿಕ ಕಲ್ಯಾಣಕ್ಕೋಸ್ಕರ ಜ್ಞಾನದ ಪ್ರಗತಿಗೋಸ್ಕರ ಇರುತ್ತದೆಂಬುದು ಸಿದ್ಧಾಂತಶಿಖಾಮಣಿ ಪುಟ ೧೬೫ ಶ್ಲೋಕ ೭ ಇದರಿಂದಲೂ ವ್ಯಕ್ತವಾಗುತ್ತದೆ.

ಇಹಲೋಕದಲ್ಲಿ ದಾನವನ್ನು ಮಾಡಿ ಸ್ವರ್ಗದಲ್ಲಿ ಅದಕ್ಕೋಸ್ಕರ ಪುಣ್ಯವನ್ನು ಪಡೆಯಬೇಕು ಅಥವಾ ಮರಣದ ತರುವಾಯ ಸ್ವರ್ಗದಲ್ಲಿ ಸುಖವನ್ನು ಉಪಭೋಗಿಸಬೇಕು ಎಂಬದು ವೀರಶೈವರಲ್ಲಿ ಇರುವದಿಲ್ಲ.

ಹಿಂದೂ ಜನರು ದಾನಗಳಲ್ಲಿ ಕನ್ಯಾದಾನಕ್ಕೆ ಹೆಚ್ಚಿನ ಸ್ಥಾನವನ್ನು ಕೊಟ್ಟಿದ್ದಾರೆ. ವೀರಶೈವರಾದರೂ ಕನ್ಯಾದಾನವು ಶಿವಪ್ರಸಾದವೆಂದು ತಿಳಿಯುತ್ತಾರೆ. ಇದು ಅವರ ದಶಕರ್ಮ ಸಂಸ್ಕಾರಗಳಲ್ಲಿ ಬರುವದುಂಟು. ಈ ಕನ್ಯಾದಾನವನ್ನು ವೀರಶೈವನು ತನಗೆ ಸ್ವರ್ಗಸುಖವು ದೊರೆಯಬೇಕೆಂಬ ಉದ್ದೇಶದಿಂದ ಮಾಡುವದಿಲ್ಲ. ಆದರೆ ಅಧ್ಯಾತ್ಮಿಕ ಶಿವಪ್ರಸಾದವನ್ನು ಪ ತ್ಯಕ್ಷಮಾಡಿಕೊಡುವ ಜ್ಞಾನಕ್ಕೆ ಇದು ಸಹಾಯವಾಗಬೇಕೆಂಬ ಉದ್ದೇಶದಿಂದ ದಾನಕೊಡುವವನು ದಾನಕೊಡುತ್ತಾನೆ, ಮತ್ತು ದಾನ ಸ್ವೀಕರಿಸುವವನು ಅದನ್ನು ಸ್ವೀಕರಿಸುತ್ತಾನೆ.

(ವೀರಶೈವ ಲಿಂಗೀ ಬ್ರಾಹ್ಮಣ ದಶಕರ್ಮಪದ್ಧತಿ ೧ ನೇ ಆವೃತ್ತಿ ಪುಟ ೧೫೮—೧೬೧)



# ಶಿವಾನುಭವ ಪತ್ರಿಕೆಯ ೬ನೇ ವರ್ಷದ ಕಾರ್ಯಗಳು

(ಸಂಪಾದಕಃ— ರಾ॥ ಸಾ॥ ಫ. ಗು. ಹಳಕಟ್ಟಿ ಬಿ ಏ. ಎಲ್. ಎಲ್. ಬಿ. ವಿ-)

ಈ ಸಂಚಿಕೆಗೆ ಶಿವಾನುಭವ ಪತ್ರಿಕೆಯ ೬ ನೇ ವರ್ಷವು ಮುಗಿದು ಮುಂದಿನ ಸಂಚಿಕೆಯಿಂದ ೭ ನೇ ವರ್ಷವು ಪ್ರಾರಂಭವಾಗುತ್ತದೆ ಹೋದ ವರ್ಷ ಆದ ಕಾರ್ಯಗಳನ್ನು ವರ್ಷಾಂತ್ಯದಲ್ಲಿ ಸ್ಥೂಲರೂಪವಾಗಿ ನಿರೀಕ್ಷಣ ಮಾಡುವ ನಮ್ಮ ಪದ್ಧತಿಗನುಸಾರವಾಗಿ ನಾವು ಇವುಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುತ್ತೇವೆ. ಅವುಗಳನ್ನು ವಾಚಕರು ಲಕ್ಷಿಸಿ ಈವರೆಗೆ ಅವರು ನಮಗೆ ಸಹಾಯ ಮಾಡಿದಂತೆಯೇ ಮುಂದೆಯಾದರೂ ಸಹಾಯ ಮಾಡುತ್ತ ಹೋಗುವರೆಂದು ನಾವು ಅವರನ್ನು ಬಿನ್ನವಿಸಿಕೊಳ್ಳುತ್ತೇವೆ. ನಮ್ಮ ಕಾರ್ಯಗಳಲ್ಲಿ ಯಾವವಾದರೂ ಸೂಚನೆಗಳನ್ನು ಅವರು ಮಾಡುವದಿದ್ದರೆ, ಅವುಗಳನ್ನು ಅವರು ಅವಶ್ಯವಾಗಿ ಮಾಡಬೇಕು. ಮತ್ತು ಇವಕ್ಕೋಸ್ಕರ ನಾವು ಅವರಿಗೆ ಅತ್ಯಂತ ಋಣಿಯಾಗುವೆವು.

ನಾವು ಶಿವಾನುಭವ ಪತ್ರಿಕೆಯನ್ನು ಪ್ರಾರಂಭಿಸಿದ್ದರ ಮುಖ್ಯೋದ್ದೇಶಗಳು ಗ್ರಂಥ ಪ್ರಕಟನೆ, ವೀರಶೈವ ಸಂಸ್ಕೃತಿ ಮತ್ತು ಇತಿಹಾಸ ಇವುಗಳ ಸಂಶೋಧನವಿದ್ದು ಇವುಗಳನ್ನು ನಾವು ಹೋದ ವರ್ಷ ಯಥಾ ಶಕ್ತಿ ಮಾಡಿರುವೆವೆಂಬದು ಕೆಳಗೆ ಕಾಣಿಸಿದ ವಿವರಣೆಯಿಂದ ವಾಚಕರಿಗೆ ಗೊತ್ತಾಗದೆ ಇರದು.

೧. ಪ್ರಭುದೇವರ ವಚನಗಳುಃ— ಈ ಮಹತ್ವದ ಗ್ರಂಥವನ್ನು ನಾವು ಈ ವರ್ಷ ಪೂರ್ತಿಗೊಳಿಸಿದೆವು. ಇದು ೩೩೩ ಪುಟಗಳುಳ್ಳ ದೊಡ್ಡ ಗ್ರಂಥವಾಗಿದೆ.

೨. ಸಿದ್ಧರಾಮೇಶ್ವರನ ವಚನಗಳುಃ— ಈ ಮಹತ್ವದ ಗ್ರಂಥವಾದರೂ ಈ ವರ್ಷದ ಅಂತ್ಯ ಸಂಚಿಕೆಯಲ್ಲಿ ಮುಗಿಸಲ್ಪಟ್ಟಿದೆ. ಇದು ಈ ವರೆಗೆ ಅಪರಿಚಿತವಾಗಿದ್ದ ತೀರ ಹೊಸ ಗ್ರಂಥವಾಗಿದೆ.

೩. ಆದಯ್ಯನ ವಚನಗಳುಃ— ಪುಲಿಗೆರೆಯ ಸೋಮನಾಥನನ್ನು ಸ್ಥಾಪನೆಗೊಳಿಸಿದ ಮಹಾತ್ಮನಾದ ಆದಯ್ಯನ ವಚನಗಳು ಇವು ಇರುತ್ತವೆ.

೪. ರಾಜೇಂದ್ರನಾಮೆಃ— ಈ ಹಳೇ ಗ್ರಂಥವನ್ನು ಮದ್ರಾಸ ಸರಕಾರದ ಈಗ ನಿವೃತ್ತಿಹೊಂದಿದ ಸೀನಿಯರ ಟ್ರಾನ್ಸಲೇಟರರಾದ

ರಾ॥ ರಾ॥ ಬೆನಗಲ್ಲು ರಾಮರಾವ ಎಮ್. ಏ. ಎಲ್. ಎಲ್. ಬಿ. ಇವರು ಸಂಶೋಧಿಸಿ ಸಿದ್ಧಪಡಿಸಿದ್ದಾಗಿದೆ. ಇದು ಈ ವರ್ಷ ಪ್ರಾರಂಭಿಸಿದ್ದಾಗಿದೆ. ಇದರಲ್ಲಿ ಕೊಡಗಿನ ರಾಜರ ಚರಿತ್ರೆಗಳು ಇವೆ.

೫. ರಗಳೆಗಳು:— ಹರಿಹರಾಚಾರ್ಯರು ರಚಿಸಿದ ರಗಳೆಗಳನ್ನು ಕಾಲಕಾಲಕ್ಕೆ ನಾವು ಪ್ರಸಿದ್ಧಿಸುವ ವ್ಯವಸ್ಥೆಯನ್ನು ಮಾಡಿದ್ದೇವೆ. ಕನ್ನಡ ವಾಙ್ಮಯದಲ್ಲಿ ಹೊಸ ಪದ್ಧತಿಯ ಕಾವ್ಯಗಳು ಇವಾಗಿರುತ್ತವೆ.

೬. ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ:— ವಚನ ವಾಙ್ಮಯವನ್ನು ಮೊದಲಿಗೆ ಪ್ರಸಿದ್ಧಿಗೆ ತಂದ ಮಹತ್ವದ ಗ್ರಂಥವು ಇದಾಗಿದೆ. ಇದರಲ್ಲಿ ನಾವು ಇನ್ನೂ ಅನೇಕ ವಚನಗಳನ್ನು ಸೇರಿಸಿ ಬೆಳಸಿದ್ದರಿಂದ ಇದರಲ್ಲಿ ಎರಡು ಭಾಗಗಳನ್ನಾಗಿ ಮಾಡಿದ್ದೇವೆ. ಇವುಗಳಲ್ಲಿ ಪೂರ್ವಾರ್ಧವು ಈಗ ಪ್ರಸಿದ್ಧವಾಗಿದೆ. ಮತ್ತು ಉತ್ತರಾರ್ಧವು ಅಚ್ಚಿನಲ್ಲಿ ಇದೆ.

೭. ನೈತಿಕ ಮತ್ತು ಭಕ್ತಿಯ ವಚನಗಳು:— ಈ ಗ್ರಂಥದ ೨ ನೇ ಆವೃತ್ತಿಯನ್ನು ನಾವು ಈಗ ಬೇರೆಯಾಗಿ ಅಚ್ಚುಗೊಳಿಸಿದ್ದೇವೆ.

೮. ಮಹಾದೇವಿಯಕ್ಕನ ವಚನಗಳು:— ಈ ಮಹತ್ವದ ಗ್ರಂಥದ ೨ ನೇ ಆವೃತ್ತಿಯನ್ನು ಬೇರೆಯಾಗಿ ಅಚ್ಚುಗೊಳಿಸಿದ್ದೇವೆ.

೯. ಆದಿಶೆಟ್ಟಿ ಪುರಾಣ:— ಈ ಗ್ರಂಥವು ಮಹಾಕವಿರಾಘವಾಂಕನಿಂದ ರಚಿಸಲ್ಪಟ್ಟಿದ್ದು ಇದನ್ನು ರಾ॥ ರಾ॥ ಜೋತೆಪ್ಪಗೌಡಾ ಪಾಟೀಲ ಮು. ಅಥಣಿ ಇವರು ಕೆಲವು ವರ್ಷಗಳ ಹಿಂದೆ ಅಚ್ಚುಗೊಳಿಸಿದ್ದರು. ಮತ್ತು ಇದು ಕೈ. ವಾ. ಬಿ. ಬಸವಾರಾಧ್ಯರು ಬಿ. ಏ. ಬಿ. ಎಲ್. ಇವರಿಂದ ಪರಿಶೋಧಿಸಲ್ಪಟ್ಟಿದ್ದು ಇರುತ್ತವೆ. ಈ ಗ್ರಂಥದ ಹಕ್ಕುಗಳನ್ನು ಪ್ರಕಾಶಕರು ನಮ್ಮ ಕಡೆಗೆ ಕೊಟ್ಟಿದ್ದು ಇದಾದರೂ ಶಿವಾನುಭವಗ್ರಂಥಮಾಲೆಯಲ್ಲಿ ಸೇರಿಸಲ್ಪಟ್ಟಿದೆ.

ಈ ಪ್ರಕಾರ ಹೋದ ವರ್ಷ ನಾವು ಮಹತ್ವದ ಗ್ರಂಥಗಳನ್ನು ಪ್ರಕಾಶಪಡಿಸಿರುತ್ತೇವೆ. ಅಲ್ಲದೆ ಈ ಶಿವಾನುಭವ ಪತ್ರಿಕೆಯಲ್ಲಿ ಮಹತ್ವದ ಲೇಖಗಳು ಅನೇಕ ಬಂದಿದ್ದು ಅವು ವಾಚಕರಿಗೆ ಮನವರಿಕೆಯಾಗಿರಬಹುದು. ಈ ಲೇಖಗಳು ವಾಙ್ಮಯಾತ್ಮಕ, ಐತಿಹಾಸಿಕ, ಆಧ್ಯಾತ್ಮಿಕ ಹೀಗೆ ಅನೇಕಬಗೆಯಾದವುಗಳಿದ್ದು ಅವೆಲ್ಲವೂ ಅನೇಕ ವಿದ್ವಾಂಸರಿಂದ ಅತ್ಯಂತ ವಿಚಾರಪೂರ್ವಕವಾಗಿ ಬರೆಯಲ್ಪಟ್ಟಿರುತ್ತವೆಂ

ಬದು ಅವರಿಗೆ ತಿಳಿಯದೆ ಇರದು. ಶಿವಾನುಭವವನ್ನು ಉಚ್ಚತರಗತಿಯದ್ದಾಗಿಯೇ ಇಡಬೇಕೆಂದು ನಮ್ಮ ಧ್ಯೇಯವು ಮೊದಲಿನಿಂದಲೂ ಇದ್ದು ಇದಕ್ಕನುಸಾರವಾಗಿ ಈ ಪತ್ರಿಕೆಯನ್ನು ನಡಿಸುವದು ಎಷ್ಟು ಕಠಿಣವಿರುತ್ತದೆಂಬದನ್ನು ವಾಚಕರಿಗೆ ನಾವು ಹೇಳುವದು ಅವಶ್ಯವಿಲ್ಲ. ಆದರೂ ನಮ್ಮ ಈ ಧ್ಯೇಯಕ್ಕೆ ಅನುಸರಿಸಿ ಅನೇಕ ಲೇಖಕ ಮಹನೀಯರು ಕಾಲಕಾಲಕ್ಕೆ ನಮಗೆ ಸಹಾಯಮಾಡಿದ್ದಕ್ಕೆ ನಾವು ಅವರಿಗೆ ಅತ್ಯಂತ ಋಣಿಯಾಗಿದ್ದೇವೆ.

ಹೋದ ವರ್ಷ ಇಡೀ ಪೃಥ್ವಿಯು ಅದರೊಡನೆ ಒಂದು ಸ್ಥಾನವೂ ಕೂಡ ಅತ್ಯಂತ ಆರ್ಥಿಕ ಅವನತಿಗೆ ಪಾತ್ರವಾಯಿತು. ದೇಶದ ಈ ಸ್ಥಿತಿಯು ನಮ್ಮ ಕಾರ್ಯಗಳಿಗೂ ಬಹುದೊಡ್ಡ ಆತಂಕಗಳನ್ನು ಉಂಟುಮಾಡಿತು. ಆದರೂ ಕೂಡ ನಾವು ಕೈಕೊಂಡ ಕಾರ್ಯಗಳಲ್ಲಿ ಚ್ಯುತಿಯನ್ನು ತರಗೊಡದೆ ಸರಾಗವಾಗಿ ನಮ್ಮ ಕಾರ್ಯಗಳನ್ನು ನಡೆಯಿಸಿಕೊಂಡು ಹೋದ ಆ ಮಹಾಘನ ಪರಮಾತ್ಮನನ್ನು ಸ್ಮರಿಸಿ ನಾವು ಮುಂದಿನ ವರ್ಷದ ಕಾರ್ಯಗಳಿಗೋಸ್ಕರ ಪ್ರವೃತ್ತರಾಗುವೆವು. ವಾಚಕ ಮಹಾಶಯರೆಲ್ಲರು ನಮ್ಮ ಈ ಕಾರ್ಯಗಳಲ್ಲಿ ಸಹಾನುಭೂತಿಯನ್ನು ವಹಿಸಿ ಎಂದಿನಂತೆ ನಮಗೆ ಸಹಾಯಮಾಡುವರೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ.

---

## ದೇಣಿಗೆಗಳು.

೧. ಮ. ರಾ|| ರಾ|| ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ ಮು|| ಹುಬ್ಬಳ್ಳಿ ಈ ಮಹನೀಯರು ತಾವು ರಚಿಸಿದ ೬೩ ಪುರಾತನರ ನೂತನ ಗದ್ಯಗ್ರಂಥದ ೧೦೦ ಪ್ರತಿಗಳನ್ನು ಶಿವಾನುಭವ ಪತ್ರಿಕೆಯ ಏಳಿಗೆಗೋಸ್ಕರ ಕಳಿಸಿಕೊಟ್ಟಿರುವರು. ಇವರು ಮಾಡಿದ ಸಹಾಯಕ್ಕೋಸ್ಕರ ನಾವು ಅವರಿಗೆ ಅತ್ಯಂತ ಆಭಾರಿಯಾಗಿದ್ದೇವೆ.

೨. ಮ. ರಾ. ರಾ. ವಿರೂಪಾಕ್ಷಪ್ಪ ಶಿವಲಿಂಗಪ್ಪ ಪಾವಟೆ ಮು. ಹುಬ್ಬಳ್ಳಿ ಈ ಮಹನೀಯರು ಶಿವಾನುಭವ ಪತ್ರಿಕೆಯ ಆರಂಭದ ಸಂಚಿಕೆಗಳು ಹೊರಟ ಕೂಡಲೆ "ಶಿವಾನುಭವವು ಚಿರಾಯುಷ್ಯವಾಗಿ ನಡೆ

ಯಬೇಕಾದರೆ ದ್ರವ್ಯಸಹಾಯವು ಅವಶ್ಯವಾಗಿ ಬೇಕು. ಅಂಥ ಅಡಚಣಿಯು ಶಿವಾನುಭವಕ್ಕೆ ಎಂದೂ ಬರಬಾರದೆಂದು ತಮ್ಮ ತಾಯಿತಂದೆಗಳ ಉಪಕಾರ ಸ್ಮರಣಾರ್ಥಕ್ಕಾಗಿ ತಮ್ಮ ಪ್ರಾವಿಡೇಂಟ ಇನಶೂರನ್ಸ ಕಂಪನಿಯ ಪಾಲಸಿಯ ಹಕ್ಕನ್ನು ಸಂಪೂರ್ಣವಾಗಿ ಅರ್ಪಿಸುವೆವು" ಎಂದು ಆಕಾಲಕ್ಕೆಯೇ ನಮಗೆ ತಿಳಿಸಿದ್ದರು. ಅದಕ್ಕನುಸರಿಸಿ ಇವರು ತಮ್ಮ ಪಾಲಿಸಿಯ ೩೫೦ ರೂಪಾಯಿಗಳನ್ನು ನಮ್ಮ ಕಡೆಗೆ ಇದೇ ತಿಂಗಳು ಕಳಿಸಿಕೊಟ್ಟರು. ಇದರಿಂದ ಸಕಾಲಕ್ಕೆ ನಮಗೆ ಬಹಳ ಸಹಾಯವಾಯಿತು. ಇದಕ್ಕೋಸ್ಕರ ನಾವು ಈ ಮಹಾನುಭಾವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ ಇರುತ್ತದೆ. ಇವರ ಇಚ್ಛೆಯು ತಮ್ಮ ತಾಯಿತಂದೆಗಳ ಸ್ಮರಣಾರ್ಥವಾಗಿ ಶ್ರೀ ಚನ್ನಬಸವೇಶ್ವರ ವಚನಗ್ರಂಥವನ್ನು ಅಚ್ಚುಹಾಕಬೇಕೆಂದು ಇದೆ. ಅದಕ್ಕನುಸಾರವಾಗಿ ಈ ಮಹತ್ವದ ಗ್ರಂಥವನ್ನು ನಾವು ಅಚ್ಚುಹಾಕುವ ಕಾರ್ಯವನ್ನು ಕೈಕೊಂಡಿರುತ್ತೇವೆ.

---

## ವಿಮರ್ಶನೆಗೋಸ್ಕರ ಬಂದ ಗ್ರಂಥಗಳು.

ನಮ್ಮ ಕಡೆಗೆ ಕೆಳಗೆ ಕಾಣಿಸಿದ ಗ್ರಂಥಗಳು ವಿಮರ್ಶನೆಗೋಸ್ಕರ ಬಂದಿವೆ. ಅವುಗಳ ವಿಮರ್ಶೆಯನ್ನು ನಾವು ಮುಂದಿನ ಸಂಚಿಕೆಯಲ್ಲಿ ಮಾಡುವೆವು.

೧ ಶ್ರೀ ಪ್ರಭುಲಿಂಗದ ಕಂದಃ— ಶಿ. ಮೂ. ಬುದ್ಧಯ್ಯಾ ಮಗೆಯ್ಯಾ ಪುರಾಣಿಕ ತೇರದಾಳ. ೨ ಸೊನ್ನಲಾಪುರದ ಶ್ರೀ ನಾಲತವಾಡ ಶರಣರ ಸಂಪೂರ್ಣ ಸಚಿತ್ರ ಚರಿತ್ರೆಯುಃ— ರಾ. ರಾ ಈಶ್ವರ ಮಹಾರುದ್ರಪ್ಪ ಸಣಕಲ್ಲ. ೩ ಬಸವಗೀತಾಂಜಲಿಃ— ಮೋಟಗಿಮಠದ ಸಿ॥ ಬಸವಲಿಂಗ ಶಾಸ್ತ್ರಿ ಅಥಣಿ. ೪ ವಿವಾಹವಿಧಿಃ— ಅಥಣಿ ಮೋಟಗಿ ಮಠದ ಸಿದ್ಧಾಂತಿ ಬಸವಲಿಂಗ ಶಾಸ್ತ್ರಿಗಳು. ೫ ತತ್ವಬೋಧಾಭ್ಯಾಸಃ— ಪಾಟೀಲ ಕಲ್ಲನಗೌಡರು. ೬ ದಿಲಾಯಿಫ್ ಆಫ ಲಾರ್ಡಬಸವಃ— ಪಿ. ಎನ್. ಕೆ. ಸಂಗನಾಳಮಠ. ೭ ಸ್ತ್ರೀಪದ್ಯಾವಲಿಃ— ಲೇಖಕ ಬಾಲತಪಸ್ವೀ ಪ. ಬ್ರ. ಪಟ್ಟಾಧ್ಯಕ್ಷ ಬೃಹನ್ಮಠ ಹೊಟಗಿ.

---

ಒಬ್ಬರು ಕೆಲವು ಕುಟುಂಬ ಮಕ್ಕಳು ಸಹ ಉಳಕೊಂಡು ಪಿರಿಯಾ ಪಟ್ಟಣವಲ್ಲು ಇರುತ್ತ ಇದ್ದರು.

ಟೀಪೂ ಸುಲ್ತಾನರು ನಗರಕ್ಕೆ ಹೋಗಿ, ಇಂಗ್ರೇಜಿ ಬಹದ್ದರ ಪವುಜಿನ ಸಂಗಡ ಜಗಳ ಮಾಡಿ, ಸಾಧ್ಯವಿಲ್ಲದೆ ನಂಬಿಗೆ ಕೊಟ್ಟು ಕೋಟೆ ಒಳಗೆ ಇದ್ದ ಇಂಗ್ರೇಜಿ ಪವುಜು ಜನರಲ್ ಮತ್ತಿಸಾಹೇಬರವರ ಸಹ ಸಲ್ಲಾದ ಮೇಲೆ ಇಳಿಸಿ, [ಕೈಗೆ] § ಸಿಕ್ಕಿನವರ ಘಾತವಮಾಡಿ, ಸೆರೆಹಾಕಿ, ನಗರದ ಕೋಟೆಯನ್ನು ಸ್ವಾಧೀನವಮಾಡಿಕೊಂಡು, ಅಲ್ಲಿಂದ ಕೊಡಿಯಾಲಕ್ಕೆ ಹೋಗಿ, ಆ ಕೋಟೆ (ಗೆ) ಮುತ್ತಿಗೆ ಹಾಕಿ, ಬಹಳ ಲಡಾಯಿ ಮಾಡಿದಾಗ್ಯೂ ಇವರಿಗೆ ಸಾಧ್ಯವಿಲ್ಲದೆ ಹೋಗಿ, ಆ ಕೋಟೆ ಒಳಗೆ ಇದ್ದ ಇಂಗ್ರೇಜಿಯವರ ಸಂಗಡ ಸಲ್ಲಾವಮಾಡಿದಲ್ಲಿ, ಅವರು ಇಳಿದು, ಜಾಜು ಹತ್ತಿ ಹೋದರು. ಆ ಬಳಿಕ ಸುಲ್ತಾನರು ಆ ಕೋಡಿಯಾಲದ ಕೋಟೆಯನ್ನು ಕೆಡಗಿಸಿ ಬಿಟ್ಟು, ಆ ಮೇಲೆ ತನ್ನ ಪವುಜು ಯಾವತ್ತೂ ತೆಗೆದುಕೊಂಡು, ಕಲಿಸಂದ ೪೮೮೬ ನೇ ಕ್ರೋಧಿ ಸಂವತ್ಸರದಲ್ಲಿ ಕೊಡಗಿಗೆ ಬಂದು, ಈ ಶರಾರತ್ತು ಮಾಡಿದ ಕೊಡಗರಿಗೆಲ್ಲಾ ನಂಬಿಗೆ ಭರವಸ ಕೊಟ್ಟು, ನಯಭಯದಿಂದ ಕವಲು ಕರಾರು ಮಾಡಿ, ಪಟ್ಟಣಕ್ಕೆ ಹೋದರು.

ಆ ಬಳಿಕ ಕಲಿಸಂದ ೪೮೮೭ ನೇ ವಿಶ್ವಾವಸು ಸಂವತ್ಸರದ ಶ್ರಾವಣ ಮಾಸದಲ್ಲಿ ಇದೇ ಮಾತಿನ ಬಗ್ಗೆ ಪುನಃ ಕೊಡಗು ಜನ ಯಾವತ್ತು ತಿರುಗಿ ಬಂದು ಶರಾರತ್ತು ಮಾಡಿದ್ದರಿಂದ, ಟೀಪು ಸುಲ್ತಾನರು ಈ ಶರಾರತ್ತು ನಿಲ್ಲಿಸುವ ಬಗ್ಗೆ ಜೈನುಲ್ಲಾಬ್ದೀನು ಸೂಸ್ತ್ರಿಯನ್ನು ೧೫ ಸಾವಿರ ಪವುಜು ಸಹ ಕೊಡಗಿಗೆ ಕಳುಹಿಸಿದಲ್ಲಿ, ಆ ಪವುಜು ಕೊಡಗಿನ ಸೀಮೆವೊಳಗೆ ಬಂದು, ಉಲುಗುಲಿ ಸಂತೆ ಮಾಳದಲ್ಲಿ ಇಳುಕೊಂಡು ಇದ್ದಲ್ಲಿ, ೪—೫ ಸಾವಿರ ಕೊಡಗರು ಹೋಗಿ ಮುತ್ತಿಗೆ ಹಾಕಿಕೊಂಡು, ಲಡಾಯಿ ಮಾಡಿ, ಆ ಲಷ್ಕರಿನ [ಜನ] = ಗಳನ್ನು ಕಡಿದುಹಾಕಿದರು. ಆ ಸೂಸ್ತ್ರಿಯೂ ಮಡಕೇರಿ ಕೋಟೆ ಪರಿಯಂತರ ಬಂದು, ತನ್ನ ಜೋರು ಇಲಾಜು ಸಹ ಏನೂ ನಡೆಯದೆ ಲಾಚಾರಾಗಿ, ತಿರುಗಿ ಬೆಟ್ಟದಪುರದ ಕಡೆ

§ ಬ ನಂದಿಬಂದು ಕೈಗೆ
= ಬ ಬಹಳ ಜನ

[ತಿರುಗುತ್ತ] ± ಇನ್ನಲ್ಲಿ, ಇದೇ ಉಲುಗುಲಿ ಸಂತೆಮಾಳದಲ್ಲಿ ಕೊಡಗರು ಹೋಗಿ ಲಡಾಯಿ ಮಾಡಿದಲ್ಲಿ, ಅವನ ಕಡೆ ಕೆಲವು ಮಂದಿ ಮೃತವಾಗಿ, ಸಾಮಾನು ಸರಂಜಾಮು ಅಲ್ಲೇ ಬಿಟ್ಟು, ಬಾಕಿ ಫವುಜು ತೆಗೆದುಕೊಂಡು ಬೆಟ್ಟದಪುರಕ್ಕೆ ಹೋಗಿ ಇಳಕೊಂಡನು.

ಆ ಬಳಿಕ ಈ ವರ್ತಮಾನವನ್ನು ಟೀಪೂ ಸುಲ್ತಾನರಿಗೆ ಬರೆದು ಕಳುಹಿಸಿದ್ದರಿಂದ, ಅವರು ಫವುಜು ತೆಗೆದುಕೊಂಡು [ಇಲ್ಲಿಗೆ] * ಬಂದು, ಉಲುಗುಲಿ ಮಾಳದಲ್ಲಿ ಇದೇ ವರುಷದ ಆಶ್ವೀಜ ಬ. ೩೦ ಯಲ್ಲು ಇಳಕೊಂಡಲ್ಲಿ, ಅಲ್ಲಿ ಇರುವಂತಾ ಕೊಡಗರಿಗೆ ನಂಬಿಗೆ ಭಾಷೆ ಹೇಳಿ ಕವುಲಿಗೆ ಇಳಿಸುತ್ತ [೧೫] × ದಿವಸ ಅಲ್ಲಿ ಇದ್ದು, ಆ ಬಳಿಕ ಮಡಿಕೇರಿಗೆ ಬಂದು, ಅಲ್ಲಿ ಇರುವಂತಾ ಯಾವತ್ತು ಕೊಡಗರಿಗೆ ನಂಬಿಗೆ [ಭಾಷೆ ಹೇಳಿ] † ಅಲ್ಲಿಂದ ಮಾರ್ಗಶಿರ ಶುದ್ಧ ೧ ದಿವಸ ಭಾಗಮಂಡಲಕ್ಕೆ ಹೋಗಿ, ಅದರ ಸಮೀಪದಲ್ಲಿ ಇರುವ ದೇವಟ್ಟುಪರಂಬು ಎಂಬ ಮೈದಾನದಲ್ಲು ಇಳಕೊಂಡು, ಅಲ್ಲಿ ಇರುವಂತಾ ಕೊಡಗರಿಗೆಲ್ಲ ನಂಬಿಗೆ ಕೊಟ್ಟು, [ಈ] = ಬ ೫ ದಿವಸ ಕವಲಿಗೆ ಬಂದು ಇದ್ದಂತ ಕೊಡಗರು, ಅವರ ಕುಟುಂಬ ಮಕ್ಕಳ ಸಹ ಸಮಸ್ತರನ್ನೂ ಬಳಸಿ ಹಿಡಿಕೊಂಡು, ಪಾರೆ ಹಾಕಿ ತೆಗೆದುಕೊಂಡು ಹೋಗಿ, ತಮ್ಮ ಸೀಮೆ ಗಡಿಗಳಿಗೆಲ್ಲ ಹಂಚಿ ಹಾಕಿ, ಆ ಯಾಯ ಸ್ಥಳಕ್ಕೆ ಕಳುಹಿಸಿ, ಆ ಜನಕ್ಕೆಲ್ಲ ಮುಂಜಿಮಾಡಿ, ಕುಲಗೆಡಿಸಿ, ಚೆಲೆಯರ ಮಾಡಿ ಇಟ್ಟುಕೊಂಡು, ಆ ಬಳಿಕ ತಮ್ಮ ಜಾತಿ ಸೇಕ್, ಸೈದ್, ಮೊಗಲ್, ಪಟಾಣ [ಎಂಬ ಜಾತಿಗೆ] § ಕೊಡಗಿನ ಸೀಮೆಗೆ ಕಳುಹಿಸಿ, ಕೊಡಗಿನ [ಸೀಮೆ ಭೂಮಿ] || ಯನ್ನು ಆ ಮುಸಲ್ಮಾನರಿಗೆ ಜಾಗೀರಾಗಿ ಕೊಟ್ಟು, ಆರಂಜದ ಬದುಕು ಮಾಡುವ ಬಗ್ಗೆ ಪತ್ರಿಕು ಕೊಡಗರಿಗೆ ಬದುಕುಮಾಡುತ್ತ ಇದ್ದ ಹೊಲೆಯರನ್ನು ಈ

---

± ಬ ಹೋಗುತ್ತ

* ಬ ಕೊಡಗಿನ ಸೀಮೆ ಒಳಕ್ಕೆ

× ಬ ಕಾರ್ತಿಕ ಶು ೧೫ ಪರಿಯಂತರ ೧೫

† ಬ ಕೊಟ್ಟು ಇಳಿಸಿ

= ಬ ಮಾರ್ಗಶಿರ

§ ಬ ಎಂಬ ಮುಸಲ್ಮಾನ ಜಾತಿಯವರಿಗೆ

|| ಬ ಭೂಮಿ ಮನೆ

ಮುಸಲ್ಮಾನರಿಗೆ ಕೊಟ್ಟು, ಇವರಿಂದ [ಸಾಗು ಆಗದೆ] ± ಹೋದ ಭೂಮಿ ಮನೆಗೆ ಆದವಾನಿ ಸೀಮೆ ರಹಿತರ ಹಿಡಿತಂದು ಕೊಡಗಿನ ಸೀಮೆಯಲ್ಲಿ ರೈತಾವಿಗೆ ಇಟ್ಟು, ಅವರಿಗೆ ಬೇಕಾದ್ದು ಕೊಟ್ಟು, ಇಲ್ಲಿ ಸರಕಾರದ ಕೆಲಸ ಬಜಾಯಿಸುವ ಬಗ್ಗೆ ಪ್ರಾಕು [ಇಲ್ಲಿ] † ಕರಣೀಕತನ ಮಾಡಿಕೊಂಡು ಇದ್ದವನ ತಮ್ಮ ನಾಗಪ್ಪೈಯು ಎಂಬವನ ನೇಮಿಸಿ ಇಟ್ಟು ಇದ್ದಲ್ಲಿ, ಈ ನಾಗಪ್ಪೈಯು ಎಂಬವನು ಆ ರೈತರಿಗೆ ಸಲ್ಲುವಂತ (ಹ) ಕೆಲವು ಹಣ ದವಸ ಧಾನ್ಯ ತಟವಟ ಮಾಡಿ ತಿಂದದ್ದರಿಂದಲೂ, ಇದು ವಿನಹಾ ಕೆಲವು ರೈತರಿಂದ ಲಂಚ ತೆಗೆದುಕೊಂಡು ಅವರನ್ನು ಬಿಟ್ಟುಬಿಡುತ್ತ ಇದ್ದದರಿಂದಲೂ ಸಹ, ಮಧ್ಯೆ ಮಾರ್ಗದಲ್ಲಿ ಆ ಆದ್ವಾನಿಗೆ ಕದ್ದು ಹೋಗುತ್ತ ಇದ್ದಂತ (ಹ) ರೈತರಲ್ಲಿ ಕೆಲವರು ಗಡಿ ಪಾರೆದವರಿಗೆ ಸಿಕ್ಕಿದ್ದರಿಂದ, ಆ ಪಹಾರೆದವರು ಟೀಪೂಸುಲ್ತಾನರ ಬಳಿಗೆ ಕಳುಹಿಸಿದಲ್ಲಿ, ಅವರನ್ನು ವಿಚಾರಿಸುವಾಗ್ಗೆ, ಆ ನಾಗಪ್ಪಯ್ಯನ ದಗಲ್‌ಬಾಜಿತನ ತಿಳಿದರಿಂದ, ಆ ನಾಗಪ್ಪೈಯುನನ್ನು ಹಿಡಿದು [ಗಲ್ಲು] * ಹಾಕಬೇಕೆಂಬದಾಗಿ ಟೀಪೂಸುಲ್ತಾನರು ಅಪ್ಪಣೆ ಕೊಟ್ಟದ್ದರಿಂದ, ಈ ವರ್ತಮಾನ ತಿಳಿದುಕೊಂಡು ಆ ನಾಗಪ್ಪಯ್ಯನು ಓಡಿಹೋಗಿ ಕೋಟೆ ಅರಸುಗಳ ಬಳಿ ಸೇರಿಕೊಂಡಲ್ಲಿ, ಅವರ ಕಡೆ ೫೦ ಜನ ನಾಯಿಮಾರರನ್ನು ಕೊಡಿಸಿ, ಪೈಯೊಟ್ಟೆ ಚಂದು ಎಂಬವನ ಗೊತ್ತು ಮಾಡಿ ಕೋಟೆ ಅರಸುಗಳು ಕೊಟ್ಟಲ್ಲಿ, ಅವಂದಿರ ಕರೆದುಕೊಂಡು ಕೊಡಗಿಗೆ ಬಂದು, ಕಾಡಲ್ಲಿ ಸೇರಿಕೊಂಡು ಇರುವಂತಾ ಕೊಡಗು ಜನರಿಂದಲೂ ಪಣ್ಯದ ಹೊಲೆಯರಿಂದ ಸಹ ಕೂಡಿಸಿ, ಎಲ್ಲಾ ೧೦೦ ಜನ ಪರಿಯಂತರ ಕೂಡಿಸಿಕೊಂಡು, [ಕಾಡಿನಲ್ಲಿ] ‖ ರೈತಾವಿ ಮಾಡಿಕೊಂಡು ಇರುವ ಆದ್ವಾನಿ ರೈತರ ಮನೆ ಮಾಲು ಲೂಟಿಮಾಡಿಕೊಂಡು, ಶರಾರತ್ತುಮಾಡಿಕೊಂಡು ಇದ್ದಲ್ಲಿ, ಈ ಸಮಾಚಾರವನ್ನು ಈ ಸೀಮೆಯಲ್ಲಿ ಕಾಡು ಸೇರಿಕೊಂಡು ಇರುವಂತಾ ಕೊಡಗು [ಜನರು] ± ವೀರರಾಜೇಂದ್ರ

---

± ಬ ಸಾಗದೆ

† ಬ ಈ ಸಂಸ್ಥಾನದ

* ಬ ಶೂಗ

‖ ಬ ಕಾಡುಸೇರಿಕೊಂಡು, ಈ ಸೀಮೆಯಲ್ಲಿ

± ಬ ಜನರಲ್ಲಿ ವೀರರಾಜೇಂದ್ರ ಒಡೆಯರಿಗೆ ಆಪ್ತರಾದಂತವರು ಪೆರಿಯಾಪಟ್ಟಣಕ್ಕೆ

ಒಡೆಯರಿಗೆ ಹೇಳಿಕಳುಹಿಸಿದಲ್ಲಿ, ಅವರು ಅಲ್ಲಿಂದ ಕುಟುಂಬ ಮಕ್ಕಳ ಕರೆದುಕೊಂಡು ಕಲಿಸಂದ ೪೮೯೦ ನೇ ಕೀಲಕ ಸಂವತ್ಸರದ ಮಾರ್ಗಶಿರ ಬ೭ [ದಿವಸ] * ರಾತ್ರೆ ಗಳಿಗೆ ೧೫ ರಲ್ಲಿ ಆ ಕೋಟೆ ಇಳಿದು, ತಮ್ಮ ಕೊಡಗುಸೀಮೆಗೆ ಬಂದು, [ಕುರುಚ್ಚಿ] = ಎಂಬ ಗ್ರಾಮದಲ್ಲಿ ತಮ್ಮ ಸಂಸಾರವನ್ನು ಮಡಗಿ, ತಾವು ಕಿಗ್ಗಟ್ಟುನಾಡಲ್ಲು ಇರುತ್ತ ಇದ್ದಲ್ಲಿ, ಈ ನಾಗಪ್ಪೈಯ ಎಂಬವನು ಕೋಟೆ ಅರಸುಗಳ ಬಳಿಗೆ ಹೋಗಿ,:— "ಕೊಡಗಿನ ದೊರೆಗಳು ಸಿರಿಯಾಪಟ್ಟಣದಿಂದ [ಇಲ್ಲಿಗೆ] † ಬಂದು ಇದ್ದಾರೆ. ಗಿಡ ಸೇರಿಕೊಂಡು ಇರುವಂತವರನ್ನ ಜಮಾಯಿಸುತ್ತ ಇದ್ದಾರೆ" ಎಂದು ಹೇಳಿದಲ್ಲಿ, ಆ ಕೋಟೆ ಅರಸು ಹೇಳಿದ್ದು ಏನೆಂದರೆ:— "ನೀನು ಅವರ [ಕಡೆ] × ಚಾಕರಿನಿದ್ದೀಯೆ! ನೀನು ಹೇಳಿದ ಮಾತು ಅವರು ಪ್ರಮಾಣವಾಗಿ ನಂಬುತ್ತ ಇದ್ದಾರೆ. ಏನು ಬಗೆಯಿಂದಾದರೂ ಉಪಾಯದಿಂದ ಅವರ ಇಲ್ಲಿಗೆ ಕರೆದುಕೊಂಡು ಬಾ. ಆ ಮೇಲೆ ಯಾವತ್ತೂ ಕಾರ್ಯ ಪ್ರವರ್ತಿಸಬಹುದು"— ಎಂಬದಾಗಿ ಹೇಳಿದ್ದರಿಂದ, ಆ ನಾಗಪ್ಪೈಯನು ವೀರರಾಜೇಂದ್ರ ಒಡೆಯರವರ ಬಳಿಗೆ ಬಂದು ಹೇಳಿದ್ದು:— "ತಾವು ತಮ್ಮ ರಾಜ್ಯಕ್ಕೆ ಬಂದ ವರ್ತಮಾನ ಕೋಟೆ ಅರಸುಗಳು ಕೇಳಿ ಬಹಳ ಹುರುಪಿತರಾದರು. ತಮ್ಮ ಭೇಟಿ ಆಗಬೇಕೆಂಬದಾಗಿ ಅವರಿಗೆ ಬಹಳ ಅಪೇಕ್ಷೆ ಇದೆ"— ಎಂದು ನಾನಾ ಪ್ರಕಾರ ಹೇಳಿ ನಂಬಿಸಿ, ರಾಜರ ಕರೆದುಕೊಂಡು ಹೋಗಿ, [ಅರಳ] § ಎಂಬ ಗ್ರಾಮದಲ್ಲಿ ಇಳಿಸಿ, ತಾನು ಕೋಟೆ ಅರಸುಗಳ ಬಳಿಗೆ [ಹೋಗಿ] ‖ ಏನೇನೋ ಮಾತನಾಡಿಕೊಂಡು, ಅಲ್ಲಿಂದ ೪೦—೫೦ ಜನ ಪರಿಯಂತರ ಆಯುಧ ಪಾಣಿ ನಾಯಿಮಾರರನ್ನು ಕರೆದುಕೊಂಡು ಬಂದು, ರಾಜರು ಇಳಿದು ಇರುವ ಅರಳ ಎಂಬ ಗ್ರಾಮದ ಸುತ್ತ ಪಾರಾ ನಿಲ್ಲಿಸಿ ಬಿಟ್ಟನು. ಆ ಮೇಲೆ:— "ಅವರ ಕಂಡು ಭೇಟಿ ಆಗಬೇಕು"— ಎಂಬದಾಗಿ ಹೇಳಿದಲ್ಲಿ "ಎರಡು ದಿವಸ ಒಳ್ಳೇದಲ್ಲ. ಆ ಮೇಲೆ ಕಾಣಬಹುದು" ಎಂಬದಾಗಿ

---

* ಬ ಯಲ್ಲು ಬೃಹಸ್ಪತಿವಾರ

= ಬ ಕೊಡಗಿನ ಸೀಮೆ ಪಳಿತವಾದ ಕುರ್ಚಿ

† ಬ ಕೊಡಗಿನ ಸೀಮೆಗೆ

ಬ ಕಡೀಗ

§ ಬ ಅರಳ

‖ ಬ ಪಾಲಿಗೆ ಹೋಗಿ

ಹೇಳಿದರು. ಆಯೆರಡು ದಿನ ಕಳೆದ ಮೇಲೆ, "ಭೇಟಿ ಆಗಬೇಕು" ಎಂದು ಹೇಳಿದ್ದರಿಂದ, ಅವಾಗ್ಗೂ ಅದೇ ಮೇರೆಗೆ ನೆವನ ಹೇಳಿ ನಾಗ ಪ್ಪೈಯನು ಹೋದನು. ಆ ಬಳಿಕ ಮೂರನೇ ದಿವಸದಲ್ಲಿ ಬಂದು ಹೇಳಿದ್ದು:— "ನನಗೆ ತಿಥಿ ಪ್ರಸ್ತ ಇದ್ದುದರಿಂದ ಈಗ ಎರಡು ಮೂರು ದಿನ ಕುಟುಂಬ ಮಕ್ಕಳ ಬಳಿಯು ಇದ್ದೆ. ಕೋಟೆ ಅರಸುಗಳ ಬಳಿಯು ಹೋಗುವದಕ್ಕೆ ಸಮಯವಾಗಲಿಲ್ಲ"— ಎಂಬದಾಗಿ ಹೇಳಿದ(ನು). ಆ ಬಳಿಕ ಮತ್ತೊಂದಾವರ್ತಿ ಈ ನಾಗಪ್ಪೈಯನ ಸಂಗಡ ಹೇಳಿ ಬಿಟ್ಟಲ್ಲಿ, ಅವನು ಹೋಗಿ ಕೋಟೆ ಅರಸುಗಳ ಬಳಿಯು [ಅಯಿದು] × ದಿವಸ ಕುಳಿತುಕೊಂಡ(ನು). ಈ ಮೇರೆಗೆ ಬೇಟಿ [ಆಗಿ] † ಅಲ್ಲಿಂದ ಬಿಡುಗಡೆ ಆಗಿ ಪುನಃ ತಿರುಗಿ ಬರುವ ಸಂಗತಿ(ಯೂ) ಕಾಣಲಿಲ್ಲ. ಈ ಮೇರೆ ಹದಿನೈದು ದಿವಸ ಕಾಲಹರಣ ಮಾಡಿ ಬಿಟ್ಟ (ನು). ಅಷ್ಟರಲ್ಲಿ ಟೀಪೂಸುಲ್ತಾನರು ತಮ್ಮ ಕಡೆ ಕೆಲವು ಸವುಜನ್ನು ವೀರರಾಜೇಂದ್ರರ ಹುಡುಕುವ ಬಗ್ಗೆ ಮೊಕರೂರು ಮಾಡಿ ಕಳುಹಿಸಿದರಿಂದ, ಈ ಸಮಾಚಾರ ಅವರ ಕುಟುಂಬ [ದ] * ಬಳಿಯು ನವಕರರು ಬಂದು ರಾಜರ ಸಂಗಡ ಹೇಳಿದಲ್ಲಿ, ಅವರು ಆ ಬಂದ ಮನುಷ್ಯರ ಸಂಗಡ ಕೋಟೆ ಅರಸುಗಳಿಗೆ ಹೇಳಿ ಕಳುಹಿಸಿದ ವಿವರ:—"ನಮ್ಮ(ನ್ನು) ಹುಡುಕಿ ತಲಾಸು ಮಾಡುವ ಬಗ್ಗೆ ಟೀಪೂಸುಲ್ತಾನರ ಕೆಲವು ಸವುಜು ಬಂದು ಇದೆ. ನಾವು ಇಲ್ಲಿಗೆ ಬಂದು ಇಪ್ಪತ್ತು ದಿನವಾಯಿತು. ಈಗ ನಮ್ಮನ್ನ ಬಿಟ್ಟರೆ ನಮ್ಮ ಕುಟುಂಬ ಮಕ್ಕಳ ಬಳಿಗೆ ಹೋಗಿ ಅವರನ್ನು ಬಂದೋಬಸ್ತಿನ ಜಾಗದಲ್ಲಿ ಇಟ್ಟು, ಆ ಬಳಿಕ ತಮ್ಮ ಭೇಟಿಗೆ ಬಂದೇವು"— ಎಂಬದಾಗಿ ಹೇಳಿಕಳುಹಿಸಿದಲ್ಲಿ, ಆ ಬಳಿಕ ಕೋಟೆ ಅರಸುಗಳು ಅದೇ ನಾಗಪ್ಪೈಯನ ಸಂಗಡ ಹೇಳಿಕಳುಹಿಸಿದ್ದು "ನಿಮ್ಮ ಹಿರಿಯ ಅಜ್ಜೈಯನವರಾದ ದೊಡ್ಡ ವೀರಪ್ಪ ಒಡೆಯರು ನಮ್ಮ ಹಿರಿಯ [ರವರ] ± ಒಬ್ಬರ ಕೊಂದು ಬಿಟ್ಟು ಇದ್ದಾರೆ. ಅದಕ್ಕೆ ನೀವು ತಲೆಗೆ ತಲೆ ಕೊಟ್ಟಲ್ಲದೆ ನಮ್ಮ ಬೇಟಿ ಆಗಲಿಕ್ಕಿಲ್ಲ"— ಎಂಬದಾಗಿ ಹೇಳಿ ಬಿಟ್ಟಲ್ಲಿ, ಈ ಮಾತಿಗೆ ಮಹಾರಾಜರು ಹೇಳಿದ್ದು— "ಈಗ ನೂರು ವರುಷಕ್ಕೆ ಮುಂದೆ ನಿಮ್ಮ ಹಿರಿಯರವರು ನಮ್ಮ

---

× ಬ ಅಯಿದಾರು

† ಬ ಆಗುವ ಸಂಗತಿಯೂ

* ಬ ಮಕ್ಕಳ

± ಬ ಕಾರಣವರ

ಅಜ್ಜೈಯನವರ ಕೂಡೆ ಜಗಳ ಮಾಡಿ ತೋಪುರದ ಮೊಕ್ಕಾಮಿನಲ್ಲಿ ತೀರಿಹೋದರು. ಅದಕ್ಕೆ ಬದಲು ಈಗ ತಲೆ ಕೊಡಬೇಕೆಂದರೆ ಮಾಡತಕ್ಕದ್ದೇನು? ನಾವು ನಿಮ್ಮ ಮಾತ ನಂಬಿ ಬಂದು ನಿಮ್ಮ ಕೈಗೆ ಸಿಕ್ಕಿ ಇದ್ದೇವೆ. ತಾವು ಪಾಪ ಪುಣ್ಯ ಬಲ್ಲಂತವರಿದ್ದೀರಿ. ಎಲ್ಲಾ ನಿಮಗೇ ಕೂಡಿ ಇದೆ."–– ಎಂಬದಾಗಿ ಹೇಳಿದಲ್ಲಿ ಆ ಮಾತಿಗೆ [ನಾಗಪ್ಪೈಯ ಹೇಳಿದ್ದು:–– "ಮನಸ್ಸಿನಲ್ಲಿ] * ಕರಕರೆ ಮಾಡಬೇಡಿ. ನಾನು ಕೋಟಿ ಅರಸುಗಳ ಬಳಿಗೆ ಹೋಗಿ ಈ ವಿವರ ಯಾವತ್ತು ಅವರಿಗೆ ಹೇಳಿ ನಾಳೆ ದಿವಸ ಏನು ಬಗೆಯಿಂದಾದರೂ ತಮ್ಮ ಅವರ ಭೇಟಿ ಆಗುವ ಹಾಗೆ ಮಾಡುತ್ತೇನೆ"–– ಎಂಬದಾಗಿ [ಹೇಳಿ ಹೋದನು.] * ಮೂರನೆ ದಿವಸ ಬೆಳಗ್ಗೆ ರಾಜರನ್ನು [ಬೇಟಿ ಆಗುವ ಬಗ್ಗೆ] * ಕರೆ ಬಿಟ್ಟಲ್ಲಿ, ರಾಜರು ಬೇಟಿಗೆ ಎಂದು ಕೋಟಿ ಅರಸುಗಳ ಮೊಕ್ಕಾಂ ಪಾಲೆಗೆ ಹೋಗುತ್ತ ಇದ್ದಲ್ಲಿ, ನಾಗಪ್ಪೈಯನು ಬಂದು ಹೇಳಿದ್ದು "ಪ್ರಾಕಾರಭ್ಯ ಅವರಿಗೂ ನಮಗೂ ಇರುವ ಹಗೆತನ ತೀರಿತು ಎಂಬದಾಗಿ ಕೋಟಿ ಅರಸುಗಳು ಒಂದು ಕಾಗದ ಬರೆಸಿ ಮಡಗಿ ಇದ್ದಾರೆ. ಬೇಟಿ ಆದ ತರುವಾಯ ಆ ಕಾಗದಕ್ಕೆ ದಸ್ಕತು ಮಾಡಿಕೊಡಿ ಎಂತ ಕೋಟಿ ಅರಸುಗಳು ತಮ್ಮ ಕೈಲಿ ಕೊಟ್ಟಾರು. ದಸ್ಕತು ಮಾಡುವ ಬಗ್ಗೆ ತಾಮಸ ಮಾಡಿದರೆ, ತಾವು ಕೊಡಗಿಗೆ ಹೋಗುವಂತಾದ್ದು ಪ್ರಯಾಸವಾಗಿ ಕಾಣುತ್ತದೆ."– ಎಂಬದಾಗಿ ಹೇಳಿ, ಕರೆಕೊಂಡು ಹೋಗಿ ಬೇಟಿ ಮಾಡಿಸಿದ (ನು). ಆ ಬಳಿಕ, ಕೋಟಿ ಅರಸುಗಳು ಆ ಬರೆಸಿ ಇಟ್ಟು ಇದ್ದ ಕಾಗದವನ್ನು ರಾಜರ ಕೈಯ ಕೊಟ್ಟು, "ಇದಕ್ಕೆ ದಸ್ಕತು ಮಾಡಿ ಕೊಟ್ಟರೆ ಪ್ರಾಕಿನ ಹಗೆತನ ತೀರಿತು. ಇಲ್ಲದಿದ್ದರೆ ಕೊಲೆಗೆ ಕೊಲೆ ನಿಮ್ಮಿಂದ ತೆಗೆದು ಕೊಂಡೇವು" ಎಂಬದಾಗಿ ಹೇಳಿದಲ್ಲಿ, ದೊರೆಗಳು ತಮ್ಮ ಮನಸ್ಸಿನಲ್ಲು ಗ್ರಹಿಸಿದ್ದು–– "ಈ ಕಾಗದಕ್ಕೆ ಗುರ್ತು ಹಾಕಿ ಕೊಟ್ಟದ್ದು ಏನು ಬಗೆಯಿಂದಾದರೂ ಇವರ ಕೈಯಿಂದ ತಪ್ಪಿ ನಮ್ಮ ರಾಜ್ಯಕ್ಕೆ ಹೋಗಿ, ಆ ಮೇಲೆ ಬೇಕಾದ ಹಾಗೆ ಮಾಡಬಹುದು" ಎಂಬದಾಗಿ ಆ ಕಾಗದಕ್ಕೆ ಗುರ್ತು ಹಾಕಿ ಕೊಟ್ಟರು. ಆ ಕಾಗದವನ್ನು ಕೋಟಿ ಅರಸುಗಳು ನಾಗಪ್ಪೈಯನ ಕೈಯ ಕೊಟ್ಟು, 'ಈ ಕಾಗದದ ಅಭಿಪ್ರಾಯ ಯಾವತ್ತು ದೊರೆಗಳಿಗೆ ಹೇಳು' ಎಂಬದಾಗಿ ಹೇಳಿದಲ್ಲಿ, ಅವನು ಓದಿ ತಿಳಿಯಪಡಿಸಿದ ವಿವರ:–– "ಕೀಲಕ ಸಂವತ್ಸರದ ಪುಷ್ಯ ಮಾಸದಲ್ಲು ಪಾಲಿ ವೀರವರ್ಮರಾಜರಿಗೆ ಕೊಡಗಿನ ಸಂಸ್ಥಾನದ ಹಾಲೇರಿ ವೀರಪ್ಪ ಒಡೆಯರು

---

* ಈ ಭಾಗ ಅ. ಪ್ರತಿಯಲ್ಲಿ ಇಲ್ಲ

ಬರೆಸಿಕೊಟ್ಟ ಕಾಗದದ ಕ್ರಮವೆಂತೆಂದರೆ:— ಪ್ರಾಕು ನಿಮ್ಮ ಕಾರಣವರನ್ನು ನಮ್ಮ ಕಾರಣದವರು ಕೊಂದ ಪಾಪ ಪರಿಹಾರ ಉದ್ದಿಶ್ಯ ಪೆರುವಾಳು ಭಗವತಿಗೆ ನಾವು ಬಿಟ್ಟುಕೊಟ್ಟದ್ದು: ಕಿಗ್ಗಟ್ಟು ಹತ್ತುನಾಡು, ಅಮ್ಮತ್ತಿ ನಾಡು, ಎಡೆನಾಲ್ಕು ನಾಡು, ನಿಮ್ಮ ಕಾರಣವರು ಬಿದ್ದು ಹೋದ ತೋಮರದಲ್ಲಿ ಒಂದು ಕೋಟೆಗೆ ಸ್ಥಳ ಕೊಡುತ್ತ ಇದೇವೆ. ಈ ದಿವಸ ನಿಮ್ಮ [ ಕುಡುಪಿ ] * ತೀರಿತು. ಇನ್ನು ಮುಂದೆ ನಮಗೆ ನಿಮಗೆ ಅನ್ಯೋನ್ಯವೇ ಸರಿ, ಎಂಬದಾಗಿ ಬರೆದು ಇತ್ತು. ಈ ಮೇರೆ ಕೋಟೆ ಅರಸುಗಳು ನಾಗಪ್ಪೈಯನ ಕೈಲಿ ಬರೆಸಿ ಇಟ್ಟು ಇದ್ದ ಕಾಗದಕ್ಕೆ, ಅಂಕೆಯಲ್ಲಿ ಒಂದು ಗುರ್ತು ಹಾಕಿಸಿ ತೆಗೆದುಕೊಂಡದ್ದೇ ಹೊರತು, ರಾಜರು ತಮ್ಮ ಸಂಸ್ಥಾನದ ರಾಜಮೊಹರವನ್ನು ಒತ್ತಿ ತಮ್ಮ ಹೆಸರಸ್ತೆ ಹಾಕಿ ರಜಾಮಂದಿಯಿಂದ ಕೊಡದೆ, ರಾಜರು ಅವನ ಸಾರದಿಂದ ಬಿಡುಗಡೆಯಾಗಿ, ತಮ್ಮ ಕೊಡಗು ಸೀಮೆ ಒಳಗೆ ಬಂದು, ತಮ್ಮ ಅರಮನೆ ಕುಟುಂಬ ಮಕ್ಕಳು ಇದ್ದ ಕುರುಚಿ ಎಂಬಲ್ಲಿಗೆ ತಲಪಿದರು. ಅಲ್ಲಿ ಚಲವಿಗೆ ಚೂಕರವಾದ್ದರಿಂದ, ಕೆಲವು ಕುಟುಂಬ ತಮ್ಮ ಅಣ್ಣನ ಮಗನ ಸಹ ಕುರಚ್ಚಿ ಗ್ರಾಮದಲ್ಲಿ ಮಡಗಿ, ಕೆಲವು ಅರಮನೆ ಕುಟುಂಬ ತಂದು ಭರಪೊಳೆ ಎಂಬಲ್ಲಿ ಇಟ್ಟು ಇರುತ್ತ ಇದ್ದರು.

ಆ ಬಳಿಕ [ ಹತ್ತು ] × ದಿವಸದ ಮೇಲೆ ಈ ಕೋಟೆ ಅರಸುಗಳು ಮುನ್ನೂರು ನಾಯಿಮಾರರನ್ನು ಕರೆದುಕೊಂಡು ಗಟ್ಟ ಹತ್ತಿ, ಕಿಗ್ಗಟ್ಟು ನಾಡು ವಳಿತವಾದ ಮರೇನಾಡಿಗೆ ಬಂದು, ಇಳಿದುಕೊಂಡು ಇರುವ ಸಮಾಚಾರ ರಾಜರು ಕೇಳಿ, ಈ ವಿವರವನ್ನು ತಮ್ಮ ( ಆಶ್ರಿತ ) ರಾದ † ಕಡಿಯತ್ತು ಮುರ್ನಾಡು ಅಪ್ಪನೆರವನ ಅಚ್ಚಯ್ಯಪಟ್ಟ ಚೆರುವನ ಬೋಳುಕನಿಗೆ ಹೇಳಿ ಕಳುಹಿಸಿದಲ್ಲಿ, ಅವರು ಕಡಿಯತ್ತು ಮುರ್ನಾಡಲ್ಲು ಇದ್ದ ಆಯುಧ ಪಾಣಿ ಕೊಡಗು ಜನ ಯಾವತ್ತು ಕರಕೊಂಡು ಬರಪೊಳೆಗೆ ಬಂದಲ್ಲಿ, ಈ ಮಂದಿ ಮತ್ತು ಕೆಲವು ಕೊಡಗು ಜನ ಇದರ ಸಂಗಡ ಕೂಡಿಸಿ, ಐನೂರು ಜನಕ್ಕೆ ಭರ್ತಿ ಮಾಡಿಕೊಂಡು, ಈ ಜನವನ್ನು ಕರಕೊಂಡು ರಾಜರು ಮರೆನಾಡಿಗೆ ಕೋಟೆ ಅರಸುಗಳು ಇದ್ದಲ್ಲಿಗೆ ಹೋಗಿ ಕೇಳಿದ ವಿವರ:- "ನೀವು ನಮ್ಮ ಕೊಡಗಿನ ಸೀಮೆ ಗಟ್ಟ ಹತ್ತಿ ಮಂದಿ ತೆಗೆದು

---

* ಬ ಕುತುಪಿ

× ಬ ಹತ್ತು ಹದಿನೈದು

† ಬ ಅಪ್ಪ

ಕೊಂಡು ನಮ್ಮ ಅಪ್ಪಣೆ ಇಲ್ಲದೆ ನಿಮ್ಮ ಹದ್ದು ದಾಟಿ ನಮ್ಮ ಅರ್ದಿಗೆ ಬರುವದಕ್ಕೆ ಕಾರಣವೇನು?" ಎಂಬದಾಗಿ ಕೇಳಿದಲ್ಲಿ, ಅವರು ಹೇಳಿದ ವಿವರಃ-"ನಿಮ್ಮ ಹಿರಿಯರು ನಮ್ಮ ಹಿರಿಯುವರ ಕೊಂದು ಹಾಕಿದ ತಲೆ ಬೆಲೆ ಉದ್ದಿಶ್ಯವಾಗಿ ಬರೆಸಿ [ ಕೊಟ್ಟ]ಂತಾ * ಈ ನಾಡುಗಳನ್ನು ವಿಚಾರಿಸುವ ಬಗ್ಗೆ ಬಂದೆವು"- ಎಂಬದಾಗಿ ಕೋಟೆ ಅರಸುಗಳು ಹೇಳಿದ್ದಕ್ಕೆ, ಇವರು ಹೇಳಿದ ಜವಾಬುಃ- "ಹಾಗಾದರೆ ಬೈನಾಡಲ್ಲಿ ನಮ್ಮ ಅಣ್ಣ ತಮ್ಮಂದಿರಾದ ದೊರೆಮಕ್ಕಳು ಇಬ್ಬರನ್ನು ನೀವು ಹಿಡಿದು ಕೊಂದುಹಾಕಿದ್ದಿರಷ್ಟೇ? ಈ ಎರಡು ತಲೆ ಬೆಲೆ ನಮಗೆ ನೀವು ಏನು ಕೊಟ್ಟು ನಮ್ಮ ಹಗೆ ತೀರಿಸಿಕೊಂಡು ಇದ್ದೀರಿ?" ಎಂತ ಕೇಳಿವಲ್ಲಿ, ಅವರು ಹೇಳಿದ ವಿವರಃ-ತಾವು ಪಾಲೆಗೆ ಬಂದು ಇದ್ದಾಗ್ಗೆ ನಮ್ಮ ಹಿರಿಯರವರ(ನ್ನು) ನಿಮ್ಮ ಹಿರಿಯರವರು ಕೊಂದ ಮಾತು ನಾವು ತೀರಿಸಿಕೊಂಡೆವಷ್ಟೆ? ಆವಾಗ್ಗೆ ನಿಮ್ಮ ಮಾತು ನೀವು ತೀರಿಸಿಕೊಳ್ಳಬೇಕೇ ಹೊರತು ಈಗ ಕೇಳುವುದಕ್ಕೆ ಸಂಗತಿ ಏನು?" ಎಂತ ಕೋಟೆ ಅರಸುಗಳು ಕೇಳಿದಲ್ಲಿಃ" ಹಿಂದೆ ನೂರು ವರುಷದ ಆಚೆಗೆ ನಿಮ್ಮ ಹಿರಿಯುವರು ಜಗಳದಲ್ಲಿ ಬಿದ್ದು ಹೋದದ್ದನ್ನು ಈ ಪರಿಯಂತರಕ್ಕೂ ನಮ್ಮ ಸಂಸ್ಥಾನದ ದೊರೆಮಕ್ಕಳ ಕೂಡ ತೀರಿಸಿ ಕೊಳ್ಳದೆ ( ಈಗ ) † ನಮಗೆ ನಂಬಿಕೆ ಕೊಟ್ಟು ಪಾಲೆಗೆ ಕರೆಸಿಕೊಂಡು, ತಲೆ ಬೆಲೆ ಕೊಡಿ ಎಂಬುದಾಗಿ ನಿಮಗೆ ಒಪ್ಪಿದಂತೆ ಬರೆದು, ನಮ್ಮ ಕೂಡೆ ಗುರುತು ಹಾಕಿಸಿಕೊಳ್ಳುವುದಕ್ಕೆ ಕಾರಣವೇನು?" ಎಂತ ಕೇಳಿದಲ್ಲಿ, ಇಷ್ಟು ದಿವಸವೂ ನಮಗೆ ಸಮಯ ಸಿಕ್ಕಲಿಲ್ಲ. (ನಮಗೆ)× ಸಿಕ್ಕಿದಾಗ್ಗೆ ನಾವು ತೀರಿಸಿಕೊಂಡೆವು" ಎಂಬದಾಗಿ ಹೇಳಿದರು. ಆ ಮಾತಿಗೆ ರಾಜರು ಹೇಳಿದ್ದು — "ನೂರು ವರ್ಷದ ಆಚೆ ಆದ ಮಾತನ್ನು ನೀವು ಇಂದು ಪರಿಯಂತರ ಸಾಧಿಸಿ ಇದ್ದೀರಷ್ಟೇ ! ನಾವು ನಿಮ್ಮ ಕಯ್ಯೊಳಗೆ ಪಾಲೆಯಲ್ಲು ಸಿಕ್ಕಿಕೊಂಡು ಈ ಮಾತು ಹೇಳಿದರೆ, ನಮಗೆ ನೀವು ದಗಾ ಮಾಡೀರಿ ಎಂಬದರಿಂದ ನಿಮ್ಮ ಸೀಮೆ ಬಿಟ್ಟು ನಮ್ಮ ಸೀಮೆಗೆ ಬಂದ ಮೇಲೆ ನಿಮ್ಮ(ನ್ನು) ಕೇಳಬಹುದು ಎಂಬದಾಗಿ ಕುರಿತು ನಾವು ಹದಿನಯಿದು ದಿವಸ ಸಮಯ ಸಾಧಿಸಿದೆವು. ಈ ಬಗ್ಗೆ ನೀವು ನಮ್ಮ ಸ್ಥಳಕ್ಕೆ ಬಂದು ಇದ್ದೀರಷ್ಟೇ? ಈಗ ನಮ್ಮ ಮಾತನ್ನು ತೀರಿಸಿಕೊಟ್ಟು ಹೋಗಿ. ಅಲ್ಲದಿದ್ದರೆ, ನಿಮ್ಮ ಕಾರಣವರ ತಲೆ ಚಿನ್ನದ್ದಾದರೆ, ನಮ್ಮ ಸಂಸ್ಥಾನದ ದೊರೆಮಕ್ಕಳ ತಲೆ

* ಬ ಂಡ

† ಈ ಮಾತುಗಳು ಅ. ಪ್ರತಿಯಲ್ಲಿ ಇಲ್ಲ.

ಶಿವಾನುಭವ ಗ್ರಂಥಮಾಲಾ ನಂ|| ೩೦

# ಸಿದ್ಧರಾಮೇಶ್ವರನ ವಚನಗಳು.



ಸಂಪಾದಕರು.

**ರಾ|| ಸಾ|| ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್. ಬಿ. ವಕೀಲ.

**ವಿಜಾಪುರ.**



**ಬೆಲೆ ೧ ರೂಪಾಯಿ**

# ಪ್ರಸ್ತಾವನೆ.



ನಾವು ಶ್ರೀ ಸಿದ್ಧರಾಮೇಶ್ವರನ ವಚನಗಳನ್ನು ಕೈಬರಹದ ಎರಡು ಪ್ರತಿಗಳ ಸಹಾಯದಿಂದ ಈಗ ಸಿದ್ಧಪಡಿಸಿದ್ದೇವೆ. ಒಂದು ಪ್ರತಿಯು ರಾ॥ ರಾ॥ ಬಸಲಿಂಗಪ್ಪ ಕಿಣಗಿ ಮು. ಬಾಗಲಕೋಟೆ ಇವರು ಕಳಿಸಿದ್ದು ಮತ್ತೊಂದು ಡಾ॥ ಎಸ್. ಸಿ. ನಂದೀಮಠ ಎಮ್. ಏ. ಪಿ. ಹೆಚ್. ಡಿ. ಇವರು ಗೋಕಾವಿಯಲ್ಲಿ ದೊರಕಿಸಿ ಕಳಿಸಿದ್ದು. ಇದಕ್ಕೋಸ್ಕರ ನಾವು ಈ ಉಭಯ ಮಹನೀಯರಿಗೆ ಬಹಳ ಆಭಾರಿಯಾಗಿದ್ದೇವೆ.

ಶ್ರೀ ಸಿದ್ಧರಾಮೇಶ್ವರನು ಶ್ರೀ ಬಸವೇಶ್ವರನ ಸಮಕಾಲೀನನು. ಮತ್ತು ಆಗಿನ ಕಾಲದ ವಚನಕಾರರಲ್ಲಿ ಅತ್ಯಂತ ಪ್ರಸಿದ್ಧಹೊಂದಿದವನು. ಈತನ ವಚನಗಳನ್ನು ಮುದ್ರಣಗೊಳಿಸಿದ್ದು ಇದೇ ಮೊದಲನೆಯದಾದ್ದರಿಂದ ಈ ಗ್ರಂಥದಲ್ಲಿ ಅನೇಕ ದೋಷಗಳಿರಬಹುದು. ಅವುಗಳನ್ನು ವಾಚಕರು ಕ್ಷಮಿಸಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

ಪುರಾತನ ಗ್ರಂಥಗಳನ್ನು ಶುದ್ಧವಾಗಿ ಮುದ್ರಣಗೊಳಿಸಲಿಕ್ಕೆ ಹೆಚ್ಚು ಪ್ರತಿಗಳು ದೊರೆದಷ್ಟು ಅನುಕೂಲವಾದದ್ದು. ಆದ್ದರಿಂದ ಶ್ರೀ ಸಿದ್ಧರಾಮೇಶ್ವರನ ವಚನಗಳು ಮತ್ತೆ ಯಾರಲ್ಲಾದರೂ ಇದ್ದಲ್ಲಿ ಅವುಗಳನ್ನು ನಮ್ಮ ಕಡೆಗೆ ಕಳಿಸಿಕೊಡಬೇಕೆಂದು ನಮ್ಮ ವಿನಂತಿ ಇದೆ. ಮುಂದಿನ ಮುದ್ರಣದ ಕಾಲಕ್ಕೆ ಅವು ನಮಗೆ ಬಹಳ ಉಪಯೋಗವಾಗದೆ ಇರವು.

ನಮ್ಮ ಕರ್ನಾಟಕಸ್ಥರು ಅದರಲ್ಲಿ ವಿಶೇಷವಾಗಿ ವೀರಶೈವರು ಈ ಮಹಾಪುರುಷನ ಈ ವಚನಗ್ರಂಥವನ್ನು ಆದರಿಸಿ ಹಿಂದೆ ಬಿದ್ದ ವಚನವಾಙ್ಮಯವನ್ನು ಮುಂದೆ ತರಲು ಸಹಾಯಕರಾಗುವರೆಂದು ಭಾವಿಸಿದ್ದೇವೆ.

**ವಿಜಾಪುರ** | **ಫ. ಗು. ಹಳಕಟ್ಟಿ.**

ತಾ॥ ೫—೨—೧೯೩೨ | ಸಂಪಾದಕ

, ೫೨೫. ಎನ್ನ ಪಾದ ವಿಡಿದು ಮಧ್ಯ ತನಕಾ ಪ್ರಭುವು ನೊಡಾ! ಮಧ್ಯವಿಡಿದು ಹೃದಯ ಪರಿಯಂತರ ಬಸವಣ್ಣ ನೋಡಾ! ಹೃದಯ ವಿಡಿದು ಕಂಠ ಪರಿಯಂತರ ಮಡಿವಾಳ ನೋಡಾ! ಕಂಠವಿಡಿದು ಕೇಶಾಂತ ತನಕ ಚನ್ನಬಸವಣ್ಣ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೨೬. ಹಸ್ತವದು ಬಸವಣ್ಣ; ಜಿಹ್ವೆಯದು ಚನ್ನಬಸವಣ್ಣ: ಉದ ರತ್ರಪ್ತಿಯದು ಅಲ್ಲಮ ನೋಡಾ. ಎನ್ನ ನಲ್ಲ ಕಪಿಲಸಿದ್ಧ ಮಲ್ಲೇಶನೆ.

೫೨೭. ಕ್ರಿಯೆ ಅದು ಚನ್ನಬಸವಣ್ಣನ ಎಡಪಾದ. ಜ್ಞಾನವದು ಚನ್ನಬಸವಣ್ಣನ ಬಲಪಾದ. ನಾನು ಅವರ ಚಮ್ಮಾವುಗೆ. ನೀನು ಅವನ ಮನೆಯ ದಾಸನು ನೋಡೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೨೮. ಕ್ರಿಯೆ ಎಂಬುದು ಪಿಪ್ಪಲೀಕನ ಗುಣ. ಜ್ಞಾನವೆಂಬುದು ವಿಹಂಗದ ಗುಣ. ಮೆಲ್ಲನೆ ಮೆಲ್ಲನೆ ತಿಳಿದಲ್ಲಿ ಕ್ರಿಯೆ ಎನಿಸಿತ್ತು. ಏಕಕಾಲ ಕ್ಕಳವಟ್ಟಲ್ಲಿ ಕಪಿಲಸಿದ್ದಮಲ್ಲಿಕಾರ್ಜುನನ ಮನೆ ಸೂರೆಗೊಂಬ ತಸ್ಕರ ಜ್ಞಾನವೆನಿಸಿತ್ತು ಮರುಳ ಶಂಕರಯ್ಯಾ.

೫೨೯. ಕ್ರಿಯೆಗಳಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲಯ್ಯಾ. "ಕ್ರಿಯೇಷು ಶತಶೋಭೇದಜ್ಞಾನೇನೈಕೊ ವಿರಾಜತೆ ಫಲ ಸುರುಚಿನಿ ಪದಾ ರ್ಥಾನಿ ಜಿಹ್ವಾಯ ತ್ಯೆವ ರಾಜತೆ" ಎಂಬ ಉಪನಿಷತ್ತು ಪುಸಿಯಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೫೩೦. ಕ್ರಿಯಾಜ್ಞಾನವೆಂಬುದಕ್ಕೆ ಭೇದ ತಿಲಾಂಶವಿಲ್ಲ ನೋಡಾ. "ದ್ವಂದ್ವೇನ ಭೇದೆ" ಎಂಬ ಅಥರ್ವಣ ಶಾಖೆಯದು ಸರಿಯೆ? ಸೂಕ್ಷ್ಮೇಂದ್ರಿ ಯನಿಗ್ರಹದಲ್ಲಿ ಜ್ಞಾನವೆನಿಸಿತ್ತು. ಜ್ಞಾನಂ ವಿನಾ ಕ್ರಿಯಾ ನೊ ಭಾತಿ ಕ್ರಿಯಾಂ ವಿನಾ ನೊ ಭಾತಿ ತತ್ ಎಲೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೩೧. ದೇಹಿ ಎಂಬುದು ಅವಿದ್ಯಾ ಎಂಬುವರು. ಅದೆಂತಯ್ಯ? ದೇಹ ತಾನಿಲ್ಲದಿರೆ ಆಶ್ರಯಿಸುವ ಪರಿ ಎಂತಯ್ಯಾ? ಅರಿದರೆ ಆಶ್ರಯಿಸ. ಮರೆ ದರೆ ಆಶ್ರಯಿಸುವ. ಅಜ್ಞಾನದ ಥೋಚಲತಿ ಎಂಬುದು ಅರಿದೆನಯ್ಯಾ. ದೇಹ ವದು ಜಡಸಾಕ್ಷಿ. ಅಜಡವೆಂಬ ಭಾವ ವಚನದಲ್ಲಲ್ಲದೆ ಅನುಭವದಲ್ಲಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೩೨. ಶರಣ ಸತಿ ಲಿಂಗ ಪತಿ ಎಂದ ಬಳಿಕ ಲಿಂಗದ ರಾಣಿವಾಸ ನೋಡಾ! ಅವು ಎಮ್ಮಕ್ಕ ಮಹಾದೇವಿ, ಎಮ್ಮಕ್ಕ ಹಿರಿಯಕ್ಕ ಗಂಗಾದೇವಿ, ಹಿರಿಯಕ್ಕ ಚಿಕ್ಕಕ್ಕ ಎಂದರೆ ವಿರೋಧ. ವಿರೋಧಿಸಿದರೇನು ನಾನು ಚಿಕ್ಕಾಕೆ ಕಪಿಲಸಿದ್ಧ ಮಲ್ಲಿಕಾರ್ಜುನಂಗೆ.

೫೩೩. ಅಯ್ಯಾ ನಿಮ್ಮನರಿದವನ ಮಂದಿರ ಮಹಾದೇವಿಯರ ಮನೆಯಯ್ಯ. ಅಯ್ಯ ನಿಮ್ಮ ನರಿದವನ ನಿರೀಕ್ಷಣೆಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೫೩೪. ವಾಯು ಪುತ್ರನಾಗುವದದು ಲೇಸೆ? ಮನವೆ ಬೇಡ ಬೇಡ. ಹೋದ ಹೋದಲ್ಲಿ ವಸ್ತು ರೂಪಾಗುವದದು ಅತಿಶಯವು ಮನವೆ ಅಲ್ಲಲ್ಲ. ವಾಯು ಬಿಟ್ಟು ವಾಯು ವೈರಿಯಾದರೆ ಮನವೆ ನಿನ್ನ ಸಾಹಸ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ.

೫೩೫. "ಸರ್ವಂ ಶಿವಮಯಂ ಜಗತ್" ಎಂಬ ವಾಕ್ಯವರಿಯದೆ ಹೋಗದಿರಾ ಮನವೆ. "ಪಂಚತತ್ವ ರೂಪಾಯ" ಎಂಬ ಶೃತಿವಾಕ್ಯ ಮರೆದೆಯಲ್ಲ. ಮನವೆ. "ಲಿಂಗಮಧ್ಯೆ ಜಗತ್ಸರ್ವಂ" ಎಂಬ ಮಹಾವಾಕ್ಯ ಮರೆದೆಯಲ್ಲ ಮನವೆ. ರಜ್ಜು ಸರ್ಪ ನ್ಯಾಯ. ಸರ್ಪ ರಜ್ಜುವೆಂದು ನಂಬಿ ಕಪಿಲಸಿದ್ಧಂಗೆ ಬೇರೆಯಾದೆಯಲ್ಲ ಮನವೆ.

೫೩೬. ಮನದಲ್ಲಿ ಸಂಕಲ್ಪ ವಿಕಲ್ಪಂಗಳು ನೋಡಯ್ಯ! ಮನಸಿನ ಕಾರ್ಯವೆ ಪುಣ್ಯ ಪಾಪ ನೋಡಯ್ಯ! ಮನೋ ಕಾರ್ಯಂ ಜಗದ್ಭೇದಂ ಎಂಬುದು ಭೇದವಲ್ಲ ನೋಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

೫೩೭. ಮನದಲ್ಲಿ ಭೇದವಲ್ಲದೆ ವಸ್ತುವಿನಲ್ಲಿ ಭೇದವಿಲ್ಲಯ್ಯ! ಕ್ರಿಯಾಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನರೂಪು ರೂಪದಲ್ಲಿ ಭೇದವೇನಯ್ಯ ಚೈತನ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೫೩೮. ದೇಹ ನಾನೆಂದು ನಂಬಿದೆ ಎಲೆ ಮನವೆ. ದೇಹದಲ್ಲಿಯ ಗುಣಗಳು ನಿನ್ನಲ್ಲಿಲ್ಲ ಕಂಡಯ್ಯ! ಪೃಥ್ವಿಯ ಗುಣ ಶಾಂತಿ, ಉದಕದ ಗುಣ ಸ್ವಾದ, ಅಗ್ನಿಯ ಗುಣ ಸರ್ವಭಕ್ಷಣ! ವಾಯುವಿನ ಗುಣ ನಿರ್ಮಲತ್ವ ಆಕಾಶದ ಗುಣ ನಿರ್ವಯಲು ಪಂಚತತ್ವದ ಗುಣ ನಿನ್ನಲ್ಲಿರಲು ನೀನೆ ಪಂಚಮುಖ ನೋಡಾ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೩೯. ಲಿಂಗವೆ ಅಂಗವಾಗಿಹೆನೆಂಬವನ ಭಾವ ಇದರಲ್ಲೆ ನಿಶ್ಚಯ ನೋಡಾ ಮನವೆ. ನಿಂದಾಸ್ತುತಿಗಳಲ್ಲಿ ಹರ್ಷರೋಷಾದಿಗಳಿಲ್ಲದಿರಬೇಕು. ನೀಚಗುಣವ ನೋಡದೆ ಮೃದುಭಾಷಾವಂತನಾಗಬೇಕು. ಸರ್ವಜೀವಿಗಳ ತನ್ನಂತೆ ತಿಳಿದು ನೋಡಬೇಕು. ಸಂಶಯಾಸಂಶಯವಳಿದು ನಿಶ್ಚಿಂತಮಯನಾಗಬೇಕು. ಆಕಾಶದ ಬೆಳಗಿನ ಬೆಳಗು ನೋಡಿ ಬೆಳಗುಮಯ ತಾನಾಗಬೇಕು ನೋಡಾ ಮನನೆ ಕಪಿಲ ಸಿದ್ಧಮಲ್ಲಿಕಾರ್ಜುನಾ.

೫೪೦. ಜಡಕ್ಕೆ ಜಡವ ಕಟ್ಟಿ ಅಜಡನಾದೆನೆಂಬ ಜಡನನಲ್ಲವೆ ದೇವಾ. ಜಡಪೂಜೆ ಸಂಪದಾದಿ ಜಾಡ್ಯಕ್ಕೆ ಒಳಗು ಅಲ್ಲವೆ ದೇವಾ. ಅಜಡ ಪೂಜೆ ಮೋಕ್ಷಕ್ಕೆ ಒಳಗು ಅಲ್ಲನೆ ದೇವಾ. ಜಡಾಜಡವೆಂದೆನಿಸದು ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನದೇವಾ.

೫೪೧. ಪೂಜೆಯ ಪರಿಯನೊರೆವೆ ಆಲಿಸಾ ದೇವಾ. "ಮನೋನಿರ್ಮಲ ಮಭಿಷೇಕಂ ತಸ್ಯ ನಾಹಂ ಜಡೆತಿ ಭಸ್ಮ ಧಾರಣಂ ನಾಹಂ ಸಾಕ್ಷಿತ್ಯಮಲ ಬಿಲ್ವಂ ತನ್ಮಸ್ತಕೆ" ಇಂತಪ್ಪ ಪೂಜೆಯ ಮಾಡದೆ ಮರೆದೆ. ಎಲೆ ಮರೆಯ ನೀರಸುಟ್ಟ ಬೂದಿಯುದಂ ಪೂಜಿಸಿ ಸಿದ್ಧಿಗಳ ಗುದ್ಯಾಟಕ್ಕೊಳಗಾದವರ ಕಡೆಮುಟ್ಟಿ ಬಿಟ್ಟಪ್ಪನೆ ಬೆಟ್ಟಜ ಪತಿ ದಿಟ್ಟ ಕಪಿಲಸಿದ್ಧಮಲ್ಲಿಕಾರ್ಜುನಾ?

೫೪೨. ನಾನಿಲ್ಲದಿರೆ ನೀನೆಲ್ಲಿಯವನಯ್ಯ? ಬಾಣನ ಮನದಲ್ಲಿ ಸಿಲ್ಕಿ ಬಾಗಿಲ ಕಾಯ್ದಿರಿ ಅಣ್ಣಾ. ಸಿಂಧು ಬಲ್ಲಾಳನ ವಧುವಿನಲ್ಲಿ ಸಿಲ್ಕಿ ಸ್ವಯಂಭು ಅಳಿದಿರಿ. ಚೋಳಿಯಕ್ಕನ ಭಕ್ತಿಯಲ್ಲಿ ಸಿಲ್ಕಿ ಮಾಜಿದಿರಿ ಅಮ್ಮನವರಿಗೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೪೩. ಇಕ್ಷುವಿನ ವನದಲ್ಲಿಪ್ಪ ಕುಟಿಲ ಕೇಸರಿಯ ರೂಪಕ್ಕಂಜುವದಲ್ಲದೆ ರಾಗ ರಂಜನೆಗಂಜುವೆನಯ್ಯ. ಸ್ಥಲದಲ್ಲಿಪ್ಪ ವೇಷಧಾರಿಯ ರೂಪಕ್ಕಂಜುವರಲ್ಲದೆ ವಿಷಯ ಗುಣರಂಜನೆಗಂಜುವರೇನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಶರಣರೆಂಬ ಮದದಾನೆಗಳು?

೫೪೪. ಅರಿಷಡ್ವರ್ಗಗಳಳಿದವ ಶರಣರೆಂಬರು ಅದೆಂತಯ್ಯ? ಕಾಮವದು ಲಿಂಗಾರ್ಚನೆಯಲ್ಲಿ. ಕ್ರೋಧವದು ಷಣ್ಮತ ನಾಶನದಲ್ಲಿ. ಲೋಭವದು ಸಮ್ಯಜ್ಞಾನದಲ್ಲಿ. ಮೋಹವದು ಮುಕ್ತ್ಯಂಗನೆಯಲ್ಲಿ. ಮದವದ್ಮ

ಮನದಲ್ಲಿ. ಮತ್ಸರವದು ಶಮೆಯಲ್ಲಿ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೪೫. ಶಿಶುವಿನ ಕ್ರೀಡೆ ತಾಯಿಗಲ್ಲದೆ ಅನ್ಯರಿಗುಂಟೆ? ಪಶುವಿನ ತಪ್ಪು ಪಶುಪತಿಯಾದವಂಗಲ್ಲದೆ ಅನ್ಯರಿಗುಂಟೆ? ಎನ್ನ ಅಹಂಕಾರ ನಿಮಗಲ್ಲದೆ ಜಗದ ಜಡರಿಗುಂಟೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೫೪೬. ಜನನಕ್ಕೆ ಜಂಗಮನಲ್ಲದೆ ಎನ್ನ ಮನಕ್ಕೆ ಜಂಗಮನಲ್ಲ ನೋಡಾ! ಎನ್ನ ಮನಕ್ಕೆ ಜಂಗಮನಲ್ಲದೆ ಎಮ್ಮ ಪುರಾತರಿಗೆ ಜಂಗಮನಲ್ಲ ನೋಡಾ! ಎಮ್ಮ ಪುರಾತರಿಗೆ ಜಂಗಮನಲ್ಲದೆ ಚನ್ನ ಬಸವಣ್ಣಂಗೆ ಜಂಗಮನಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೪೭. "ಜಂಗಮೋಪಿ ಜಗತ್ಪೂಜ್ಯೋ ಜಂಗಮಸ್ತು ಸದಾಶಿವಃ। ಕ್ರೋಧಾಲ್ಲೋಕಂ ನಾಶಯತಿ ಮೋಹಾಲ್ಲೋಕಂ ವಿವರ್ಧತೆ'' ಇಂತಪ್ಪ ಪರಮ ಜಂಗಮನ ಪಾದಕ್ಕೆ ನಮೋ ನಮೋ ಎಂಬೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೪೮. ಕರಿಕೆಯ ಕಂಡು ಪಶುಗಳಾಶ್ರಯಿಸುವವು. ಔತಣ ಕಂಡು ದ್ವಿಜರಾಶ್ರಯಿಸುವರು. ಯುದ್ಧವ ಕಂಡು ಶೂರರಾಶ್ರಯಿಸುವರು. ಸಭೆಯ ಕಂಡು ವಿದ್ವಾಂಸರಾಶ್ರಯಿಸುವರು. ಇವರೆಲ್ಲ ಮಾಯಾ ಮೂಲಕರಲ್ಲದೆ ಮಾಯಾರಹಿತರಲ್ಲಯ್ಯ. ಕಂಡು ಕಂಡು ಕಣ್ದೆರೆದು ನೋಡದ ಮಹಾಮಹಿಮ ಜಂಗಮನ ಪಾದಕ್ಕೆ ನಮೋ ನಮೋ ಎಂಬೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೪೯. ಜಲಪ್ರಳಯದಲ್ಲಿ ಸುಳಿಯಬಹುದನೇಕ ಯುಗ ಜುಗಂಗಳಲ್ಲಿ. ನಿಮ್ಮ ಶರಣರ ಚಿತ್ತ ಬೇಸರವಾದಲ್ಲಿ ಸುಳಿಯಬಾರದೊಂದು ನಿಮಿಷ ನೋಡೈ ಕಪಿಲಸಿದ್ಧಮಲ್ಲಿಕಾರ್ಜುನಾ.

೫೫೦. ಬಿಟ್ಟ ಪದವಿಯ ಬಟ್ಟೆಗೆ ಪೋಪಾತನಲ್ಲ ನೊಡಾ ಶರಣನು. ಬಿಟ್ಟು ಬಿಟ್ಟು ಬಯಲಿಟ್ಟ ಅಟ್ಟೆ ಬಟ್ಟೆಗೊಂಡರು ಭವಕ್ಕೆ ಹಿಡಿದು ಹಿಡಿದು ಭವಕ್ಕೆ ಬಾರದೆ ಭವವಿರತರಾದರು ಕಂಡ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಮಹಾ ಮಹಿಮ ಶರಣರು.

೫೫೧. ಮನುಜರ ಮನ್ನಣೆಯದು ಮಸೆದಲಗಿನ ಘಾಯ ನೋಡಾ. ಮನುಜರ ಮನ್ನಣೆಯದು ಪರಿಮಳ ಪುಷ್ಪದ ಸೋಂಕು ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

೫೫೨. ತಿಳಿದು ನುಡಿ ಕೊಡಬೇಕಲ್ಲದೆ ತಿಳಿಯದ ನುಡಿಯದು ಅಪಭ್ರಂಶವಯ್ಯ. ನುಡಿ ಎರಡೊಂದಾದಡೆ ವೃಢ ಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನ ನುಡಿಗೊಮ್ಮೆ ನುಡಿವ ನೋಡಾ ಬೊಮ್ಮಣ್ಣಾ.

೫೫೩. ಮಾನವಿಲ್ಲದ ಭೋಜನವದು ಶ್ವಾನನ ಮಾಂಸವಯ್ಯ. ಜ್ಞಾನವಿಲ್ಲದ ಕ್ರಿಯೆಯದು ಸಿದ್ಧಿಗಳಿಗೀಡವಯ್ಯ. ಧ್ಯಾನವಿಲ್ಲದ ಪೂಜೆಯದು ಕಾನನ ಜ್ಯೋತಿಯಯ್ಯ. ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನ ನೀನಿಲ್ಲದ ಭಕ್ತಿಯದು ಚಾಂಡಾಲ ಪಾಕವಯ್ಯ.

೫೫೪. ಲಿಂಗವ ಪೂಜಿಸಿ ಫಲವೇನಯ್ಯ ಅಂಗನೆಯರೊಲುಮೆಯಾಗದನ್ನಕ್ಕ? ಜಂಗಮವ ಪೂಜಿಸಿ ಫಲವೇನಯ್ಯ ಮೋಕ್ಷಾಂಗನೆ ಮೈಗೊಡದನ್ನಕ್ಕ? ಅಂಗಜ ಬಂದು ಫಲವೇನಯ್ಯ ನಾ ಮನ ಒಲಿದು ರತಿಗೊಲಿಯದನ್ನಕ್ಕ? ಶರಣ ಸತಿ ಲಿಂಗ ಪತಿ ಎಂಬ ವೀರತ್ವ ಕೆಟ್ಟಿತೆನ್ನಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೫೫. ಚತುರ್ವರ್ಣವಾದರೇನು? ಚತುರ್ವರ್ಣಾತೀತನೆ ವೀರಶೈವ ನೋಡಾ! ಚತುರ್ವೇದಿಯಾದರೇನು? ಚರ್ಮ ದೇಹವಳಿಯದವನೆ ಚಾಂಡಾಲ ನೋಡಾ! ಚತುರಂಗ ಬಲಯುಕ್ತನಾದರೇನು? ಚತುರ ಗುಣವಿಲ್ಲದಿದ್ದರೆ ದೇಶವನಾಳ್ವ ಪರಿಯು ನೋಡಾ. ಚರ್ಮದೇಹಿಯಾದರೇನು? ಗಜ ಚರ್ಮಧರ ಕಪಿಲಸಿದ್ಧಮಲ್ಲಿಕಾರ್ಜುನ ಪ್ರಸನ್ನವಾಗದನ್ನಕ್ಕಾ ಬಾಳುವೆ ನೋಡಾ.

೫೫೬. ಸಂಪಿಗೆಗಂಧವ ಸೇವಿಸಿದಲ್ಲಿ ಭ್ರಮರ ಜನ್ಮ ಈಡಾಡಿತ್ತು. ಕೇಸರಿ ತನ್ನ ಗಂಧಕ್ಕಾಗಿ ತನ್ನ ಜನ್ಮ ಈಡಾಡಿತ್ತು. ಶರಣನ ಬೋಧೆ ಸೇವಿಸಿದಲ್ಲಿ ಎನ್ನ ಜನ್ಮ ಈಡಾಡಿತ್ತು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೫೭. ಬೋಧವೆಂದರೆ ಕರ್ಣವನೂದಿ ಮಂತ್ರವ ಹೇಳಿದ್ದು ಬೋಧವೆ? ಅಲ್ಲಲ್ಲ. ಬೋಧವೆಂದರೆ ತನುತ್ರಯ ಸಾಕ್ಷಿ ನೀನೆ ಪರವಸ್ತು ಎಂಬುವದದೆ ನಿಜಬೋಧ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೫೫೮. ಹೇಳಿದ ಬೋಧೆ ಶಿಲಾಲಿಪಿ ಎಂತಾದರೆ ಶಿಲಾ ಸದೃಶ ನೋಡಾ. ಭವಕ್ಕೆ ಹೇಳಿದ ಬೋಧೆ ಜಲಲಿಪಿಯಾದರೆ ಜಲ ಸದೃಶ

ನೋಡಾ! ಭವಕ್ಕೆ ಹೇಳಿದ ಬೋಧೆ ಗಟ್ಟಿಗೊಂಡರಾಳುವದೆತ್ತ ನಿನ್ನ ಮಾಯಾಜಾಲವನೆಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೫೫೯. ಮಂತ್ರವ ಜಪಿಸಿ ಫಲವೇನಯ್ಯ ಮಂತ್ರ ಮೂರ್ತಿ ಕಾಣದನ್ನಕ್ಕ? ಯಂತ್ರವ ಧರಿಸಿ ಫಲವೇನಯ್ಯ ಅಂತರ ರೋಗ ಪರಿಹಾರವಾಗದನ್ನಕ್ಕ? ತಂತ್ರವನೋದಿ ಫಲವೇನಯ್ಯ ಅದರಂತರ ವೈಗೊಡದನ್ನಕ್ಕ? ಶರಣನಾಗಿ ಫಲವೇನಯ್ಯ ಲಿಂಗ ಜಂಗಮ ಪೂಜಿಸಿ ಮೋಕ್ಷ ಪಡೆಯದನ್ನಕ್ಕ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೫೬೦. ಲಿಂಗವ ಪೂಜಿಸಿದ ಫಲ ನೀಲಲೋಚನೆಗಾಯಿತ್ತು. ಜಂಗಮವ ಪೂಜಿಸಿದ ಫಲ ಬಸವಣ್ಣಂಗಾಯಿತ್ತು. ಮಂತ್ರವ ಪೂಜಿಸಿದ ಫಲ ಅಜಗಣ್ಣಂಗಾಯಿತ್ತು. ಯೋಗವ ಪೂಜಿಸಿದ ಫಲ ಶಿವಯೋಗಿ ಸಿದ್ಧರಾಮಂಗಾಯಿತ್ತು ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ.

೫೬೧. ಪೂಜಾಫಲವಂತಿಂತಲ್ಲ. ಪೂಜಾಫಲಂ ಫಲಂ ಮನ್ಯೈತವ ಪಾಣಿಹಂ ಶಿವೆ. ಪೂಜಾಫಲವಂತಿತಲ್ಲ. ಪೂಜಾಫಲಂ ಫಲಂ ಮನ್ಯೈ ಮಧ್ಯಾನ್ಹಾಸಕ್ತಪುರುಷ ಎಂದು ನೀ ಹೇಳಿದ ವಾಕ್ಯ ಹುಸಿ ಏನಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ?

೫೬೨. ಲಿಂಗಾಂಗಿಯಾದ ಬಳಿಕ ಭವಿಸಂಗಮಾಡಲಾಗದು. ಭವಿಗೆ ದಾನವ ಕೊಡಲಾಗದು. ಭವವಿರಹಿತ ಕಾರ್ಯವಸ್ಥೆದಿ ಭವ ಬೀಜದ ನೆಲೆಯನಾಶ್ರಯಿಸಿದರೆ ಭವ ತಪ್ಪದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೫೬೩. ಭವಿ ಎಂದರೆ ಲಿಂಗವಿಲ್ಲದ ಭವಿಯೇ? ಅಲ್ಲಲ್ಲ. ಭವಿ ಎಂದರೆ ವೇದವೇದಾಂತವನೋದಿ ಲಿಂಗವ ಧರಿಸದವ ಭವಿಯೆ? ಅಲ್ಲಲ್ಲ. ಅಂಗದ ಸ್ಥಿತಿಯನರಿದಡೇನಾಯಿತ್ತು? ಗುಣ ತಿಳಿದು ಲಿಂಗವ ಕೊಡುವ ಗುರುವಿಲ್ಲ. ಬಹಿರಂಗದಲ್ಲಿ ಲಿಂಗ ವಿರಹಿತ ಅಂತರಂಗದಲ್ಲಿ ಲಿಂಗ ಶೋಲುಪ್ತ ಹೊಲಬುಳ್ಳವನಾದರೇನು ತಿಳಿಯದವರಿಲ್ಲದನ್ನಕ್ಕ? ಸತ್ಕ್ರಿಯಾಸಾಮರಸ್ಯಕ್ಕೆ ಭವಿಯಲ್ಲದ ಅನುಭವ ಗೋಷ್ಠಿಗೆ ಭವಿಯೆ? ಅಲ್ಲಲ್ಲ. ಭವಿ ಎಂದರೆ ಮದ್ಯಪಾನ, ಮಾಂಸ ಭಕ್ಷಣ, ಪರ ಸ್ತ್ರೀ ಸಂಗ, ಪರ ಧನ ಚೋರತ್ವ, ನಿಜವಸ್ತು ಅಂತರತ್ವವಿಪ್ಪವನೆ ಭವಿಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೬೪. ಎಲ್ಲ ದೇವರಂತಲ್ಲ ನೋಡವ್ವಾ ಈ ದೇವಾ! ಮಲಿಯ ನಂಬಿಯ ನಂಬಿಯಣ್ಣಂಗೆ ಮುದ್ದು ಕುಂಟಣಿಗನಾದ. ಎಲ್ಲ ದೇವರಂತಲ್ಲ ನೋಡವ್ವಾ ಈ ದೇವಾ. ಸರಳಿಲಿ ಹೋದ ಪಾಂಡವಂಗೆ ಪಾಶುಪತಾಸ್ತ್ರವನಿತ್ತೆಯಲ್ಲದೆ. ಎಲ್ಲ ದೇವರಂತಲ್ಲ ನೋಡವ್ವಾ ಈ ದೇವಾ. ಕಲ್ಲಿಲಿಟ್ಟ ಶಂಖಿಯಂಗೆ ಕೈವಲ್ಯ ಪದವಿಯ ಕೊಟ್ಟನಂದು. ಎಲ್ಲರಂತಲ್ಲ ನೋಡವ್ವಾ ಈ ದೇವಾ. ಒಬ್ಬ ಬಲ್ಲೇಶಯ್ಯನಿಂದ ಸಹಸ್ರ ಕಂಡುಗ ಕಪಿಲೆ ಘೃತವ ಕೈಕೊಂಡ ನೋಡವ್ವಾ ಕಪಿಲಸಿದ್ದ ಮಲ್ಲಿಕಾರ್ಜುನಾ.

೫೬೫. ಲಿಂಗ ಹೋದರೇನು? ಗುರು ಉಂಟೆಂಬ ಬಾಲ ಭಾಷೆಯ ಕೇಳಲಾಗದು. ಕೇಳಿದವನ ಸಂಗ ಸಿಂಗಿ ಕಾಳಕೂಟ ವಿಷವು. ಆತನ ಸಂಗದಲ್ಲಿರಲು ಪಂಚ ಮಹಾಪಾತಕ ತಪ್ಪದಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೬೬. ಲಿಂಗವ ಧರಿಸಿದ ಯೋಗಿಗೆ ಅಂಗನೆಯರು ಲಿಂಗದ ವಾಣಿವಾಸ. ಲಿಂಗವ ಧರಿಸಿದ ಭೋಗಿಗೆ ಕಾಷಾಯಾಂಬರಧಾರಿಗಳು ರುದ್ರಗಣಂಗಳು. ಲಿಂಗವ ಧರಿಸಿದ ಜೀವ ಜಾಲವು ಕಪಿಲಸಿದ್ಧ ಮಲ್ಲಿಕಾರ್ಜುನನೆಂದು ನಂಬಿದೆ ನೋಡಾ ಗುರುವೆ ಚನ್ನಬಸವಣ್ಣನೆ.

೫೬೭. ಉದಕವೆಲ್ಲ ಒಂದೆ ಈಚಲಾಶ್ರಯಿಸಿ ಮದ್ಯಪಾನವೆನಿಸಿತ್ತು. ಸುರತರುವಾಶ್ರಯಿಸಿ ಅಮೃತವೆನಿಸಿತ್ತು. ದೇಹವೆಲ್ಲ ಒಂದೆ ಅಂಗನೆಯರಾಶ್ರಯಿಸಿ ಭವಕ್ಕೆ ಬೀಜವಾಯಿತ್ತು. ಲಿಂಗವಾಶ್ರಯಿಸಿ ಭವಾರಣ್ಯಕ್ಕೆ ದಾವಾನಲವಾಯಿತ್ತು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೫೬೮. ಬಂದ ಪದಾರ್ಥವ ನೋಡಿ ಹಿಗ್ಗುವನಲ್ಲ ಶರಣ. ಬಾರದ ಪದಾರ್ಥವ ನಿಶ್ಚಯಿಸಿ ಕುಗ್ಗುವನಲ್ಲ ಶರಣ. ಶರಣರ ನಡೆಯೆ ಲಿಂಗರೂಪು. ಶರಣನ ನುಡಿಯೆ ಲಿಂಗಪ್ರಸಾದ. ಪೂಜಿಸಿದರೆ ಹರ್ಷನಾಗನು. ಪೂಜಿಸದಿರೆ ಕ್ರೋಧನಾಗನು. ಬೆಳೆಯುವ ಹೊಲ ಪ್ರಾಣಿ ಮಾತ್ರಕ್ಕಲ್ಲದೆ ತನ್ನೊಳಗಿಲ್ಲ. ಪೂಜಿಸಿದ ಫಲ ಭಕ್ತಂಗಲ್ಲದೆ ಲಿಂಗಕ್ಕಿಲ್ಲ. ಬಂದ ಪದಾರ್ಥ ಲಿಂಗವೆಂದನಲ್ಲದೆ ಪದಾರ್ಥವೆಂದು ಭಾವಿಸಲಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಶರಣನು.

೫೬೯. ಶರಣನೆಂಬುವ ಶಬ್ದವಂತಿಂತಲ್ಲದೆ ಪಣ್ಯಾತ್ಮವೆಂಬ ಸೂತ್ರದಿಂದ ಶರಣನೆನಿಸಿದನು. ಶರ ಎಂದರೆ ಬಾಣ, ಣನವೆಂದರೆ ಅಂಥ ಮನ್ಮಥಬಾಣವಿಲ್ಲದವನೆ ಶರಣ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

೫೭೦. ಭಸ್ಮವ ಹೂಸಿದಲ್ಲಿ ಶರಣನೆ? ಅಲ್ಲಲ್ಲ. ಮಾಡುವ ಕ್ರಿಯೆ ಭಸ್ಮವಾದರೆ ಶರಣ. ನೋಡುವ ಕೃತ್ಯ ರುದ್ರಾಕ್ಷಿಯಾದರೆ ಶರಣ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೫೭೧. ಶರಣನ ಸಂಭ್ರಮ ಲಿಂಗ ಪೂಜೆ ಜಂಗಮ ದಾಸೋಹ ನೋಡಯ್ಯ. ಶರಣನ ಸಂಭ್ರಮ ಅನುಭವ ಓದಿ ಭವ ಗೆಲಿಯುವ ದದೆ ಸಂಭ್ರಮ ಕಾರ್ಯ ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

೫೭೨. ಶರಣನಜಾಗ್ರತೆಯೆ ಶಿವರಾತ್ರಿ ಕಂಡಾ ಮನವೆ. ಶರಣನ ನಿದ್ರೆಯೆ ಶಿವಯೋಗ ಸಮಾಧಿ ಕಂಡಾ ಮನವೆ. ಶರಣನ ನುಡಿಯೆ ಶ್ರೀರುದ್ರ ಪಂಚ ಬ್ರಹ್ಮೋಪನಿಷತ್ತು ಕಂಡಾ ಮನವೆ. ಶರಣನ ನಡೆಯೆ ಮುಕ್ತಿ ಸೋಪಾನ ಕಂಡಾ ಮನವೆ. ಶರಣನ ಭೋಜನವೆ ಕಪಿಲಸಿದ್ಧ ಮಲ್ಲಿಕಾರ್ಜುನನರ್ಪಣ ಕಂಡಾ ಮನವೆ.

೫೭೩. ಶರಣನ ಇರವ ನೆನೆನೆನೆದು ಶರಣನಾದೆನಯ್ಯ. ಇನ್ನು ಮರೆ ದೆನಾದರೆ ನಿಮ್ಮ ಶರಣ ಚನ್ನಬಸವಣ್ಣನಾಣೆ. ಇನ್ನು ಈ ಭವಕ್ಕೆ ಬಂದೆ ನಾದರೆ ಹಲ್ಲುದೋರಿ ಮೂಗ ಕೊಯ್ಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೭೪. ಆಕಾಶದಲ್ಲಿಯ ಕಪ್ಪು ಅಂಗೈ ತಿನ್ನೆಂದರೆ ತಿಂಬುವುದೆ ಅಯ್ಯ? ಮರೀಚಿಯ ನೀರು ಮಡಿಯ ಕ್ರಿಯಕ್ಕೆ ಬಾ ಎಂದರೆ ಬರುವ ದೇನೊ ಅಯ್ಯ ಎಲೆ ಲಿಂಗಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನಾ?

೫೭೫. ಶರಣನ ನೋಟ ಭವದ ಕಾಟ ನೋಡಯ್ಯ! ಶರಣನ ದೃಷ್ಟಿ ಶಿವ ದೃಷ್ಟಿ ನೊಡಯ್ಯ! ಶರಣನ ದೇಹ ಶಿವ ದೇಹ ನೋಡಯ್ಯ! ಶನಣನ ಪಾದುಕೆ ಎಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ಚಮ್ಮಾವುಗೆ ನೋಡಾ ಮಡಿವಾಳ ಮಾಚಣ್ಣಾ.

೫೭೬. ಶರಣನ ನಡೆ ಅಂತಿಂತೆನ ಬೇಡ. ಶರಣ ಮಾದರ ಚನ್ನ ಯ್ಯನ ನಡೆಯಾವ ಆಗಮದಲ್ಲಿ ಹೇಳಿತ್ತು? ಶರಣ ಡೋಹರ ಕಕ್ಕ ಯ್ಯನ ನಡೆಯಾವ ವೇದದಲ್ಲಿ ಹೇಳಿತ್ತು? ನಡೆದ ಆಚರಣೆಯೆ ಸತ್ಶೀಲ ನುಡಿದ ವಾಕ್ಯವೆ ಮೋಕ್ಷಪ್ರದಾಯಕ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೭೭. ಸ್ಥಲವಿಡಿದಾಚರಿಸಬೇಕೆಂಬವನ ಭಾಷೆ ಬಾಲಭಾಷೆ. ಭಕ್ತ ನಾಗಿ ಭಕ್ತಸ್ಥಲವಾವರಿಸುವದದು ಯೋಗ್ಯವಯ್ಯ. ಭಕ್ತನಾಗಿ ಮಹೇಶ

ಸ್ಥಲ ಅಳವಡಬಾರದೇನಯ್ಯಾ? ಭಕ್ತನಾಗಿ ಮಹೇಶ ಪ್ರಸಾದಿ ಪ್ರಾಣ ಲಿಂಗಿ ಶರಣ ಐಕ್ಯ ಸ್ಥಲವಳವಡಬಾರದೇನಯ್ಯಾ? ಮನೆಯಲ್ಲಿದ್ದ ಲೆತ್ತ ಗಳು ಮನೆಯ ಮೀರಿ ಮೀರಿ ಹಾರಬಾರದೇನಯ್ಯ ಕಪಿಲಸಿದ್ಧಮಲ್ಲಿ ಕಾರ್ಜುನಾ?

೫೭೮. ಷಟ್ಸ್ಥಲವೆಂಬ ಷಣ್ಮುಖ ಮುದ್ರೆಯೊಳು ನವ ವಿಧ ಭಕ್ತಿ ಎಂಬ ನವ ನಾದ ಕೇಳದವ ಶರಣನೇ ಅಯ್ಯ? ಷಟ್ಸ್ಥಲವೆಂಬ ಷಣ್ಮುಖ ಮುದ್ರೆಯೊಳು ಷಡಕ್ಷರವೆಂಬ ಮಂತ್ರವ ಜಪಿಸಿ ಷಡ್ವಿಧಲಿಂಗ ಪೂಜಿ ಸದವ ಶರಣನೆ ಅಯ್ಯ? ಷಟ್ಸ್ಥಲವೆಂಬ ಷಣ್ಮುಖ ಮುದ್ರೆಯೊಳು ಬೀಜಾ ಕ್ಷರ ತ್ರಯಂಗಳನೋದಿ ಷಡಕ್ಷರಂಗಳ ಸಾಧಿಸಿ ಷಣ್ಮುಖ ಶಿವನಾಗದವ ನಿಮ್ಮ ಶರಣನೆ ಅಯ್ಯ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೫೭೯. ಶರಣ ಸ್ಥಲ ನೋಡುವಡೆ ಬಹುಸುಲಭ ನೋಡಯ್ಯ. ಶರಣನು ತಿಳಿದು ತಿಳಿದು ಆಚರಿಸನು. ಮರೆದು ಮರೆದು ಆಚರಿಸುವ ಜ್ಞಾನದಿಂದ ಭೇದವಿಲ್ಲದೆ ದೇಹದಿಂದ ಭೇದವಿಲ್ಲ ನೋಡಯ್ಯ. ಶರಣ ತನ್ನ ದೇಹವೇ ಹಕಾರ ಪ್ರಣವ ಮಾಡಿಟ್ಟ. ನರನು ತನ್ನ ದೇಹವೆ ದೇಹವೆಂದು ಜಡವೆಂದು ಪ್ರಳಯಕ್ಕೊಳಗು ಮಾಡಿಟ್ಟ. ಶರಣನ ದೇಹ ವೆಲ್ಲ ಪಂಚಾಕ್ಷರಮಯ ನೋಡಾ. ನಕಾರವೆ ಅಸ್ತಿ, ವಕಾರವೆ ನಾಡಿ, ಯಕಾರವೆ ರೋಮ, ಮಕಾರವೆ ಮಾಂಸ, ಶಿಕಾರವೆ ತ್ವಕ್ಕು, ಮಕಾರವೆ ರುಧಿರ, ಯಕಾರವೆ ಶ್ಲೇಷ್ಮ, ಶಿಕಾರವೇ ಶುಕ್ಲ, ನಕಾರವೆ ರಸ, ವಕಾರವೆ ಪಿತ್ತ, ಶಿಕಾರವೆ ನಿದ್ರೆ, ನಕಾರವೆ ಕ್ಷುಧೆ, ವಕಾರವೆ ಆಲಸ್ಯ, ಮಕಾರವೆ ತೃಷ್ಣೆ, ಯಕಾರವೆ ಸಂಗ, ಯಶಿನಮ ಎಂಬವು ಮೋಹ ಭಯ ರಾಗ ಲಜ್ಜೆ ದ್ವೇಷಕ್ಕೆ ಸೇರಿಸಿದ ನೋಡಾ! ಕ್ಲಂಕ್ಲೀಂಎಂಬುದಚ್ಚ ಕಠಿಣ ಮೃದುವಿಗೆ ಇಟ್ಟ ನೋಡಾ. ಕ್ಲಂಕ್ಲೀಂಎಂಬುದೂಷ್ಣಚಲನೆಗೆ ಸೇರಿಸಿದ ನೋಡಾ. ಶಿ ಯ ಮ ವ ನ ಎಂಬುದೇ ಸ್ಪರ್ಶಗಂಧರೂಪು ಶಬ್ದ ರಸಕ್ಕೆ ಸೇರಿಸಿದ ನೋಡಾ! ಶಿ ಯ ಮ ಎಂಬುದೆ ಪಾದವಾ ಗುಹ್ಯ ಪಾಣಿ ಪಾಯುವಿಗೆ ಸಂಬಂಧಿಸಿದ ನೋಡಾ! ಯ ಮ ವ ನ ಶಿ ಎಂಬುದೆ ಶ್ರೋತ್ರ ಜಿಹ್ವೆ ತ್ವಕ್ಕು ನಾಸಿಕ ನೇತ್ರಕ್ಕೆ ಸಂಬಂಧಿಸಿದ ನೋಡಾ! ನ ಶಿ ಯ ಮ ವ ಎಂಬುದೆ ಪ್ರಾಣೋದಾನ ಸಮಾನ ಪಾನ ವ್ಯಾನಕ್ಕೆ ಸಂಬಂಧಿಸಿದ ನೋಡಾ! ಮ ಯ ನ ಶಿ ವ ಯ ಬುದ್ಧಿ ಮನೋ ಚಿತ್ತಹಂಕಾರ ಜ್ಞಾನಕ್ಕೆ ಸಂಬಂಧಿಸಿದ ನೋಡಾ! ಈ ರೀತಿಯಿಂದರಿದು ಶಿವತತ್ವ ತಾನಾಗಿ ನಿಂದ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

*13*

೫೮೦. ಬಂದು ಬಂದು ಹೋಗದಿರಾ ಮನವೆ. ನಿಂದು ನಿಂದು ನಡೆಯದಿರಾ ಮನವೆ. ಬಂದು ಬಂದು ನೀನಿಂದುಧರ ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸು ಮನವೆ.

೫೮೧ ಬಂದುದದು ಬರಲಿ, ಬಾರದದು ಬರಲಿ. ದೇವ ಬರಬಹುದು ಬರಬಹುದೆ ಬಲ್ಲವನಾದ ಬಳಿಕ ಬರಬಾರದು ಬರಬಾರದು ಬರಬಾರದು ಬಲ್ಲವನಾದ ಬಳಿಕ ಕಪಿಲಸಿದ್ಧಮಲ್ಲನ ಮಾಯೆಯ ಎಡೆಯಾಟಕ್ಕೆ.

೫೮೨. ಅನುಭವವೆಂಬುದದು ಅನುಭಾವಿಕಗಲ್ಲದೆ ಹೊತ್ತಿಗೆಯಲ್ಲಿಲ್ಲ ನೋಡಾ ಮಾನವಾ. ರತ್ನಗಳು ಸಮುದ್ರದಲ್ಲಲ್ಲದೆ ಕೀಳು ಕುಲ್ಯಾದಿಗಳಲ್ಲಿಲ್ಲ ನೋಡಾ ಮಾನವಾ! ಸವ ಮಂತ್ರಗಳ ಮರ್ಮವದು ಗುರುಮುಖದಲ್ಲಲ್ಲದೆ ಬರಿಯ ಪುರಾಣಗಳಲ್ಲಿಲ್ಲ ನೋಡಾ ಮಾನವಾ. ಇಂದಿನ ಪ್ರಮಥರು ಮುಂದೆ ಬಂದಿಹರೆಂಬ ಭ್ರಮೆ ಬೇಡ ನೋಡಾ ಮಾನವಾ ನೀನಂದಿಂದೆನ್ನದೆ ಕಪಿಲ ಸಿದ್ಧ ಮಲ್ಲಿಕಾರ್ಜುನನ ನಂಬು ನೋಡಾ ಮಾನವಾ.

೫೮೩. ಎಲ್ಲರಿಗೆರಡು ಕಣ್ಣೆಂಬುದು ಲೋಕವೆಲ್ಲ ಬಲ್ಲುದು. ಎರಡು ಕಣ್ಣಿನವನಲ್ಲ. ಮೂರು ಕಣ್ಣಿನವನಲ್ಲ. ಒಂದೇ ಕಣ್ಣಿನವ ನೋಡಾ ಅಲ್ಲಮ ಕಪಿಲಸಿದ್ಧ ಮಲ್ಲಿಕಾರ್ಜುನನ ವಲ್ಲಭನಲ್ಲಿ ಕಲ್ಲಯ್ಯ.

೫೮೪. ಸರ್ವಂ ಶಿವಮಯಂ ಜಗತ್ತೆಂಬುದ ತಿಳಿಯದೆ ನುಡಿದವರ ನುಡಿಯಂತೆ ನಡೆಯದಿರಾ ಮನವೆ. ಸರ್ವಂ ಶಿವಮಯಂ ಜಗತ್ತೆಂದು ತಿಳಿದು ತಿಳಿದು ಸುಖಿ ಯಾಗಾ ಮನವೆ. ಪಿಂಡಬ್ರಹ್ಮಾಂಡಕ್ಕೆ ತಿಲ ಷೋಡಶ ಭಾಗೆ ನ ಭೇದಂ ನಾಸ್ತಿ ವರಾನನೆ ಎಂಬುದು ಪುಸಿಯಲ್ಲ ನೋಡಾ ಮನವೆ. ಈಶ್ವರನ ಪಂಚ ಮುಖದಿಂದ ಪಂಚ ತತ್ವಂಗಳುದಯಿಸಿದವು. ಆ ತತ್ವಂಗಳೊಂದೊಂದು ಕೂಡಿ ತನ್ನ ಚೈತನ್ಯ ಬೆರಸಿದಲ್ಲಿ ಪಿಂಡ ಬ್ರಹ್ಮಾಂಡವೆನಿಸಿತ್ತು ನೋಡಾ ಮನವೆ. ತನ್ನ ತಾನರಿದು ನೋಡಿದರೆ ಸರ್ವಂ ಶಿವ ಕಪಿಲಸಿದ್ಧ ಮಲ್ಲಿಕಾರ್ಜುನ ಮಯಂ ಜಗತ್ತೆಂದರಿದು ಬಂದಿತ್ತು ನೋಡಾ ಮನವೆ.

೫೮೫. ಮಣ್ಣೆಲ್ಲ ಮಹಾದೇವನ ಸದ್ಯೋಜಾತ ಮುಖ ನೋಡಾ! ನೀರೆಲ್ಲ ವಾಮದೇವ ಮುಖ ನೋಡಾ! ಪ್ರಳಯಾಗ್ನಿ ಎಲ್ಲ ಮಹಾದೇ

ವನ ಅಘೋರ ಮುಖ ನೋಡಾ! ಮಾರುತವೆಲ್ಲ ಮಹಾದೇವನ ತತ್ಪುರುಷ ಮುಖ ನೋಡಾ! ಆತ್ಮವೆಲ್ಲ ಮಹಾದೇವನ ಗೋಪ್ಯ ಮುಖ ನೋಡಾ! ಸರ್ವಂ ಶಿವ ಮಯಂ ಜಗತ್ತೆಂಬ ಶೃತಿ ಶಾಖೆ ಪುಸಿಯಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೮೬. ಯದ್ದೃಷ್ಟಂ ತನ್ನಷ್ಟವೆಂಬ ಶೃತಿ ವಾಕ್ಯವನರ್ಥ ಮಾಡಿ ಮುಳುಗದಿರಾ ಮನವೆ. ಭೇದ ಬುದ್ಧಿಯಿಂದರಿವುದದೆ ನಷ್ಟ ನೋಡಾ ಮನವೆ. ಭೇದವಳಿದು ಭವ ವಿರಹಿತ ಮೂರ್ತಿಯು ಪಂಚ ತತ್ವ ವೆಂದು ನಂಬು ಕಂಡಾ ಮನವೆ. ಸರ್ವಂ ಕಪಿಲಸಿದ್ಧ ಮಲ್ಲಿಕಾರ್ಜುನ ಮಯಂ ಜಗತ್ತೆಂಬುವದು ಪುಸಿಯೆ ಮನವೆ?

೫೮೭. "ತದನುಸರಣಾ ಜನ್ಮ ಜನ್ಮ" ಎಂಬುದು ಹುಸಿಯಲ್ಲ ಹುಸಿಯಲ್ಲ ನೋಡಯ್ಯ. ಭೇದಬುದ್ಧಿಯಿಂದಲ್ಲದೆ ಅಭೇದ ಬುದ್ಧಿಗೆ ತೋರಬಾರದು. ಸರ್ವಂ ಕಪಿಲಸಿದ್ಧ ಮಲ್ಲಿಕಾರ್ಜುನ ಮಯಂ ಜಗತ್ತೆಂಬುವದು ನಿಶ್ಚಯ ನೋಡಯ್ಯ ಎಲೈ ಲಿಂಗವೆ.

೫೮೮. ಶರಣನ ವಾಗ್ರಚನ ಪ್ರತಾಪ ಸ್ಥಲ ತರ್ಕಿಸಿದಲ್ಲಿ ವಾದಿಸಿ ಶಿಖಾಮುದ್ರೆ ಸಾಧಿಸುವವರೊಂದು ಕೋಟಿ. ವೇದಾಂತದಲ್ಲಿ ವಾದಿಸಿ ಶಿಖಾಮುದ್ರೆಯ ಸಾಧಿಸುವವರೊಂದು ಕೋಟಿ. ಶರಣನ ವಾದಿಸಿ ಶಿಖಾಮುದ್ರೆಯ ಸಾಧಿಸುವದದು ಶರಣನ ಬಟ್ಟೆ ಶರ ತಾಗಿದವರಲ್ಲೋರ್ವರಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೫೮೯. ತಿಳಿಯದ ಜನರಾವು ಶಿವನಲ್ಲ ಜಡಜೀವಿಗಳೆಂಬುವರು. ಅದೆಂತಯ್ಯ? "ಪಂಚತತ್ವಂ ಮುಖೋದ್ಭೂತಂ" ಎಂಬಾಗಮ ವಾಕ್ಯ ಸಿದ್ಧಿ. ಪಂಚತತ್ವಗಳೆಲ್ಲ ಶಿವನ ಪಂಚ ಮುಖದಿಂದಾದವು. ಆ ಪಂಚ ತತ್ವದಿಂ ಸಕಲ ಚರಾಚರ ಬ್ರಹ್ಮಾಂಡವಾಯಿತ್ತಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಲೀಲೆಯಿಂದೆ ಕಲ್ಲಯ್ಯ.

೫೯೦. ಲೀಲೆಯದು ಪರಬೊಮ್ಮದ ಇಚ್ಛೆ. ಇಚ್ಛೆಯದು ಸಕಲ ಜೀವ ಜಾಲೋತ್ಪತ್ತಿ. ಸಕಲ ಜಾಲೋತ್ಪತ್ತ್ಯವದು ಜಗದ್ರಚನೆ. ಜಗದ್ರಚನೆಯದು ಜಗತ್ಪ್ರಳಯ ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ.

೫೯೧. ಶಿವಂಗೆ ಪಂಚಮುಖವೆಂಬುದು ಮೂಲೋಕವೆಲ್ಲ ಬಲ್ಲುದು. ನರಂಗೆ ಪಂಚಮುಖವೆಂಬುದು ಆರು ಅರಿಯರು. ಮುಂಭಾಗವದು ಸದ್ಯೋಜಾತ, ಬಲಭಾಗವದು ತತ್ಪುರುಷ, ಎಡಭಾಗವದು ಅಘೋರ, ಹಿಭಾಂ

ಗವದು ವಾವ.ದೇವ. ಮಧ್ಯಭಾಗವದು ಕಪಿಲಸಿದ್ಧ ಮಲ್ಲಿಕಾರ್ಜುನನ ಈಶಾನ್ಯ ಮುಖ ನೋಡಾ ಕಲ್ಲಯ್ಯ.

೫೯೨. ಬ್ರಾಹ್ಮಣನ ಉತ್ಪತ್ತಿ ಸದ್ಯೋಜಾತಮುಖದಿಂದಾಯಿತ್ತು. ಕ್ಷತ್ರಿಯನ ಉತ್ಪತ್ತಿ ವಾಮದೇವ ಮುಖದಿಂದಾಯಿತ್ತು. ವೈಶ್ಯನ ಉತ್ಪತ್ತಿ ಅಘೋರ ಮುಖದಿಂದಾಯಿತ್ತು. ಲಿಂಗಾಂಗಿಯ ಉತ್ಪತ್ತಿ ಈಶಾನ್ಯ ಮುಖದಿಂದಾಯಿತ್ತು. ಪ್ರಮಥರ ಉತ್ಪತ್ತಿ ನಿರಂಜನ ಪ್ರಣಮದ ಘೋಷವುಳ್ಳ ಕಪಿಲಸಿದ್ಧಮಲ್ಲಿಕಾರ್ಜುನನ ಗೋಪ್ಯ ಮುಖದಿಂದಾಯಿತ್ತು ನೋಡಾ ಕಲ್ಲಯ್ಯ.

೫೯೩. ಜನ್ಮಕ್ಕೊಮ್ಮೆ ಬಂದು ಶಿವಾಯ ನಮಃ ಎಂದರೆ ಸಾಲದೆ? ಜನ್ಮಕ್ಕೊಮ್ಮೆ ಬಂದು ಹರಾಯ ನಮಃ ಎಂದರೆ ಸಾಲದೆ? ಜನ್ಮಕ್ಕೊಮ್ಮೆ ಬಂದು ಬಸವನ ಪ್ರಸಾದವ ತೆಗೆದುಕೊಂಡರೆ ಸಾಲದೆ? ಜನ್ಮಕ್ಕೊಮ್ಮೆ ಬಂದು ಪ್ರಸಾದವ ತೆಗೆದುಕೊಂಡರೆ ಸಾಲದೆ? ಜನ್ಮಕ್ಕೊಮ್ಮೆ ಚನ್ನಬಸವಣ್ಣನ ಪಾದೋದಕ ತೆಗೆದುಕೊಂಡರೆ ಸಾಲದೆ? ಜನ್ಮಕ್ಕೊಮ್ಮೆ ಬಂದು ಪ್ರಭುವಿನ ಪಾದಕ್ಕೊಂದಿಸಿದರೆ ಸಾಲದೆ? ಜನ್ಮಕ್ಕೊಮ್ಮೆ ಬಂದು ಮಡಿವಾಳಣ್ಣನ ಅನುಭವದಲ್ಲಿದ್ದರೆ ಸಾಲದೆ? ಜನ್ಮಕ್ಕೊಮ್ಮೆ ಬಂದು ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿದರೆ ಸಾಲದೇನೋ ಕಲ್ಲಯ್ಯ?

೫೯೪. ಗುರು ಏರಿದ ಮಂಚವನೇರಿದೆನಾದರೆ ಕಾಲ್ಗಳು ಹರಿದು ಹೋಗಲಿ ದೇವಾ! ಗುರು ಹೊದ್ದ ವಸ್ತ್ರವ ಹೊದ್ದೆನಾದರೆ ಚರ್ಮವು ಸುಲಿದು ಹೋಗಲಿ ದೇವಾ! ಗುರು ಮುಟ್ಟಿದ ಪದಾರ್ಥವದು ಮುಟ್ಟಿದೆನಾದರೆ ಪುಳುಗೊಂಡವ ಮಾಡಲಿ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.

೫೯೫. ಹೊನ್ನು ಬಿಡದನ್ನಕ್ಕ ಗುರು ಪಾದೋದಕ ಸಲ್ಲದು. ಮಣ್ಣುಬಿಡದನ್ನಕ್ಕ ಲಿಂಗಪಾದೋದಕ ಸಲ್ಲದು. ಹೆಣ್ಣು ಬಿಡದನ್ನಕ್ಕ ಜಂಗಮ ಪಾದೋದಕ ಸಲ್ಲದು. ಈ ಸರ್ವವು ಅಳಿಯದನ್ನಕ್ಕ ಕಪಿಲಸಿದ್ಧಮಲ್ಲಿಕಾರ್ಜುನನಿಂಬುಗೊಂಡನು ಮಹಾ ಬಯಲಲ್ಲಿ ಕಲ್ಲಯ್ಯ?

೫೯೬. ಶರಣನ ಕೂಡ ವಾದ ಸಲ್ಲದು ಸಲ್ಲದು ನೋಡಾ. ಆತನ ನಡೆ ಬೇರೆ ಆತನ ನುಡಿ ಗಡಣ ಬೇರೆ. ಕ್ರಿಯೆ ವಿಡಿದು ವಾದಿಸಿದಲ್ಲಿ ಜ್ಞಾನವಿಡಿದಾಚರಿಸಿದಲ್ಲಿ ಕ್ರಿಯೆವಿಡಿದು ವಾದಿಸುವ ನಿರ್ದ್ವಂದ್ವವಾಗಿ ನಿಂದಲ್ಲಿ ತೋರಿದ ರೂಪು ಕಪಿಲಸಿದ್ಧಮಲ್ಲಿಕಾರ್ಜುನನೆಂದು ಡಂಗುರ ಹೊಯ್ದು ನಾಟ್ಯವನಾಡುವಾ.

---

# ಮಹೇಶ್ವರಸ್ಥಲ.

ಮಹೇಶ್ವರಸ್ಥಲಕ್ಕೆ ಸೇರಿದ ವಚನಗಳು.

೫೯೭. ಜಂಗಮವಾಗಿ ಫಲವೇನು? ನೋಡಿ ಮನದೆರೆದು ಮಾತನಾಡಿಸಿ ಜನ ಜನನ ವಿಪಿನ ದಾವಾನಲವಾಗದನ್ನಕ್ಕ ಜಂಗಮವಾಗಿ ಫಲವೇನು? ಭಕ್ತ ತನು ತಾಪತ್ರಯುವ ನೋಡಿ ಮನದೆರೆದು ಮಾತಾಡಿಸಿ ಮರುಗದನ್ನಕ್ಕ ಜಂಗಮವಾಗಿ ಫಲವೇನು? ಭಕ್ತನ ವಾಂಛಿತಾರ್ಥಂಗಳನರಿದು ಪೂಜಾಮುಖದಿಂ ಭೂತಿಯ ಕೊಟ್ಟು ಆತನ ಪ್ರಪಂಚ ಸಂಭ್ರಮ ನೋಡದನ್ನಕ್ಕ ಜಂಗಮವಾಗಿ ಫಲವೇನಯ್ಯ? ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಿ ಸುಭಕ್ತರ ಹಸ್ತದಲ್ಲಿ ಕೊಟ್ಟು ಮೋಹ ಮಾಡದನ್ನಕ್ಕ?

೫೯೮. ಆ ದೇವ ಬಂದರೆ ಈ ದೇವಿಯು ಸಂಭ್ರಮ ನೋಡಾ. ಈ ದೇವಿ ಹೋದರೆ ಆ ದೇವನ ಮನೋವ್ಯಾಕುಲ ನೋಡಾ. ಈ ದೇವಿ ಇಲ್ಲದಿದ್ದರೆ ಆ ದೇವ ಸೈರಿಸನು. ಆ ದೇವನಿಲ್ಲದಿರೆ ಈ ದೇವಿ ಸೈರಿಸಳು. ಒಂದರಲ್ಲಲ್ಲದೆ ಎರಡರ್ಥದಲ್ಲಿ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೫೯೯. ಮುಟ್ಟಿಹರೆಂದು ಬಿಟ್ಟಿಯನುಲ್ಲಂಘಿಸುವರ ನೋಡಾ. ನೋಡಿ ನೋಡಿ ನಾಚಿತ್ತಯ್ಯ ಎನ್ನ ಮನ. ಮುಟ್ಟಿದ ಪರುಷ ಪಾಷಾಣವಾಗುವದೆ ಅಯ್ಯ? ಮಾಡಬಾರದೆಂದು ಸಂದೇಹವುಳ್ಳರೆ ಮಹೇಶಸ್ಥಲವೆಂತಯ್ಯ? ಮುಟ್ಟಬಾರದು ಮುಟ್ಟಬಾರದು. ಮಲತ್ರಯಂಗಳ ಮುಟ್ಟಿದ ಬಟ್ಟ ಬಯಲು ಘಟ್ಟಿಗೊಂಡಚ್ಚ ಮಹೇಶನ ತೋರಿಸಾ ಕಪಿಲಸಿದ್ಧಮಲ್ಲಿಕಾರ್ಜುನಾ.

೬೦೦. ಮುಟ್ಟಿದರೆಂದು ಶಿರೊ ಮುಟ್ಟಿ ನೀರು ಮುಟ್ಟಿದ ಬಳಿಕ ಬಟ್ಟ ಬಯಲಾದೆ ಏನಯ್ಯನೆ ಮನವೆ? ಮುಟ್ಟಬಾರದೆಂದು ಸಂಶಯ ತೋರ್ಪಡೆ ಮುಟ್ಟಿದ ಎಲ್ಲ ದುರ್ಮಲ ಥಾಂಡ ಮನವೆ ಸಂಕಲ್ಪ ವಿಕಲ್ಪಗಳಳಿದು ಬೆಟ್ಟಜಪತಿ ಕಪಿಲಸಿದ್ಧಮಲ್ಲಿಕಾರ್ಜುನನಾಗಿ ಬದುಕು ಮನವೆ.

೬೦೧. ಶಿಷ್ಯನಿಲ್ಲದಿರೆ ಗುರು ಎಲ್ಲಿಹನಯ್ಯ? ಪೂಜಕನಿಲ್ಲದಿರೆ ಲಿಂಗವೆಲ್ಲಿಹದಯ್ಯ? ಭಕ್ತನಿಲ್ಲದಿರೆ ಜಂಗಮವೆಲ್ಲಿಹನಯ್ಯ? ಜಲವಿಲ್ಲದಿರೆ ಪಾದೋದಕವೆಲ್ಲಿಹದಯ್ಯ? ಧಾನ್ಯವಿಲ್ಲದಿರೆ ಪ್ರಸಾದವೆಲ್ಲಿಹದಯ್ಯ? ಧೇನುವಿಲ್ಲದಿರೆ ಭೂತಿ ಎಲ್ಲಿಹದಯ್ಯ? ತ್ರಿಪುರವಿಲ್ಲದಿರೆ ರುದ್ರಾಕ್ಷಿಗಳೆಲ್ಲಿಹವಯ್ಯ? ವರ್ಣಗಳಿಲ್ಲದಿರೆ ಮಂತ್ರಗಳೆಲ್ಲಿಹವಯ್ಯ? ನಾನಿಲ್ಲದಿರೆ ನೀನೆಲ್ಲಿಯವನಯ್ಯ?

ಇವೆಲ್ಲ ಭಾವ ಭ್ರಮೆಯಲ್ಲದೆ ನಿರ್ಭಾವ ನಿಜಾನಂದ ತೂರ್ಯಾತೀತ ಪರವಸ್ತುವಿನ ಕೂಟದಲ್ಲಾನು ನೀನೆಂಬುಭಯ ಭಾವ ಇದ್ದರೆ ತೋರ ಬಾರಾ ಮಾರಹರ ಧೀರ ಗಂಭೀರ ಕಪಿಲಸಿದ್ಧಮಲ್ಲಿಕಾರ್ಜುನ ವೀರ.

೬೦೨. ಬಲ್ಲಿದ ಬಾಣನ ಬಾಗಿಲ ಕಾಯ್ವರವರು ಭೂತಿಗಳೇ ನಯ್ಯ? ಅಪ್ಪ ರೇವಣಸಿದ್ಧ ನೀರು ಹೊತ್ತನೆಂಬರು. ನಮ್ಮ ನೀರು ಹೊರುವವರವರು ಕೂಲಿಕಾರರೇನಯ್ಯ? ಸರ್ವೇಷಾಂ ಹೃದಿಸ್ಥ ಚಂದ್ರ ಮೌಲೀ ಎಂಬ ಶೃತಿ ವಾಕ್ಯವ ನಂಬು ನಂಬು ಕಪಿಲಸಿದ್ಧಮಲ್ಲಿಕಾರ್ಜು ನಯ್ಯನ ಮುಂದೆ ಎಲ್ಲೈ ಮನವೆ.

೬೦೩. ಮಾಡಬಾರದು ಮಾಡಬಾರದು ಪರಸ್ತ್ರೀ ಸಂಗವ. ನೋಡ ಬಾರದು ನೋಡಬಾರದು ದೃಷ್ಟಿಯನೆತ್ತಿ ಪರರ ದ್ರವ್ಯವ. ಕೂಡಬಾರದು ಕೂಡಬಾರದು ಕುಲವಿಲ್ಲದವನಲ್ಲಿ. ಆಡಬಾರದು ಆಡಬಾರದು ದುರ್ವಿ ಷಯಗಳಲ್ಲಿ. ಆಡಿ ಮಾಡಿ ನೋಡಿ ಕೂಡಿ ಆಡಿದರೆ ಈಡ ನೋಡಾ. ಯಮ ಮಾಡಿದ ಪುಳಗೊಂಡಕ್ಕೆ ಎಲೆ ಬಲ್ಲೇಶ ಕಪಿಲಸಿದ್ಧಮಲ್ಲಿಕಾರ್ಜು ನಾರ್ಯನ ಸಾನ್ನಿಧ್ಯದಲ್ಲಿ ಕೇದಾರ ಗುರು ಸಾಕ್ಷಿಯಾಗಿ.

೬೦೪. ನಿನ್ನ ನೀ ತಿಳಿದು ನೋಡಿದರೆ ಶಿವಮಯ ಜಗತ್ತು ನೋಡಾ! ಓಂಕಾರ ಪ್ರಣಮವೆ ಪ್ರಕೃತಿಯಾಗಿ ನಿಂದಿತ್ತು. ನಕಾರ ಪ್ರಣಮವೆ ಪೃಥ್ವಿಯಾಗಿ ನಿಂದಿತ್ತು. ಮಕಾರ ಪ್ರಣಮವೆ ಉದಕವಾಗಿ ನಿಂದಿತ್ತು. ಶಿಕಾರ ಪ್ರಣಮವೆ ಅಗ್ನಿಯಾಗಿ ನಿಂದಿತ್ತು. ವಕಾರ ಪ್ರಣಮವೆ ವಾಯುವಾಗಿ ನಿಂದಿತ್ತು. ಯಕಾರ ಪ್ರಣಮವೆ ಸರ್ವವಸ್ತು ಆಚರಿಸು ವದಕ್ಕೆ ಆಕಾಶವಾಗಿ ನಿಂದಿತ್ತು. ನೆನೆನೆನೆದು ಸುಖಿಯಾದೆ ನೋಡಾ ಕಪಿ ಲಸಿದ್ಧಮಲ್ಲಿಕಾರ್ಜುನ ಲಿಂಗವೆ.

೬೦೫. ಅನಿರ್ವಾಚ್ಯವೆ ವಾಚ್ಯ ಪ್ರಣಮವಾಗಿ ನಿಂದಿತ್ತು. ವಾಚ್ಯವೆ ವಚಿಸುವದಕ್ಕೆ ಮೂಲಪ್ರಣಮವಾಯಿತ್ತು. ಮೂಲವೆ ಭೂತ್ಯಂಗ ಪಂಚಾ ಕ್ಷರವಾಯಿತ್ತು. ಪಂಚಾಕ್ಷರವೆ ಪಂಚಮುಖವಾಯಿತ್ತು. ಪಂಚಮುಖಗಳೆ ಪಂಚಕರಣಗಳಾಯಿತ್ತು. ಪಂಚಕರಣಗಳೆ ಪಂಚವರ್ಣವಾಯಿತ್ತು. ಪಂಚವರ್ಣವೆ ಪ್ರಪಂಚ ರಚನೆ ನಿಮಿರಿತ್ತು. ನಿಮಿರಿ ನಿಮಿರಿದ ರಚನೆ ನೋಡಿ ಎನ್ನ ಚಿತ್ತ ಚಂಚಲವಾಯಿತ್ತಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

. ೬೦೬. ಬಗೆಬಗೆದು ನೋಡಿದ ದೇಹವೆಲ್ಲ ಮೂರು ಮಾತ್ರೆಯಿಂದಾ ದವಯ್ಯ. ಸ್ಥೂಲದೇಹ ಅಕಾರಪ್ರಣಮ. ಸೂಕ್ಷ್ಮದೇಹವದು ಉಕಾರ

ಪ್ರಣವು, ಕಾರಣ ದೇಹ ಮಕಾರ ಪ್ರಣವು. ಮೂರು ಮಾತ್ರೆ ಏಕಾದಲ್ಲಿ ಓಂಕಾರವಾಯಿತ್ತು. ತತ್ಪ್ರಣಮಕ್ಕೆ ಸಾಕ್ಷಿಯಾಗಿ ನಿಂದೆ. ನಿಂದೆನೆಂಬುದಕ್ಕೆ ಅನಿರ್ವಾಚ್ಯ ಪ್ರಣವುವಾದೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೬೦೭. ಮಣ್ಣ ಕೊಟ್ಟು ಪುಣ್ಯವ ಪಡೆವೆನೆಂಬವನ ಭಾಷೆ ಹೊಲ್ಲ ಹೊಲ್ಲ. ಮಣ್ಣಿನ ಪುಣ್ಯ ಮುಕ್ಕಣ್ಣನ ಮುಖಕ್ಕೆ ಬಂದಿತ್ತು. ನೀರನೆರೆದು ಪುಣ್ಯವ ಪಡೆವೆನೆಂಬವರ ಭಾಷೆ ಹೊಲ್ಲಹೊಲ್ಲ. ನೀರಿನ ಪುಣ್ಯ ನಿರಂಜನ ಮುಖಕ್ಕೆ ನಿವಿುರಿತು. ಜ್ಯೋತಿಯ ಬೆಳಗಿ ಪಾಪವ ಕಳೆವೆನೆಂಬವರ ಭಾಷೆ ಹೊಲ್ಲಹೊಲ್ಲ. ಚಾಮರ ಪುಣ್ಯ ಚಾಮರಾಧೀಶನ ಮುಖಕ್ಕೆ ಅಮರಗೊಂಡಿತ್ತು ದೇವಾಲಯುವ ಕಟ್ಟಿ ದೇವತ್ವ ಪಡೆವೆನೆಂಬವರ ಭಾಷೆ ಹೊಲ್ಲಹೊಲ್ಲ. ದೇವಾಲಯುದ ಪುಣ್ಯ ಅಧೋಮುಖಂಗೆ ಸೇರಿತ್ತು. ಕೊಟ್ಟ ಭಕ್ತರನಾರನು ಕಾಣೆ. ಕೈಕೊಂಡ ಜಂಗಮರೆಂದು ಕಾಣೆ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೬೦೮. ಮಗನ ಕೊಟ್ಟು ಮನೆಯು ಸೇರಿದೆನೆಂಬ ಬಿಂಕ ಬೇಡ ಬೇಡ. ಸ್ತ್ರೀಯುಳ ಕೊಟ್ಟುಕೊಟ್ಟು ತ್ರಿನೇತ್ರನಾದೆನೆಂಬ ಬಿಂಕ ಬೇಡ ಬೇಡ. ರುಂಡವ ಕೊಟ್ಟು ಬ್ರಹ್ಮಾಂಡಶೇಖರನಾದೆನೆಂಬ ಬಿಂಕ ಬೇಡ ಬೇಡ. ಶಿವೋ ದಾತಾ ಶಿವೋ ಭೋಕ್ತಾ ಎಂಬ ಶೃತಿವಾಕ್ಯವ ನಂಬಿ ನಂಬಿ ನಡೆಯಿರಾ ಕಪಿಲಸಿದ್ಧ ಮಲ್ಲಿಕಾರ್ಜುನನ ಮಂದಿರದಲ್ಲಿ.

೬೦೯. ಬಂದಯ್ಯಗಳಿಗನ್ನವ ಕೊಟ್ಟೆನೆಂಬುವನ ಮುಖವ ನೋಡಲಾಗದು. ಕೊಡಲಿಕ್ಕೀತನೇನು ಅನಾದಿ ಬಸವನೊ? ತೆಗೆದುಕೊಳ್ಳಲಿಕ್ಕಾತನೇನು ಅನಾದಿ ಪ್ರಭುವೊ? ಹೊಳೆದು ಬರುವದೆಲ್ಲ ಹೊಲೆಪದಾರ್ಥ. ನಿರುಪಾಧಿಯಿಂದ ಬಂದ ಪದಾರ್ಥ ಶಿವಪ್ರಸಾದ. ಆ ಪ್ರಸಾದವೆ ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಂಗೆ ಮಹಾರೋಗಣೆಯಾಯಿತ್ತು.

೬೧೦. ಪಶುಗಳಿಲ್ಲ ಬಾಲದಲ್ಲಿ ಪೃಷ್ಠವಿದ್ದರೆ ಮಾಡುವೆನೆಂಬವನ ಮುಖದಲ್ಲಿ ಬಾಲ ನೋಡಾ. ಪಶುಗಳಿಗೆಲ್ಲ ಮಸ್ತಕದಲ್ಲಿ ಶೃಂಗವಿದ್ದರೆ ಮಾಡಿದ ಪೂಜೆ ಕೈಕೊಂಡೆನೆಂಬವನ ಮನದ ಕೊನೆಯ ಮೇಲೆ ಶೃಂಗ ನೋಡಾ. ಮಾಡಿದೆನೆಂಬವುಳ್ಳನ್ನಕ್ಕ ಭಕ್ತನೆಂಬೆನೆಯ್ಯ? ಮಾಡಿಸಿಕೊಂಡೆನೆಂಬವರ ಉಳ್ಳನ್ನಕ್ಕ ನಿರುಪಾಧಿ ನಿರಂಜನ ಜಂಗಮವೆಂಬೆನೆ ಅಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ?

೬೧೧. ದೇಹ ಮುಟ್ಟಿದವರು ನಿರ್ದೇಹಿ ಮುಟ್ಟುವದದು ದುರ್ಲಭವಯ್ಯ. ನಿರ್ದೇಹ ಮುಟ್ಟಿದವರು ದೇಹ ಮುಟ್ಟರು ನೋಡಯ್ಯ. ಮುಟ್ಟಿದವ ಕ್ಷಣಿಕ ಸುಖ ಕಂಡ. ಮುಟ್ಟದವ ನಿಜಾನಂದ ಸುಖಿ ಕಂಡ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೬೧೨. ಮಾನಾಪಮಾನವೆಂಬುದು ಮನದ ಭ್ರಮೆ ನೋಡಯ್ಯ. ಮೇಲಕ್ಕೆ ಕರೆದರೆ ಮಾನವೆಂಬುದೀ ಲೋಕ. ಮೂಗೊಟ್ಟರೆ ಅಪಮಾನವೆಂಬುದೀ ಲೋಕ. ತಿರುಗುವ ಭೂಮಿ ಎಲ್ಲ ನಕಾರ ಪ್ರಣವಮಾಯಿತ್ತು. ಏಕೈಕವಾದ ಭೂಮಿಯಲ್ಲಿ ಪೀಠವ ಕೊಟ್ಟು ಮನ್ನಿಸುವ ಅಣ್ಣಾಗಳ ಬಾಯಲ್ಲಿ ಹುಡಿ ಮಣ್ಣು ಹೊಯ್ಯದೆ ಮಾಬನೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೬೧೩. ಮಾಡಬಾರದ ನೇಮವ ಮಾಡಿ ಕೆಡದಿರಾ ಮನವೆ. ಮಾಡುವ ನೇಮ ಮಾಡಬಾರದ ನೇಮಗಳವು ಭೂತ ಭವಿಷ್ಯ ವರ್ತಮಾನಗಳವು. ಮಾಡುವ ನೇಮಗಳು ನಿತ್ಯ ಲಿಂಗಾರ್ಚನೆ ಜಂಗಮದಾಸೋಹವೆಂಬುದು ಕಪಿಲಸಿದ್ಧಮಲ್ಲಿಕಾರ್ಜುನನ ವಚನ ಮನವೆ.

೬೧೪. ಭೂತ ಭವಿಷ್ಯ ವರ್ತಮಾನಗಳರುವಿಕೆಯದು ಭೂತ ಪ್ರಾಣಿಗಳಿಗೆ ರಂಜನೆಯಲ್ಲದೆ ಭೂತೇಶನ ಮನೋರಂಜನೆಯಾಗದು ನೋಡಾ ಮನವೆ! ನಿತ್ಯಲಿಂಗಾರ್ಚನೆ ನಿತ್ಯಾನುಷ್ಠಾನ ನಿತ್ಯ ಮಂತ್ರ ವಿಚಾರ ನಿತ್ಯ ಪಾದೋದಕ ಪ್ರಸಾದ ಸ್ವೀಕಾರವದು ಕಪಿಲಸಿದ್ಧ ಮಲ್ಲಿಕಾರ್ಜುನನ ಮನೋಕಿಂಜಲ್ಕವಿಕಸನ ನೋಡಾ ಮನೋಭ್ರಮರವೆ.

೬೧೫. ದೇವರಿಗೆ ಕೃಷಿಯ ನೇಮಕ ಮಾಡುವರಲ್ಲದೆ ದೇವರ ಪ್ರಥಮ ಮುಖ ಭೂಮಿ ಎಂದರಿಯರೀ ಲೋಕ. ದೇವರಿಗೆ ನದಿಯ ಜಲವೆರೆಯಬೇಕೆಂಬ ನೇಮಕವ ಮಾಡುವರಲ್ಲದೆ ದೇವರ ದ್ವಿತೀಯ ಮುಖ ಜಲವೆಂದರಿಯರೀ ಲೋಕ. ದೇವರಿಗೆ ದೀವಿಗೆಯ ನೇಮಕ ಮಾಡುವರಲ್ಲದೆ ದೇವರ ತೃತೀಯ ಮುಖ ಜ್ಯೋತಿ ಎಂಬುದರಿಯರೀ ಲೋಕ. ದೇವರಿಗೆ ತಾಲವೃಂತದ ನೇಮಕ ಮಾಡುವರಲ್ಲದೆ ದೇವರ ಚತುರ್ಮುಖವೆ ವಾಯುವೆಂದರಿಯರೀಲೋಕ. ದೇವರಿಗೆ ಆಶ್ರಯ ಮಾಡಬೇಕೆಂಬ ನೇಮಕವ ಮಾಡುವರಲ್ಲದೆ ದೇವರ ಪಂಚಮುಖವೆ ಆಕಾಶವೆಂಬುದರಿಯರೀ ಲೋಕ. ದೇವರಿಗೆ ಪ್ರಾಣಪ್ರತಿಷ್ಠೆಯ ಮಂತ್ರ ಹೇಳುವರಲ್ಲದೆ ದೇವರ ಆರನೆ ಮುಖ ಆತ್ಮ ಪ್ರಾಣವೆಂಬುದರಿಯರೀ ಲೋಕ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೬೧೬. ತನ್ನಿಚ್ಛೆಗೆ ಬಂದ ಪದಾರ್ಥ ಲಿಂಗ ಮೂರ್ತಿ ಇಚ್ಛೆ ಎಂಬರು. ತನ್ನಿಚ್ಛೆಗೆ ಬರದ ಪದಾರ್ಥ ಲಿಂಗದಿಚ್ಛೆ ಇಲ್ಲವೆಂಬರು. ಹೋದ ವಾಕ್ಯ ಶಿವಾಜ್ಞೆ ಎಂಬರು. ಇದ್ದ ಮಾತು ತನ್ನಾಜ್ಞೆ ಎಂಬರು. ಇದೆಂತಯ್ಯ? ಇಚ್ಛೆಗೆ ಒಳಗಾಗುವನಲ್ಲಯ್ಯ ಲಿಂಗವು. ಶಿವೋದಾತಾ ಶಿವೋ ಭೋಕ್ತಾ ಎಂಬುದು ತಿಳಿದು ಲಿಂಗ ಮುಖದಿಂದ ಬಂದ ಪದಾರ್ಥ ಕೈಕೊಂಬರೆ ಅಚ್ಚ ಲಿಂಗೈಕ್ಯನೆಂಬೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೬೧೭. ಕರ್ಮತ್ರಯಂಗಳ ಭೋಗಿಸಿದಲ್ಲದೆ ಬಿಡದೆಂಬುವ ಶೃತಿಗೇಳಿ ಮನದೆರೆದು ಮಾತಾಡನಯ್ಯ. ದುಃಖದಿಂ ಭೋಗಿಸಿದ ಕರ್ಮತ್ರಯದೊಳಗಯ್ಯ ಆದ ಭೋಗ ಸುಖವಾದರೆ ಮುಂದೆ ಭವಕ್ಕೆ ಈಡಯ್ಯ. ಸುಖ ದುಃಖಂಗಳು ಸಮಾನಂಗೊಂಡವಂಗೆ ವಿಧಿತ್ರಯಂಗಳಿನ್ನೆಲ್ಲಿಹವಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ?

೬೧೮. ಕ್ಷೀರ ಶರಧಿಯೊಳಿರುವ ಹಂಸಿಂಗೆ ಅನ್ಯ ಕ್ಷೀರದ ಹಂಗುಂಟೇನಯ್ಯ? ಸುಗಂಧಮಯ ಪುಷ್ಪದಲ್ಲಿರುವ ಭೃಂಗಂಗೆ ಅನ್ಯ ಪರಿಮಳದ ಹಂಗುಂಟೇನಯ್ಯ? ಸಮುದ್ರದೊಳಿರುವ ಮಂಡುಕಂಗೆ ಅಂಬುವಿನ ಹಂಗುಂಟೇನಯ್ಯ? ಮೊಲೆಯುನುಣ್ಣುವ ಶಿಸುವಿಂಗೆ ಅನ್ಯ ಕ್ಷೀರ ನೀರಿನ ಹಂಗುಂಟೇನಯ್ಯ? ಸಕಲ ಪ್ರದಾಯಕ ಲಿಂಗದೊಳಿದ್ದ ಶರಣಂಗೆ ಅನ್ಯ ಪದದಾಸೆಯ ಹಂಗುಂಟೇ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ?

೬೧೯. ಸಮತೆ ಎಂಬ ಕಂಥೆ ಧರಿಸಿಪ್ಪ ನೋಡಾ ಜಂಗಮನು. ಅಮಿತವೆಂಬ ಭಸ್ಮ ಧರಿಸಿಪ್ಪ ನೋಡಾ ಜಂಗಮನು. ಲಿಂಗವೆಂಬ ಖರ್ಪರ ಕರಸ್ಥಲದಲ್ಲಿ ಧರಿಸಿಪ್ಪ ನೋಡಾ ಜಂಗಮನು. ಸರ್ವ ಜೀವ ದಯಾಪಾರಿ ಎಂಬ ವಿಮಲ ರುದ್ರಾಕ್ಷಿ ಧರಿಸಿಪ್ಪ ನೋಡಾ ಜಂಗಮನು. ನಿರ್ಮೋಹವೆಂಬ ಕೌಪೀನ ಧರಿಸಿಪ್ಪ ನೋಡಾ ಜಂಗಮನು. ನಿಸ್ಸಂಗವೆಂಬ ಮೇಖಲಾ ಪರಿಪೂರ್ಣ ನೋಡಾ ಜಂಗಮನು. ಸುಮ್ಮಾನವೆ ಕಿರೀಟವಾಗಿ ಶುದ್ಧ ಜ್ಞಪ್ತಿಯೆ ಮಕುಟವಾಗಿ ನಿರಹಂಕರವೆ ಬಹಿರ್ವಾಸಿಯಾಗಿ ದುರ್ವ್ಯಸನ ದುರ್ಭ್ರಮೆ ಹೃಷೀಕೋತ್ಪಾತ ವಿಜಯ ಶಿವಯೋಗ ಮಾಗಿ ಚರಿಸುವ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಮಹಾ ಜಂಗಮನು.

ಸುವರೆ ಅನ್ಯ ಆಶೆ ಮರೆ ಮಾಡಿರಬೇಕು. ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವರೆ ಸಂಶಯವಳಿದು ನಿಶ್ಚಿಂತನಾಗಬೇಕು.

೮೪೨. ಬಡವರ ಭೋಜನವ ಭೋಗಿಸಿದವ ಭವಾನೀ ಪುತ್ರ ನೋಡಯ್ಯ! ಕಡವರನೆಡೆಗೊಂಡವ ವಿಷ್ಣುವಿನ ವಂಶದವ ನೋಡಯ್ಯ! ಬಡವರ ಭೋಜನವಮೃತ ಸೇವನೆ, ಕಡವರನಮೃತ ಸುರಾಪಾನ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೪೩. ಅಂತರ್ಲಿಂಗ ಬಾಯಿ ತೆರೆದ ಬಳಿಕ ಬಹಿರ್ಲಿಂಗದ ಪೂಜೆ ಮೋಟನ ಮೌಳಿಯಂತೆ. ಅಂತರ್ಲಿಂಗ ಬಹಿರ್ಲಿಂಗ ಬೇರಾದ ಬಳಿಕ ಕಪಿಲಸಿದ್ಧ ಮಲ್ಲಿಕಾರ್ಜುನ ಒಲಿಯನಂತೆ.

೮೪೪. ಹಸಿವು ದೋರದ ಮುನ್ನ ತೃಷೆ ದೋರದ ಮುನ್ನ ವ್ಯಾಧಿ ವಿಪತ್ತುಗಳು ಬಂದಡಸದ ಮುನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವ ಪೂಜಿಸೊ ಮುನ್ನ ಮುನ್ನ.

೮೪೫. ತನ್ನವರೆನ್ನಬಾರದು ತನ್ನ ಬಂಧುಗಳೆನ್ನಬಾರದು ತನಗನ್ಯರೆನಬಾರದು. ತಮ್ಮ ತಮ್ಮ ಮನಕ್ಕೆ ಮನವೆ ಸಾಕ್ಷಿ. ಮನಕ್ಕೆ ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನನೆ ಸಾಕ್ಷಿ ಬಿಲ್ಲೇಶಯ್ಯ.

೮೪೬. ನ್ಯಾಯಿ ತಾನಾದರೆ ಅನ್ಯಾಯ ಮಾಡಬಾರದು. ಲಿಂಗಿ ತಾನಾದರೆ ಅಂಗಿ ತಾನಾಗಬಾರದು. ಭೋಗಿ ತಾನಾದರೆ ತಾ ಯೋಗಿಯಾಗಬಾರದು ಕಪಿಲಸಿದ್ಧ ಮಲ್ಲಿಕಾರ್ಜುನನಾ.

೮೪೭. ಮಾಡಿದವನ ಹೆಸರು ಮಣ್ಣಿನಲ್ಲಿ, ಮಣ್ಣು ಮಾಡಿದವನ ಹೆಸರು ಮೂಲೋಕದಲ್ಲಿ, ಮಾಡಿದೆನೆಂಬುದು ಮನದ ಗುಣ, ಮಾಡಿದವನವನೆಂಬುದು ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವ ಗುಣ ಮಡಿವಾಳಯ್ಯ ಸಾಕ್ಷಿಯಾಗಿ.

೮೪೮. ಎನ್ನ ಲಲಾಟದಲ್ಲಿ ಓಂಕಾರವಾಗಿರ್ದಾತ ಚನ್ನಬಸವ, ಎನ್ನ ನೇತ್ರದಲ್ಲಿ ಶಿಕಾರವಾಗಿರ್ದಾತ ಬಸವ, ಎನ್ನ ಮಸ್ತಕದಲ್ಲಿ ಹಕಾರವಾಗಿರ್ದಾತ ಪ್ರಭುದೇವ, ಎನ್ನ ಘ್ರಾಣದಲ್ಲಿ ನಕಾರವಾಗಿರ್ದಾತ ಮಡಿವಾಳಯ್ಯ, ಎನ್ನ ಬಾಯಿಯಲ್ಲಿ ಮಕಾರವಾಗಿರ್ದಾತ ಮರುಳು ಶಂಕರಯ್ಯ, ಎನ್ನ ಕಪೋಲದಲ್ಲಿ ವಕಾರವಾಗಿರ್ದಾತ ಪಡಿಹಾರಿ ಬಸವಯ್ಯ, ಎನ್ನ ಶ್ರೋತ್ರದಲ್ಲಿ ಯಕಾರವಾಗಿರ್ದಾತ ಹಡಪದಪ್ಪಣ್ಣ, ಎ

ಜಿಹ್ವೆಯಲ್ಲಿ ಹ್ರೀಂಕಾರನಾಗಿರ್ದಾತಿ ಅಕ್ಕನಾಗಮ್ಮ, ಎನ್ನ ಸರ್ವಾಂಗ ದಲ್ಲಿ ಸಕಲ ಪ್ರಣವ ರೂಪಾಗಿರ್ದಾತ ಗುರುವಿನ ಗುರು ಚನ್ನಬಸ ವನ ಪಾದಕ್ಕೆ ನಮೊ ನಮೊ ಎಂಬೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

೮೪೯. ಎಲ್ಲರ ಮರೆಯಬಹುದು. ಎನ್ನ ವಲ್ಲಭ ಗುರುಮೂರ್ತಿಯ ಮರೆಯಬಾರದು. ಎಲ್ಲರ ಕೀರ್ತಿಸಬಹುದು. ಎನ್ನ ಗುರುಮೂರ್ತಿಯ ಕೀರ್ತಿಸಬಾರದು. ಎಲ್ಲರು ಹೋಗಲಾಡಿದರೆಂದು ಎನ್ನ ನಲ್ಲನು ಹೋಗ ಲಾಡನು ನೀ ಹೋಗಲಾಡೆನೆ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಪಾದ ಸಾಕ್ಷಿಯಾಗಿ.

೮೫೦. ಅಂತರಂಗದಲ್ಲಿಹ ಲಿಂಗ ಬಹಿರಂಗದಲ್ಲಿ ಲಿಂಗವಾಯಿ ತ್ತಯ್ಯ ಎಂಬುದರಿಯೆ. ಬಹಿರಂಗದಲ್ಲಿಯ ಲಿಂಗ ಅಂತರಂಗದಲ್ಲಿ ಲೀಯ ವಾಗುವ ಕಾರಣವರಿಯೆ. ಅಂತರಂಗ ಬಹಿರಂಗವೆಂಬೆರಡರ ಸಂಗ ಕಪಿ ಸಿದ್ಧ ಮಲ್ಲಿಕಾರ್ಜುನಯ್ಯನೆಂಬುದರಿಯೆ ಏನೆಂದರಿಯೆ.

೮೫೧. ಆಕಾಶದಲ್ಲಿಯ ಮಿಂಚಿನಂತೆ, ಯೋಗಿಯಲ್ಲಿಯ ಕೋಪ ದಂತೆ, ವೇಶಿಯಲ್ಲಿಯ ಅನುರಾಗದಂತೆ, ಗಾಳಿಯಲ್ಲಿಯ ದೀಪದಂತೆ, ಓಗರದಲ್ಲಿಯ ಪ್ರಸಾದದಂತೆ, ಗುರುಮೂರ್ತಿಯಲ್ಲಿಯ ಪಾದೋದಕ ದಂತೆ ಕಪಿಲಸಿದ್ಧ ಮಲ್ಲಿಕಾರ್ಜುನನ ಲೀಲೆಯಂತೆ ಎನ್ನ ಪ್ರಾಣಲಿಂಗದ ಐಕ್ಯ. ಅದರಂತೆ ಶಬ್ದ ಮುಗ್ಧವಾಯಿತ್ತಯ್ಯ ಶಿವಶಿವಾ, ಶಿವಶಿವಾ, ಶಿವ ಶಿವಾ, ಶಿವಶಿವಾ, ಶಿವಶಿವಾ.

ಇತಿ ಶ್ರೀ ಸಿದ್ಧರಾಮೇಶ್ವರ ದೇವರು ನಿರೂಪಿಸಿದ ವಚನ ಸಮಾಪ್ತ.

